# ಆಸ್ತಿಹಕ್ಕು : ಲಿಂಗ ಸಂಬಂಧಿ ಅಧ್ಯಯನ

## (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು
ಶಿವಮ್ಮ ಎ

ಮಾರ್ಗದರ್ಶಕರು
ಡಾ.ಶೈಲಜ ಇಂ. ಹಿರೇಮಠ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ





ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

669

# ಆಸ್ತಿಹಕ್ಕು : ಲಿಂಗ ಸಂಬಂಧಿ ಅಧ್ಯಯನ

(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಶಿವಮ್ಮ ಎ



ಮಾರ್ಗದರ್ಶಕರು
ಡಾ.ಶೈಲಜ ಇಂ. ಹಿರೇಮಠ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ-೫೮೩೨೭೬

೨೦೧೬

## ಸಂಶೋಧಕರ ಘೋಷಣಾ ಪತ್ರ

**ಆಸ್ತಿಹಕ್ಕು: ಲಿಂಗಸಂಬಂಧಿ ಅಧ್ಯಯನ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗದಲ್ಲಿ, ಪ್ರಾಧ್ಯಾಪಕರಾದ ಡಾ.ಶೈಲಜ ಇಂ. ಹಿರೇಮಠ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧ ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

(ಶಿವಮ್ಮ ಎ.)
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೩೦.೦೫.೨೦೧೬
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

ಶಿವಮ್ಮ ಎ. ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಆಸ್ತಿಹಕ್ಕು: ಲಿಂಗಸಂಬಂಧಿ ಅಧ್ಯಯನ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ದಿನಾಂಕ : ೩೦.೦೫.೨೦೧೬
ಸ್ಥಳ : ವಿದ್ಯಾರಣ್ಯ

ಡಾ.ಶೈಲಜ ಇಂ. ಹಿರೇಮಠ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

೧.೪. ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಭಾರತೀಯ ಸಾಮಾಜಿಕ ಚಿಂತನೆಯು ಅತ್ಯಂತ ಪ್ರಾಚೀನವಾದುದು. ಇದು ವೇದಗಳ ಕಾಲಕ್ಕಿಂತಲೂ ತುಂಬಾ ಪ್ರಾಚೀನವಾದುದು ಎಂದು ಗುರುತಿಸಲಾಗಿದೆ. ಹಾಗಾಗಿಯೇ ಅಂದು ರೂಪಿಸಲ್ಪಟ್ಟಿರುವ ನಿಯಮಗಳು ಇಂದಿಗೂ ಜೀವಂತವಾಗಿರುವುದನ್ನು ಕಾಣಲಾಗುತ್ತದೆ. ಇವುಗಳು ಮಹಿಳಾ ಬದುಕಿನ ಎಲ್ಲಾ ಹಂತಗಳನ್ನೂ ಸಹ ಆಕ್ರಮಿಸಿವೆ. ಹಾಗೆಯೇ ಮಹಿಳೆಯರನ್ನು ನಿಯಂತ್ರಿಸುತ್ತಲೇ ಇವೆ. ಈ ನಿಯಂತ್ರಣದಿಂದಾಗಿ ಮಹಿಳೆಯರು ಇಂದಿಗೂ ಸ್ವತಂತ್ರರಾಗಲು ಸಾಧ್ಯವಾಗುತ್ತಿಲ್ಲ. ಹೀಗೆ ಹೆಣ್ಣನ್ನು ಸದಾಕಾಲ ನಿಯಂತ್ರಣದಲ್ಲಿರಿಸಿಕೊಂಡು, ತನಗೆ ಪೂರಕವಾಗಿ ರೂಪಿಸಿಕೊಳ್ಳಲು ವ್ಯವಸ್ಥೆಯು ತನ್ನದೇ ಆದ ಹಲವು ನೀತಿ ನಿಯಮಗಳನ್ನು ಜಾರಿಗೊಳಿಸಿಕೊಂಡಿರುವುದು ಈಗಾಗಲೇ ಸ್ಪಷ್ಟವಾಗಿರುವ ಸಂಗತಿ. ಹಾಗಾಗಿ 'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ಕಟ್ಟುನಿಟ್ಟಿನ ನಿಯಮವನ್ನು ಜಾರಿಗೊಳಿಸಿ ಶತಶತಮಾನ ಗಳಿಂದಲೂ ಮಹಿಳೆಯರನ್ನು ದಾಸಿಯರಂತೆಯೇ ನೋಡಲಾಗುತ್ತಿದೆ.

ಸ್ವಾತಂತ್ರ್ಯವಿರದ ಹೆಣ್ಣು ಸದಾಕಾಲ ಪುರುಷನ ನಿಯಂತ್ರಣದಲ್ಲಿರಬೇಕೆಂದು, ಸಂಪತ್ತನ್ನು ಕಾಯಲು ಕಾವಲು ವ್ಯವಸ್ಥೆಯನ್ನು ನಿರ್ಮಿಸುವಂತೆ ಹೆಣ್ಣನ್ನು ಸಹಾ ರಕ್ಷಣೆಯಲ್ಲಿಯೇ ಇಡಲಾಗುತ್ತಿದೆ. ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ ಅವಳದ್ದೇ ಗಂಡು ಮಕ್ಕಳು ರಕ್ಷಕರಾಗಿರುತ್ತಾರೆ. ಈ ಮೂಲಕ ವ್ಯವಸ್ಥೆಯು ಮಹಿಳೆಯರನ್ನು 'ವಸ್ತು' ಎಂದು ಭಾವಿಸುತ್ತದೆ. ಹೆಣ್ಣು ಮಗು ಹುಟ್ಟಿದ ಘಳಿಗೆಯಿಂದಲೇ ಪರರ ಮನೆಯ ಸ್ವತ್ತು ಎಂಬ ಕುಟುಂಬದ ಮನೋಭಾವಕ್ಕೆ ತುತ್ತಾಗುತ್ತಾಳೆ. ಈ ಮನೋಭಾವವೇ ಅವಳನ್ನು ವಸ್ತು ನೆಲೆಯಲ್ಲಿ ಪರಿಗಣಿಸುವ ವ್ಯವಸ್ಥೆಯ ಮನಸ್ಥಿತಿಯನ್ನು ತೋರಿಸುತ್ತದೆ. ಮಹಿಳೆಯ ಬದುಕಿನ ಪ್ರತೀ ಹಂತದಲ್ಲಿಯೂ ಅವಳ ಮೇಲೆ ಒಡೆತನವನ್ನು ಸಾಧಿಸಲಾಗುತ್ತದೆ. ಅಧೀನವಾಗಿರುವುದೇ ತನ್ನ ವಾಸ್ತವ ಸ್ಥಿತಿ ಎಂದು ಭಾವಿಸಿಕೊಂಡು ಯಾವ ವಿರೋಧಗಳೂ ಇಲ್ಲದೆ ವ್ಯವಸ್ಥೆಯ ನಿಯಮ ಗಳಿಗೆ ತಕ್ಕಂತೆ ಸಿದ್ಧಮಾದರಿಯ ರೂಪಗಳಲ್ಲಿ ಹೆಣ್ಣನ್ನು ರೂಪಿಸಲಾಗುತ್ತದೆ. ಪ್ರಸ್ತುತ ಸಂದರ್ಭ

ದಲ್ಲಿ ಮಹಿಳೆಯರ ವಿಷಯವನ್ನು ಪ್ರಸ್ತಾಪಿಸುವುದೆಂದರೆ ಅದಕ್ಕೆ ಪೂರ್ವತಯಾರಿ ಇರಬೇಕಾದುದು ಮುಖ್ಯವಾಗುತ್ತದೆ. ಏಕೆಂದರೆ ವಿರೋಧಿ ಅಸ್ತ್ರಗಳು ಯಾವ ಮೂಲದಿಂದ ಬಂದು ಘಾಸಿಗೊಳಿಸುತ್ತವೆಯೋ ತಿಳಿಯದು. ಆ ಕಾರಣಕ್ಕಾಗಿಯೇ ಆ ಅಸ್ತ್ರಗಳಿಂದ ತಪ್ಪಿಸಿ ಕೊಳ್ಳಲು ಅಥವಾ ಅವುಗಳಿಗೆ ಪ್ರತಿರೋದ/ವನ್ನು ವ್ಯಕ್ತಪಡಿಸಲು ಪೂರ್ವ ತಯಾರಿ ಅವಶ್ಯಕ ವಾಗಿರುತ್ತದೆ. ಇದನ್ನು ಕುರಿತಂತೆ ಫ್ರಾನ್ಸ್‌ನ ಪ್ರಸಿದ್ಧ ಸ್ತ್ರೀವಾದಿ ಚಿಂತಕಿಯಾದ ಸಿಮೋನ್ ದ ಬೋವಾ ತನ್ನ ಸೆಕೆಂಡ್ ಸೆಕ್ಸ್ ಎಂಬ ಕೃತಿಯಲ್ಲಿ ಹೀಗೆ ಬರೆದಿದ್ದಾಳೆ. "ಹೆಂಗಸಾದ ನಾನು ನನ್ನ ಬದುಕನ್ನು ಕುರಿತು ಏನೇ ಹೇಳಬೇಕೆಂದುಕೊಂಡ ಮೊದಲಿಗೆ, ನಾನೊಬ್ಬ ಹೆಂಗಸು ಎಂದು ಪ್ರಸ್ತಾಪಿಸಿದಲ್ಲದೆ ಮಾತನ್ನು ಮುಂದುವರೆಸಲಾಗದು" ಎಂದು ಹೇಳುತ್ತಾರೆ. ಈ ರೀತಿಯ ಪರಿಸ್ಥಿತಿ ಇಂದಿಗೂ ಇದೆ. ಈ ಸಮಾಜದಲ್ಲಿ ಪುರುಷನೇ ಮುಖ್ಯ ಕೇಂದ್ರ, ಇಲ್ಲಿ ನಡೆಯುವಂತಹ ಎಲ್ಲಾ ಆಗುಹೋಗುಗಳು ಅವನ ಮೂಗಿನ ನೇರಕ್ಕೇ ನಡೆಯಬೇಕು. ಹಾಗಾಗಿಯೇ ಮಹಿಳೆಯರ ಬದುಕೂ ಸಹ ಪುರುಷ ಕೇಂದ್ರದ ಸುತ್ತಲೇ ತಿರುಗಬೇಕಾದ ಅನಿವಾರ್ಯತೆಗೆ ಒಳಗಾಗಬೇಕಾಗಿದೆ. ಸ್ತ್ರೀ ಪುರುಷರ ನಡುವಿನ ಅಸಮಾನತೆಯು ಮಹಿಳೆಯ ದುಡಿಮೆಯನ್ನೂ ಸಹ ಕಿತ್ತುಕೊಂಡಿರುವುದು ಕಂಡುಬರುತ್ತದೆ. ಹಾಗಾಗಿಯೇ ಮಹಿಳೆಯರ ದುಡಿಮೆಯ ಪ್ರತಿಫಲ ಅವರಿಗೆ ದಕ್ಕದಾಗಿದೆ.

ವ್ಯವಸ್ಥೆಯಲ್ಲಿ ಈಗಾಗಲೇ ಜಾರಿಯಲ್ಲಿರುವ ಧರ್ಮಗಳೂ ಸಹ ಮಹಿಳೆಯರನ್ನು ನಿಯಂತ್ರಣದಲ್ಲಿರಿಸಿಕೊಂಡಿವೆ. ಮುಖ್ಯವಾಗಿ ಮಹಿಳೆಯರ ಬಗೆಗೆ ಅವರು ಹೊಂದಿರುವ ದೃಷ್ಟಿಕೋನಗಳು ಮತ್ತು ಧೋರಣೆಗಳೇ ಮಹಿಳೆಯರ ಸಾಮಾಜಿಕ ಪಾತ್ರ ನಿರ್ವಹಣೆಯ ಹಿಂದಿರುವ ಸೂತ್ರವಾಗಿದೆ. ಹಾಗಾಗಿಯೇ ಮಹಿಳೆಯರಿಗೆ ಅಸ್ತಿತ್ವವೇ ಇಲ್ಲದಂತಾಗಿದೆ. ಮುಖ್ಯವಾಗಿ ಪ್ರಪಂಚದ ಪ್ರಮುಖ ಧರ್ಮಗಳಲ್ಲಿ ಮಹಿಳೆ ಪುರುಷನಿಗೆ ಅಧೀನವಾಗಿರುವುದನ್ನೇ ಆದರ್ಶವೆನ್ನಲಾಗಿದೆ. ಈ ಆದರ್ಶದ ಮಾದರಿಯನ್ನು ಮಹಿಳೆಯರ ಮುಂದಿಡುವುದರ ಮೂಲಕ ಅವರನ್ನು ನಿಯಂತ್ರಣದಲ್ಲಿರಿಸಿಕೊಳ್ಳಲಾಗಿದೆ. ಮುಖ್ಯವಾಗಿ ಹಲವು ಆಚರಣೆ, ನಂಬಿಕೆಗಳ ಮೂಲಕ ಹೆಣ್ಣಿನ ಮೇಲೆ ಅನೇಕ ಬಗೆಯ ಹೇರಿಕೆಗಳನ್ನು ಅವಳ ಕರ್ತವ್ಯವೆಂದು ಹೇರಲಾಗುತ್ತಿದೆ. ಆಚರಣೆ, ಸಂಪ್ರದಾಯ, ನಂಬಿಕೆ ಇವುಗಳು ಸಂಸ್ಕೃತಿಯ ಸಂಕೇತಗಳೆಂದು ಅವುಗಳನ್ನು ಚಾಚೂ ತಪ್ಪದೆ ನಿರ್ವಹಿಸುವ ಮತ್ತು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ರಾಯಭಾರಿಯಂತೆ ಹೆಣ್ಣನ್ನು ಪ್ರತಿನಿಧಿಸಲಾಗುತ್ತದೆ. ಆ ಮೂಲಕ ಹಲವು ಅಮಾನುಷ ಆಚರಣೆಗಳು ರೂಢಿಯಲ್ಲಿ ಬರತೊಡಗಿದವು. ಮುಖ್ಯವಾಗಿ ಇವುಗಳ ಹಿಂದಿನ ಉದ್ದೇಶ ಮಹಿಳಾ ಹಕ್ಕುಗಳ ಹರಣ ಮಾಡುವುದೇ ಆಗಿದೆ. ಮಹಿಳೆಯರು ತಮ್ಮ ಆರ್ಥಿಕ ಭದ್ರತೆಯನ್ನು ಸ್ಥಾಪಿಸಿಕೊಳ್ಳಲು ಹಲವು ರೀತಿಯ ಪ್ರಯತ್ನದಲ್ಲಿ ತೊಡಗುತ್ತಾರೆ. ಆದರೆ ಅದರಲ್ಲಿ ಯಶಸ್ವಿಯಾದ ಮಹಿಳೆಯರು ಮಾತ್ರ ತುಂಬಾ ಕಡಿಮೆ ಎಂದೇ ಹೇಳಬಹುದು. ಈ ಹಿಂದೆ ಮಹಿಳೆಯರ ಆರ್ಥಿಕ ಭದ್ರತೆಯನ್ನು ಇಲ್ಲವಾಗಿಸುವ ಕುತಂತ್ರಕ್ಕೆ ಪೂರಕವಾಗಿ ಜಾರಿಯಲ್ಲಿದ್ದುದು

ಸತಿ ಪದ್ಧತಿಯಂತಹ ಅಮಾನುಷ ಆಚರಣೆ. ಸತಿ ಹೋಗುವುದು ಎಂದರೆ ಸ್ವರ್ಗ ಪ್ರಾಪ್ತಿಯಾಗುವುದು, ಪತಿವ್ರತೆಯ ಸ್ಥಾನವನ್ನು ಪಡೆಯುವುದು, ದೇವತೆಯಾಗುವುದು ಎಂಬ ಭ್ರಮೆಗೆ ಬಲಿಯಾಗುವ ಮೂಲಕ ತನ್ನನ್ನು ತಾನೇ ಬಲಿಕೊಟ್ಟುಕೊಳ್ಳಲು ಸಿದ್ಧವಾಗುವಂತೆ ಹೆಣ್ಣನ್ನು ಸಾಮಾಜೀಕರಣಕ್ಕೆ ಒಳಪಡಿಸಲಾಗುತ್ತಿತ್ತು. ಹೀಗೆ ಮಾಡುವುದರ ಮೂಲಕ ಆಸ್ತಿಹಕ್ಕಿನ ಉಲ್ಲಂಘನೆಯಾಗುತ್ತಿದ್ದುದನ್ನು ಗುರುತಿಸಬಹುದಾಗಿದೆ.

ಮಹಿಳೆ ಪರಾವಲಂಬಿಯಾಗಿ ಬಾಳಬೇಕಾದ ಅನಿವಾರ್ಯತೆ ಸೃಷ್ಟಿಯಾಗಿರುವುದಕ್ಕೆ ಪ್ರಮುಖ ಕಾರಣ ಮಹಿಳೆಯ ಆರ್ಥಿಕ ಅಧೀನತೆ. ಆಸ್ತಿ ಹಂಚಿಕೆಯು ತಲತಲಾಂತರಗಳಿಂದ ಹಿಡಿದು ಇಂದಿನವರೆಗೂ ಸಹ ಪುರುಷರಲ್ಲಿಯೇ ಹಂಚಲ್ಪಡುತ್ತಿದೆ ಮತ್ತು ಹಾಗೆಯೇ ಹಸ್ತಾಂತರಗೊಳ್ಳುತ್ತಿದೆ. ಅದೂ ಮಹಿಳೆಯರ ತವರು ಮನೆಯಲ್ಲಾಗಿರಬಹುದು ಅಥವಾ ಗಂಡನ ಮನೆಯಲ್ಲಾಗಿರಬಹುದು. ಎರಡೂ ಕುಟುಂಬಗಳಲ್ಲಿಯೂ ವಾರಸುದಾರಿಕೆ ಪುರುಷರಲ್ಲಿಯೇ ಹಸ್ತಾಂತರಗೊಳ್ಳುತ್ತಿದೆ. ಹೀಗೆ ನಿರಾಕರಣೆಗೆ ಒಳಪಡುವ ಮಹಿಳೆಯರು ಆರ್ಥಿಕ ಸ್ವಾತಂತ್ರ್ಯವನ್ನು ಕಳೆದುಕೊಂಡರು ಎನ್ನುವುದಕ್ಕಿಂತ ಆ ಹಕ್ಕುಗಳನ್ನು ವ್ಯವಸ್ಥಿತವಾಗಿ ಕಿತ್ತುಕೊಳ್ಳಲಾಯಿತು. ಹೀಗೆ ಹಕ್ಕುಗಳಿಂದ ವಂಚಿತರಾದ ಮಹಿಳೆಯರ ಸುಧಾರಣೆಗಾಗಿ ಅಂದರೆ ಅವರ ಸ್ಥಾನಮಾನಗಳ ಸುಧಾರಣೆಗಾಗಿ ಹಲವು ಪ್ರಯತ್ನಗಳು ನಡೆದವು. ಅವುಗಳಲ್ಲಿ ಮುಖ್ಯವಾಗಿ ಹಿಂದಿನಿಂದಲೂ ನೋಡುವುದಾದರೆ ೧೮೧೬ರಲ್ಲಿ ಪುಣೆಯ ಕಮಿಷನರ್ ವಿಲಿಯಂ ಚಾಪ್ಲೀನ್ ಬೊಂಬಾಯಿ ಸಂಸ್ಥಾನದಲ್ಲಿ ವಿಧವೆಯ ನಿತ್ಯ ಜೀವನದ ನಿರ್ವಹಣೆಗೆ ಮಾಸಾಶನ ನೀಡಿದ್ದು ಕಂಡುಬರುತ್ತದೆ. ಇದು ವಿವಾಹಿತ ಮಹಿಳೆಗೆ ನೀಡಿದ ಪ್ರೋತ್ಸಾಹವೆಂದೇ ತಿಳಿಯಬಹುದಾಗಿದೆ. ವಿವಾಹಿತ ಮಹಿಳೆಯ ಗಂಡನ ಆಸ್ತಿಗೆ ಸಂಬಂಧಿಸಿದಂತೆ ಯಾವುದೇ ಹಕ್ಕು ಇರಲಿಲ್ಲ. ೧೯೨೩ರ ವಿಶೇಷ ಕಾಯಿದೆಯ ತಿದ್ದುಪಡಿಯಲ್ಲಿ ಮಹಿಳೆಯರಿಗೆ ಉತ್ತರಾಧಿಕಾರವನ್ನು ನೀಡಿತು. ನಂತರ ೨೦ರ ದಶಕದ ವೇಳೆಗೆ ಹಲವು ಮಹಿಳಾ ಸಂಘಟನೆಗಳು ರಚನೆಯಾದವು. ಜೊತೆಗೆ ಪ್ರತಿಗಾಮಿ ಮನೋಭಾವವನ್ನು ಹೊಂದಿದ್ದಂತಹ ಕೆಲವು ವ್ಯಕ್ತಿಗಳು ಮಹಿಳೆಯರ ಕಾನೂನಿನ ಸ್ಥಾನಮಾನದಲ್ಲಿ ಬದಲಾವಣೆ ತರಬೇಕೆಂದು ಹೋರಾಟ ನಡೆಸಿದರು. ೧೯೧೭ರ ವುಮೆನ್ಸ್ ಇಂಡಿಯನ್ ಅಸೋಸಿಯೇಷನ್, ೧೯೨೭ರ ಎಐಡಬ್ಲೂಸಿ ಮುಖ್ಯವಾದವುಗಳು. ಇವುಗಳು ಮುಖ್ಯವಾಗಿ ಮಹಿಳೆಯರ ವಾರಸುದಾರಿಕೆ, ನಿಯಂತ್ರಣ ಹಕ್ಕುಗಳಿಗಾಗಿ ಹೋರಾಟಗಳನ್ನು ಮಾಡಿದವು. ಹಿಂದೂ ವಿಧವೆಯರಿಗೆ ಗಂಡಂದಿರ ಆಸ್ತಿಯಲ್ಲಿ ಪಾಲಿನ ಹಕ್ಕುಗಳ ಬಗ್ಗೆ ೧೯೩೫ರಲ್ಲಿ ಶಾಸನ ಸಭೆಯಲ್ಲಿ ಮಂಡಿಸಿದ ಕಾನೂನುಗಳು ತೀವ್ರ ವಿರೋಧವನ್ನು ಎದುರಿಸಬೇಕಾಯಿತು. ಕೊನೆಗೆ ೧೯೩೭ರಲ್ಲಿ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಅಧಿನಿಯಮ ಜಾರಿಯಾಯಿತು. ತಾಯಿ, ಮಗಳು, ಮೊಮ್ಮಗಳಿಗೆ ಗಂಡಿನ ಸ್ವಯಾರ್ಜಿತ ಆಸ್ತಿಯಲ್ಲಿ ಅವನ ಮರಣಾ ನಂತರ ಸಮಪಾಲು ದೊರೆಯುವಂತಾಯಿತು. ನಂತರದಲ್ಲಿ ವಿವಾಹಿತ ಹೆಣ್ಣುಮಕ್ಕಳ ಆಸ್ತಿ ವಿಚಾರವಾಗಿ ೧೯೫೦ರಲ್ಲಿ ಒಂದು ಸಮಗ್ರವಾದಂತಹ ವಾರಸುದಾರಿಕೆಯ ಕಾನೂನನ್ನು

ರೂಪಿಸುವ ಸಲುವಾಗಿ ಅಂಬೇಡ್ಕರರು ಪ್ರಯತ್ನಿಸಿದರು. ಹಾಗೆಯೇ ಒಂದು ಸುಧೀರ್ಘವಾದಂತಹ ಕಾನೂನನ್ನೂ ಸಹ ರೂಪಿಸಿದ್ದರು. ಆದರೆ ಮೂಲಭೂತವಾದಿಗಳ ತಂತ್ರಗಳಿಂದಾಗಿ ಇದು ಜಾರಿಯಾಗಲಿಲ್ಲ. ನಂತರದಲ್ಲಿ ೧೯೫೬ರಲ್ಲಿ ಈ ಕಾನೂನು ಜಾರಿಯಾಯಿತು. ಇದರಿಂದ ಮಹಿಳೆಯರಿಗೆ ಬಹಳಷ್ಟು ಅನುಕೂಲವಾಯಿತಾದರೂ, ಈ ಕಾನೂನಿನಲ್ಲಿ ಕೆಲವು ಲೋಪದೋಷಗಳಿದ್ದವು. ಹಾಗಾಗಿಯೇ ೧೯೯೪ರಲ್ಲಿ ಈ ದೋಷಗಳನ್ನು ಸರಿಪಡಿಸಲಾಯಿತು. ೨೦೦೫ರಲ್ಲಿ ಮತ್ತೆ ಆಸ್ತಿಹಕ್ಕಿನ ಕಾನೂನಿಗೆ ತಿದ್ದುಪಡಿಯನ್ನು ತರಲಾಯಿತು. ದಕ್ಷಿಣ ಭಾರತದ ರಾಜ್ಯಗಳು ಈ ನಿಯಮವನ್ನು ಅಳವಡಿಸಿಕೊಂಡವು. ಇದರ ಪ್ರಕಾರ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೂ ಸಮ ಪಾಲು ದೊರೆಯಿತು. ಕಾನೂನಾತ್ಮಕವಾಗಿ ಜಾರಿಯಾದಂತಹ ನಿಯಮಗಳನ್ನು ಮಹಿಳೆಯರು ಸಮರ್ಥವಾಗಿ ಬಳಸಿಕೊಳ್ಳಬೇಕಾಗಿದೆ. ಏಕೆಂದರೆ ಇದರ ಬಳಕೆಯ ಕುರಿತಂತೆ ಗಮನಿಸಿದಾಗ ಮಹಿಳಾಭಿವೃದ್ಧಿಯನ್ನು ಕೇಂದ್ರವಾಗಿರಿಸಿಕೊಂಡು ಜಾರಿಯಾದಂತಹ ಕಾನೂನು ಉದ್ದೇಶಿತ ಗುರಿ ಸಾಧಿಸಿದೆಯೇ ಅಥವಾ ಇಲ್ಲವೇ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಈ ಅಧ್ಯಯನವು ಉತ್ತರ ಕರ್ನಾಟಕವನ್ನು ಕೇಂದ್ರೀಕರಿಸಿಕೊಂಡಿದೆಯಾದರೂ ಅಧ್ಯಯನದ ಅನುಕೂಲಕ್ಕೆ ತಕ್ಕಂತೆ ಎರಡು ಜಿಲ್ಲೆಗಳಿಗೆ ಅಂದರೆ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಜಿಲ್ಲೆಗಳು ನಂಜುಂಡಪ್ಪ ವರದಿಯಲ್ಲಿ ಸೂಚಿಸಿರುವಂತೆ ಹಿಂದುಳಿದ ಜಿಲ್ಲೆಗಳಾಗಿವೆ. ಇಲ್ಲಿನ ಮಹಿಳೆಯರ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು ಮಹಿಳೆಯರಲ್ಲಿ ಹಾಸುಹೊಕ್ಕಾಗಿರುವುದು ಕಂಡುಬರುತ್ತದೆ. ವ್ಯವಸ್ಥೆಯಲ್ಲಿ ಸಾಮಾಜಿಕವಾಗಿ ನಂಬಿಕೆಗಳು, ಮೌಲ್ಯಗಳು ಪ್ರಾದೇಶಿಕವಾಗಿ ಭಿನ್ನವಾಗಿರುತ್ತವೆ. ಹಾಗಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಕಂಡುಬರುವ ಸ್ಥಳೀಯ ನಂಬಿಕೆಗಳು, ದಕ್ಷಿಣದ ಪಿತೃಪ್ರಧಾನ ಮೌಲ್ಯಗಳಿಗಿಂತ ಭಿನ್ನವಾಗಿರುತ್ತವೆ. ಈ ಮೌಲ್ಯಗಳಿಗೆ ಅನುಗುಣವಾಗಿ ಲಿಂಗಶ್ರೇಣೀಕರಣ, ಜಾತಿ ಶ್ರೇಣೀಕರಣಗಳು ದಟ್ಟವಾಗಿರುವುದು ಕಂಡುಬರುತ್ತವೆ. ಸ್ಥಳೀಯ ನಂಬಿಕೆಗಳಲ್ಲಿ ಭಿನ್ನತೆ ಏನೇ ಇದ್ದರೂ ಸಹ ಅವುಗಳ ಮುಖ್ಯ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ. ಮಹಿಳೆಯರನ್ನು ನಿಯಂತ್ರಣದಲ್ಲಿರಿಸಿಕೊಳ್ಳುವುದು.

ಅಧ್ಯಯನದ ಉದ್ದಕ್ಕೂ ಮಹಿಳೆಯರು ಆಸ್ತಿಹಕ್ಕನ್ನು ಪಡೆಯುವಲ್ಲಿ ಎದುರಾಗುವ ಸಂದರ್ಭ, ಸ್ವರೂಪಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಮಹಿಳೆಯರು ಕೇವಲ ಸವಾಲುಗಳನ್ನು ಎದುರಿಸಿದ್ದಾರೆಂದು ತೋರಿಸುವುದು ಅಧ್ಯಯನದ ಮುಖ್ಯ ಉದ್ದೇಶವಲ್ಲ. ಬದಲಿಗೆ ಮಹಿಳೆಯರು ಆಸ್ತಿಹಕ್ಕನ್ನು ಪಡೆದುಕೊಂಡಿರುವ ಪ್ರಮಾಣ ಮತ್ತು ಸ್ವರೂಪವನ್ನು ವಿಶ್ಲೇಷಿಸುವ ಮೂಲಕ ಗುಣಾತ್ಮಕವಾಗಿ ಕಾಯಿದೆಯನ್ನು ಬಳಕೆ ಮಾಡಿಕೊಳ್ಳುವಲ್ಲಿ ಮಹಿಳೆಯರ

ಪಾತ್ರವನ್ನು ಸಾಮಾಜಿಕ ಮತ್ತು ಕಾನೂನಾತ್ಮಕ ನೆಲೆಗಳಲ್ಲಿ ಪ್ರಕರಣಗಳ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪಿತೃಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಯರ ಸ್ಥಾನಮಾನ ನಿರ್ಧರಿಸಲ್ಪಡುವುದು ಸಾಮಾಜೀಕತೆಯ ಕೇಂದ್ರದಿಂದಲೇ. ಗಂಡು ಮತ್ತು ಹೆಣ್ಣಿನ ಜೈವಿಕ ಭಿನ್ನತೆಯೇ ಲಿಂಗ ತಾರತಮ್ಯದ ಆರಂಭಿಕ ಬಿಂದು. ಮುಂದುವರೆದಂತೆ ಶ್ರಮ ವಿಭಜನೆಯ ಮೂಲಕ ಅಧಿಕಾರದ ಹಂಚಿಕೆಯು ಅಸಮಾನ ನೆಲೆಯಲ್ಲಿ ಹಂಚಿಕೆಯಾಗುತ್ತದೆ. ಅಧಿಕಾರವು ಪುರುಷ ಪರವಾದರೆ, ಅಧೀನ ನೆಲೆಗೆ ಮಹಿಳೆಯರು ಅನಿವಾರ್ಯವಾಗಿ ದೂಡಲ್ಪಡುತ್ತಾರೆ. ಹಾಗಾಗಿ ಮಹಿಳೆಯರು ಅವಲಂಬಿತರಾಗಿ ಬದುಕಬೇಕಾದ ಅನಿವಾರ್ಯತೆಗಳಿಗೆ ಒಳಗಾಗುತ್ತಾರೆ. ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಪ್ರದೇಶಗಳಲ್ಲಿ ಇಂತಹದ್ದೇ ವಾತಾವರಣ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಇಂತಹ ಪರಿಸರದಲ್ಲಿ ಲಿಂಗ ಸಮಾನತೆಯನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರ ವಹಿಸುವಂತಹ ಮಹಿಳಾ ಪರ ಕಾನೂನುಗಳನ್ನು ಕೇಂದ್ರೀಕರಿಸಿಕೊಂಡು ಹಲವು ಅಧ್ಯಯನಗಳು ಈಗಾಗಲೇ ಬಂದಿವೆ. ಇಂತಹ ಲಿಂಗ ಸಂಬಂಧಿ ಆಯಾಮಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ನಡೆಸಿದಾಗ ಲಿಂಗ ಸಮಾನತೆಯನ್ನು ಸಾಧಿಸುವುದರ ಹಿನ್ನಡೆಯನ್ನು ಗುರುತಿಸಬಹುದಾಗಿದೆ. ಈ ಹಿನ್ನಲೆಯಲ್ಲಿ ಆಸ್ತಿಹಕ್ಕಿನ ಕಾಯಿದೆಯ ಕುರಿತ ಚಿಂತನೆಗಳಿಗೆ ಸ್ತ್ರೀವಾದಿ ನಿಲುವುಗಳನ್ನು ಅನ್ವಯಿಸಿ ಅಧ್ಯಯನ ಕೈಗೊಳ್ಳಲಾಗಿದೆ.

**೧.೧. ಅಧ್ಯಯನದ ಉದ್ದೇಶ**

ಮಹಿಳೆಯರು ಹಲವು ಸಾಮಾಜಿಕ ಸಮಸ್ಯೆಗಳಿಗೆ ಸಿಲುಕಿ ನರಳುತ್ತಿದ್ದಾರೆ. ಮುಖ್ಯವಾಗಿ ವರದಕ್ಷಿಣೆ, ಲೈಂಗಿಕ ಕಿರುಕುಳ, ದೌರ್ಜನ್ಯ, ಅತ್ಯಾಚಾರ, ಕೌಟುಂಬಿಕ ಹಿಂಸೆ, ಬಾಲ್ಯ ವಿವಾಹ ಹೀಗೆ ಹಲವು ಸಮಸ್ಯೆಗಳು ಮಹಿಳೆಯರ ಜೀವನದ ಸುತ್ತಲೂ ಜೇಡರ ಬಲೆಯಂತೆ ಹೆಣೆದುಕೊಂಡಿರುವುದು ಕಂಡುಬರುತ್ತಿದೆ. ಮಹಿಳೆ ಅಧೀನ ನೆಲೆಯ ಪ್ರಜೆ ಎಂಬ ವ್ಯವಸ್ಥೆಯ ಮನೋಭಾವಕ್ಕೆ ಕಾರಣವಾಗಿರುವ ಹಲವು ಅಂಶಗಳಲ್ಲಿ ಮಹಿಳೆಯರ ಆರ್ಥಿಕ ಅಭದ್ರತೆಯೂ ಪ್ರಮುಖವಾದುದು. ಹಾಗಾಗಿ ಮಹಿಳೆಯರಿಗೆ ಆರ್ಥಿಕ ಭದ್ರತೆಯನ್ನು ಒದಗಿಸುವ ಆಶಯದೊಂದಿಗೆ ಹಿಂದೂ ವಾರಸಾ ಅಧಿನಿಯಮ (ಮಹಿಳೆಯರ ಆಸ್ತಿಹಕ್ಕನ್ನು ಅಧಿಕೃತ ಗೊಳಿಸುವ ನಿಟ್ಟಿನಲ್ಲಿ) ಜಾರಿಯಾಗಿದೆ. ಆದರೆ ಈ ಕಾಯಿದೆ ಇತರೆ ಕಾಯಿದೆಗಳಂತೆ ಲಿಂಗ ಅಸಮಾನತೆಗಳಿಂದಲೇ ಕೂಡಿದುದಾಗಿದೆ. ಈ ಕಾಯಿದೆ ಜಾರಿಯಾಗಿ ಹಲವು ವರ್ಷಗಳೇ ಕಳೆದರೂ ಸಹ ಅದರ ಪ್ರತಿಫಲವನ್ನು ಮಹಿಳೆಯರು ಪಡೆದಿದ್ದಾರೆಯೇ ಎಂಬುದು ಪ್ರಶ್ನೆಯಾಗಿಯೇ ಉಳಿದುಕೊಂಡಿದೆ. ಮಹಿಳೆಯರು ಈ ಕಾಯಿದೆಯನ್ನು ಹೇಗೆ ಪರಿಭಾವಿಸಿ ಕೊಂಡಿದ್ದಾರೆ ಮತ್ತು ಉಪಯೋಗಿಸಿಕೊಂಡಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವ ನಿಟ್ಟಿನಲ್ಲಿ ಈ ಅಧ್ಯಯನವು ಕೆಳಕಂಡ ಉದ್ದೇಶಗಳನ್ನು ಹೊಂದಿದೆ.

ಕೌಟುಂಬಿಕ ವ್ಯವಸ್ಥೆಯ ಚೌಕಟ್ಟಿನೊಳಗೆ ಸ್ತ್ರೀ-ಪುರುಷರ ನಡುವೆ ಲಿಂಗಾಧಾರಿತವಾಗಿ ಕೆಲಸಕಾರ್ಯಗಳನ್ನು ವಿಭಜಿಸಲಾಗಿರುತ್ತದೆ. ಇದರ ಪ್ರಕಾರವಾಗಿ ಮಹಿಳೆಯರ ಕೆಲಸಗಳು ಯಾವುವು ಎಂದು ಸ್ಪಷ್ಟಪಡಿಸಲಾಗಿರುತ್ತದೆ. ಆ ಬಗೆಯಲ್ಲಿ ಮಹಿಳೆಯರ ಕೆಲಸಗಳು ಕೇವಲ ಸಂಗೋಪನೆ, ಪಾಲನೆ, ಸೇವೆಯ ನೆಲೆಯಲ್ಲಿ ಸೀಮಿತಗೊಂಡಿರುತ್ತವೆ. ಆ ಮೂಲಕ ಮಹಿಳೆ ವ್ಯಾವಹಾರಿಕ ವಲಯಕ್ಕೆ ಪ್ರವೇಶಿಸದಂತೆ ನೋಡಿಕೊಳ್ಳಲಾಗುತ್ತದೆ. ಹೀಗೆ ಮಹಿಳೆಯರನ್ನು ಹೊರಗಿಡುವ ಪ್ರಕ್ರಿಯೆಯು ಜಾಣತನದಿಂದ ಮುಂದುವರೆದುಕೊಂಡು ಬಂದಿದೆ. ಹೀಗೆ ಮಹಿಳೆಯರನ್ನು ಅಧಿಕಾರ ರಹಿತರನ್ನಾಗಿಸುವ ಹುನ್ನಾರದ ಪ್ರತಿಫಲವಾಗಿ ಮಹಿಳೆಯರು ಆಸ್ತಿಹಕ್ಕಿನಿಂದಲೂ ಹೊರಗಿಡಲ್ಪಟ್ಟಿದ್ದಾರೆ. ಹೀಗೆ ಮಹಿಳೆಯರನ್ನು ವ್ಯವಸ್ಥಿತವಾಗಿ ಆಸ್ತಿಹಕ್ಕಿನಿಂದ ಹೊರಗಿಡುವಲ್ಲಿ ವ್ಯವಸ್ಥೆ ಹೇಗೆ ಸಫಲವಾಗಿದೆ ಮತ್ತು ಅದರ ಹಿಂದಿನ ಉದ್ದೇಶವೇನು ಎಂಬುದನ್ನು ಅರಿಯುವುದು.

ಕಾಯಿದೆಯು ಲಿಂಗ ಸಮಾನತೆಯ ಆಶಯದೊಂದಿಗೆ ಜಾರಿಗೊಂಡಿದೆ. ಆದರೆ ಜಾರಿಯಾಗುವುದಕ್ಕೂ ಪೂರ್ವದಲ್ಲಿ ಕಾಯಿದೆಯು ರೂಪುಗೊಂಡ ಬಗೆಯನ್ನು ಅರಿಯಲು, ಕಾಯಿದೆಯ ಹಿನ್ನಲೆಯನ್ನು ತಿಳಿಯುವುದು. ಕಾಯಿದೆಯನ್ನು ರೂಪಿಸುವ ಮತ್ತು ಅನುಷ್ಠಾನಕ್ಕೆ ತರುವಂತಹ ಸಂದರ್ಭದಲ್ಲಿ ಲಿಂಗ ಅಸಮಾನತೆಗಳೇನಾದರೂ ಕಂಡುಬಂದಿವೆಯೇ ಎಂಬುದನ್ನು ಗುರುತಿಸಬೇಕಾಗುತ್ತದೆ. ಹಾಗೆಯೇ ಕಾಯಿದೆಯು ಸಂಪೂರ್ಣವಾಗಿ ಮಹಿಳೆಯರ ಪರವಾಗಿ ಕಾರ್ಯನಿರ್ವಹಿಸುವಲ್ಲಿ ಯಾವುದಾದರೂ ತೊಡಕುಗಳು ಎದುರಾಗುವ ಸಾಧ್ಯತೆಗಳಿವೆಯೇ ಎಂಬುದನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸುವ ಅನಿವಾರ್ಯತೆ ಇದೆ.

ಮಹಿಳೆಯರು ಈಗಾಗಲೇ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದರೆ ಅಥವಾ ಪಡೆಯದೇ ಇದ್ದರೆ ಅವರು ಎದುರಿಸಿದಂತಹ ಸವಾಲುಗಳೇನು, ಪಿತೃಪ್ರಧಾನ ಮೌಲ್ಯಗಳು ಸೃಷ್ಟಿಸಿರಬಹುದಾದ ಇಕ್ಕಟ್ಟುಗಳೇನು ಎಂಬುದರ ಮೂಲಕ ಮಹಿಳೆಯರ ನಿಲುವನ್ನು ವಿಶ್ಲೇಷಿಸುವ ಜರೂರಿದೆ. ಒಂದುವೇಳೆ ಮಹಿಳೆಯರು ಆಸ್ತಿಯನ್ನು ನಿರಾಕರಿಸುತ್ತಿದ್ದಾರೆ ಎಂದಾದರೆ ಅದರ ಹಿಂದಿರುವ ಸಾಮಾಜಿಕ, ಕೌಟುಂಬಿಕ ಒತ್ತಡಗಳು ಯಾವುವು ಎಂಬುದನ್ನು ತಿಳಿಯುವುದು. ಹಾಗೆಯೇ ಆಸ್ತಿ ಬೇಕು ಎಂಬ ಮಹಿಳೆಯರ ನಿಲುವು ಮತ್ತು ಸಂದರ್ಭಗಳನ್ನು ಚರ್ಚಿಸುವುದು.

ಆಸ್ತಿಹಕ್ಕನ್ನು ಪಡೆಯಲು ಸಹಕಾರಿಯಾಗುವ ನ್ಯಾಯ ವ್ಯವಸ್ಥೆಯ ಪಾತ್ರ ಹಾಗೂ ನ್ಯಾಯವನ್ನು ಕೊಡಿಸುವ ನೆಲೆಯಲ್ಲಿನ ರಾಜಕಾರಣಗಳನ್ನು ಗುರುತಿಸುವುದು. ಮುಖ್ಯವಾಗಿ ಆಸ್ತಿಹಕ್ಕಿನ ಕಾಯಿದೆಯ ಕುರಿತಂತೆ ಮಹಿಳೆಯರಲ್ಲಿ ಅರಿವು ಇದೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿಯುವುದು. ಹಾಗೆಯೇ ಮಹಿಳೆಯರಿಗೆ ಆಸ್ತಿಹಕ್ಕಿನ ಕುರಿತ ಅರಿವನ್ನು ಮೂಡಿಸಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಬೇಕಾದ ಅನಿವಾರ್ಯತೆ ಇದೆ ಎಂಬುದನ್ನು

ತಿಳಿಯುವುದು. ಇವುಗಳೆಲ್ಲವುಗಳ ಜೊತೆಗೆ ಪ್ರಸ್ತುತ ಕಾಯಿದೆಯು ಮಹಿಳೆಯರ ಸಬಲೀಕರಣಕ್ಕೆ ಯಾವ ರೀತಿಯಲ್ಲಿ ಸಹಕಾರಿಯಾಗಿದೆ ಎಂಬುದನ್ನು ಅರಿಯುವುದು.

**೧.೨. ಅಧ್ಯಯನದ ವ್ಯಾಪ್ತಿ**

೨೦೦೫ರಲ್ಲಿ ಜಾರಿಯಾದ ಹಿಂದೂ ವಾರಸಾ (ತಿದ್ದುಪಡಿ) ಅಧಿನಿಯಮವು ಇಡೀ ದೇಶಕ್ಕೇ ಅನ್ವಯಿಸುತ್ತದೆ. (ಜಮ್ಮು ಕಾಶ್ಮೀರವನ್ನು ಹೊರತುಪಡಿಸಿ). ಆದರೆ ದೇಶದ ಪ್ರತಿಯೊಂದು ರಾಜ್ಯದಲ್ಲಿಯೂ ಈ ಕಾಯಿದೆ ತನ್ನದೇ ಆದಂತಹ ಭಿನ್ನ ಸ್ವರೂಪವನ್ನು ಪಡೆದಿದೆ. ಅದರಂತೆಯೇ ಕರ್ನಾಟಕದಲ್ಲಿಯೂ ಈ ಕಾಯಿದೆ ಜಾರಿಯಲ್ಲಿದ್ದು. ಪ್ರಸ್ತುತ ಸಂಶೋಧನೆಯು ಉತ್ತರ ಕರ್ನಾಟಕವನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿತ್ತು. ಆದರೆ ಮೊದಲು ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಸಾವಿರಕ್ಕೂ ಹೆಚ್ಚು ಪ್ರಕರಣಗಳು ಈ ಎರಡೂ ಕ್ಷೇತ್ರ ವ್ಯಾಪ್ತಿಯಲ್ಲಿ ಸಂಗ್ರಹಿಸಲಾಯಿತು. ಹಾಗಾಗಿ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಮಾಣ ಅಧಿಕವಾಗಿದ್ದುದರಿಂದ ವ್ಯಾಪ್ತಿಯನ್ನು ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಹಾಗೆಯೇ ಸಂಗ್ರಹಿಸಿದ ಸಾವಿರ ಪ್ರಕರಣಗಳಲ್ಲಿ ವಿಶೇಷವಾದ ಮುನ್ನೂರು ಪ್ರಕರಣಗಳನ್ನಷ್ಟೇ ಅಧ್ಯಯನಕ್ಕೆ ಒಳಪಡಿಸಿಕೊಂಡು ವಿಶ್ಲೇಷಿಸಲಾಗಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನ್ಯಾಯಾಲಯಗಳಿಗೆ ಭೇಟಿನೀಡಿ ವಕೀಲರು, ನ್ಯಾಯಾಧೀಶರು, ಶಿರಸ್ತೇದಾರರು, ನ್ಯಾಯಾಲಯಗಳಲ್ಲಿನ ಮಧ್ಯಸ್ತಿಕೆ ಕೇಂದ್ರಗಳನ್ನು ವ್ಯಾಪ್ತಿಯಲ್ಲಿ ತೆಗೆದುಕೊಳ್ಳಲಾಗಿದೆ. ಹಾಗೆಯೇ ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ನ್ಯಾಯ ಪಂಚಾಯತಿಗಳನ್ನೂ ಕೂಡ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಮಹಿಳೆಯರ ಆಸ್ತಿ ಹಕ್ಕು ಎಂದ ಕೂಡಲೇ ಹಿಂದೂ, ಮುಸ್ಲೀಂ, ಕ್ರಿಶ್ಚಿಯನ್, ಪಾರ್ಸಿ, ಜೈನ ಹೀಗೆ ಎಲ್ಲಾ ಧರ್ಮೀಯ ಮಹಿಳೆಯರನ್ನು ಒಳಗೊಳ್ಳುತ್ತದೆ. ಹೀಗೆ ಎಲ್ಲಾ ಧರ್ಮಗಳು ತಮ್ಮದೇ ಆದ ನ್ಯಾಯ ವ್ಯವಸ್ಥೆಯನ್ನು ಹೊಂದಿರುತ್ತವೆ. ಹೀಗಿದ್ದಾಗ ಪ್ರತಿಯೊಂದು ಧರ್ಮದ ಕಾನೂನು ಮತ್ತು ನ್ಯಾಯ ವ್ಯವಸ್ಥೆಯನ್ನು ಅಧ್ಯಯನ ಮಾಡಬೇಕಾದರೆ ಸುಧೀರ್ಘ ಸಮಯದ ಅವಶ್ಯಕತೆ ಇರುತ್ತದೆ. ಹಾಗಾಗಿ ಸಂಶೋಧನೆಯ ಕಾಲಮಿತಿಯಲ್ಲಿ ಈ ಎಲ್ಲಾ ಧರ್ಮಗಳ ಮಹಿಳೆಯರ ಆಸ್ತಿಹಕ್ಕನ್ನು ಕುರಿತು ಅಧ್ಯಯನ ಕೈಗೊಳ್ಳುವುದರಿಂದ ಕೇವಲ ಮಾಹಿತಿ ಸಂಗ್ರಹಣೆಯ ಹಂತದ ಸಂಶೋಧನೆಯನ್ನು ಕೈಗೊಳ್ಳಬಹುದೇ ಹೊರತು ಖಚಿತವಾದ ನಿಲುವುಗಳನ್ನು ಹೊರತರುವುದು ಸಾಧ್ಯವಾಗುವುದಿಲ್ಲ. ಆ ಕಾರಣಕ್ಕಾಗಿ ಪ್ರಸ್ತುತ ಸಂಶೊಧನೆಗೆ ಇರುವ ಕಾಲಮಿತಿಯಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಹಿಂದೂ ಧರ್ಮದ "ಹಿಂದೂ ಉತ್ತರಾಧಿಕಾರ ಕಾಯಿದೆ"ಯನ್ನು ಕೇಂದ್ರವಾಗಿರಿಸಿಕೊಂಡಿದೆ. ಹಾಗೆಯೇ ಮುಸ್ಲಿಂ ಹಾಗೂ ಕ್ರಿಶ್ಚಿಯನ್ ವಾರಸಾ ಅಧಿನಿಯಮಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೧.೩. ಅಧ್ಯಯನದ ವೈಧಾನಿಕತೆ**

ಮಹಿಳಾ ಬದುಕಿನ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸಲು ಅವರ ಖಾಸಗೀ ಬದುಕಿನ ವಿವರಗಳಿಗೆ ಹೋಗುವುದು ಅತ್ಯಗತ್ಯ. ಬದುಕು ಕಂಡ ನೋವು ನಲಿವು ಸವಾಲು ಸಾಧ್ಯತೆಗಳನ್ನು ತಿಳಿಯಲು ವಿಶೇಷವಾಗಿ ಪ್ರಕರಣ ಅಧ್ಯಯನವನ್ನು ಸಂಶೋಧನಾ ಅಧ್ಯಯನದ ಭಾಗವಾಗಿ ಬಳಸಿಕೊಳ್ಳಲಾಗಿದೆ. ಜೀವನದ ಅನುಭವಗಳು ಮಾತಾದಾಗ ಸಂದರ್ಭ ಹಾಗೂ ಘಟನೆಗಳು ಹೆಚ್ಚು ಸ್ಪಷ್ಟತೆಯನ್ನು ಪಡೆಯುವುದರೊಂದಿಗೆ ಅಧ್ಯಯನದ ಹಾದಿ ಸುಗಮವಾಗಲು ಪುಷ್ಟಿ ನೀಡುತ್ತವೆ. ಇದು ಮಹಿಳಾ ಅಧ್ಯಯನದ ಸಂಶೋಧನಾ ವಿಧಾನದಲ್ಲಿ ಕಥನ ಕ್ರಮವಾಗಿ ಬಳಸಲ್ಪಡುತ್ತದೆ. ಅಂದರೆ ಸಂದರ್ಶಿಸಿದ ವ್ಯಕ್ತಿಯ ಅನುಭವಗಳನ್ನು ಅವರದೇ ಮಾತುಗಳಲ್ಲಿ ದಾಖಲಿಸುವ ವಿಧಾನ ಇದಾಗಿದೆ. ಹೀಗೆ ಸಂಶೋಧನಾ ಅಧ್ಯಯನದ ಭಾಗವಾಗಿ ದಾಖಲಿಸಲಾದ ಪ್ರಕರಣ ಅಧ್ಯಯನದಲ್ಲಿ ಕಥನ ಕ್ರಮವನ್ನೇ ಬಹುವಾಗಿ ಅನ್ವಯಿಸಿಕೊಳ್ಳಲಾಗಿದೆ. ಒಟ್ಟಾರೆ ಈ ಮೇಲಿನ ಅಂಶಗಳ ಮೂಲಕ ಮಹಿಳೆಯರ ಆಸ್ತಿ ಹಕ್ಕಿನ ಸಂಕೀರ್ಣ ಸ್ವರೂಪವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಆಕರವನ್ನು ಹೆಚ್ಚಾಗಿ ಅವಲಂಬಿಸಿದೆ. ಹೀಗೆ ಕ್ಷೇತ್ರಕಾರ್ಯದ ಮೂಲಕ ಮಹಿಳೆಯರನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಸಂದರ್ಭದಲ್ಲಿ ಸಂದರ್ಶನ, ಅವಲೋಕನ, ಪ್ರಶ್ನಾವಳಿ (ರಚಿತ/ಅರಚಿತ) ಮಾದರಿಗಳನ್ನು ಅನುಸರಿಸಲಾಗಿದೆ. ಜೊತೆಗೆ ಕಾಯಿದೆಯ ಕುರಿತ ಅನುಷಂಗಿಕ ಮಾಹಿತಿಯನ್ನು ಪುಸ್ತಕಗಳು, ವರದಿಗಳು, ಲೇಖನಗಳು, ಪತ್ರಿಕೆಗಳು ಮತ್ತು ಅಂತರ್ಜಾಲದ ಮೂಲಕ ಸಂಗ್ರಹಿಸಲಾಗಿದೆ. ಈ ಎಲ್ಲಾ ಮಾಹಿತಿಗಳನ್ನು ಗುಣಾತ್ಮಕ ಮತ್ತು ಪರಿಮಾಣಾತ್ಮಕ ಸಂಶೋಧನಾ ವಿಧಾನಗಳನ್ನು ಮತ್ತು ಲೈಂಗಿಕತಾವಾದಿಯಲ್ಲದ ಸಂಶೊಧನಾ ವಿಧಾನವನ್ನು ಅವಳವಡಿಸಿಕೊಳ್ಳುವುದರ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೧.೪. ಅಧ್ಯಯನದ ಸ್ವರೂಪ**

ಈ ಮಹಾಪ್ರಬಂಧವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು. ಈ ಕೆಳಗಿನಂತೆ ಅವುಗಳ ಸ್ವರೂಪವನ್ನು ಸಂಕ್ಷಿಪ್ತಗೊಳಿಸಲಾಗಿದೆ.

ಅಧ್ಯಾಯ ಒಂದು

**ಅಧ್ಯಯನದ ಪ್ರವೇಶ**

ಅಧ್ಯಾಯ ಒಂದರಲ್ಲಿ ಅಧ್ಯಯನ ವಿಷಯದ ತಾತ್ವಿಕ ಸ್ವರೂಪವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಜೊತೆಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪವನ್ನು ಒಳಗೊಂಡಿದೆ.

ಅಧ್ಯಾಯ ಎರಡು

**ಅಧ್ಯಯನಗಳ ತಾತ್ವಿಕ ಸಮೀಕ್ಷೆ**

ಈ ಅಧ್ಯಯದಲ್ಲಿ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳು, ಪ್ರಕಟಗೊಂಡಿರುವ ಕೃತಿಗಳು, ಲೇಖನಗಳು, ದಿನಪತ್ರಿಕೆಗಳು, ಈಗಾಗಲೇ ಮಂಡನೆಗೊಂಡ ಸಂಶೋಧನೆಗಳನ್ನು ವಿಮರ್ಶಾತ್ಮಕವಾಗಿ ಸಮೀಕ್ಷೆಗೆ ಒಳಪಡಿಸಲಾಗಿದೆ.

ಅಧ್ಯಾಯ ಮೂರು

**ಆಸ್ತಿ ಪರಿಕಲ್ಪನೆಗಳು : ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಯವರೆಗೆ**

ಯಾವುದೇ ಮಹಿಳಾ ಸಂಬಂಧಿ ವಿಷಯಕ್ಕೆ ತನ್ನದೇ ಆದ ಚರಿತ್ರೆಯ ಹಿನ್ನಲೆ ಇರುತ್ತದೆ. ಚಾರಿತ್ರಿಕ ಹಿನ್ನಲೆಯನ್ನು ಗಮನಿಸದ ಹೊರತು ವರ್ತಮಾನದ ಜೊತೆಗೆ ವಿಷಯದ ಮುನ್ನೋಟಗಳನ್ನು ಗ್ರಹಿಸುವುದು ಕಷ್ಟಸಾದ್ಯ. ಈ ಹಿನ್ನಲೆಯಲ್ಲಿ ಮಹಿಳೆಯರ ಆಸ್ತಿಹಕ್ಕಿಗೂ ತನ್ನದೇ ಆದಂತಹ ಚಾರಿತ್ರಿಕ ಹಿನ್ನಲೆ ಇರುವುದು ಕಂಡುಬರುತ್ತದೆ. ಇವು ವರ್ತಮಾನದ ಸಂಗತಿಗಳಿಗೆ ಬಹುಮುಖ್ಯವಾಗುತ್ತವೆ ಈ ಹಿನ್ನಲೆಯಲ್ಲಿ ಆಸ್ತಿಹಕ್ಕಿನ ಕುರಿತಾದ ಚಾರಿತ್ರಿಕ ಅಂಶಗಳನ್ನು ಹಿನ್ನಲೆಯಾಗಿ ಗುರುತಿಸಿಕೊಳ್ಳುವುದು ಅಗತ್ಯವಾಗಿದೆ. ಹಾಗಾಗಿ ಈ ಅಧ್ಯಾಯದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹಿಂದೆ ಜಾರಿಯಲ್ಲಿದ್ದಂತಹ ಆಸ್ತಿಯ ಕುರಿತ ಗ್ರಹಿಕೆ ಏನಾಗಿತ್ತು, ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯ ಸ್ವರೂಪ, ಲಕ್ಷಣಗಳು, ಈ ಕುಟುಂಬ ಪದ್ದತಿಯಲ್ಲಿರುವ ವಿವಾಹ ಪದ್ಧತಿಗಳು, ಅಧಿಕಾರದ ಹಸ್ತಾಂತರದ ಕ್ರಮಗಳೇನು ಇವುಗಳ ಮತ್ತು ಆ ಸಂದರ್ಭದಲ್ಲಿ ಆಸ್ತಿಯ ಮೇಲಿನ ಅಧಿಕಾರ ಯಾರದ್ದಾಗಿತ್ತು ಎಂಬುದನ್ನು ಮೊದಲ ಭಾಗದಲ್ಲಿ ವಿವರಿಸಿಕೊಳ್ಳಲಾಗಿದೆ. ನಂತರದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಸ್ವರೂಪ, ಮಾತೃ ಪ್ರಧಾನತೆಯಿಂದ ಪಿತೃಪ್ರಧಾನತೆಯೆಡೆಗೆ ಸಾಗಿದ ವ್ಯವಸ್ಥೆಯ ಚಿತ್ರಣವನ್ನು ವಿವರಿಸಿಕೊಳ್ಳುವುದರ ಜೊತೆಗೆ ಈ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿಯ ಕುರಿತು ಇರುವ ಗ್ರಹಿಕೆಗಳು, ಅಧಿಕಾರದ ಹಸ್ತಾಂತರ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಅಧ್ಯಾಯ ನಾಲ್ಕು

**ಆಧುನಿಕ ಸಂದರ್ಭದಲ್ಲಿ ಆಸ್ತಿಹಕ್ಕು ಪರಿಕಲ್ಪನೆಗಳು ಹಾಗೂ ಕಾನೂನು**

ಈ ಅಧ್ಯಾಯದಲ್ಲಿ ಮುಖ್ಯವಾಗಿ ಆಸ್ತಿಹಕ್ಕಿನ ಹಿನ್ನಲೆ ಕುರಿತಂತೆ ಚರ್ಚಿಸಲಾಗಿದೆ. ಮುಖ್ಯವಾಗಿ ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಆಸ್ತಿ ಹಕ್ಕು ಯಾವ ಸ್ವರೂಪದಲ್ಲಿ ಜಾರಿಯಲ್ಲಿತ್ತು. ಅದರ ಲಕ್ಷಣಗಳೇನು ಹಾಗೆಯೇ ಇದು ಒಂದು ಕಾನೂನಾಗಿ ಜಾರಿಯಾದ ಸಂದರ್ಭವನ್ನು ವಿವರಿಸಿಕೊಳ್ಳಲಾಗಿದೆ. ಹಾಗೆಯೇ ಸ್ವಾತಂತ್ರ್ಯಾ ನಂತರದಲ್ಲಿ ಆಸ್ತಿಹಕ್ಕು ಕಾನೂನಾತ್ಮಕವಾಗಿ ತುಂಬಾ ಬಲಿಷ್ಟವಾಗುತ್ತಾ ಬಂದಿದುದನ್ನು ಗುರುತಿಸಲಾಗಿದೆ. ಅಂದರೆ

ಸ್ವಾತಂತ್ರ್ಯಾ ನಂತರದಲ್ಲಿ ಆಸ್ತಿಹಕ್ಕಿನ ಕಾನೂನಿನಲ್ಲಿ ಆದಂತಹ ಬೆಳವಣಿಗೆಗಳ ಕುರಿತು ವಿವರಿಸಲಾಗಿದೆ. ಹಾಗೆಯೇ ೧೯೫೬ರಲ್ಲಿ ರೂಪುಗೊಂಡ ಹಿಂದೂ ಉತ್ತರಾಧಿಕಾರ ಕಾಯಿದೆ ಕುರಿತು ಮತ್ತು ಇದಕ್ಕೂ ಮೊದಲು ಇದ್ದಂತಹ ಸ್ತ್ರೀಧನ, ಮಹಿಳೆಯರ ಆಸ್ತಿ ಕುರಿತು ವಿವರಿಸಲಾಗಿದೆ. ನಂತರದಲ್ಲಿ ೧೯೯೪ ಮತ್ತು ೨೦೦೫ರಲ್ಲಿ ಹಿಂದೂ ಉತ್ತರಾಧಿಕಾರ ಕಾನೂನಿನಲ್ಲಾದ ಬದಲಾವಣೆಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಐದು

**ಆಸ್ತಿ ಹಕ್ಕು ಕಾಯಿದೆ : ಅರಿವು–ಜಾಗೃತಿ**

ಈ ಅಧ್ಯಾಯದಲ್ಲಿ ಆಸ್ತಿಹಕ್ಕಿನ ಕುರಿತ ಅರಿವು/ ಜಾಗೃತಿ ಮಹಿಳೆಯರಲ್ಲಿ ಮೂಡಬೇಕಾದುದರ ಅಗತ್ಯತೆಯನ್ನು ಕುರಿತು ಚರ್ಚಿಸಲಾಗಿದೆ. ಹೀಗೆ ಅರಿವನ್ನು ಮೂಡಿಸುವಲ್ಲಿ ಕೆಲವು ಸಾಮಾಜಿಕ ಸಂಸ್ಥೆಗಳು ಸಹ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಹಾಗಾಗಿ ಅರಿವು ಮೂಡಿಸುವ ಕಾರ್ಯದಲ್ಲಿ ಶಿಕ್ಷಣ, ಮಾಧ್ಯಮಗಳ, ನ್ಯಾಯಾಂಗ ವ್ಯವಸ್ಥೆ, ಸರಕಾರಿ ಮತ್ತು ಸರಕಾರೇತ ಸಂಘಸಂಸ್ಥೆಗಳ ಪಾತ್ರ ಹೇಗಿರಬೇಕು ಮತ್ತು ಯಾವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಬೇಕು ಎಂಬಂತಹ ಅಂಶಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಆರು

**ಆಸ್ತಿಹಕ್ಕು ಕಾಯಿದೆ : ಕಾನೂನು ರೂಪಿಸುವ ಮತ್ತು ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳು**

ಈ ಅಧ್ಯಾಯದಲ್ಲಿ ಮುಖ್ಯವಾಗಿ ೨೦೦೫ರಲ್ಲಿ ಜಾರಿಯಾದ ಹಿಂದೂ ವಾರಸಾ ಅಧಿನಿಯಮದಂತೆ ಕುಟುಂಬದಲ್ಲಿನ ಹೆಣ್ಣು ಮಗು ತಾನು ಹುಟ್ಟಿದ ದಿನದಿಂದಲೆ ಪಿತೃವಿನ ಆಸ್ತಿಯಲ್ಲಿ ಪಾಲು ಪಡೆಯಲು ಹಕ್ಕನ್ನು ಹೊಂದಿರುತ್ತಾಳೆ ಎಂಬ ನಿಯಮ ಜಾರಿಗೆ ಬಂದಿತು. ಆದರೆ ಈ ನಿಯಮ ಜಾರಿಗೆ ಬಂದು ಹಲವು ವರ್ಷಗಳೇ ಕಳೆದರೂ ಮಹಿಳೆಯರು ಈ ಕಾನೂನಿನ ಸೌಲಭ್ಯವನ್ನು ಪಡೆದುಕೊಂಡಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ಚರ್ಚಿಸಲಾಗಿದೆ. ಮುಖ್ಯವಾಗಿ ಈ ಅಧ್ಯಾಯವನ್ನು ಮೂರು ಪ್ರಮುಖ ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಒಂದು ಆಸ್ತಿಹಕ್ಕಿನ ಕಾನೂನು ರೂಪಿಸುವ ಹಂತ. ಇದರಲ್ಲಿ ಆಸ್ತಿಹಕ್ಕನ್ನು ರೂಪಿಸುವ ಸಂದರ್ಭದಲ್ಲಿ ಎದುರಾದಂತಹ ವಿರೋಧಗಳನ್ನು ವಿಶ್ಲೇಷಿಸಲಾಗಿದೆ. ವಿಶೇಷವಾಗಿ ಸಂಸತ್ತಿನಲ್ಲಿ ನಡೆದಂತಹ ಚರ್ಚೆಗಳನ್ನು ಕೇಂದ್ರೀಕರಿಸಿಕೊಂಡು ವಿಶ್ಲೇಷಿಸಲಾಗಿದೆ. ಎರಡನೆಯದಾಗಿ ಆಸ್ತಿಹಕ್ಕನ್ನು ಬಳಸಿಕೊಳ್ಳುವಲ್ಲಿ ಮಹಿಳೆಯರಿಗೆ ಇರುವಂತಹ ತೊಡಕುಗಳನ್ನು ಕುರಿತು ಚರ್ಚಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಯಾವ ಯಾವ ಕಾರಣಕ್ಕಾಗಿ ನಿರಾಕರಿಸುತ್ತಿದ್ದಾರೆ, ಇದಕ್ಕೆ ಪಿತೃಪ್ರಧಾನ ಮೌಲ್ಯಗಳು ಹೇಗೆ ಕಾರಣವಾಗಿವೆ ಎಂಬಂತಹ ವಿಷಯಗಳನ್ನು ವಿಶ್ಲೇಷಿಸಲಾಗಿದೆ. ಹಾಗೆಯೇ ಮೂರನೆಯದಾಗಿ ವ್ಯವಸ್ಥೆಯಲ್ಲಿ ಇದ್ದಂತಹ ಹಲವು ಸಮಸ್ಯೆಗಳನ್ನು ಎದುರಿಸಿಯೂ ಕೂಡ ಮಹಿಳೆಯರು ತಮ್ಮ

ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ. ಅವುಗಳ ಕುರಿತಂತೆ ಕೆಲವು ಮಾದರಿ ಪ್ರಕರಣಗಳ ವಿಶ್ಲೇಷಣೆ ಎಂಬ ಭಾಗದಲ್ಲಿ ಚರ್ಚಿಸಲಾಗಿದೆ. ಎರಡು ಮತ್ತು ಮೂರನೆಯ ಭಾಗಗಳಲ್ಲಿ ಕಾಯಿದೆಯನ್ನು ಬಳಸಿಕೊಂಡಿರುವ ಮಹಿಳೆಯರ ಪ್ರಮಾಣ, ಅವರ ಅನುಭವಗಳನ್ನು ಸಂಗ್ರಹಿಸುವ ಮೂಲಕ ಕಾಯಿದೆಯನ್ನು ಸದುಪಯೋಗಪಡಿಸಿಕೊಳ್ಳುವ ಕ್ರಿಯೆಯಲ್ಲಿ ಮಹಿಳೆಯರು ಎದುರಿಸಿದಂತಹ ತೊಡಕುಗಳು, ಸಂಕಷ್ಟಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ವಕ್ತೃಗಳ ಹೇಳಿಕೆಗಳ ಮೂಲಕ ವಿಶ್ಲೇಷಿಸಲಾಗಿದೆ. ಒಟ್ಟಾರೆಯಾಗಿ ಈ ಎಲ್ಲಾ ಸಂದರ್ಭಗಳಲ್ಲಿಯೂ ಸಹ ಲಿಂಗ ಅಸಮಾನತೆಯ ಅಂಶಗಳು ಯಾವ ಬಗೆಯಲ್ಲಿ ಮಹಿಳೆಯರಿಗೆ ತೊಡಕುಗಳನ್ನು ತಂದೊಡ್ಡಿವೆ ಎಂಬಂತಹ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳು

**ಆಸ್ತಿಹಕ್ಕು : ಮಹಿಳಾ ಸಬಲೀಕರಣ**

ಈ ಅಧ್ಯಾಯದಲ್ಲಿ ಹಿಂದೂ ಉತ್ತರಾಧಿಕಾರ ಕಾಯಿದೆ ಮಹಿಳೆಯರ ಆರ್ಥಿಕ ಸಬಲೀಕರಣಕ್ಕೆ ಹೇಗೆ ಪೂರಕವಾಗಿದೆ ಎಂಬುದನ್ನು ಪ್ರಕರಣಗಳ ಮೂಲಕ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಇಲ್ಲಿ ಆಸ್ತಿ ಹಕ್ಕು ಕಾಯಿದೆಯನ್ನು ತಮ್ಮ ಹಕ್ಕಾಗಿ ತೆಗೆದುಕೊಂಡು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದ ಮಹಿಳೆಯರ ಕಥನಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎಂಟು

**ಸಾಂಪ್ರದಾಯಿಕ ಸಮಾಜದ ಇಕ್ಕಟ್ಟುಗಳಲ್ಲಿ ಮಹಿಳಾ ಸಬಲೀಕರಣದ ಕನಸುಗಳು, ನನಸುಗಳು, ಆಶಯಗಳು ಹಾಗೂ ಸಾಧ್ಯತೆಯ ಸವಾಲುಗಳು**

ಈ ಅಧ್ಯಾಯದಲ್ಲಿ ಸಾಂಪ್ರದಾಯಿಕ ಸಮಾಜದಲ್ಲಿನ ಮಹಿಳೆಯರು ಎದುರಿಸುತ್ತಿರುವ ಇಕ್ಕಟ್ಟುಗಳ ಸ್ವರೂಪ ಹಾಗೂ ಈ ಇಕ್ಕಟ್ಟುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಮಹಿಳಾ ಸಬಲೀಕರಣದ ಕನಸು ಹಾಗೂ ಆಶಯಗಳನ್ನು ಹೊತ್ತು ಜಾರಿಯಾದ ಹಿಂದೂ ಉತ್ತರಾಧಿಕಾರ ಕಾಯಿದೆಯು ಪ್ರಸ್ತುತ ಮಹಿಳೆಯರ ಬದುಕಿನಲ್ಲಿ ಆಶಾದಾಯಕ ನಿರೀಕ್ಷೆಗಳನ್ನು ಮೂಡಿಸುವ ಯಾವ ಸಾಧ್ಯತೆಗಳನ್ನು ಹೊಂದಿದೆ ಹಾಗೂ ಯಾವ ಸವಾಲುಗಳನ್ನು ಎದುರಿಸುತ್ತಿದೆ ಎಂಬ ಅಂಶಗಳನ್ನು ಸಂಶೋಧನಾ ಅಧ್ಯಯನದ ಫಲಿತಗಳನ್ನಾಗಿ ಗುರುತಿಸಲಾಗಿದೆ.

# ಅಧ್ಯಾಯ ಎರಡು

# ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಮಹಿಳಾ ಅಭಿವೃದ್ಧಿಯನ್ನ ಕೇಂದ್ರೀಕರಿಸಿಕೊಂಡು ಜಾರಿಯಾದಂತಹ ಕಾಯಿದೆಗಳಲ್ಲಿ ಆಸ್ತಿ ಹಕ್ಕಿನ ಕಾಯಿದೆ ಪ್ರಮುಖವಾದುದು. ಈ ಕಾಯಿದೆಯು ಸಂಪೂರ್ಣವಾಗಿ ಜನಸಾಮಾನ್ಯರನ್ನು ತಲುಪಿದಾಗ ಮಾತ್ರ ಅದರ ಸಫಲತೆ ಹಾಗೂ ನಿರೀಕ್ಷಿತ ಸಾಮಾಜಿಕ ಬದಲಾವಣೆ ಸಾಧ್ಯವಾಗುವುದು. ಆ ನಿಟ್ಟಿನಲ್ಲಿ ಆಸ್ತಿ ಹಕ್ಕಿನ ಕಾಯಿದೆಯ ಕುರಿತು ಈಗಾಗಲೆ ನಡೆದಿರುವ ಅಧ್ಯಯನಗಳ ಮೂಲಕ ಕಾಯಿದೆಯು ಜಾರಿಯಲ್ಲಿರುವುದರ ಪ್ರಸ್ತುತತೆಯನ್ನು ಕಂಡುಕೊಳ್ಳಲು ಸಾಧ್ಯ. ಹಾಗಾಗಿ ಈ ಅಧ್ಯಾಯದಲ್ಲಿ ಪ್ರಮುಖವಾಗಿ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಈಗಾಗಲೇ ನಡೆದ ಅಧ್ಯಯನಗಳು, ವರದಿಗಳು, ವಿಮರ್ಶೆಗಳ ಬಗ್ಗೆ ಪರಿಶೀಲಿಸಲಾಗಿದೆ. ಈ ಮೂಲಕ ಆಸ್ತಿ ಹಕ್ಕಿನ ಕುರಿತಂತೆ ಪ್ರಸ್ತಾಪಿತವಾಗಿರುವ ಸಂಗತಿಗಳಾವುವು? ಆಸ್ತಿಯ ಪರಿಕಲ್ಪನೆಗಳೇನು? ಆಸ್ತಿ ಹಕ್ಕಿನ ಕುರಿತಾದ ವಿಮರ್ಶೆಗಳೇನು? ಕಾಯಿದೆಯಲ್ಲಿರುವ ನ್ಯೂನ್ಯತೆಗಳೇನು?, ಅಧ್ಯಯನದ ಮಿತಿಗಳೇನು? ಆ ಮಿತಿಗಳನ್ನು ಸರಿಪಡಿಸಿಕೊಳ್ಳಲು ಕೊಡಬಹುದಾದ ಸಲಹೆಗಳು, ಆ ಮೂಲಕ ಪ್ರಸ್ತುತ ಅಧ್ಯಯನಕ್ಕೆ ದೊರೆಯಬಹುದಾದ ಒಳಹುಗಳು, ಸ್ಪಷ್ಟತೆಗಳು ಮತ್ತು ರೂಪಿಸಿಕೊಳ್ಳಬಹುದಾದ ಪ್ರಶ್ನೆಗಳು ಹಾಗೂ ಚೌಕಟ್ಟನ್ನು ಸ್ಪಷ್ಟಪಡಿಸಿಕೊಳ್ಳುವ ನಿಟ್ಟಿನಲ್ಲಿ ಇಲ್ಲಿನ ಅಧ್ಯಯನಗಳ ಸಂಕ್ಷಿಪ್ತ ವಿಶ್ಲೇಷಣೆ ಮತ್ತು ಮಿತಿಗಳನ್ನು ಗುರುತಿಸಿಕೊಳ್ಳುವಲ್ಲಿ ಸಹಾಯಕವಾಗಲು ಸಮೀಕ್ಷೆಯನ್ನು ನಡೆಸಲಾಗಿದೆ.

ಕರ್ನಾಟಕದ ಸಂದರ್ಭದಲ್ಲಿ ಆಸ್ತಿ ಹಕ್ಕಿನ ಕಾಯಿದೆಯ ಕುರಿತಂತೆ ಸಮಗ್ರವಾಗಿ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಬದಲಾಗಿ ಬಿಡಿ ಲೇಖನಗಳು, ಬಿಡಿ ಬರಹಗಳು, ಸಿಗುತ್ತವೆ. ಕೆಲವು ಕೃತಿಗಳಲ್ಲಿ ಲಿಂಗತಾರತಮ್ಯದ ನೆಲೆಯಲ್ಲಿ ಆಸ್ತಿ ಹಕ್ಕನ್ನು ಕಾನೂನಿನ ಚೌಕಟ್ಟಿನಲ್ಲಿ ವಿಶ್ಲೇಷಣೆಗೊಳಪಡಿಸಿರುವುದು ಒಂದೆರಡು ಅಧ್ಯಾಯಗಳಲ್ಲಿ ಮಾತ್ರವೆ ಕಂಡುಬರುತ್ತದೆ. ಹಾಗೆಯೇ ಕೆಲವು ಸಂಶೋಧನಾ ಅಧ್ಯಯನಗಳೂ

ನಡೆದಿವೆಯಾದರೂ ಅವು ಸಮಗ್ರವಾಗಿಲ್ಲ. ಹಾಗಾಗಿ ಮಹಿಳಾ ಆಸ್ತಿಹಕ್ಕಿನ ಕುರಿತಂತೆ ಇದುವರೆಗೂ ಬಂದಿರುವ ಅಧ್ಯಯನಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಸಾಮಾಜಿಕ, ಕಾನೂನಾತ್ಮಕ, ಆರ್ಥಿಕ ಹೀಗೆ ಹಲವು ಆಯಾಮಗಳ ಅಂತರ್ ಸಂಬಂಧಿಯಾದ ಆಸ್ತಿಹಕ್ಕಿನ ಸಮಗ್ರ ಅಧ್ಯಯನದ ಕೊರತೆ ಈ ಸಮೀಕ್ಷೆಯಲ್ಲಿ ಕಂಡು ಬಂದಿದೆ. ಹೀಗಾಗಿ ಇದುವರೆಗೂ ಅಧ್ಯಯನ ವಿಷಯಕ್ಕೆ ಸಂಬಂಧಿಸಿರುವಂತೆ ದೊರೆತಿರುವ ಎಲ್ಲಾ ಮಾಹಿತಿಯನ್ನು ಕೇಂದ್ರೀಕರಿಸಿಕೊಂಡು ಸಮೀಕ್ಷೆಯನ್ನು ಮಾಡಲಾಗಿದೆ.

**"Women's Right To Property"** ಕೃತಿಯು ಬೆಂಗಳೂರಿನ ನ್ಯಾಯವಾದಿಗಳಾದ ಲೀಲಾವತಿ ಚಾರಿಯವರ ಮೂಲ ಕೃತಿಯಾಗಿದ್ದು. ಈ ಕೃತಿಯನ್ನು ಧಾರವಾಡದ ನ್ಯಾಯವಾದಿಗಳಾದ ಸಾವಿತ್ರಿ ಮಹಿಷಿಯವರು **"ಮಹಿಳೆಯ ಆಸ್ತಿಹಕ್ಕು"** ಎಂಬ ಶೀರ್ಷಿಕೆಯಡಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿಯು ೧೯೯೨ರಲ್ಲಿ ಜಾಗೃತ ಭಾರತ ಪ್ರಕಾಶನದಿಂದ ಪ್ರಕಟಗೊಂಡಿದೆ. ಭಾರತದಲ್ಲಿರುವಂತಹ ಪ್ರಮುಖ ಧರ್ಮಗಳಾದ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳಲ್ಲಿನ ಮಹಿಳೆಯರಿಗೆ ಆಸ್ತಿಯಲ್ಲಿ ಹಕ್ಕು ಹೇಗೆ ದೊರೆಯುತ್ತದೆ ಎಂಬುದರ ಕುರಿತಾಗಿ ಸಂಕ್ಷಿಪ್ತವಾದ ಮಾಹಿತಿಯನ್ನು ಕೃತಿಯು ಒದಗಿಸಿಕೊಡುತ್ತದೆ. ಹಿಂದೂ ಮಹಿಳೆಯರಿಗೆ ಸಂಬಂಧಿಸಿದಂತೆ ೧೯೩೭ರಲ್ಲಿ 'ಹಿಂದೂ ಮಹಿಳೆಯ ಆಸ್ತಿ ಹಕ್ಕಿನ ಕಾನೂನು' ಜಾರಿಗೆ ಬಂದಿತು. ನಂತರ ೧೯೫೬ರಲ್ಲಿ ಈ ಕಾನೂನು ಹಿಂದೂ ವಾರಸಾ ಕಾಯಿದೆ ಎಂಬ ಹೆಸರಿನಲ್ಲಿ ಪರಿಷ್ಕರಣೆಗೊಂಡಿತು. "೧೯೫೬ಕ್ಕೂ ಮೊದಲ ಆಸ್ತಿ ಹಂಚಿಕೆಯ ಕುರಿತಾಗಿ ಎರಡು ಪದ್ಧತಿಗಳಿದ್ದವು. ಅವುಗಳೆಂದರೆ ೧) ಮಿತಾಕ್ಷರ ಪದ್ಧತಿ ೨) ದಾಯಭಾಗ ಪದ್ಧತಿ. ಮುಖ್ಯವಾಗಿ ದಾಯಭಾಗ ಪದ್ಧತಿ ಬಂಗಾಳದಲ್ಲಿ ಮಾತ್ರ ಜಾರಿಯಲ್ಲಿತ್ತು. ಇದನ್ನು ಹೊರತುಪಡಿಸಿ ದೇಶದ ಉಳಿದ ಭಾಗದಲ್ಲಿ (ಮಾತೃಪ್ರಧಾನ ಕುಟುಂಬಗಳಿದ್ದು ಅಂದರೆ ಮರುಮುಕ್ಕತಾಯಂ ಮತ್ತು ಅಳಿಯಸಂತಾನ ಕಾಯಿದೆ ಪ್ರಚಲಿತವಿದ್ದ ದಕ್ಷಿಣದ ಕೆಲವು ಭಾಗ ಬಿಟ್ಟರೆ) ಮಿತಾಕ್ಷರ ಪದ್ಧತಿ ಜಾರಿಯಲ್ಲಿತ್ತು"(ಪು.೨) ಎಂದು ತಿಳಿಸುತ್ತಾರೆ. ಮುಂದುವರೆದು ಸಾವಿತ್ರಿ ಮಹಿಷಿಯವರು ೧೯೫೬ರ ಆಸ್ತಿ ಹಕ್ಕಿನ ಕಾಯಿದೆಯ ಒಳಹುಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಅಂದರೆ ಹಿಂದೂಗಳಲ್ಲಿ ಮಹಿಳೆ ಈ ಕಾಯಿದೆಯ ಪ್ರಕಾರ ಆಸ್ತಿಯ ವಾರಸುದಾರಳಾಗಲು ಸಾಧ್ಯ ಎಂಬುದನ್ನು ಕಾನೂನಿನ ವಿವರದ ಮೂಲಕ ಚರ್ಚಿಸಿದ್ದಾರೆ. ಮುಖ್ಯವಾಗಿ ಈ ಭಾಗದಲ್ಲಿ 'ಆಸ್ತಿಯಲ್ಲಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಸಮನಾದ ಅಧಿಕಾರ', 'ಮಹಿಳೆಗೆ ಪೂರ್ಣ ಮಾಲಿಕತ್ವದ ಹಕ್ಕು', 'ಮಹಿಳೆಗೆ ದಾಯಾದಿ ಆಸ್ತಿಯಲ್ಲಿ ಹಕ್ಕು', 'ಮಹಿಳೆಯ ಆಸ್ತಿ ಹಕ್ಕಿನಲ್ಲಿ ಪರಿಮಿತಿ', 'ವಾಸದ ಮನೆಯಲ್ಲಿ ಸ್ತ್ರೀಯರ ಹಕ್ಕು', 'ಸ್ತ್ರೀ ಆಸ್ತಿಯ ವಾರಸುದಾರರು' ಎಂಬಂತಹ ಉಪಶೀರ್ಷಿಕೆಗಳ ಅಡಿಯಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಹಾಗೆಯೇ ಮಹಮದೀಯರು, ಕ್ರೈಸ್ತರು ಮತ್ತು ಪಾರ್ಸಿ ಈ ಧರ್ಮಗಳಲ್ಲಿನ ಮಹಿಳೆಯರು ಆಸ್ತಿಯನ್ನು ಹೇಗೆ ಪಡೆಯ ಬಹುದು ಎಂಬುದನ್ನು ಮತ್ತು ಮಹಿಳೆಯರ ಆಸ್ತಿಹಕ್ಕಿನ ಕುರಿತಂತೆ ಈ ಧರ್ಮಗಳಲ್ಲಿನ

ಕಾನೂನುಗಳು ಏನು ಹೇಳುತ್ತವೆ ಎಂಬುದನ್ನು ವಿವರಿಸಿದ್ದಾರೆ. ಅಂದರೆ "ಮುಸ್ಲಿಮರಲ್ಲಿ ಹಿಂದುಗಳಂತೆ ಅವಿಭಕ್ತ ಕುಟುಂಬ ಪದ್ಧತಿ ಇಲ್ಲ. ಇವರಲ್ಲಿ ಪಿತ್ರಾರ್ಜಿತ ಆಸ್ತಿ ಮತ್ತು ಸ್ವಯಾರ್ಜಿತ ಆಸ್ತಿಯಲ್ಲಿ ಯಾವುದೆ ಭೇದವಿಲ್ಲ. ಮುಸ್ಲಿಂ ಕಾನೂನಿನಲ್ಲಿ ಜನ್ಮದಾರಾಭ್ಯ ಒಬ್ಬ ವ್ಯಕ್ತಿಗೆ ಆಸ್ತಿ ಹಕ್ಕು ಪ್ರಾಪ್ತವಾಗುವುದಿಲ್ಲ. ತಂದೆಯ ಮರಣಾನಂತರವೇ ಮಕ್ಕಳಿಗೆ ಆಸ್ತಿಯಲ್ಲಿ ಪಾಲು ಅಥವಾ ಹಕ್ಕು ಮೊದಲ ಸಲ ಪ್ರಾಪ್ತವಾಗುತ್ತದೆ"(ಪು-೧೭) ಎಂದು ತಿಳಿಸುತ್ತಾರೆ. ಹಾಗೆಯೇ "ಭಾರತದಲ್ಲಿ ಕ್ರಿಶ್ಚಿಯನ್ನರಿಗೆ ಸಂಬಂಧಿಸಿದಂತೆ ಅವರದೇ ಆದ ಪ್ರತ್ಯೇಕ ಕಾನೂನು ರೂಢಿಯಲ್ಲಿರುವುದಿಲ್ಲ. ಭಾರತೀಯ ವಾರಸಾ ಕಾನೂನಿನ ಕಲಂ ೩೨ ರಿಂದ ೪೯ ರವರೆಗೆ ಅನೇಕ ನಿಯಮಗಳಿದ್ದು ಅವು ಹಿಂದು, ಮುಸ್ಲಿಂ, ಸಿಖ್ಖ, ಜೈನ ಮತ್ತು ಬೌದ್ಧ ಮತದವರನ್ನುಳಿದು ಬೇರೆ ಮತದವರಿಗೆ ಅನ್ವಯಿಸುತ್ತವೆ"(ಪುಟ-೨೦) ಎಂದಿದ್ದಾರೆ. ಒಟ್ಟಾರೆ ಯಾಗಿ ಈ ಕೃತಿಯು ವಿವಿಧ ಧರ್ಮಗಳಲ್ಲಿನ ಮಹಿಳೆ ತನ್ನ ಪಿತ್ರಾರ್ಜಿತ ಆಸ್ತಿಯ ಮೇಲಿನ ಹಕ್ಕನ್ನು ಪಡೆಯಬಹುದಾದ ಸಾಧ್ಯತೆಗಳನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತದೆ. ಮುಖ್ಯವಾಗಿ ಈ ಕೃತಿಯು ಕಾನೂನನ್ನೆ ಆಧಾರವಾಗಿಟ್ಟುಕೊಂಡು ಕಾನೂನಿನಲ್ಲಿನ ವಿಷಯಗಳನ್ನು ಮಾತ್ರ ವಿವರಿಸಿದೆ. ಆದರೆ ಯಾವುದೇ ವಿಶ್ಲೇಷಣೆಯಾಗಲಿ ಅಥವಾ ವಿಮರ್ಶೆಯಾಗಲಿ ಈ ಕೃತಿಯಲ್ಲಿ ನಡೆದಿಲ್ಲ.

**"ಕುಟುಂಬ ವ್ಯವಸ್ಥೆ : ಮಾರ್ಕ್ಸವಾದ– ಸ್ತ್ರೀವಾದ"** ಈ ಕೃತಿಯು ಸ್ತ್ರೀವಾದಿ ದೃಷ್ಟಿಕೋನದಿಂದ ರಚನೆಗೊಂಡಿದ್ದು ಇದನ್ನು ಮೊದಲು ವೋಲ್ಗಾ ಅವರು ತೆಲುಗಿನಲ್ಲಿ ರಚಿಸಿದ್ದಾರೆ. ವೋಲ್ಗಾ ಅವರ ಬಗ್ಗೆ ಕೆಲವು ಮಾತುಗಳನ್ನು ಹೇಳಬೇಕೆಂದರೆ ತೆಲುಗು ಸಾಹಿತ್ಯ ಕ್ಷೇತ್ರದಲ್ಲಿ ಸೃಜನಶೀಲ ಲೇಖಕಿಯಾಗಿ, ಸ್ತ್ರೀವಾದಿ ಚಿಂತಕರಾಗಿ, ಮಹಿಳಾ ಚಳುವಳಿಯ ಸಕ್ರಿಯ ಹೋರಾಟಗಾರರಾಗಿ ಹಲವಾರು ಸಾಧನೆಗಳನ್ನು ಮಾಡಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ಸ್ತ್ರೀವಾದಿ ನೆಲೆಯಲ್ಲಿ ಬಂದಂತಹ ಈ ಕೃತಿಯನ್ನು ಬಿ.ಸುಜ್ಞಾನ ಮೂರ್ತಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿಯು ಮುಖ್ಯ ನಾಲ್ಕು ಲೇಖನಗಳನ್ನು ಒಳಗೊಂಡಿದೆ. ಮೊದಲ ಲೇಖನದಲ್ಲಿ ಸಮಾಜದಲ್ಲಿನ ಕುಟುಂಬ ವ್ಯವಸ್ಥೆಯು ಪಿತೃಪ್ರಧಾನ ವ್ಯವಸ್ಥೆಯಾಗಿದ್ದು, ಪುರುಷನೇ ಎಲ್ಲಾ ಅಧಿಕಾರವನ್ನು ಹೊಂದಿದ್ದಾನೆ ಮತ್ತು ಮಹಿಳೆಯರ ಶ್ರಮವು ಪುರುಷನ ಮೂಲಕವೇ ಗುರುತಿಸಲ್ಪಡುತ್ತಿದೆ ಎಂಬುದನ್ನು ತಿಳಿಸುತ್ತಾರೆ. ಪಿತೃಪ್ರಧಾನ ಕುಟುಂಬದಲ್ಲಿ ಗುಲಾಮಗಿರಿಯೇ ಮೊದಲ ಸಂಪತ್ತಾಗಿರುತ್ತದೆ. ಇದು ಮೇಲ್ನೋಟಕ್ಕೆ ಕಣ್ಣಿಗೆ ಕಾಣಿಸದು. 'ಆನ್ ಜರ್ಮನ್ ಐಡಿಯಾಲಜಿ' ಎಂಬ ಪುಸ್ತಕದಲ್ಲಿ ಮಾರ್ಕ್ಸ್ ಗುಲಾಮಗಿರಿ ಸಮಾಜದ ಮೊದಲ ಹಂತದ ಬಗ್ಗೆ ತಿಳಿಸುತ್ತಾ ಕುಟುಂಬದಲ್ಲಿನ ಶ್ರಮ ವಿಭಜನೆಯನ್ನು ಚರ್ಚಿಸಿದ್ದಾರೆ" (ಪು.೫) ಎಂಬುದನ್ನು ಚರ್ಚಿಸಿದ್ದಾರೆ. "ಸ್ತ್ರೀಯರು ಕುಟುಂಬದಲ್ಲಿ, ಸಮಾಜದಲ್ಲಿ ಗುಲಾಮರಾಗಿ ಬದಲಾಗಲು ಸ್ತ್ರೀ ಪುರುಷರ ನಡುವೆ ನಡೆದ ಮೊದಲ ಶ್ರಮ ವಿಭಜನೆ, ಮೋನೋಗಮಿ ಪದ್ಧತಿ, ಖಾಸಗೀ ಆಸ್ತಿ ಇವುಗಳ ಮೂಲವೇ ಕಾರಣವಾಗಿದೆ"(ಪುಟ-೬). ಹೀಗೆ ಕುಟುಂಬದಲ್ಲಿ

ಮಹಿಳೆ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಗುಲಾಮಗಿರಿಗೆ ಹೇಗೆ ತಳ್ಳಲ್ಪಟ್ಟಳು ಎಂಬಂತಹ ವಿಷಯಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಹಾಗೆಯೇ ಮುಂದುವರೆದು ಎರಡನೆಯ ಲೇಖನದಲ್ಲಿ ಸ್ತ್ರೀವಾದಿ ದೃಷ್ಟಿಕೋನದಿಂದ ಕೆಳರಚನೆ ಮತ್ತು ಮೇಲುರಚನೆ ಕುರಿತಂತೆ ಮಾತನಾಡಿದ್ದಾರೆ. ಮುಖ್ಯವಾಗಿ ಇದು ಉತ್ಪಾದನಾ ಕ್ಷೇತ್ರಕ್ಕೆ ಸೀಮಿತವಾಗಿದ್ದು ಮಾರ್ಕ್ಸ್‌ರ ದೃಷ್ಟಿಕೋನವೇ ಹೆಚ್ಚಾಗಿ ಈ ಲೇಖನದಲ್ಲಿ ಬಿಂಬಿತವಾಗಿದೆ. ಅಂದರೆ "ಮಾರ್ಕ್ಸ್‌ವಾದಿಗಳು ಲೈಂಗಿಕ ಶೋಷಣೆಯನ್ನು ವರ್ಗ ಸಂಬಂಧಗಳಿಂದ ಅನಿವಾರ್ಯವಾಗಿ ಹುಟ್ಟಿದ ಸಮಸ್ಯೆಯೆಂದೇ ನೋಡುತ್ತಿದ್ದಾರೆ. ಅಂದರೆ ಜೆಂಡರ್ ರಚನೆಗೂ ಅದು ಕೆಲಸ ಮಾಡುವ ವಿಧಾನಕ್ಕೂ ಆಧಿಪತ್ಯವನ್ನು ಮುಂದುವರೆಸುವ ಕ್ರಮಕ್ಕೂ ಅದರ ಸೂತ್ರಗಳು ಅದಕ್ಕಿವೆಯೆಂದು, ಪಿತೃಸ್ವಾಮ್ಯದಲ್ಲಿ ಅವನ್ನು ನಾವು ನೋಡಬಲ್ಲೆವೆಂದು ಅಂದುಕೊಳ್ಳುವುದಿಲ್ಲ. ಬಂಡವಾಳಕ್ಕೂ, ಶ್ರಮಕ್ಕೂ ನಡುವೆ ನಡೆಯುವ ಹೋರಾಟಕ್ಕೂ, ಲೈಂಗಿಕ ಹೋರಾಟಕ್ಕೂ ಇರುವ ಸಂಬಂಧವನ್ನು ನೋಡದೇ ಹೋಗುತ್ತಿದ್ದಾರೆ" (ಪು.೪೫) ಎಂದು ಹೇಳುವುದರ ಮೂಲಕ ಮಾರ್ಕ್ಸ್‌ವಾದದ ಮಿತಿಗಳ ಕುರಿತಾಗಿ ಹಲವಾರು ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಈ ಕೃತಿಯ ಮೂರನೆಯ ಲೇಖನದಲ್ಲಿ ಕುಟುಂಬ ಹಿಂಸೆ, ಸಾಮಾಜಿಕ ಹಿನ್ನಲೆ ಹಾಗೆಯೇ ಕೊನೆಯ ಲೇಖನದಲ್ಲಿ ಸ್ತ್ರೀವಾದಿ ಅರಿವು ಕುರಿತಾಗಿ ವಿಷಧವಾಗಿ ಚರ್ಚಿಸಿದ್ದಾರೆ. ಮಹಿಳೆಯರ ಸಮಸ್ಯೆಗಳಿಗೆ ಕುಟುಂಬದ ಯಜಮಾನನಾದ ಪುರುಷನೊಬ್ಬನೇ ಏಕೈಕ ಕಾರಣ ಎಂಬ ಪುರುಷ ವಿರೋಧಿ ಸರಳ ವಿಚಾರಧಾರೆಯೊಂದಿದೆ. ಆದರೆ ಇಲ್ಲಿಯ ಚಿಂತನೆ ಬೇರೆಯದೇ ಇದೆ. ಇದಕ್ಕೆ ಕಾರಣ ಮಾರ್ಕ್ಸ್‌ವಾದಿ ದೃಷ್ಟಿಕೋನ ಮತ್ತು ಮಾರ್ಕ್ಸ್‌ವಾದಿ ವಿಧಾನ ಇಲ್ಲಿನ ಚಿಂತನೆಗಳ ಬುನಾದಿಯಾಗಿರುವುದು ಎಂಬುದನ್ನು ಅನುವಾದಕರಾದ ಬಿ.ಸುಜ್ಞಾನಮೂರ್ತಿಯವರು ತಮ್ಮ 'ಅನುವಾದಕನ ಅರಿಕೆ' ಎಂಬ ಭಾಗದಲ್ಲಿ ತಿಳಿಸುತ್ತಾರೆ. ಒಟ್ಟಾರೆಯಾಗಿ ಈ ಕೃತಿಯಲ್ಲಿನ ಲೇಖನಗಳು ಮಹಿಳೆ, ಕುಟುಂಬ ಮತ್ತು ಸಾಮಾಜಿಕ ಸಂಬಂಧಗಳನ್ನು ಪರಿಶೀಲಿಸುತ್ತದೆ. ಹಾಗಾಗಿ ಇಲ್ಲಿ ಸೂಚಿಸಿದಂತೆ ಮಹಿಳೆ, ಕುಟುಂಬ ಮತ್ತು ಸಾಮಾಜಿಕ ಸಂಬಂಧಗಳ ಅಂತರ್ ಸಂಬಂಧವನ್ನು ತಿಳಿಯಲು ಮತ್ತು ಆ ಮೂಲಕ ಮಹಿಳೆ ಹೇಗೆ ತನ್ನ ಹಕ್ಕುಗಳನ್ನು ಕಳೆದುಕೊಂಡಳು ಎಂಬುದನ್ನು ತಿಳಿಯಲು ಈ ಕೃತಿ ಮುಖ್ಯವಾಗುತ್ತದೆ.

**"ಮಾನುಷಿಯ ಮಾತು"** ಇದು ಸ್ತ್ರೀವಾದಿ ನೆಲೆಯ ಆಲೋಚನೆಯ ಒಂದು ಭಾಗವಾಗಿದೆ ಮೂಲತಃ ಈ ಕೃತಿಯು ಸ್ತ್ರೀವಾದಿ ಚಿಂತಕಿಯಾದ ಮಧುಕೀಶ್ವರ್‌ರವರ ಬರಹಗಳ ಸಂಗ್ರಹ ಕೃತಿ. ಇದನ್ನು ಕನ್ನಡಕ್ಕೆ ಅನುವಾದಿಸಿದವರು ಎಲ್.ಜಿ.ಮೀರಾರವರು. ಈ ಕೃತಿಯು ಮುಖ್ಯವಾಗಿ ದಾಸ್ಯದ ಕೆಲವು ಮಗ್ಗಲುಗಳು, ಹೆಂಗಸರಿಗೆ ಮೂಲಭೂತ ಹಕ್ಕುಗಳ ನಿರಾಕರಣೆ, ಶಾಹಬಾನು ಪ್ರಕರಣ, ವರದಕ್ಷಿಣೆ ನಿಷೇಧ, ಸ್ತ್ರೀಪರವಾದ ಚಳುವಳಿಗಳು ಮತ್ತು ಹೋರಾಟ ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಸಂವಿಧಾನವು ಮಹಿಳೆಯರಿಗೆ ಕೊಡಮಾಡಲ್ಪಟ್ಟಿರುವ ಮೂಲಭೂತ ಹಕ್ಕುಗಳನ್ನು ಪಿತೃಪ್ರಧಾನ ವ್ಯವಸ್ಥೆ ತನ್ನ ಹಿಡಿತಕ್ಕೆ

ತೆಗೆದುಕೊಂಡಿದೆ. ಹಾಗಾಗಿ ಮಹಿಳೆಯರಿಗೆ ಇರುವಂತಹ ಕಾನೂನುಗಳು ಅಪ್ರಸ್ತುತವೇನೊ ಎಂಬಂತೆ ಗೋಚರಿಸುತ್ತವೆ. ಈ ಹಿನ್ನಲೆಯಲ್ಲಿ ಮಹಿಳಾ ಪರವಾಗಿರುವ ಕಾನೂನುಗಳು ನಿರಾಕರಿಸಲ್ಪಡುತ್ತಿವೆ ಎಂಬುದನ್ನು ಹಲವಾರು ಪ್ರಕರಣಗಳಲ್ಲಿ ವಿವರಿಸಿದ್ದಾರೆ. ಇವುಗಳಲ್ಲಿ ಮುಖ್ಯವಾಗಿ ಮಹಿಳೆಯರ ಸ್ವಾವಲಂಬಿ ಜೀವನಕ್ಕೆ ಬೇಕಾದ ಆಸ್ತಿ ಹಕ್ಕಿನ ಕುರಿತ ಚರ್ಚೆಯು ಹಲವಾರು ಗಂಭೀರ ಪ್ರಶ್ನೆಗಳನ್ನು ಎತ್ತುತ್ತದೆ. ಮುಖ್ಯವಾಗಿ " ಭಾರತೀಯ ಹಿಂದೂ ಉತ್ತರಾಧಿಕಾರದ ಕಾಯಿದೆಗಳು ಎಂಬ ಹೆಸರಿನಲ್ಲಿ ಹೆಂಗಸರಿಗೆ ಆಸ್ತಿಹಕ್ಕು ಕೊಡುವ ಅರೆಮನಸ್ಸಿನ ಪ್ರಶ್ನೆಗಳು ನಡೆಯುತ್ತಿವೆ. ಇವುಗಳಿಂದ ಮಹಿಳೆಯರಿಗೆ ಹೇಳಿಕೊಳ್ಳುವಂತಹ ಯಾವ ಪ್ರಯೋಜನವೂ ಆಗುತ್ತಿಲ್ಲ" (ಪುಟ.೨೭) ಎಂದು ಹೇಳುತ್ತಾರೆ. ಕಾನೂನನ್ನು ರೂಪಿಸುವ ಸಂದರ್ಭದಲ್ಲಿ ಅಥವಾ ಇರುವಂತಹ ಕಾನೂನಿಗೆ ತಿದ್ದುಪಡಿಯನ್ನು ಮಾಡುವ ಸಂದರ್ಭದಲ್ಲಿ ಪುರುಷ ಆಲೋಚನೆಗಳು ಮೇಲ್ಪಂಕ್ತಿಗೆ ಬಂದು ನಿಲ್ಲುತ್ತವೆ. ಹೀಗಾಗಿ ಲಿಂಗತಾರತಮ್ಯದ ನೆಲೆಗಳಿಂದ ಹೆಚ್ಚಾಗಿ ಮಹಿಳೆಯರು ನ್ಯಾಯದಿಂದ ಹೊರಗೆ ಉಳಿಯುತ್ತಾರೆ. ಆ ಕಾರಣಕ್ಕಾಗಿಯೇ ಮಹಿಳೆಯರು ಹಲವಾರು ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ ಎಂಬುದನ್ನು ತಮ್ಮ ಕೃತಿಯಲ್ಲಿ ತಿಳಿಸುತ್ತಾರೆ. ಸಂವಿಧಾನ ಕೊಡಮಾಡಲ್ಪಟ್ಟಿರುವ ಎಲ್ಲಾ ಹಕ್ಕುಗಳಿಂದ ವಂಚಿತರಾಗುವ ಮಹಿಳೆಯರು ಮುಂದೆ ಏನು ಮಾಡಬೇಕೆಂಬುದನ್ನೂ ಹೇಳುತ್ತಾರೆ. ಅಂದರೆ " ಆರ್ಥಿಕ ಶಕ್ತಿ ಮೂಲಗಳ ಮೇಲೆ ಹೆಂಗಸರಿಗೆ ನಿಯಂತ್ರಣ ಬಂದರೆ ಅವರಿಗೆ ಸ್ವಾತಂತ್ರ್ಯ ಮತ್ತು ಸಾಕಷ್ಟು ಆದಾಯ ಸಿಗುವುದರಲ್ಲಿ ಸಂದೇಹವಿಲ್ಲ. ಈ ನಿಯಂತ್ರಣ ಹೆಂಗಸರಿಗೆ ಸಿಗುವ ದಿಸೆಯಲ್ಲಿ ನಾವು ದುಡಿಯಬೇಕು"(ಪು.೩೨). ಹಾಗೆಯೇ "ಮನೆಗೆಲಸ ಮತ್ತು ಮಕ್ಕಳನ್ನು ನೋಡಿಕೊಳ್ಳುವುದು ಬರೀ ಹೆಂಗಸರ ಕೆಲಸ ಎಂಬ ಸಾಮಾನ್ಯ ಅಭಿಪ್ರಾಯವನ್ನು ಹೊಡೆದೋಡಿಸಬೇಕು. ಬದಲಾಗಿ ಅವೆರಡೂ ಗಂಡ ಮತ್ತು ಹೆಂಡತಿ ಸೇರಿ ಹಂಚಿಕೊಂಡು ಮಾಡಬೇಕಾದ ಕೆಲಸಗಳು ಎಂಬ ಅಭಿಪ್ರಾಯ ಜನರಲ್ಲಿ ಮೂಡುವಂತೆ ನಾವು ದುಡಿಯಬೇಕು"(ಪು.೩೩) ಎಂದು ಹೇಳುತ್ತಾರೆ. ಹೀಗೆ ಹಲವಾರು ಸಲಹೆಗಳನ್ನು ಈ ಕೃತಿಯಲ್ಲಿ ಸೂಚಿಸುತ್ತಾರೆ. ಹಾಗಾಗಿ ಮಹಿಳಾ ಅಧ್ಯಯನದ ಸಂದರ್ಭದಲ್ಲಿ ಸ್ತ್ರೀವಾದಿ ದೃಷ್ಟಿಕೋನದಿಂದ ಪರಿಶೀಲಿಸಲು ಈ ಕೃತಿ ಸಹಕಾರಿಯಾಗುತ್ತದೆ.

ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ಇವರು **"ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳನ್ನು"** ಹಲವಾರು ಸಂಪುಟಗಳಲ್ಲಿ ಹೊರ ತಂದಿದ್ದು ಕನ್ನಡಿಗರಿಗೆ ತುಂಬಾ ಅನುಕೂಲವಾಗಿದೆ. ಹೀಗೆ ಹೊರ ತಂದಿರುವ ಸಂಪುಟಗಳಲ್ಲಿ ೧೪ನೇ ಸಂಪುಟವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅದರಲ್ಲಿನ ಮೊದಲನೇ ಭಾಗವು ಡಾ. ಅಂಬೇಡ್ಕರ್ ಮತ್ತು ಹಿಂದೂ ಕಾನೂನು ಮಸೂದೆ ಕುರಿತದ್ದಾಗಿದೆ. ಇದರಲ್ಲಿ ಡಾ. ಅಂಬೇಡ್ಕರ್‌ರವರು ಕೇಂದ್ರ ವಿಧಾನ ಸಭೆಯಲ್ಲಿ ಕಾರ್ಮಿಕ ಕಲ್ಯಾಣ ಮತ್ತು ತತ್ಸಂಬಂಧ ಮಸೂದೆಗಳನ್ನು ಮಂಡಿಸಿದ ಸಂದರ್ಭದಲ್ಲಿ ಮಾಡಿದ

ಭಾಷಣಗಳನ್ನು ಈ ಸಂಪುಟದಲ್ಲಿ ಪ್ರಕಟಿಸಲಾಗಿದೆ. ಹಿಂದೂ ವಿವಾಹ ಕಾಯ್ದೆ ಮತ್ತು ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ಕೇಂದ್ರ ವಿಧಾನ ಸಭೆಯಲ್ಲಿ ಮಾನ್ಯ ಡಾ. ಬಿ.ಆರ್. ಅಂಬೇಡ್ಕರ್, ಡಾ.ಬಿ.ಪಟ್ಟಾಭಿ ಸೀತಾರಾಮಯ್ಯ, ಮಿ.ನಾಸೀರುದ್ದೀನ್ ಅಹಮ್ಮದ್, ಪ್ರೋ.ಎನ್.ಜಿ.ರಂಗ, ಎಲ್.ಕೃಷ್ಣಸ್ವಾಮಿ ಭಾರತಿ, ಶ್ರೀಮತಿ ಹನ್ಸಾ ಮೆಹೆತಾ ಮುಂತಾದವರು ಚರ್ಚೆಯಲ್ಲಿ ಭಾಗವಹಿಸಿದ್ದರು. ಡಾ.ಬಿ.ಆರ್. ಅಂಬೇಡ್ಕರ್‌ರವರು ಮಹಿಳೆಯರ ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷನಿಗೆ ಸಿಗುವಷ್ಟೇ ಆಸ್ತಿಯು ಮಹಿಳೆಗೂ ಕೊಡಬೇಕು. ಆಗ ಈ ಕಾಯಿದೆಯು ಲಿಂಗ ತಾರತಮ್ಯದಿಂದ ಮುಕ್ತವಾಗುತ್ತದೆ ಎಂದು ವಾದಿಸಿದ್ದರು. ಈ ವಾದಕ್ಕೆ ಕೆಲವು ಸಾಂಪ್ರದಾಯಿಕ ಮನಸುಗಳು ಒಪ್ಪಲಿಲ್ಲ. ಆದರೆ ವೈಚಾರಿಕವಾಗಿ ಆಲೋಚಿಸುವ ಎಲ್ಲ ಮಹನೀಯರು ಅಂಬೇಡ್ಕರ್‌ರವರ ಮಾತುಗಳಿಗೆ ಬೆಂಬಲವನ್ನು ಸೂಚಿಸಿದರು. ಹೀಗೆ ಕೇಂದ್ರ ವಿಧಾನಸಭೆಯಲ್ಲಿ ಹಿಂದೂ ವಿವಾಹ ಕಾಯಿದೆಯ ಜೊತೆ ಜೊತೆಗೆ ಮಹಿಳೆಯರಿಗೆ ಆಸ್ತಿಯಲ್ಲಿ ಸಮಪಾಲು ದೊರೆಯುವ ಮಸೂದೆಯ ಬಗ್ಗೆಯೂ ಕೂಡ ಚರ್ಚೆಗಳು ನಡೆದಿರುವುದನ್ನು ಈ ಕೃತಿಯಲ್ಲಿ ಗುರುತಿಸಲಾಗಿದೆ. ಇಂದು ಆಸ್ತಿ ಹಕ್ಕು ಕಾಯಿದೆ ರೂಪುಗೊಳ್ಳಲು ಅಂದು ಅಂಬೇಡ್ಕರ್‌ರವರು ವಿಧಾನ ಸಭೆಯಲ್ಲಿ ನಡೆಸಿದ ಚರ್ಚೆಗಳು ಪ್ರಮುಖ ಕಾರಣವಾಗಿವೆ. ಹಾಗಾಗಿ ಈ ಕೃತಿಯು ಮುಖ್ಯವಾಗಿ ಲಿಂಗ ಸಮಾನತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಹಿಳೆಯರಿಗೆ ಪುರುನಷ್ಟೇ ಆಸ್ತಿಯಲ್ಲಿ ಸಮ ಪಾಲನ್ನು ಪಡೆಯುವುದಕ್ಕೆ ಅಂಬೇಡ್ಕರ್‌ರವರ ಭಾಷಣಗಳು ಬುನಾದಿಯನ್ನು ಹಾಕಿಕೊಟ್ಟಿರುವುದು ಅಧ್ಯಯನಕ್ಕೆ ತುಂಬಾ ಉಪಯುಕ್ತವಾಗಿದೆ.

**"ಮಹಿಳೆ ಸಮಾಜ ಮತ್ತು ಕಾನೂನು"** ಈ ಕೃತಿಯನ್ನು **ಬೆ.ಕಾ.ಮೂರ್ತೀಶ್ವರಯ್ಯ**ನವರು ರಚಿಸಿದ್ದಾರೆ. ಈ ಕೃತಿ ಹಲವಾರು ಲೇಖನಗಳ ಸಂಗ್ರಹವಾಗಿದ್ದು 'ಮಹಿಳೆ ಮತ್ತು ಆಸ್ತಿಹಕ್ಕು' ಈ ವಿಷಯದ ಕುರಿತ ಲೇಖನವು ಒಂದು. ಮುಖ್ಯವಾಗಿ ಈ ಲೇಖನದಲ್ಲಿ ೧೯೫೬ರಲ್ಲಿ ಜಾರಿಗೆ ಬಂದ ಹಿಂದೂ ಉತ್ತರಾಧಿಕಾರದ ಅಧಿನಿಯಮವನ್ನು ಕುರಿತಂತೆ ಹಲವಾರು ವಿಷಯಗಳನ್ನು ಚರ್ಚಿಸುತ್ತಾರೆ. "ಆಸ್ತಿ ವಿಭಜನೆಗೆ ಸಂಬಂಧಿಸಿದಂತೆ ಭಾರತದಲ್ಲಿ ಒಂದು ಗುಂಪಿನ ಕಾನೂನು ಧರ್ಮವನ್ನು ಆಧರಿಸಿ ರೂಪುಗೊಂಡ ಪ್ರಾಚೀನ ಕಾಲದ ಕಾನೂನು ಗಳಾಗಿದ್ದರೆ, ಮತ್ತೊಂದು ಗುಂಪಿಗೆ ಸೇರಿದ ಕಾನೂನುಗಳು ವಿದೇಶದ ಸಂಸತ್ತುಗಳು ರಚಿಸಿದ ಇಂಗ್ಲೀಷ್, ಫ್ರೆಂಚ್, ರೋಮನ್ ಮತ್ತು ಪೋರ್ಚುಗೀಸ್ ಕಾನೂನು ವ್ಯವಸ್ಥೆಯನ್ನು ಆಧರಿಸಿ ರೂಪುಗೊಂಡ ಕಾನೂನುಗಳಾಗಿದ್ದವು"(ಪು.೨೧೭). ೧೯೫೬ರ ಹಿಂದೂ ಉತ್ತರಾಧಿಕಾರ ಕಾನೂನಿನನ್ವಯ ಮಹಿಳೆ ವಿವಾಹಿತೆಯಾಗಿರಲಿ, ಅವಿವಾಹಿತೆ ಯಾಗಿರಲಿ ಅಥವಾ ವಿಧವೆಯಾಗಿರಲಿ ತನ್ನ ಮೃತ ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಷ್ಟೇ ಸಮಪಾಲನ್ನು ಪಡೆಯುತ್ತಾಳೆ ಮತ್ತು ಆ ಆಸ್ತಿಗೆ ಪೂರ್ಣ ಮಾಲೀಕಳಾಗುತ್ತಾಳೆ. ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮವು ಮಹಿಳೆಯರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಸಹಕಾರಿಯಾಗುತ್ತದೆ

ಎಂಬುದನ್ನು ವಿವರಿಸಿದ್ದಾರೆ. ಈ ಕೃತಿಯು ಯಾವುದೇ ವಿಮರ್ಶೆಯನ್ನೊಳಗೊಂಡಿಲ್ಲ. ಬದಲಾಗಿ ಆಸ್ತಿಹಕ್ಕಿನ ಕುರಿತಾದ ಮಾಹಿತಿಯನ್ನು ಒದಗಿಸುತ್ತದೆ. ೧೯೫೬ರ ಹಿಂದೂ ಉತ್ತರಾಧಿಕಾರ ಕಾನೂನನ್ನು ತಿಳಿಯಲು ಸಹಕಾರಿಯಾಗುತ್ತದೆ.

ಹೇಮಲತಾ ಮಹಿಷಿಯವರ **"ಮಹಿಳೆ ಮತ್ತು ಆಸ್ತಿಹಕ್ಕು"** ಕೃತಿಯು ಹಿಂದೂ ಸ್ತ್ರೀಯರಿಗೆ ಸಂಬಂಧಿಸಿದಂತೆ ಆಸ್ತಿಹಕ್ಕಿನ ಕುರಿತಾಗಿ ಹಲವಾರು ಚರ್ಚೆಗಳನ್ನು ಮಾಡಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಆಸ್ತಿಹಕ್ಕಿನ ಉಗಮ ಮತ್ತು ಬೆಳವಣಿಗೆಯ ಬಗ್ಗೆ ಮೊದಲ ಅಧ್ಯಾಯದಲ್ಲಿ ಚರ್ಚಿಸಿದ್ದಾರೆ ಜೊತೆಗೆ ಹಿಂದೂ ಕಾನೂನಿನ ಕುರಿತಂತೆ ಮಾತನಾಡಿದ್ದಾರೆ. ಇವರ ಅಭಿಪ್ರಾಯದಂತೆ "ಹಿಂದೂ ಕಾನೂನು ಮತ್ತು ಧರ್ಮ ಒಂದಕ್ಕೊಂದು ಬೆಸೆದುಕೊಂಡಿವೆ. ಇವೆರೆಡನ್ನೂ ಬೇರೆ ಬೇರೆಯಾಗಿಟ್ಟು ನೋಡಲು ಸಾಧ್ಯವಿಲ್ಲ ಎನ್ನುತ್ತಾರೆ. ಅಂದರೆ ಹಿಂದೂ ಕಾನೂನು ಧರ್ಮದ ಒಂದು ಶಾಖೆ. ಧರ್ಮವು ಧಾರ್ಮಿಕ, ನೈತಿಕ, ಸಾಮಾಜಿಕ ಹಾಗೂ ಶಾಸನೀಯ ಕರ್ತವ್ಯಗಳ ಮತ್ತು ಹೊಣೆಗಾರಿಕೆಗಳ ಒಟ್ಟು ಮೊತ್ತವಾಗಿದೆ. ಆದ್ದರಿಂದ ಧಾರ್ಮಿಕ ಆಯಾಮವನ್ನು ಹೊರತುಪಡಿಸಿ ಹಿಂದೂ ಕಾನೂನನ್ನು ಅರ್ಥ ಮಾಡಿಕೊಳ್ಳುವುದು ಅಸಾಧ್ಯ. ಹಾಗಾಗಿ ವಿವಾಹವಿರಲಿ, ಆಸ್ತಿಹಕ್ಕಿರಲಿ, ಮಕ್ಕಳ ವಿಷಯವಾಗಿರಲಿ ಎಲ್ಲದಕ್ಕೂ ಕಾನೂನಿನ ಆಯಾಮದೊಂದಿಗೆ ಧಾರ್ಮಿಕ ನೈತಿಕ ಆಯಾಮವೂ ಇರುತ್ತದೆ. ಒಂದನ್ನು ಬಿಟ್ಟು ಇನ್ನೊಂದು ಇರಲಾರದು" ( ಪುಟ ೨) ಎಂದು ಹೇಳುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಿರುವುದು, ಧರ್ಮದ ರುವಾರಿ ಪುರುಷನಾದ್ದರಿಂದ ಅವನ ಆಲೋಚನಾ ವಿಧಾನದಂತೆಯೇ ಧರ್ಮದ ನಿಯಮಾವಳಿಗಳು ರೂಪಿಸಲ್ಪಟ್ಟಿರುತ್ತವೆ. ಹಾಗಾಗಿ ಕಾನೂನು ಮತ್ತು ಧರ್ಮದ ಜೊತೆ ಅವಿನಾಭಾವ ಸಂಬಂಧ ಏರ್ಪಟ್ಟಿದೆ. ಅವಿಭಕ್ತ ಕುಟುಂಬ, ಸಹಭಾಗೀದಾರಿಕೆ ಮತ್ತು ಆಸ್ತಿ ವಿಭಜನೆಯ ತತ್ವಗಳು ಇವುಗಳು ಹಿಂದೂ ಕಾನೂನಿನ ಪರಿಕಲ್ಪನೆಗಳಾಗಿದ್ದು ಇವುಗಳ ಮೂಲಕ ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ಹಲವು ವಿಷಯಗಳನ್ನು ತಿಳಿಯಪಡಿಸುತ್ತಾರೆ. ಹಾಗೆಯೇ ೧೯೫೬ರ ಹಿಂದೂ ವಾರಸುದಾರಿಕೆ ಅಧಿನಿಯಮದ ಕಾನೂನು ಕುರಿತು ಮತ್ತು ಮಹಿಳೆಯರು ಇದರ ಸದುಪಯೋಗವನ್ನು ಪಡೆಯುವುದರ ಮೂಲಕ ಸ್ವಾವಲಂಬಿಗಳಾಗುವುದರ ಕುರಿತಾದ ಚರ್ಚೆಯನ್ನು ಮಾಡಿದ್ದಾರೆ. ಧರ್ಮ ಮತ್ತು ಕಾನೂನು ಇವುಗಳ ನಡುವೆ ಒಂದಕ್ಕೊಂದು ಅವಿನಾಭಾವ ಸಂಬಂಧ ಇರುತ್ತದೆ. ಹಾಗಾಗಿ ಮೊದಲು ಧರ್ಮವನ್ನು ತಿದ್ದುವ ಅಥವಾ ಅದನ್ನು ಸರಿಯಾದ ರೀತಿಯಲ್ಲಿ ಅರ್ಥೈಸುವ ಹಾಗೆ ಆಗಬೇಕು ಎಂದು ಈ ಕೃತಿಯಲ್ಲಿ ಹೇಳುತ್ತಾರೆ. ಹಾಗಾಗಿ ಈ ಕೃತಿ ಕಾನೂನಿನಲ್ಲಿ ಧರ್ಮದ ನೆಲೆಗಳನ್ನು ಹುಡುಕುವ ಮತ್ತು ವಿಮರ್ಶಿಸುವ ಹಾಗೆ ಮಾಡುವುದಕ್ಕೆ ಸಹಕಾರಿಯಾಗುತ್ತದೆ.

ಪ್ರದೀಪ್ ಪಂಡ ಮತ್ತು ಬಿನಾ ಅಗರವಾಲ್ ಅವರು ಬರೆದಂತಹ **"ಮ್ಯಾರಿಟಲ್ ವೈಲೆನ್ಸ್, ಹ್ಯುಮನ್ ಡೆವೆಲಪ್‌ಮೆಂಟ್ ಅಂಡ್ ವುಮೆನ್ಸ್ ಪ್ರಾಪರ್ಟಿ ಸ್ಟೇಟಸ್ ಇನ್ ಇಂಡಿಯಾ"** ಎಂಬ ಲೇಖನದಲ್ಲಿ ಭಾರತದಲ್ಲಿನ ಹಿಂದೂ ಮಹಿಳೆಯರ ಮೇಲೆ ನಡೆಯುವ ಹಿಂಸೆಯು

ಕುಟುಂಬದಿಂದಲೇ ಆರಂಭವಾಗುತ್ತದೆ ಎನ್ನುತ್ತಾರೆ. ಇದೊಂದು ಸಂಶೋಧನಾತ್ಮಕ ಲೇಖನವಾಗಿದ್ದು ಕೇರಳ ರಾಜ್ಯದ ತಿರುವನಂತಪುರಂ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಂಡಿದ್ದಾರೆ. ಕುಟುಂಬದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳಿಗೆ ಕಾರಣಗಳನ್ನು ಹುಡುಕುತ್ತಾ ಆಸ್ತಿಯ ಮೇಲಿನ ಹಕ್ಕೂ ಕೂಡ ಇದಕ್ಕೆ ಒಂದು ಕಾರಣವಾಗುತ್ತದೆ ಎಂಬುದನ್ನು ವಿವರಿಸುತ್ತಾರೆ. ಮುಖ್ಯವಾಗಿ ಇವರು ೨೦೦೧ರಲ್ಲಿ ತಿರುವನಂತಪುರಂ ಜಿಲ್ಲೆಯಲ್ಲಿ ಹೌಸ್‌ಹೋಲ್ಡ್ ಸರ್ವೆಕಾರ್ಯವನ್ನು ಮಾಡಿದ್ದಾರೆ. ಇದರ ಕುರಿತಂತೆ ಕೋಷ್ಟಕಗಳ ಮೂಲಕ ತುಂಬಾ ವಿಸ್ತೃತವಾಗಿ ಚರ್ಚಿಸಿದ್ದಾರೆ. ಮಹಿಳೆಗೆ ಆಸ್ತಿಯ ಮೇಲೆ ತನ್ನ ಹಕ್ಕನ್ನು ಪಡೆಯುವುದರ ಮೂಲಕ ಆರ್ಥಿಕವಾಗಿ ಸಬಲಳಾಗಲು ಸಾಧ್ಯವಾಗುತ್ತದೆ ಹಾಗೂ ಮಾನವ ಅಭಿವೃದ್ಧಿಗೂ ಪೂರಕವಾಗುತ್ತದೆ ಎಂದು ಹೇಳುತ್ತಾರೆ. ಅಂದರೆ ಆರ್ಥಿಕತೆಯ ಮೇಲಿನ ಅಧಿಕಾರ ಸ್ತ್ರೀಪುರುಷರಿಬ್ಬರಿಗೂ ಸಮನಾಗಿದ್ದಲ್ಲಿ ಮಹಿಳೆಯ ಮೇಲಿನ ವೈವಾಹಿಕ ಹಿಂಸೆಗಳು ಕಡಿಮೆಯಾಗುತ್ತವೆ. ಅಂದರೆ ಆಸ್ತಿಹಕ್ಕು ಎಂಬುದು ವೈವಾಹಿಕ ಹಿಂಸೆಯನ್ನು ತಡೆಯಲು ಆಧಾರವಾಗುತ್ತದೆ ಎಂದು ಹೇಳುತ್ತಾರೆ. ಈ ನಿಟ್ಟಿನಲ್ಲಿ ಲೇಖನವು ಸಂಶೋಧನಾ ಅಧ್ಯಯನಕ್ಕೆ ಸಹಕಾರಿಯಾಗಿದೆ. ಈ ಲೇಖನವು ೨೦೦೫ರ ವರ್ಲ್ಡ್ ಡೆವೆಲಪ್‌ಮೆಂಟ್ ಪತ್ರಿಕೆಯ ಸಂಚಿಕೆ ೫ರಲ್ಲಿ ಪ್ರಕಟವಾಗಿದೆ.

ಗೀತಾ ಕೃಷ್ಣಮೂರ್ತಿಯವರು ರಚಿಸಿರುವ **"ಮಹಿಳೆ, ಸಮಾಜ, ಕಾನೂನು"** ಈ ಕೃತಿಯು ಹಲವು ಲೇಖನಗಳ ಸಂಗ್ರಹವಾಗಿದ್ದು ಸಂಶೋಧನೆಗೆ ತುಂಬಾ ಉಪಯುಕ್ತವಾಗಿದೆ. "ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು: ಸಮಾತೆಯತ್ತ ಮಹತ್ವದ ಹೆಜ್ಜೆ" ಎಂಬ ಲೇಖನವು ಮಹಿಳೆಯರ ಸ್ವಾವಲಂಬಿ ಜೀವನಕ್ಕೆ ತುಂಬಾ ಸಹಕಾರಿಯಾಗಿದೆ. ಈ ಲೇಖನದಲ್ಲಿ ಮುಖ್ಯವಾಗಿ ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮಕ್ಕೆ ತಂದಂತಹ ತಿದ್ದುಪಡಿಯ ಬಗ್ಗೆ ತಿಳಿಸುತ್ತಾರೆ. "ಹೆಣ್ಣು ಸ್ವತಂತ್ರವಾಗಿ ಬದುಕಬೇಕಾದ, ಬದುಕನ್ನು ಎದುರಿಸಬೇಕಾದ ಅನಿವಾರ್ಯತೆ ಒದಗಿದಾಗ ಅವಳಿಗೆ ಬೇಕಾಗುವುದು ಆರ್ಥಿಕ ಭದ್ರತೆ, ಭರವಸೆ ಮತ್ತು ಕಾನೂನಿನ ಬೆಂಬಲ" (ಪುಟ.೧೭). ಎಂದು ಹೇಳುತ್ತಾರೆ. ಆ ಮೂಲಕ ಆಸ್ತಿ ಹಕ್ಕು ಎಂಬುದು ಮಹಿಳೆಯರ ಸ್ವಾವಲಂಬಿ ಜೀವನಕ್ಕೆ ಅವಶ್ಯಕ ಎಂದು ತಿಳಿಸುತ್ತಾರೆ. ೧೯೯೦ರ ಹಿಂದೂ ಉತ್ತರಾಧಿಕಾರ ( ಕರ್ನಾಟಕ) ತಿದ್ದುಪಡಿ ಕಾಯಿದೆ ಸುಮಾರು ಎರಡು ವರ್ಷಗಳ ಹಿಂದೆಯೇ ರಾಜ್ಯ ವಿಧಾನ ಮಂಡಲದಲ್ಲಿ ಅಂಗೀಕರಿಸಲ್ಪಟ್ಟಿದ್ದರೂ ಸಹ ಈ ತಿದ್ದುಪಡಿಗೆ ೧೯೯೪ ರ ಜುಲೈ ೨೮ ರಂದು ರಾಷ್ಟ್ರಪತಿಗಳ ಅನುಮೋದನೆ ದೊರೆಯಿತು. ಹೀಗೆ ಮಾಡಿದ ತಿದ್ದುಪಡಿಯಿಂದಾಗಿ ಸ್ತ್ರೀ ಪುರುಷರ ಹಕ್ಕುಗಳ ಲ್ಲಿರುವ ತಾರತಮ್ಯವನ್ನು ನಿವಾರಿಸಿದಂತಾಗಿದೆ ಎಂದು ಹೇಳುತ್ತಾರೆ. ಹಾಗೆಯೇ ಮುಂದುವರೆದು ಈ ಕಾಯ್ದೆಯ ತಿದ್ದುಪಡಿಯ ಸಂದರ್ಭದಲ್ಲಿ ಇದನ್ನು ವಿರೋಧಿಸಿದವರು ಸಹ ಇದ್ದಾರೆ. ಮುಖ್ಯವಾಗಿ ಕುಟುಂಬದಲ್ಲಿನ ಆಸ್ತಿಯನ್ನು ಹೆಣ್ಣು ಮಕ್ಕಳಿಗೆ ಹಂಚಿದರೆ ಆಸ್ತಿ ಬೇರೆಯಾಗುತ್ತದೆ ಮತ್ತು ಸಹೋದರರ ನಡುವೆ ಉತ್ತಮ ಬಾಂಧವ್ಯ ಏರ್ಪಡುವುದಿಲ್ಲ. ಎಂಬ ವಾದವನ್ನು

ಮಂಡಿಸುತ್ತಾರೆ ಆದರೆ "ಅಕ್ಕ ತಂಗಿಯರೊಡನೆ ಪಿತ್ರಾರ್ಜಿತ ಆಸ್ತಿ( ಸ್ವಯಾರ್ಜಿತವೂ ಅಲ್ಲ) ಹಂಚಿಕೊಳ್ಳುವ ಮಾತ್ರಕ್ಕೆ ಸೋದರ ಪ್ರೀತಿ, ತವರಿನ ಬಾಂಧವ್ಯ ಮಾಯವಾಗುವುದಾದರೆ ಆ ಪ್ರೀತಿಯ ಅರ್ಥವಾದರೂ ಏನು? ಇಂತಹ ಸೋದರರು ಕಷ್ಟಕಾಲದಲ್ಲಿ ನೆರವಿಗೆ ಬರುವ ಖಾತ್ರಿಯಾದರೂ ಏನು? ಸೋದರರ ಮರ್ಜಿ, ಮನೋಧರ್ಮವನ್ನು ಅವಲಂಬಿಸಿರುವ ಭಾವನಾತ್ಮಕ ನೆರವಿಗಿಂತ ಕಾನೂನು ಬದ್ಧವಾಗಿ, ಖಚಿತವಾಗಿ ದೊರೆಯುವ ಆರ್ಥಿಕ ಭದ್ರತೆ ಹೆಣ್ಣು ಮಕ್ಕಳಿಗೆ ಹೆಚ್ಚು ರಕ್ಷಣೆ ನೀಡಬಲ್ಲದು"(ಪುಟ.೧೯) ಎಂದು ಹೇಳುತ್ತಾರೆ. ಈ ಮೂಲಕ ಮಹಿಳೆಗೆ ಆಸ್ತಿ ಹಕ್ಕು ಅನಿವಾರ್ಯವಾಗಿ ಬೇಕೇ ಬೇಕು ಎಂಬುದನ್ನು ತಿಳಿಸುತ್ತಾರೆ.

**ಶ್ರೀಮತಿ ವಿಜಯಾದೇವಿ ಆರ್.ಓಂಕಾರ** ಅವರು ವೃತ್ತಿಯಿಂದ ವಕೀಲರಾಗಿದ್ದು **"ಭಾರತೀಯ ಉತ್ತರಾಧಿಕಾರ ಅಧಿನಿಯಮ – ೧೯೨೫"** ಈ ಕೃತಿಯ ಲೇಖಕರಾಗಿದ್ದಾರೆ. ಈ ಕೃತಿಯು ೨೦೦೭ರಲ್ಲಿ ಆಕಳವಾಡಿ ಬುಕ್ ಡೀಪೋ, ಧಾರವಾಡ ಇವರಿಂದ ಪ್ರಕಾಶಿತಗೊಂಡಿದೆ. ಈ ಕೃತಿಯು ಮುಖ್ಯವಾಗಿ ಆಸ್ತಿಯು ಯಾರ ಅಧೀನದಲ್ಲಿರುತ್ತದೆಯೋ ಅವರು ಮರಣ ಹೊಂದಿದ ನಂತರ ಆಸ್ತಿಯ ವಾರಸುದಾರರು ಯಾರಾಗಬೇಕು ಎಂಬ ವಿಷಯಕ್ಕೆ ಸಂಬಂಧಿಸಿದ ವಿವರಗಳನ್ನು ಒದಗಿಸುತ್ತದೆ. ಆಸ್ತಿಯ ಒಡೆಯ/ಒಡತಿ ಮೃತ್ಯು ಪತ್ರ ಬರೆಯದೆ ಮರಣ ಹೊಂದಿದ್ದಲ್ಲಿ ಅಥವಾ ಮೃತ್ಯು ಪತ್ರ ಬರೆದು ಮರಣ ಹೊಂದಿದ್ದಲ್ಲಿ "ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫" ಕಾನೂನು ಏನು ಹೇಳುತ್ತದೆ ಎಂಬುದನ್ನು ಸವಿವರವಾಗಿ ಚರ್ಚಿಸಿದ್ದಾರೆ. ಕಾನೂನಿನಲ್ಲಿನ ಯಾವ ಕಲಂಗಳು ಆಸ್ತಿಯ ವಾರಸುದಾರಿಕೆಗೆ, ಹೇಗೆ ಸಹಕಾರಿಯಾಗಿವೆ ಎಂಬುದನ್ನು ತಿಳಿಸುತ್ತಾರೆ. ಉದಾಹರಣೆಗೆ ಮೃತ್ಯು ಪತ್ರ ರಹಿತ ವಾರಸಾ ಆಸ್ತಿಗೆ ಸಂಬಂಧಿಸಿದಂತೆ ೧೯೨೫ ರ ಭಾರತೀಯ ಉತ್ತರಾಧಿಕಾರ ಅಧಿನಿಯಮ "ಕಲಂ ೩೪ರಲ್ಲಿ ಮೃತ್ಯು ಪತ್ರ ರಹಿತ ಮೃತನು ವಿಧವೆ ಹಾಗು ಆಪ್ತರನ್ನು ಬಿಟ್ಟಿರದೇ ಮರಣ ಹೊಂದಿದ್ದರೆ ಆತನ ಆಸ್ತಿಯು ಆತನ ಪಿತೃವಂಶೀಯ ಸಂತತಿಗಳಿಗೆ ಸೇರತಕ್ಕದ್ದು ಅಥವಾ ಪಿತೃವಂಶೀಯ ಸಂತತಿಗಳು ಇರದೇ ಇದ್ದ ಪಕ್ಷದಲ್ಲಿ ಆತನ ಆಪ್ತರಿಗೆ ಇನ್ನು ಮುಂದೆ ನಮೂದಿಸಲಾದ ನಿಯಮಗಳ ಪ್ರಕಾರ ಹೊಗತಕ್ಕದ್ದು ಹಾಗೂ ಒಂದು ವೇಳೆ ಆತನು ತನ್ನ ರಕ್ತಸಂಬಂಧಿಗಳಾಗಿ ಯಾರನ್ನು ಬಿಟ್ಟು ಹೋಗದೇ ಇದ್ದಲ್ಲಿ ಆತನಾಸ್ತಿಯು ಸರಕಾರಕ್ಕೆ ಹೋಗತಕ್ಕದ್ದು" (ಪು ೨೧) ಎಂಬುದಾಗಿ ತಿಳಿಸಿದ್ದಾರೆ. ಹೀಗೆ ಈ ಕಾಯಿದೆಯಲ್ಲಿನ ಕಲಂಗಳ ಕುರಿತಾಗಿ ವಿವರಿಸಿದ್ದಾರೆ. ಹಾಗೆಯೆ ಮೃತ್ಯು ಪತ್ರ ಮಾಡದೇ ಮರಣಹೊಂದಿದ ಪಾರ್ಸಿಗಳ ವಾರಸಾದ ವಿಶೇಷ ಉಪಬಂಧಗಳ ಕುರಿತು ವಿವರಿಸಿದ್ದಾರೆ. ಒಟ್ಟಾರೆಯಾಗಿ ಆಸ್ತಿಯ ವಾರಸದ ಕುರಿತಂತೆ ಮೃತ್ಯು ಪತ್ರ ಮಾಡದೇ ಮತ್ತು ಮೃತ್ಯು ಪತ್ರ ಮಾಡಿದ ನಂತರ ಮರಣ ಹೊಂದಿದ ವ್ಯಕ್ತಿಗಳ ಆಸ್ತಿಯ ಕುರಿತಾಗಿ ಹಲವಾರು ಉಪಶೀರ್ಷಿಕೆಗಳಡಿಯಲ್ಲಿ ವಿವರಿಸುತ್ತಾರೆ. ಅಂದರೆ 'ಮರಣ ಶಾಸನದ ಮೂಲಕ ಕೊಟ್ಟ ನಿರ್ದೇಶಿಸುವ ಆಸ್ತಿಗಳು', 'ಮರಣ ಶಾಸನದ ಮೂಲಕ ಕೊಟ್ಟ ಆಸ್ತಿಗಳು ರದ್ದಾಗುವುದು', 'ಮೃತ್ಯು ಪತ್ರದ ಮೂಲಕ ಕೊಟ್ಟ ನಿರ್ದಿಷ್ಟ ಆಸ್ತಿಗಳು' ಹೀಗೆ

ಹಲವಾರು ಉಪಶೀರ್ಷಿಕೆಗಳ ಅಡಿಯಲ್ಲಿನ ಉತ್ತರಾಧಿಕಾರದ ಕಾನೂನಿನ ಕಲಂಗಳ ಕುರಿತಾಗಿ ತಿಳಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿ ಆಸ್ತಿಹಕ್ಕಿನ ವಾರಸಕ್ಕೆ ಸಂಬಂದಿಸಿದಂತೆ ಕಾನೂನನ್ನು ಅರಿಯಲು ಸಹಕಾರಿಯಾಗಿದೆ.

ರಾಹುಲ ಸಾಂಕೃತ್ಯಾಯನರವರು ಹಿಂದಿಯಲ್ಲಿ ರಚಿಸಿರುವಂತಹ "ವೋಲ್ಗಾ ಗಂಗಾ" ಕೃತಿಯು ೩೦ ಕಥೆಗಳನ್ನು ಒಳಗೊಂಡಿದೆ. ಈ ಕೃತಿಯನ್ನು ಬಿ.ಎಂ ಶರ್ಮಾರವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಕ್ರಿ.ಪೂ ೬೦೦೦ದಿಂದ ಕ್ರಿ.ಶ ೧೯೪೨ರ ತನಕ ಮಾನವ ಸಮಾಜದ ಐತಿಹಾಸಿಕ, ಆರ್ಥಿಕ, ರಾಜನೈತಿಕ, ಪ್ರವಾಹಗಳ ೩೦ ಕಥಾರೂಪದ ಪೂರ್ಣ ಚಿತ್ರಣವನ್ನು ಈ ಕೃತಿಯು ಒಳಗೊಂಡಿದೆ. ಸಮಾಜದ ಹುಟ್ಟಿನ ಕುರಿತಾಗಿ ಹೇಳುತ್ತಾ ಪ್ರಸ್ತುತ ಸಮಾಜವು ಒಮ್ಮಿಂದೊಮ್ಮೆಲೆ ತನ್ನಷ್ಟಕ್ಕೆ ತಾನೆ ಹುಟ್ಟಿಕೊಂಡಿದ್ದಲ್ಲ. ಇದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ ಎನ್ನುತ್ತಾರೆ. ಹಾಗಾಗಿ ಇವರು ಮಾನವ ಸಮಾಜದ ಹುಟ್ಟಿನ ಮೂಲವನ್ನು ಹುಡುಕುತ್ತಾ ಹಿಂದಿ–ಐರೋಪ್ಯ ಜನಾಂಗವನ್ನೆ ವಸ್ತುವನ್ನಾಗಿಸಿಕೊಂಡಿದ್ದಾರೆ. ಈ ಕೃತಿ ಹಲವು ಕಥೆಗಳನ್ನು ಒಳಗೊಂಡಿದ್ದು, ಮೊದಲ ನಾಲ್ಕು ಕಥೆಗಳು ಕ್ರಿ.ಪೂ ೬೦೦೦ದಿಂದ ಕ್ರಿ.ಪೂ ೨೫೦೦ರ ವರೆಗಿನ ಕಾಲಘಟ್ಟದ ಸಾಮಾಜಿಕ ಚಿತ್ರಣವನ್ನ ಕಟ್ಟಿಕೊಡುತ್ತವೆ. ಇವುಗಳು ಪ್ರಾಗೈತಿಹಾಸಿಕ ಕಾಲಕ್ಕೆ ಸೇರುತ್ತವೆ. ಈ ಕಥೆಗಳ ನಂತರ "ವೇದ, ಬ್ರಾಹ್ಮಣ್ಯ, ಮಹಾಭಾರತ, ಪುರಾಣಗಳು ಹಾಗೂ ಅಟ್ಠ ಕಥಾ ಎಂಬ ಪ್ರಸಿದ್ಧವಾದ ಬೌದ್ಧ ಗ್ರಂಥಗಳ ಭಾಷ್ಯ ಇವೆಲ್ಲವೂ ಮುಂದಿನ ನಾಲ್ಕೂ ಕಥೆಗಳಿಗೆ ಪ್ರಮಾಣಗಳಾಗಿವೆ"(ಪು ೬) ಎಂದು ಹೇಳುತ್ತಾರೆ. ಹೀಗೆ ಈ ಕೃತಿಯಲ್ಲಿನ ಪ್ರತಿಯೊಂದು ಕಥೆಯೂ ಕೂಡ ಒಂದೊಂದು ಕಾಲಘಟ್ಟದಲ್ಲಿ ರಚನೆಗೊಂಡ ಗ್ರಂಥಗಳನ್ನು ಆಧರಿಸಿ ರೂಪಿತಗೊಂಡಿವೆ. ಅಂದರೆ ಕೌಟಿಲ್ಯನ ಅರ್ಥಶಾಸ್ತ್ರ, ಬೌದ್ಧ ಗ್ರಂಥಗಳು, ಅಶ್ವಘೋಷನ ಬುದ್ಧ ಚರಿತ, ಅಭಿಜ್ಞಾನ ಶಾಕುಂತಲ, ಹರ್ಷ ಚರಿತ ಹೀಗೆ ಮುಂತಾದ ಗ್ರಂಥಗಳು ಈ ಕಥೆಗಳಿಗೆ ಆಧಾರವಾಗಿರುವುದನ್ನು ಕಾಣಲಾಗಿದೆ. ಒಟ್ಟಾರೆಯಾಗಿ ಈ ಕೃತಿಯು ಕ್ರಿ.ಪೂ ೬೦೦೦ದಿಂದ ಆರಂಭಿಸಿ ಮುಂದಿನ ಕ್ರಿ.ಶ೧೯೪೨ರ ವರೆಗಿನ ಕಾಲಾವಧಿಯಲ್ಲಿ ರಚನೆಗೊಂಡ ಪ್ರಮುಖ ಕೃತಿಗಳನ್ನಾಧರಿಸಿ ಕಥೆಗಳನ್ನು ಮಾನವ ಸಮಾಜದ ಹುಟ್ಟು, ಬೆಳವಣಿಗೆ ಹಾಗು ಜೀವನ ವಿಕಾಸದ ಹಲವು ಹಂತಗಳನ್ನು ವಿವರಿಸುತ್ತದೆ. ಹಾಗೆಯೇ ಆರಂಭದಲ್ಲಿ ಮಾತೃ ಪಧಾನ ನೆಲೆಗಳನ್ನು ತೋರಿಸಿಕೊಡುವ ಈ ಕೃತಿಯು ಹಂತಹಂತವಾಗಿ ಮಾತೃಪ್ರಧಾನತೆಯು ಪಿತೃಪ್ರಧಾನತೆಯೆಡೆಗೆ ಸಾಗಿದ್ದನ್ನು ತೋರಿಸಿಕೊಡುತ್ತದೆ. ಹಾಗಾಗಿ ಇಲ್ಲಿನ ಎಲ್ಲಾ ಕಥೆಗಳು ಸಮಾಜದ ಹುಟ್ಟು, ಮಾನವನ ವಿಕಾಸದ ಜೊತೆಗೆ ಮಹಿಳೆ ಪುರುಷನ ಅಧೀನಕ್ಕೆ ಒಳಪಟ್ಟ ಬಗೆಗಿನ ಮಾಹಿತಿಯನ್ನು ಒದಗಿಸಿಕೊಡುತ್ತದೆ.

"ಮಹಿಳೆ ಕಾನೂನು ಮತ್ತು ನ್ಯಾಯ" ಈ ಕೃತಿಯು ಡಾ.ಕೆ.ಎಸ್.ಗೀತಾ ಅವರಿಂದ ರಚಿಸಲ್ಪಟ್ಟಿದೆ. ಇದೊಂದು ಸಂಶೋಧನಾ ಮಹಾಪ್ರಬಂಧವಾಗಿದ್ದು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದಾರೆ. ಈ ಮಹಾ ಪ್ರಬಂಧವನ್ನು ಕನ್ನಡ

ಸಾಹಿತ್ಯ ಪರಿಷತ್ತು ಕೃತಿ ರೂಪದಲ್ಲಿ ಹೊರ ತಂದಿದೆ. ಈ ಕೃತಿಯು ಪ್ರಸ್ತಾವನೆಯನ್ನು ಹೊರತುಪಡಿಸಿ ಸಮಾರೋಪವನ್ನು ಒಳಗೊಂಡಂತೆ ಒಟ್ಟು ಆರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಮುಖ್ಯವಾಗಿ ಕಾನೂನು ಮತ್ತು ನ್ಯಾಯದ ಪರಿಕಲ್ಪನೆಗಳ ನಡುವಿನ ಸಂಬಂಧ ಹಾಗೂ ವ್ಯಾತ್ಯಾಸಗಳನ್ನು ಗುರುತಿಸುವ ಕೆಲಸ ಈ ಕೃತಿಯಲ್ಲಿ ನಡೆದಿದೆ. ರಚನೆಯಾದ ಕಾನೂನುಗಳಲ್ಲಿ ಹಾಗೂ ನ್ಯಾಯಾಲಯಗಳು ನೀಡುವ ತೀರ್ಪುಗಳಲ್ಲಿ ಪುರುಷ ಪ್ರಧಾನ ಚಿಂತನೆಗಳು ಹೇಗೆ ಅಂತರ್ಗತವಾಗಿವೆ ಎಂಬುದನ್ನು ಕೆಲವು ನ್ಯಾಯಾಲಯಗಳ ತೀರ್ಪುಗಳೊಂದಿಗೆ ಚರ್ಚಿಸಿದ್ದಾರೆ. ಪ್ರಕರಣಗಳೇ ಈ ಸಂಶೋಧನೆಗೆ ಆಧಾರವಾಗಿವೆ. ಇವರು ಪ್ರಬಂಧದಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಗುರುತಿಸುವ ಜಾಗದಲ್ಲಿ ಅಧ್ಯಾಯಗಳ ಸ್ವರೂಪವನ್ನು ಗುರುತಿಸಿರುವುದನ್ನು ಕಾಣಲಾಗಿದೆ. ಹೀಗೆ ಗುರುತಿಸಿರುವುದು ಆಲೋಚನೆಗೆ ಒಳಗುಮಾಡುತ್ತದೆ. ಏಕೆಂದರೆ ಅಧ್ಯಯನ ಮತ್ತು ಅಧ್ಯಾಯ ಇವುಗಳ ನಡುವೆ ತುಂಬಾ ವ್ಯತ್ಯಾಸವಿದೆ. ಇವರು ಇಲ್ಲಿ ಅಧ್ಯಯನದ ವ್ಯಾಪ್ತಿ ಎಂಬ ಉಪಶೀರ್ಷಿಕೆಯಡಿಯಲ್ಲಿ ಅಧ್ಯಾಯಗಳ ವ್ಯಾಪ್ತಿಯನ್ನು ಗುರುತಿಸಿರುವುದು ಕಂಡುಬಂದಿದೆ. ಪ್ರಬಂಧದ ನಾಲ್ಕನೆಯ ಅಧ್ಯಾಯವಾದ ಮಹಿಳೆಯ ಆಸ್ತಿಹಕ್ಕು ಮತ್ತು ಲಿಂಗತಾರತಮ್ಯ ಎಂಬುದರಲ್ಲಿ ಪಿತ್ರಾರ್ಜಿತ ಮತ್ತು ಸ್ವಯಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ಚರ್ಚಿಸಿದ್ದಾರೆ. ಇವುಗಳಲ್ಲಿ ಮುಖ್ಯವಾಗಿ ಈಗಾಗಲೇ ಸ್ಥಿರಾಸ್ತಿ ಎಂದು ಗುರುತಿಸಲ್ಪಟ್ಟಿರುವ ಕೃಷಿ ಭೂಮಿಯ ವಾರಸುದಾರಿಕೆಗೆ ಸಂಬಂಧಿಸಿದಂತೆ ಹಲವು ಮಾಹಿತಿಗಳನ್ನು ನೀಡಿದ್ದಾರೆ. ೧೯೫೬ಕ್ಕಿಂತ ಮುಂಚಿತವಾಗಿ ಹಿಂದೂ ಮಹಿಳೆಯರ ಸ್ಥಾನಮಾನಗಳು ಹೇಗಿದ್ದವು ಎಂಬುದನ್ನು ಅಂದರೆ ಆಸ್ತಿಯ ಮೇಲಿನ ಅಧಿಕಾರದ ಕುರಿತ ಅವರ ಸ್ಥಾನಮಾಗಳು ಹೇಗಿದ್ದವು ಎಂಬುದನ್ನು ಚರ್ಚಿಸಿದ್ದಾರೆ. ತಾಯಿಯ ಹಕ್ಕುಗಳು ಮತ್ತು ಮಗಳ ಹಕ್ಕುಗಳು ಮತ್ತು ಕೃಷಿ ಭೂಮಿಯ ವಾರಸುದಾರಿಕೆಯ ಕಾನೂನುಗಳಲ್ಲಿ ಮಹಿಳೆಯರು ತಮ್ಮ ಹಕ್ಕುಗಳಿಂದ ಹೇಗೆ ವಂಚಿಸಲ್ಪಟ್ಟಿದ್ದಾರೆ ಎಂಬುದನ್ನೂ ಸಹ ವಿವರಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಮಹಿಳೆಯರಿಗೆ ಸಂಬಂಧಿಸಿದ ಕಾನೂನುಗಳು ಮತ್ತು ಅವುಗಳ ಕುರಿತಾಗಿ ನ್ಯಾಯಾಲಯದಲ್ಲಿ ಬಂದಂತಹ ತೀರ್ಪುಗಳನ್ನು ಆಧರಿಸಿದ ಪ್ರಕರಣಗಳನ್ನು ಗುರುತಿಸಿಕೊಂಡು ನ್ಯಾಯದ ಪರಿಕಲ್ಪನೆಯನ್ನು ಚರ್ಚಿಸಿದ್ದಾರೆ.

**"ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬"** ಈ ಕೃತಿಯನ್ನು **ಶಿವನಗೌಡ ಜಿ ದೊಡ್ಡಮನಿಯವರು** ರಚಿಸಿದ್ದಾರೆ. ಈ ಕೃತಿಯು ಸಂಪೂರ್ಣವಾಗಿ ಕಾನೂನಿನ ಕುರಿತು ವಿವರವನ್ನು ಒದಗಿಸುತ್ತದೆ. ಹಾಗೆಯೆ ೧೯೯೪ ರ ಕರ್ನಾಟಕ ತಿದ್ದುಪಡಿ ಹಾಗೂ ೨೦೦೫ರ ತಿದ್ದುಪಡಿ ಮತ್ತು ಹಿಂದೂ ಮಹಿಳೆಯರ ಸ್ವತ್ತಿನ ಹಕ್ಕು ಕಾಯ್ದೆ ಹೀಗೆ ಮೂರು ಭಾಗಗಳನ್ನಾಗಿಸಿಕೊಂಡು ಹಿಂದೂ ಉತ್ತರಾಧಿಕಾರ ಕಾನೂನು ಏನು ಹೇಳುತ್ತದೆ ಮತ್ತು ಮುಖ್ಯವಾಗಿ ಮಹಿಳೆಯರು ಈ ಕಾನೂನಿನ ಮೂಲಕ ಹೇಗೆ ತಮ್ಮ ಆಸ್ತಿಯಲ್ಲಿನ ಹಕ್ಕನ್ನು ಪಡೆಯಬಹುದು ಎಂಬುದನ್ನು ನ್ಯಾಯಾಲಯದ ಕೆಲವು ತೀರ್ಪುಗಳನ್ನು ಉದಾಹರಿಸುವ

ಮೂಲಕ ವಿವರಿಸಿದ್ದಾರೆ. ಹಾಗೆಯೇ ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಬಳಸಲಾಗಿರುವ ಪರಿಭಾಷೆಗಳ ಕುರಿತು ಪ್ರತ್ಯೇಕ ಉಪವಿಭಾಗವನ್ನು ಮಾಡಲಾಗಿದೆ. ಈ ವಿಭಾಗದಲ್ಲಿ ಗೋತ್ರಜ, ಅಳಿಯಸಂತಾನ ಕಾನೂನು, ಬಂಧು, ರೂಢಿ ಮತ್ತು ಆಚರಣೆ, ಪೂರ್ಣಶಕ್ತಿ, ಭಿನ್ನರಕ್ತ, ಏಕೋದರರಕ್ತ ಹೀಗೆ ಮುಂತಾದ ಪರಿಭಾಷೆಗಳ ಅರ್ಥ ಮತ್ತು ವ್ಯಾಖ್ಯಾನವನ್ನು ಮಾಡಲಾಗಿದೆ. ಕಾನೂನನ್ನು ಅರಿಯಲು ಈ ಕೃತಿಯು ತುಂಬಾ ಉಪಯುಕ್ತವಾಗಿದೆ.

**ಕೆ.ವಿ ಸುಬ್ಬಣ್ಣ ನೆನಪಿನ "ಮೊದಲ ಓದು"** ಪುಸ್ತಕ ಮಾಲೆಯ "ಆಶೀಶ್ ನಂದಿ ಅವರ ಆಯ್ದ ಬರಹಗಳು" ಎಂಬ ಕೃತಿಯು ಮೂರು ಲೇಖನಗಳನ್ನೊಳಗೊಂಡಿದೆ. ಮೊದಲ ಲೇಖನವು ಸತಿ: ಹತ್ತೊಂಬತ್ತನೆಯ ಶತಮಾನದ ಹೆಂಗಸರ ಹಿಂಸೆ ಹಾಗೂ ಪ್ರತಿಭಟನೆಯ ಒಂದು ವೃತ್ತಾಂತ ಆಗಿದ್ದು. ಈ ಲೇಖನದಲ್ಲಿ ಸತಿ ಪದ್ದತಿಯ ಹುಟ್ಟು, ಬೆಳವಣಿಗೆ ಕುರಿತಾಗಿ ತಿಳಿಸುತ್ತಾ ಮಹಿಳೆಯರು ಈ ಪದ್ದತಿಯ ಮೂಲಕ ಹಿಂಸೆಗೆ ತಳ್ಳಲ್ಪಟ್ಟಿದುದರ ಕುರಿತಾಗಿ ವಿವರಿಸುತ್ತಾ ಹೋಗುತ್ತಾರೆ. ಮುಖ್ಯವಾಗಿ ಸತಿ ಪದ್ದತಿ ಆಚರಣೆಗೆ ಆ ಸಂದರ್ಭದಲ್ಲಿನ ಆಸ್ತಿಯ ಮೇಲಿನ ಬಿಗಿಯಾದ ಕಟ್ಟಳೆಗಳೆ ಕಾರಣವಾಗಿದ್ದವು ಎಂದಿದ್ದಾರೆ. ಅಂದರೆ ಅವರೇ ಹೇಳುವ ಹಾಗೆ "ಬಿಗಿಯಾದ ಆಸ್ತಿಯ ಕಟ್ಟಳೆಗಳಿದ್ದ ಸಮಾಜದಲ್ಲಿ ಸತಿ ಪದ್ದತಿಯು ಆಸ್ತಿ ಹಂಚಿಕೆಯಲ್ಲಿ ಹಸ್ತಕ್ಷೇಪ ನಡೆಸುವ ತಂತ್ರವೂ ಆಗಿತ್ತು. ಆಗ ಬಂಗಾಲ ಮತ್ತು ಪೂರ್ವ ಭಾರತದಲ್ಲಿ ರೂಢಿಯಲ್ಲಿದ್ದುದು ಹಿಂದೂ ಕಾಯಿದೆಯ ದಾಯಭಾಗ ಪದ್ದತಿ. ಇದರ ಪ್ರಕಾರ ಒಂದು ಕುಟುಂಬದಲ್ಲಿ ಹೆಂಗಸೊಬ್ಬಳಿಗೆ ಆಸ್ತಿಯ ಹಕ್ಕು ಹುಟ್ಟಲಿಕ್ಕೆ ಅವಳಿಗೆ ಗಂಡು ಸಂತಾನ ಇರುವುದು ಅನಿವಾರ್ಯವಾಗಿರಲಿಲ್ಲ. ಧಾರ್ಮಿಕ ಭಾದ್ಯತೆ ಇದ್ದರೆ ಸಾಕಾಗಿತ್ತು" (ಪುಟ.೧೧) ಎಂದು ಹೇಳುತ್ತಾರೆ. ಹೀಗೆ ಆ ಸಂದರ್ಭದಲ್ಲಿ ಆಸ್ತಿ ಹಂಚಿಕೆಯ ಕುರಿತಂತೆ ಮಹಿಳೆಗೆ ತನ್ನದೇ ಆದ ಹಕ್ಕು ಇತ್ತು. ಆ ಕಾರಣಕ್ಕಾಗಿ ಮಹಿಳೆಯರನ್ನು ಪುರುಷ ತನ್ನ ಆಸ್ತಿ ಹಕ್ಕಿನಿಂದ ವಂಚಿತರನ್ನಾಗಿಸಲು ಸತಿ ಪದ್ದತಿ ಒಂದು ಕಾರಣವಾಯಿತು ಎಂದು ಹೇಳುತ್ತಾರೆ. ಹಾಗಾಗಿ ಆಸ್ತಿಹಕ್ಕಿನಿಂದ ಮಹಿಳೆಯರನ್ನು ಹೊರಗಿಟ್ಟಿದುದರ ಕುರಿತಂತೆ ಹಲವು ಕಾರಣಗಳನ್ನು ಒದಗಿಸುತ್ತದೆ. ಈ ನಿಟ್ಟಿನಲ್ಲಿ ಲೇಖನವು ಅಧ್ಯಯನಕ್ಕೆ ಉಪಯುಕ್ತವಾಗಿದೆ. ಈ ಲೇಖನವು ಎಟ್ ದಿ ಏಜ್ ಆಫ್ ಸೈಕಾಲಜಿ: ಎಸ್ಸೇಸ್ ಇನ್ ಪಾಲಿಟಿಕ್ಸ್ ಅಂಡ್ ಕಲ್ಚರ್ ಎಂಬ ಪುಸ್ತಕವನ್ನು ನ್ಯೂಡೆಲ್ಲಿಯ ಒ.ಯು.ಪಿ.ಯು ೧೯೮೦ರಲ್ಲಿ ಪುಸ್ತಕದಲ್ಲಿ ಪ್ರಕಟವಾದ ಸತಿ: ಎ ನೈನ್‌ಟೀನ್ತ್ ಸೆಂಚುರಿ ಟೇಲ್ ಆಫ್ ವಿಮೆನ್ ವಯಲೆನ್ಸ್ ಅಂಡ್ ಪ್ರೊಟೆಸ್ಟ್ ಕೃತಿಯ ಕನ್ನಡಾನುವಾದವಾಗಿದೆ. ಕನ್ನಡಕ್ಕೆ ಅನುವಾದಿಸಿದವರು ಅಕ್ಷರ ಕೆ.ವಿ ಅವರು.

**ಡಾ.ಹೆಚ್.ಎಸ್ ಅನುಪಮಾರವರ "ಮಹಿಳೆ: ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ"** ಕೃತಿಯು ಸ್ತ್ರೀವಾದಿ ನೆಲೆಯಲ್ಲಿ ರೂಪುಗೊಂಡಿರುವ ಕೃತಿಯಾಗಿದೆ. ಈ ಕೃತಿಯು ಹಲವು ಲೇಖನಗಳ ಸಂಗ್ರಹವಾಗಿದ್ದು ಒಂದೊಂದು ಲೇಖನವೂ ಸಹ ವಿಭಿನ್ನ ನೆಲೆಯಲ್ಲಿ ರೂಪುಗೊಳ್ಳುತ್ತಾ ಸಾಗಿದೆ.

ಮಹಿಳೆಯರ ಸಬಲೀಕರಣದ ಕುರಿತಾಗಿ ಹೇಳುತ್ತಾ ಅವರ ಅರಿವಿನ ವಿಷಯಕ್ಕೆ ಸಂಬಂಧಿಸಿದಂತೆ ಮಹಿಳೆಯರ ಅರಿವಿನ ಬಗ್ಗೆ ಸಮಾಜದಲ್ಲಿ ತುಚ್ಛವಾದ ಮನೋಭಾವವಿದೆ. ಅದಕ್ಕೆ "ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ" ಎಂಬ ಆಡು ನುಡಿಗಳು ಪುಷ್ಟಿ ನೀಡುತ್ತಾ ಬರುತ್ತಿವೆ. ಇವರ ಪ್ರಕಾರ ಮಹಿಳಾ ಜಾಗೃತಿಯ ಮೊದಲ ಹೆಜ್ಜೆ ಯಾವುದೆಂದರೆ ಅದು ಅರಿವು. ಹಾಗೆಯೇ ' ಮಹಿಳಾ ಸಂವೇದನೆ ತುದಿ ಬೆರಳ ಅರಿವು' ಎಂಬ ಭಾಗದಲ್ಲಿ ಹೇಳುವಂತೆ "ಮಹಿಳೆಯ ಅರಿವು ತುದಿ ಬೆರಳ ಅರಿವು. ಒಲೆ ಮೇಲೆ ಅಕ್ಕಿ ಕುದಿವ ಪಾತ್ರೆಯಿಂದ ತುದಿ ಬೆರಳಲ್ಲಿ ಎರಡಗುಳು ಹಿಸುಕಿ ಬೆಂದಿದೆಯೋ ಇಲ್ಲವೋ ತಿಳಿಯಬಲ್ಲಂತಹ ಸೂಕ್ಷ್ಮ ಅರಿವು ಅದು. ಈ ಅರಿವಿನ ಜೊತೆಗೆ ವಿಶಾಲ ಸಮಾಜದ ಭಾಗ ತಾನೆಂಬ ಜ್ಞಾನ ವೈಶಾಲ್ಯ ರೂಡಿಸಿಕೊಂಡರೆ ಅದು ಮಹಿಳಾ ಜಾಗೃತಿಯ ಮೊದಲ ಹೆಜ್ಜೆ" ( ಪುಟ.೯) ಎಂದು ಹೇಳುತ್ತಾರೆ. ಹಾಗೆಯೇ ಲೇಖಕರು ಮುಂದುವರೆದು ಉಮಾ ಚಕ್ರವರ್ತಿಯವರ ಜೆಂಡರಿಂಗ್ ಕಾಸ್ಟ್ ಎಂಬ ಪುಸ್ತಕದಲ್ಲಿನ ಹಲವು ವಿಷಯಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿ ಮಹಿಳಾ ವಿಷಯಗಳ ಕುರಿತಂತೆ ಹಲವು ಆಯಾಮಗಳಲ್ಲಿ ಚರ್ಚಿಸುತ್ತಾ ಸಾಗಿದೆ. ಹಾಗಾಗಿ ಮಹಿಳೆಯರ ಅರಿವು ಎಂಬುದಕ್ಕೆ ವಿಚಾರಕ್ಕೆ ಸಂಬಂಧಿಸಿದಂತೆ ಹಲವು ಮಾಹಿತಿಗಳನ್ನು ಒದಗಿಸಿಕೊಡುತ್ತದೆ.

**ಒಡೆಯರ್ ಡಿ ಹೆಗ್ಗಡೆಯವರ "ಮಹಿಳಾ ಅಧ್ಯಯನಗಳು"** ಕೃತಿಯು ಮಹಿಳಾ ಅಧ್ಯಯನ, ಮಹಿಳಾ ಚಳುವಳಿ, ಮಹಿಳೆಯರ ಅಭಿವೃದ್ಧಿಗಾಗಿ ಅಂತರಾಷ್ಟ್ರೀಯ ಪ್ರಯತ್ನಗಳು ಹೀಗೆ ಮುಂತಾದ ವಿಷಯಗಳ ಕುರಿತಂತೆ ಚರ್ಚಿಸುತ್ತದೆ. ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಮತ್ತು ಈ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಭಿವೃದ್ಧಿ ಯೋಜನೆಗಳು ರೂಪುಗೊಂಡಿವೆ ನಿಜ ಆದರೆ ಇವು ಲಿಂಗ ಪೂರ್ವಗ್ರಹಗಳಿಂದ ಮುಕ್ತವಾಗಿಯೇ ಅಥವಾ ಇಲ್ಲವೇ ಎಂಬುದನ್ನು ಚರ್ಚಿಸಿದ್ದಾರೆ. ಈ ಮೂಲಕ ಮಹಿಳೆಯರು ಯಾವ ಹಂತದಲ್ಲಿ ತಿರಸ್ಕರಿಸಲ್ಪಡುತ್ತಿದ್ದಾರೆ ಎಂಬುದನ್ನು ತಿಳಿಸಿದ್ದಾರೆ. ಮಹಿಳಾ ಚಳುವಳಿಗಳು ಮೊದಲನೆಯದಾಗಿ ಪಾಶ್ಚಾತ್ಯ ದೇಶಗಳಲ್ಲಿ ಆರಂಭವಾದವು. ಮಹಿಳೆಯರ ಶಕ್ತಿ ಸಂವರ್ಧನೆಗಾಗಿ (ಸಬಲೀಕರಣಕ್ಕಾಗಿ) ಕಳೆದ ಹಲವು ದಶಕಗಳಿಂದ ಹಲವಾರು ಅಂತರಾಷ್ಟ್ರೀಯ ಮಹಿಳಾ ಸಮಾವೇಶಗಳು ನಡೆದಿವೆ. ಆ ಮಹಿಳಾ ಸಮಾವೇಶಗಳು ಮುಖ್ಯವಾಗಿ ಮೆಕ್ಸಿಕೊ, ಕೋಪೆನ್ಹೆಗೆನ್,ನೈರೋಬಿ ಮತ್ತು ಬೀಜಿಂಗ್‌ಗಳಲ್ಲಿ ಕ್ರಮವಾಗಿ ನಡೆದಿವೆ. ಇವುಗಳಲ್ಲಿ ಕೋಪೆನ್ಹೆಗೆನ್ ವಿಶ್ವ ಮಹಿಳಾ ಸಮಾವೇಶದಲ್ಲಿನ ಕ್ರಿಯಾಯೋಜನೆಯು ೪೮ ಗೊತ್ತುವಳಿಗಳನ್ನು ಒಳಗೊಂಡಿದೆ. ಇವುಗಳಲ್ಲಿ ಮುಖ್ಯವಾಗಿ ಆಸ್ತಿಗಳ ಮಾಲೀಕತ್ವ ಮತ್ತು ನಿಯಂತ್ರಣ, ಆಸ್ತಿ ಹಕ್ಕಿನ ಕುರಿತ ಮಹಿಳಾ ಹಕ್ಕುಗಳನ್ನು ಉತ್ತಮಪಡಿಸುವುದು ಮುಂತಾದುವು ಮುಖ್ಯ ಕಾಳಜಿಗಳಾಗಿದ್ದುವು. ಹೀಗೆ ಮಹಿಳೆಯರ ಸಬಲೀಕರಣಕ್ಕಾಗಿ ವಿಶ್ವಮಟ್ಟದಲ್ಲಿ ನಡೆದ ಚಳುವಳಿಗಳು , ಸಮಾವೇಶಗಳ ಕುರಿತು ಚರ್ಚಿಸಿದ್ದಾರೆ. ಈ ಕೃತಿಯ ಮೊದಲ ಭಾಗದ

ಮೊದಲನೆಯ ಅಧ್ಯಾಯವು **"ಕುಟುಂಬ ವ್ಯವಸ್ಥೆ ಮತ್ತು ಮಹಿಳಾ ಶೋಷಣೆ ತತ್ವಗಳು"** ಎಂಬುದಾಗಿದೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಮಹಿಳಾ ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಮಹತ್ವದ ಕುರಿತು ಚರ್ಚಿಸಿದ್ದಾರೆ. ಹಾಗೆಯೇ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಮತ್ತು ಪಿತೃಪ್ರಧಾನ ವ್ಯವಸ್ಥೆಗಳ ಲಕ್ಷಣಗಳ ಕುರಿತು ತಿಳಿಸಿದ್ದಾರೆ. ಮುಂದುವರೆದಂತೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತಕಿಯರಾದ ಕ್ರಿಸ್ಟಿನ್ ದ ಫಿಜಾನ್, ಮೇರಿ ವೂಲ್ಫಸ್ಟೋನ್ ಕ್ರಾಫ್ಟ್, ಹ್ಯಾರಿಯೆಟ್ ಟೇಲರ್ ಮಿಲ್, ಜಾನ್ ಸ್ಟುವರ್ಟ್ ಮಿಲ್, ಸಿಮೋನ ದ ಬೋವಾ ಹೀಗೆ ಮುಂತಾದವರ ಚಿಂತನೆಗಳ ವಿವರವೂ ಇದೆ. ಭಾರತ ಸಂದರ್ಭದ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಸಬಲೀಕರಣಕ್ಕೆ ಸಂಬಂಧಿಸಿದಂತೆ ಜಾರಿಗೊಂಡ ಕಾರ್ಯಕ್ರಮಗಳ ಕುರಿತಾದ ವಿಶ್ಲೇಷಣೆಯನ್ನ ಮಾಡಿದ್ದಾರೆ ಒಟ್ಟಾರೆಯಾಗಿ ಈ ಕೃತಿಯು ಮಹಿಳಾ ಹಕ್ಕುಗಳಿಗಾಗಿ ನಡೆದ ಹೋರಾಟಗಳು ಮತ್ತು ಮಹಿಳೆಯರ ಮೇಲಿನ ಶೋಷಣೆಗಳು, ಮಹಿಳೆಯರ ಸಮಸ್ಯೆಗಳು ಮತ್ತು ಸವಾಲುಗಳ ಕುರಿತಾಗಿ ಉಪಯುಕ್ತ ಮಾಹಿತಿಯನ್ನು ಒದಗಿಸಿಕೊಡುತ್ತದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಗೊಂಡ **"ಮಹಿಳಾ ಅಧ್ಯಯನ" (ದಕ್ಷಿಣಾಯನ ಸಂಚಿಕೆ)** ಸಂಚಿಕೆಯು ಹಲವು ಲೇಖಕರು ಬರೆದ ಲೇಖನಗಳ ಸಂಗ್ರಹವಾಗಿದೆ. ಡಾ.ಎಚ್.ಎಸ್ ಶ್ರೀಮತಿಯವರು ಇದರ ಸಂಪಾದನೆಯನ್ನು ಮಾಡಿದ್ದಾರೆ. ಈ ಸಂಚಿಕೆಯಲ್ಲಿನ ಜ್ಯೋತಿ ಶಶಿಕುಮಾರ್‌ರವರ **'ಮಹಿಳೆ ಮತ್ತು ಹಕ್ಕುಗಳು'** ಎಂಬ ಲೇಖನವು ನಮ್ಮ ಸಂವಿಧಾನವು ಕೊಡಮಾಡಲ್ಪಟ್ಟ ಹಕ್ಕುಗಳು ಮಹಿಳೆಯರಿಗೆ ಅನುಕೂಲವಾಗಿವೆಯೇ ಅಥವಾ ಇಲ್ಲವೇ ಎಂಬುದನ್ನು ಚರ್ಚಿಸಿದ್ದಾರೆ. "ಸಂವಿಧಾನದ ೩ ಮತ್ತು ೪ಎ ಭಾಗಗಳನ್ನು ಅವಲೋಕಿಸಿದಾಗ ಮಹಿಳೆಯರಿಗೆಂದೇ ಪ್ರತ್ಯೇಕ ಮೂಲಭೂತ ಹಕ್ಕುಗಳನ್ನಾಗಲಿ ಇತರ ಹಕ್ಕುಗಳನ್ನಾಗಲಿ ನಮೂದಿಸಿಲ್ಲವೆಂದು ತಿಳಿಯುತ್ತದೆ. ಕೇವಲ ೬ ಸಂದರ್ಭಗಳಲ್ಲಿ ಮಾತ್ರ ಸ್ತ್ರೀಯರ ಬಗ್ಗೆ ಪುರುಷರು ಮತ್ತು ಮಕ್ಕಳೊಡನೆ ಉಲ್ಲೇಖಿಸಲಾಗಿದ್ದು ಒಂದೇ ಸಲ ಅಂದರೆ ೪೨ನೇ ಅನುಚ್ಛೇದದಲ್ಲಿ ಪ್ರಸೂತಿ ರಜೆಯ ಬಗ್ಗೆ ಮಾತ್ರ ಮಹಿಳೆಯರನ್ನಷ್ಟೇ ಉಲ್ಲೇಖಿಸಲಾಗಿದೆ. ಇತರ ಸಂದರ್ಭಗಳಲ್ಲಿ ವ್ಯಕ್ತಿ, ಪ್ರಜೆ ಎಂಬ ಪದಗಳನ್ನು ಉಲ್ಲೇಖಿಸಲಾಗಿದೆ. ಈ ಪದಗಳ ಅರ್ಥ ವ್ಯಾಪ್ತಿಯಲ್ಲಿ ಸ್ತ್ರೀಯರನ್ನು ಸೇರಿಸಲಾಗಿದೆ ಎಂಬುದು ಗಮನಾರ್ಹ"(ಪು.೮೮) ಎಂದು ಹೇಳುತ್ತಾರೆ. ಹೀಗೆ ವೈಯುಕ್ತಿಕ ಕಾನೂನಿನ ಬಗ್ಗೆ, ವಿಶೇಷ ವಿವಾಹ ಅಧಿನಿಯಮ ೧೯೫೪ರ ಕುರಿತು ಹಿಂದೂ ವಿವಾಹ ಅಧಿನಿಯಮ ೧೯೫೫ರ ಕುರಿತಂತೆ ವಿವರಿಸಿದ್ದಾರೆ. ಹಾಗೆಯೇ ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ಕ್ಕೆ ಸಂಬಂಧಿಸಿದಂತೆ ವಿವಿಧ ರಾಜ್ಯಗಳಲ್ಲಿ ಅಂದರೆ ಆಂದ್ರಪ್ರದೇಶ, ಕರ್ನಾಟಕ, ತಮಿಳುನಾಡು ಮತ್ತು ಕೇರಳಗಳಲ್ಲಿ ಆಸ್ತಿಯ ಉತ್ತರಾಧಿಕಾರಕ್ಕೆ ಸಮಬಂಧಿಸಿದಂತೆ ಕಾನೂನಿನಲ್ಲಾದ ಬದಲಾವಣೆಗಳನ್ನು ಚರ್ಚಿಸಿದ್ದಾರೆ. ಅಂದರೆ "ಆಂದ್ರಪ್ರದೇಶವು ಹಿಂದೂ ಉತ್ತರಾಧಿಕಾರ ಅಧಿನಿಯಮ (ಆಂದ್ರಪ್ರದೇಶ ತಿದ್ದುಪಡಿ) ೧೯೮೬ರ ಅನ್ವಯ ಗಂಡು ಮಕ್ಕಳಂತೆ ಹೆಣ್ಣು ಮಕ್ಕಳಿಗೂ ಜನ್ಮತಃ ಉತ್ತರಾಧಿಕಾರ ಹಕ್ಕನ್ನು

ನೀಡಿದೆ. ತಮಿಳುನಾಡು ಸರಕಾರವೂ ಅದನ್ನೆ ಅನುಸರಿಸಿತು. ಆದರೆ ಕೇರಳ ಸರಕಾರವು ವಿಭಿನ್ನ ಹೆಜ್ಜೆ ಇಟ್ಟು, ಕೇರಳ ಜಂಟಿ ಹಿಂದೂ ಕುಟುಂಬ ಪದ್ಧತಿ (ನಿರ್ಮೂಲ) ಅಧಿನಿಯಮ ೧೯೭೫ರ ಮೂಲಕ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಆಸ್ತಿ ಹೊಂದಿರಲು ಅವಕಾಶ ನೀಡಿತು. ಕರ್ನಾಟಕ ಸರ್ಕಾರವು ೧೯೯೦ರಲ್ಲಿ ತಿದ್ದುಪಡಿ ಮಾಡಿ ಹುಟ್ಟಿನಿಂದ ಹೆಣ್ಣುಮಕ್ಕಳಿಗೆ ದಾಯಾದಿತ್ವದ ಸ್ವತ್ತಿನಲ್ಲಿ ಹಕ್ಕನ್ನು ನೀಡಲು ಪ್ರಸ್ತಾಪಿಸಿದ್ದು ೧೯೯೪ರಲ್ಲಿ ಇದು ಜಾರಿಗೆ ಬಂದಿದೆ"(ಪುಟ.೯೪).ಹೀಗೆ ಮಹಿಳೆಯರ ಹಕ್ಕುಗಳ ವಿಷಯವಾಗಿ ದಕ್ಷಿಣ ಭಾರತದ ರಾಜ್ಯಗಳಲ್ಲಿ ಆದಂತಹ ಬದಲಾವಣೆಗಳನ್ನು ತಿಳಿಸುತ್ತಾರೆ. ಹಾಗೆಯೇ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ ೧೯೫೬ ಮತ್ತು ಜೀವನಾಂಶ ಅಧಿನಿಯಮಗಳಿಗೆ ಸಮಬಂಧಿಸಿದಂತೆ ಚರ್ಚಿಸಿದ್ದರೆ. ಒಟ್ಟಾರೆಯಾಗಿ ಈ ಲೇಖನವು ಸಂವಿಧಾನದಡಿಯಲ್ಲಿ ಮಹಿಳೆಯರಿಗೆ ಇರುವಂತಹ ಅನುಕೂಲಗಳೇನು ಎಂಬುದನ್ನು ತಿಳಿಸಿಕೊಡುತ್ತದೆ. ಹಾಗೆಯೇ ಈ ಮಹಿಳಾ ಅಧ್ಯಯನ ಸಂಚಿಕೆಯಲ್ಲಿನ ಮತ್ತೊಂದು ಲೇಖನವೆಂದರೆ ಗೀತಾ ಕೃಷ್ಣಮೂರ್ತಿಯವರ " ಕಾನೂನು ಮತ್ತು ನ್ಯಾಯ" ಈ ಲೇಖನವೂ ಸಹ ಸಂವಿಧಾನದಲ್ಲಿನ ಉಪಬಂಧಗಳ ಕುರಿತು ತಿಳಿಸುತ್ತದೆ. ಮುಖ್ಯವಾಗಿ ಶಾಬಾನು ಪ್ರಕರಣವನ್ನು ವಿವರಿಸುತ್ತಾ ಸಂವಿಧಾನದ ಕಲಂಗಳು ಹೇಗೆ ಪುರುಷ ಪರವಾಗಿವೆ ಎಂಬುದನ್ನು ತಿಳಿಸಿಕೊಡುತ್ತಾರೆ. ಅಂದರೆ ಸಂವಿಧಾನದ ೪೯೮ನೇ ಪ್ರಕರಣವು ವಿವಾಹಕ್ಕೆ ಸಂಬಂಧಪಟ್ಟ ಅಪರಾಧಿಗಳ ಬಗ್ಗೆ ಹೇಳುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ಸನ್ಮಾನ್ಯ ಶ್ರೀ ಪಿ.ಬಿ ಗಜೇಂದ್ರ ಗಡ್ಕರ್ ಅವರು ಹೇಳಿದ ಮಾತನ್ನು ಉಲ್ಲೇಖಿಸಿದ್ದಾರೆ. ಅವರು ಹೇಳುವಂತೆ "೪೯೭ ನೇ ಪ್ರಕರಣದಂತೆ ೪೯೮ನೇ ಪ್ರಕರಣದ ಉಪಬಂಧಗಳನ್ನು ಸಹ ಪತಿಯ ಹಕ್ಕುಗಳನ್ನು ರಕ್ಷಿಸುವ ಉದ್ದೇಶದಿಂದ ರೂಪಿಸಲಾಗಿದೆಯೇ ಹೊರತು ಪತ್ನಿಯ ಹಕ್ಕುಗಳ ರಕ್ಷಣೆಯ ದೃಷ್ಟಿಯಿಂದಲ್ಲ" (ಪುಟ.೧೦೭) ಎಂದಿದ್ದಾರೆ. ಹೀಗೆ ಸ್ತ್ರೀ ಪುರುಷರ ನಡುವೆ ತಾರತಮ್ಯವೆಸಗುವ ಇಂಥ ಅನೇಕ ಉಪಬಂಧಗಳು ನಮ್ಮ ಕಾನೂನುಗಳಲ್ಲಿ ಸೇರಿಹೋಗಿವೆ ಎಂದು ತಿಳಿಸುತ್ತಾರೆ. ಒಟ್ಟಾರೆಯಾಗಿ ಈ ಲೇಖನವು ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಎಲ್ಲವೂ ಪುರುಷನ ಪರವಾಗಿರುತ್ತವೆ. ಹಾಗೆಯೇ ರೂಪಿಸುವ ಕಾನೂನುಗಳು ಮತ್ತು ಅವುಗಳ ಅನುಷ್ಠಾನದ ಸಂದರ್ಭಗಳು ಸಹ ಪುರುಷ ಚಿಂತನೆಯಿಂದ ಹೊರಬಂದಿಲ್ಲ ಎಂಬುದನ್ನು ತಿಳಿಸುತ್ತದೆ.

ಡಾ. ಎಂ.ಉಷಾ ರವರ **"ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು"** ಎಂಬ ಕೃತಿಯು ಕನ್ನಡವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಗೊಂಡಿದೆ. ಈ ಕೃತಿಯು ಮಹಿಳಾ ಚಳುವಳಿಗಳನ್ನೇ ಅಧ್ಯಯನ ಕ್ಷೇತ್ರವಾಗಿ ತೆಗೆದುಕೊಂಡಿದ್ದಾರೆ. ಭಾರತದ ಸಂದರ್ಭದಲ್ಲಿ ಮಹಿಳಾ ಚಳುವಳಿಗಳು ನಡೆದು ಬಂದ ದಾರಿಯ ಕುರಿತು ಚರ್ಚಿಸಿದ್ದಾರೆ. ಬ್ರಿಟೀಷ್ ಆಡಳಿತ ವ್ಯವಸ್ಥೆಗಿಂತ ಮೊದಲು ಭಾರತದಲ್ಲಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ತಿಳಿಸುತ್ತಾರೆ. ಮುಖ್ಯವಾಗಿ

ಭಾರತದ ಸಮಾಜದ ರಚನೆಯ ಆರಂಭಿಕ ಸ್ವರೂಪ ಮಾತೃಪ್ರಧಾನವೇ? ಪಿತೃಪ್ರಧಾನವೇ? ಅದರ ಸ್ವರೂಪವೇನು? ಎಂಬ ಪ್ರಶ್ನೆಗಳಿಂದ ಚರ್ಚೆಯನ್ನು ಆರಂಭಿಸಿದ್ದಾರೆ. ನಂತರ ಬ್ರಿಟೀಷ್ ಆಳ್ವಿಕೆಯ ಸಂದರ್ಭದಲ್ಲಿ " ಭಾರತದ ಮಹಿಳಾ ಚಳುವಳಿಯ ಕೇಂದ್ರ ಮಹಿಳಾ ವಿಷಯಗಳು ಎನ್ನುವುದಾದರೆ ಬ್ರಿಟೀಷ್ ಆಡಳಿತವು ಮಹಿಳಾ ವಿಷಯವನ್ನು ಗ್ರಹಿಸಿದ ನೆಲೆಯಿಂದಲೇ ಚಳುವಳಿಯ ಪ್ರಸ್ತಾಪವನ್ನು ಆರಂಭಿಸಬೇಕಾಗುತ್ತದೆ"(ಪುಟ.೨೫) ಎನ್ನುತ್ತಾರೆ. ಸತಿಪದ್ಧತಿ, ಬಾಲ್ಯವಿವಾಹ, ವಿಧವಾ ಪುನರ್ ವಿವಾಹ ಮುಂತಾದ ಮಹಿಳಾ ವಿಷಯಗಳಿಗೆ ಸಂಬಂಧಿಸಿದಂತೆ ಆ ಸಂದರ್ಭದಲ್ಲಿ ಆದಂತಹ ಬೆಳವಣಿಗೆಗಳ ಕುರಿತಾಗಿ ಚರ್ಚಿಸಿದ್ದಾರೆ. ಅಂದರೆ ಬ್ರಿಟಿಷ್ ಆಡಳಿತ ಮಹಿಳಾ ವಿಷಯಗಳ ಸಂದರ್ಭದಲ್ಲಿ ಹೇಗೆ ದ್ವಿಮುಖ ನೀತಿಯನ್ನು ಅನುಸರಿಸಿತು ಎಂಬುದನ್ನು ರುಕ್ಮಾಬಾಯಿ ಪ್ರಕರಣವನ್ನು ಮುಂದಿಟ್ಟುಕೊಂಡು ಚರ್ಚಿಸಿದ್ದಾರೆ. ಸ್ವತಂತ್ರ ಭಾರತದ ಸಂದರ್ಭದಲ್ಲಿ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವೈಧವ್ಯ, ಹೆಣ್ಣು ಶಿಶು ಹತ್ಯೆ ಮತ್ತು ಭ್ರೂಣ ಹತ್ಯೆ, ವಿವಾಹ ಸಂಬಂಧಿ ಕಾಯಿದೆಗಳು, ವಿಚ್ಛೇದನಾ ಮತ್ತು ಜೀವನಾಂಶ, ಆಸ್ತಿ ಹಕ್ಕು, ಅತ್ಯಾಚಾರ, ಮಹಿಳಾ ಮೀಸಲಾತಿ ಮುಂತಾದಂತಹ ವಿಷಯಗಳಿಗೆ ಸಂಬಂದಿಸಿದಂತೆ ಕಾನೂನಾತ್ಮಕ ಬದಲಾವಣೆಗಳು ಮತ್ತು ಚಳುವಳಿಗಳ ಕುರಿತು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಮಹಿಳಾ ವಿಷಯಗಳಿಗೆ ಸಂಬಂಧಿಸಿದಂತೆ ಭಾರತದ ಸಂದರ್ಭದಲ್ಲಿ ಚಳುವಳಿಗಳು ನಡೆದುಬಂದ ದಾರಿಯನ್ನು ಅರಿಯಲು ಸಹಕಾರಿಯಾಗಿದೆ.

**"ಅಂಬೇಡ್ಕರ್ ವಾದ"** ಎಂಬ ಕೃತಿಯು ಅಂಬೇಡ್ಕರ್ ರವರ ಚಿಂತನೆಗಳ ಕುರಿತಾದ ಹಲವು ಲೇಖನಗಳ ಸಂಗ್ರಹ ಕೃತಿಯಾಗಿದೆ. ಡಾ. ವಿ. ಮುನಿವೆಂಕಟಪ್ಪನವರು ಈ ಕೃತಿಯ ಸಂಪಾದಕರಾಗಿದ್ದಾರೆ. ಸಂಕಲಿತ ಲೇಖನಗಳಲ್ಲಿ ಮುಖ್ಯವಾಗಿ ಹಾಲತಿ ಸೊಮಶೇಖರರವರ "ಸ್ತ್ರೀ ಸಮಾನತೆಯ ಶಾಸನಕಾರ ಡಾ. ಬಾಬಾ ಸಾಹೇಬ್ ಅಂಬೇಡ್ಕರ್" ಎಂಬ ಲೇಖನವು ಮಹಿಳೆಯರ ಹಕ್ಕುಗಳ ವಿಷಯದಲ್ಲಿ ಅಂಬೇಡ್ಕರ್‌ರ ಚಿಂತನೆಗಳು ಎಷ್ಟು ಪ್ರಬಲವಾಗಿದ್ದವು ಎಂಬುದನ್ನು ತಿಸಿಳಿಕೊಡುತ್ತಾರೆ. ಸಮಾಜದಲ್ಲಿ ಲಿಂಗತಾರತಮ್ಯವನ್ನು ಹೋಗಲಾಡಿಸಿ ಲಿಂಗ ಸಮಾನತೆಯನ್ನು ಸ್ಥಾಪಿಸುವ ಉದ್ದೇಶದಿಂದ ಹಲವಾರು ಕಾನೂನುಗಳು ಜಾರಿಯಾಗುವಲ್ಲಿ ಅಂಬೇಡ್ಕರ್‌ರವರ ಪಾತ್ರ ದೊಡ್ಡದು. ಇವರು ಒಬ್ಬ ಸ್ತ್ರೀವಾದಿ ಚಿಂತಕರಾಗಿದ್ದರು. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ೧೯೫೧ ಫೆಬ್ರವರಿ ೧೫ರಂದು "ಹಿಂದೂ ಕೋಡ್ ಬಿಲ್" ಅನ್ನು ಪಾರ್ಲಿಮೆಂಟಿನಲ್ಲಿ ಮಂಡಿಸಿದ್ದು. ನೆಹರುರವರ ಮಂತ್ರಿ ಮಂಡಲದಲ್ಲಿ ಕಾನೂನು ಮಂತ್ರಿಯಾಗಿದ್ದ ಅಂಬೇಡ್ಕರ್ ಈ ಮಸೂದೆಯನ್ನು ಮಂಡಿಸಿದರು. ಇದರಲ್ಲಿ ಏಕಪತ್ನಿತ್ವ ಮತ್ತು ಮಹಿಳೆಗೆ ವಿವಾಹ ವಿಚ್ಛೇದನ ಸ್ವಾತಂತ್ರ್ಯದ ವಿಷಯವು ಮುಖ್ಯವಾಗಿತ್ತು. ಇದನ್ನು ಸಂಪ್ರದಾಯಸ್ಥ ಮನುವಾದಿಗಳು ವಿರೋಧಿಸಿದರು. ಆದರೆ ಅಂಬೇಡ್ಕರ್ ಹಿಂದೂಕೋಡ್ ಬಿಲ್ಲನ್ನು ಪಟ್ಟು ಬಿಡದೆ, ಮಹಿಳೆಗೆ ಆಸ್ತಿ ಹಕ್ಕನ್ನು ಸಮರ್ಥಿಸುವ 'ಬೃಹಸ್ಪತಿ ಸ್ಮೃತಿ'ಯನ್ನು ಮತ್ತು ಮಹಿಳೆಯ ವಿವಾಹ ವಿಚ್ಛೇದನ ಸ್ವಾತಂತ್ರ್ಯವನ್ನು ಪ್ರತಿಪಾದಿಸುವ 'ಪರಾಶರ ಸ್ಮೃತಿ'ಯನ್ನು

ತೆರೆದಿಟ್ಟರು. ಆದರೆ ಹಿಂದೂಕೋಡ್ ಬಿಲ್‌ಗೆ ಲೋಕಸಭೆಯಲ್ಲಿ ಸೋಲುಂಟಾಯಿತು. ಇದರಿಂದ ಅಂಬೇಡ್ಕರರಿಗೆ ನೋವುಂಟಾಗಿ ತಮ್ಮ ಮಂತ್ರಿ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಿದರು. ಇದರಿಂದ ವಿಚಲಿತರಾಗದೇ ಸರಕಾರದಿಂದ ಹೊರಬಂದು ಮಹಿಳಾ ಪರವಾದ ತಮ್ಮ ಚಿಂತನೆಯನ್ನು ಕಾನೂನಾಗಿಸಲು ಶ್ರಮಿಸಿದರು. ಮುಂದೆ ೧೯೫೫ರ ಹಿಂದೂ ವಿವಾಹ ಕಾನೂನು, ೧೯೫೬ರ ಹಿಂದೂ ಅಪ್ರಾಪ್ತತೆ ಮತ್ತು ಪೋಷಕತ್ವ ಕಾನೂನು ಮತ್ತು ೧೯೫೬ರ ಹಿಂದೂ ದತ್ತಕ ಮತ್ತು ಜೀವನಾಂಶ ಕಾನೂನುಗಳನ್ನು ಪಾರ್ಲಿಮೆಂಟಿನಲ್ಲಿ ಅನುಮೋದಿಸಿಕೊಳ್ಳುವಲ್ಲಿ ಅಂಬೇಡ್ಕರರು ಯಶಸ್ವಿಯಾದರು. ಹೀಗೆ ಅಂಬೇಡ್ಕರರ ಚಿಂತನೆಗಳ ಕುರಿತಾದ ಹಲವು ಮಾಹಿತಿಗಳನ್ನು ಈ ಲೇಖನವು ಒದಗಿಸಿಕೊಡುತ್ತದೆ. ಒಟ್ಟಾರೆಯಾಗಿ ಈ ಕೃತಿಯಲ್ಲಿನ ಲೇಖನಗಳು ಅಂಬೇಡ್ಕರರ ಆಲೋಚನಾ ಕ್ರಮಗಳ ಪ್ರಖರತೆಯ ಕುರಿತದ್ದಾಗಿವೆ.

ಎಂ. ನಂಜಮ್ಮಣ್ಣಿಯವರ **"ಭಾರತೀಯ ಸಾಮಾಜಿಕ ಸಂಸ್ಥೆಗಳು"** ಎಂಬ ಕೃತಿಯು ಸಮಾಜಶಾಸ್ತ್ರೀಯ ನೆಲೆಯಲ್ಲಿ ರಚನೆಗೊಂಡಿದೆ. ಒಟ್ಟು ೧೩ ಅಧ್ಯಾಯಗಳನ್ನು ಒಳಗೊಂಡಿರುವ ಈ ಕೃತಿಯು ಕುಟುಂಬ, ಧರ್ಮ, ವಿವಾಹ ಸಂಸ್ಥೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಮುಖ್ಯವಾಗಿ "ಅವಿಭಕ್ತ ಕುಟುಂಬ" ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಹಿಂದೂ ಅವಿಭಕ್ತ ಕುಟುಂಬವನ್ನು ಪಿತೃಪ್ರಧಾನ ಕುಟುಂಬವೆಂದು ಹೇಳಬಹುದೇ ಎಂಬುದರ ಕುರಿತಾಗಿ ಚರ್ಚಿಸಿದ್ದಾರೆ. ಏಕೆಂದರೆ ಪ್ರಪಂಚದ ಇತರೆಡೆಗಳಲ್ಲಿ ನಡೆದ ಸಂಶೋಧನೆಗಳನ್ನಾದರಿಸಿ ಅಂದರೆ ಪ್ರಾಚ್ಯ ಸಂಶೋಧಕರು, ರೋಮನ್ನರು ಪಿತೃಪ್ರಧಾನ ಕುಟುಂಬದಲ್ಲಿ ಪಿತೃವಿಗೆ ಇದ್ದ ಸರ್ವಾಧಿಕಾರ, ವೇದಗಳ ಕಾಲದ ಆರ್ಯರ ಕುಟುಂಬದ ಯಜಮಾನನಿಗೆ ಇರಲಿಲ್ಲವೆಂದು ಅಭಿಪ್ರಾಯ ಪಟ್ಟಿರುವ ಉಲ್ಲೇಖವನ್ನು ಮಾಡುತ್ತಾರೆ. ಅಂದರೆ ಅಂದಿನ ಕಾಲದ ಕುಟುಂಬ ವ್ಯವಸ್ಥೆ ಯಾವುದಾಗಿತ್ತು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವಂತಿದೆ. "ಅವಿಭಕ್ತ ಕುಟುಂಬ ವ್ಯವಸ್ಥೆ ಗ್ರೀಸ್, ಇಂಗ್ಲೆಂಡ್, ರೋಮ್ ಮುಂತಾದ ಐರೋಪ್ಯ ದೇಶಗಳಲ್ಲಿಯೂ ಕಂಡುಬಂದು ಯುರೋಪಿನಲ್ಲಿ ಅವಿಭಕ್ತ ಕುಟುಂಬಗಳು ಸಣ್ಣ ಸಣ್ಣ ಗುಂಪುಗಳಾಗಿ ಮಾರ್ಪಟ್ಟು ಕೊನೆಗೆ ಅವುಗಳೇ ಸೇರಿ ದೇಶಗಳಾದವು. ಅವಿಭಕ್ತ ಕುಟುಂಬಕ್ಕೆ ಆಸ್ತಿ ಆಧಾರವಲ್ಲ. ಒಟ್ಟು ಆಸ್ತಿ ಇಲ್ಲದಿದ್ದರೂ ಅವಿಭಕ್ತ ಕುಟುಂಬ ಅಸ್ತಿತ್ವದಲ್ಲಿರಬಹುದು. ಅವಿಭಕ್ತ ಕುಟುಂಬಕ್ಕೆ ಆಸ್ತಿ ಇದ್ದ ಪಕ್ಷದಲ್ಲಿ ಕುಟುಂಬದ ಗಂಡು ಮಕ್ಕಳು, ಮೊಮ್ಮಕ್ಕಳೆಲ್ಲರಿಗೂ ಸಮಭಾಗದ ಪಾಲು ಪಡೆಯುವ ಹಕ್ಕಿರುತ್ತದೆ. ಅವಿಭಕ್ತ ಕುಟುಂಬ ಅನುಸರಿಸುವ ಕಾನೂನಿಗೆ ವಿಜ್ಞಾನೇಶ್ವರನು ಪ್ರತಿಪಾದಿಸಿರುವ "ಮಿತಾಕ್ಷರ"ವೇ ಆಧಾರವಾಗಿದೆ" (ಪುಟ.೧೨೨) ಎಂದು ಹೇಳುತ್ತಾರೆ. ಹಾಗೆಯೇ ಮುಂದುವರೆದು ಅವಿಭಕ್ತ ಕುಟುಂಬದಲ್ಲಿ ವಿಶೇಷ ಹಕ್ಕಿನಿಂದ ಕೂಡಿರುವ ಕೆಲವರಿಗೆ ಭಾಗಸ್ಥರು ಅಥವಾ ಪಾಲುಗಾರಿಕೆಗೆ ಹಕ್ಕುಳ್ಳವರು ಇರುತ್ತಾರೆ. ಇವರು ಹುಟ್ಟಿನಿಂದಲೇ ಕುಟುಂಬದ ಆಸ್ತಿಯಲ್ಲಿ ಪಾಲಿಗೆ ಹಕ್ಕುಳ್ಳವರಾಗುವರು. ಮತ್ತು ಭಾಗ ಕೇಳುವ ಸ್ವಾತಂತ್ರ್ಯ ಮತ್ತು ಹಕ್ಕುಳ್ಳವರು ಇಂತಹ ಭಾಗಸ್ಥರು ತಮ್ಮ ತಂದೆ, ಅಜ್ಜ, ಮತ್ತು ಮುತ್ತಜ್ಜನ ಆಸ್ತಿಯನ್ನು ವಂಶಪಾರಂಪರ್ಯವಾದ ಹಕ್ಕಿನಿಂದ ಪಡೆಯುತ್ತಾರೆ. ಹೀಗೆ

ಅವಿಭಕ್ತ ಕುಟುಂಬ ಪದ್ಧತಿಯಲ್ಲೇ ಆಸ್ತಿಯ ವಾರಸುದಾರಿಕೆಗೆ ಸಂಬಂಧಿಸಿದಂತೆ ಮಿತಾಕ್ಷರ ಕಾಯಿದೆಯನ್ನು ಅನುಸರಿಸಿರುವುದು ಕಂಡುಬರುತ್ತದೆ. ಆಧುನೀಕರಣದ ಈ ಸಂದರ್ಭದಲ್ಲಿ ಸ್ತ್ರೀಗೆ ಎಲ್ಲ ಕ್ಷೇತ್ರಗಳಲ್ಲೂ ಸಮಾನ ಹಕ್ಕು ದೊರೆಯಬೇಕೆಂಬ ವಾದಕ್ಕೆ ಮನ್ನಣೆ ದೊರೆಯಿತು. ಹಾಗಾಗಿ ಹಳೆಯ ಶಾಸನಗಳು ಬದಲಾದವು. ಮುಖ್ಯವಾಗಿ ಹಿಂದೂ ಉತ್ತರಾಧಿಕಾರ ಕಾಯಿದೆ ೧೯೫೬ ಮತ್ತು ಮೈಸೂರಿನ ಸ್ತ್ರೀಸ್ವತ್ತಿನ ಕಾಯಿದೆಗಳು ಪ್ರಮುಖವಾದ ಬದಲಾವಣೆಗಳನ್ನು ತಂದವು. ಮುಂದಿನ ಹಂತದಲ್ಲಿ ಈ ಕಾಯಿದೆಗಳ ಕುರಿತು ವಿಶ್ಲೇಷಿಸುತ್ತಾ ಮಹಿಳೆಯರಿಗೆ ಇರುವಂತಹ ಅವಕಾಶಗಳ ಬಗ್ಗೆ ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಮಹಿಳೆಯರ ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ.

ಡಾ.ಹಾಲತಿ ಸೋಮಶೇಖರರವರ **"ಸ್ತ್ರೀ ಪರ ಕಾನೂನುಗಳು ಮತ್ತು ಸಂಘಟನೆಗಳು"** ಕೃತಿಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಮಹಿಳಾ ಪರ ಕಾನೂನುಗಳಾದ ವರದಕ್ಷಿಣೆ ನಿಷೇಧ, ಹೆಣ್ಣು ಭ್ರೂಣ ಹತ್ಯೆಯ ವಿರುದ್ಧದ ಕಾನೂನು, ಅತ್ಯಾಚಾರ ವಿರೋಧಿ ಕಾನೂನು, ಲೈಂಗಿಕ ಕಿರುಕುಳ ವಿರುದ್ಧದ ಕಾನೂನು, ವಿವಾಹ ವಿಚ್ಛೇದನೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿವರಿಸಿದ್ದಾರೆ. ಹಾಗೆಯೇ ಭಾರತದ ಸಂವಿಧಾನದಲ್ಲಿ ಸ್ತ್ರೀಯರ ಕುರಿತಾದ ಕಾಯಿದೆಗಳಲ್ಲಿನ ಕಾಳಜಿಗಳನ್ನು ತಿಳಿಸಿದ್ದಾರೆ. ಹಿಂದೂ, ಪಾರ್ಸಿ, ಮುಸ್ಲಿಂ ಮತ್ತು ಕ್ರೈಸ್ತ ವಿವಾಹ ಕಾಯಿದೆಗಳು ಏನನ್ನು ಹೇಳುತ್ತವೆ ಎಂಬುದನ್ನು ಚರ್ಚಿಸಿದ್ದಾರೆ. ಎರಡನೆಯ ಭಾಗದಲ್ಲಿ ಕರ್ನಾಟಕದಲ್ಲಿ ಸ್ತ್ರೀಪರ ಕಾನೂನುಗಳ ಕುರಿತಾಗಿ ಹೋರಾಟ ನಡೆಸುತ್ತಿರುವ ಸಂಘಟನೆಗಳನ್ನು ಪರಿಚಯಿಸಿದ್ದಾರೆ. ಉದಾಹರಣೆಗೆ ಕರ್ನಾಟಕ ರಾಜ್ಯದಲ್ಲಿ ಸ್ತ್ರೀಶಕ್ತಿ, ಸಮತಾ ವೇದಿಕೆ, ಒಡನಾಡಿ,ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್, ಜೆ.ಎಸ್.ಎಸ್ ಜನ ಶಿಕ್ಷಣ ಸಂಸ್ಥೆ, ಕರುಣಾ ಟ್ರಸ್ಟ್ ಮುಂತಾದವುಗಳು. ಈ ಸಂಘಟನೆಗಳ ಹುಟ್ಟು ಇವುಗಳ ಧ್ಯೇಯ ಧೋರಣೆಗಳೇನು ಮತ್ತು ಇವುಗಳ ಕಾರ್ಯ ವೈಖರಿಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಇವುಗಳ ಜೊತೆಗೆ ಸರಕಾರದ ಅಧೀನದಲ್ಲಿರುವ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕರ್ನಾಟಕ ರಾಜ್ಯ ಮಹಿಳಾ ಆಯೊಗ, ಕರ್ನಾಟಕ ರಾಜ್ಯ ಮಹಿಳಾ ಕಾನೂನು ಸೇವೆಗಳ ಪ್ರಾಧಿಕಾರ ಮತ್ತು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವುಗಳ ಕಾರ್ಯ ವೈಖರಿಯ ಬಗ್ಗೆಯೂ ಸಹ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಸಾತಂತ್ರ್ಯದ ನಂತರದಲ್ಲಿ ಭಾರತದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ಹತ್ತಿಕ್ಕಲು ಯಾವ ಪ್ರಯತ್ನಗಳು ನಡೆದಿವೆ ಮತ್ತು ಸ್ತ್ರೀಪರವಾದ ಕಾನೂನುಗಳು ಏನು ಹೇಳುತ್ತವೆ ಎಂಬುದನ್ನು ಚರ್ಚಿಸಿದ್ದಾರೆ.

ಆಸ್ತಿ ಹಕ್ಕನ್ನು ಕುರಿತಂತೆ ಈವರೆಗೆ ಸಮೀಕ್ಷೆಗೊಳಪಟ್ಟ ಎಲ್ಲ ಬರಹ/ ಮಾಹಿತಿಯನ್ನು ವಿಶ್ಲೇಷಿಸಿದಾಗ ಕಂಡುಬಂದತಹ ಅಂಶಗಳನ್ನು ಕೆಲವು ಹಂತಗಳಲ್ಲಿ ವಿವರಿಸಿಕೊಳ್ಳಲು ಸಾಧ್ಯವಾಗಿದೆ. ಮುಖ್ಯವಾಗಿ ಆಸ್ತಿ ಹಕ್ಕಿನ ಕಾಯಿದೆಯ ಸ್ವರೂಪವನ್ನು ಪರಿಚಯಿಸುವುದು,

ಈಗಾಗಲೆ ನ್ಯಾಯಾಲಯದಲ್ಲಿ ಇತ್ಯರ್ಥವಾದ ಆಸ್ತಿ ಹಕ್ಕಿನ ಮಹಿಳೆಯರ ಪ್ರಕರಣಗಳ ಕುರಿತಂತೆ ನಡೆಸಿದ ಅಧ್ಯಯನಗಳು, ಸ್ಥಿರಾಸ್ತಿಯ ಕುರಿತು ನಡೆಸಿದ ಸಂಶೋಧನಾ ಅಧ್ಯಯನ ಮತ್ತು ಆಸ್ತಿ ಪರಿಕಲ್ಪನೆಯ ಪರಿಚಯಾತ್ಮಕ ನೆಲೆಗಳನ್ನು ಗುರುತಿಸುವ ಅಧ್ಯಯನಗಳು. ಮಹಿಳೆಯರ ಆಸ್ತಿಹಕ್ಕನ್ನು ಪರಿಚಯಿಸುವ ಕೃತಿಗಳು ಹೀಗೆ ಹಲವು ಹಂತಗಳಲ್ಲಿ ಮಹಿಳೆಯರ ಆಸ್ತಿ ಹಕ್ಕಿನ ಕುರಿತಂತೆ ಕೆಲವು ಬರಹಗಳನ್ನು ಕಾಣಬಹುದಾಗಿದೆ.

ಆಸ್ತಿ ಹಕ್ಕಿನ ಕಾಯಿದೆಯು ಈಗಾಗಲೆ ಹಲವು ಸಾರಿ ವಿಶ್ಲೇಷಣೆಗೊಂಡು ಕೆಲವು ತಿದ್ದುಪಡಿಗಳಿಗೊಳಗಾಗಿದೆ, ಆ ಮೂಲಕ ಮಹಿಳೆಯರಿಗೆ ಹಕ್ಕನ್ನು ಒದಗಿಸುವಲ್ಲಿ ಮತ್ತಷ್ಟು ಸೂಕ್ಷ್ಮತೆಯನ್ನು ಪಡೆದುಕೊಳ್ಳುವ ನೆಲೆಯಲ್ಲಿ ತಿದ್ದುಪಡಿಗಳಾಗಿವೆ. ಆದರೆ ಆ ತಿದ್ದುಪಡಿಯ ವಿವರಗಳು ವಿಸ್ತೃತವಾಗಿ ಇಲ್ಲಿಯವರೆಗಿನ ಅಧ್ಯಯನಗಳಲ್ಲಿ ಕಂಡುಬಂದಿರುವುದಿಲ್ಲ. ಆದಂತಹ ಮಾರ್ಪಾಡುಗಳು ಆ ಮೂಲಕ ದೊರೆಯುವ ಸೌಲಭ್ಯಗಳನ್ನು ಮಾತ್ರ ತಿಳಿಸುವ ರೀತಿಯಲ್ಲಿ ಲೇಖನಗಳಲ್ಲಿ ಕಾಣಬಹುದಾಗಿದೆ. ಆಸ್ತಿ ಹಕ್ಕು ಕಾಯಿದೆಯಾಗಿ ಜಾರಿಯಾಗಿರುವುದು ಒಂದು ನೆಲೆಯಾದರೆ ಅದರ ಅನುಷ್ಠಾನದ ಸಂಗತಿಗಳು ಮತ್ತೊಂದು ನೆಲೆ ಮತ್ತು ಈ ಕಾಯಿದೆ ಮಹಿಳೆಯರನ್ನು ಒಳಗೊಳ್ಳುವ ಬಗೆಯನ್ನು ಅನಾವರಣಗೊಳಿಸುತ್ತವೆ. ಹೀಗೆ ಕಾಯಿದೆಯಾಗಿ ಆಸ್ತಿಹಕ್ಕು ಸಾರ್ವತ್ರಿಕವಾದುದಾದರೆ ಅನುಷ್ಠಾನದ ಹಿನ್ನೆಲೆಯಲ್ಲಿ ಇದರ ನಿರ್ವಚನ ಭಿನ್ನವೇ ಆಗಿದೆ. ಅಂದರೆ ಪ್ರಾದೇಶಿಕವಾಗಿ, ಧರ್ಮ, ಜಾತಿ ಮತ್ತು ವರ್ಗದ ಹಿನ್ನೆಲೆಯಲ್ಲಿ ಹಲವು ಸೂಕ್ಷ್ಮ ಆಯಾಮಗಳಲ್ಲಿ ಲಿಂಗತಾರತಮ್ಯದ ನೆಲೆಗಳು ರೂಪಿತವಾಗಿರುತ್ತವೆ ಎಂಬ ಸೂಕ್ಷ್ಮಗಳನ್ನು ಗಮನದಲ್ಲಿರಿಸಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಕಾರಣಕ್ಕಾಗಿ ಇದುವರೆಗಿನ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಒಟ್ಟಾರೆಯಾಗಿ ಆಸ್ತಿಹಕ್ಕಿನ ಕಾನೂನಿನಲ್ಲಿರುವ ಲಿಂಗಸಂಬಂಧಿ ಸೂಕ್ಷ್ಮಗಳನ್ನು ಮುಖ್ಯವಾಗಿ ಗಮನಿಸಲಾಗುವುದು. ಕಾಯಿದೆಯ ಬಳಕೆಯಲ್ಲಿ / ಅನುಷ್ಠಾನದಲ್ಲಿ ಮಹಿಳೆಯರು ಎದುರಿಸುತ್ತಿರುವ ಅನಿವಾರ್ಯತೆಗಳನ್ನು ಗಮನಿಸಿ, ಕಾಯಿದೆ ಮತ್ತು ವ್ಯವಸ್ಥೆ ಹಾಗೂ ಮಹಿಳೆಯರ ಸಂವೇದನೆಯ ನಡುವಿನ ಸಂಘರ್ಷಗಳನ್ನು ಗುರುತಿಸುವ ಮತ್ತು ವಿಶ್ಲೇಷಿಸುವ ಸಾಧ್ಯತೆಯೆಡೆಗಿನ ಅಧ್ಯಯನ ಇದಾಗಿದೆ.

## ಅಧ್ಯಾಯ ಮೂರು

# ಆಸ್ತಿ ಪರಿಕಲ್ಪನೆಗಳು: ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಯವರೆಗೆ

೩.೧. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆ

೩.೨. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆ

## ಅಧ್ಯಾಯ ಮೂರು

# ಆಸ್ತಿ ಪರಿಕಲ್ಪನೆಗಳು: ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಯವರೆಗೆ

ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ, ಕುಟುಂಬ, ಧರ್ಮ ಮುಂತಾದ ಸಂಸ್ಥೆಗಳು ತಮ್ಮದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿವೆ. ಈ ಸಂಸ್ಥೆಗಳು ಹುಟ್ಟುಹಾಕುವಂತಹ ಮೌಲ್ಯಗಳು ಹಲವಾರು ನೆಲೆಗಳಲ್ಲಿ ಅಸಮಾನತೆಯಿಂದ ಕೂಡಿದವುಗಳಾಗಿವೆ. ಮುಖ್ಯವಾಗಿ ಲಿಂಗ ಅಸಮಾನತೆಗಳು ಹೆಚ್ಚೆಚ್ಚು ರೂಢಿಯಲ್ಲಿ ಬರುವುದರ ಜೊತೆಗೆ ಸ್ತ್ರೀ-ಪುರುಷರ ನಡುವೆ ಒಂದು ಅಗಾಧವಾದ ಕಂದಕವನ್ನು ರೂಪಿಸಿಬಿಟ್ಟಿವೆ. ಆ ಕಾರಣಕ್ಕಾಗಿ ಮಹಿಳೆಯರು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಜೀವಿಸುತ್ತಿದ್ದಾರೆ. ಇಂದಿನ ಸಂದರ್ಭದಲ್ಲಿ ಆಸ್ತಿಯ ಕುರಿತಂತೆ ಕಾನೂನು ಜಾರಿಯಲ್ಲಿದೆ. ಪ್ರಾಥಮಿಕವಾಗಿ ಆಸ್ತಿ ಎಂಬುದನ್ನು ಹೇಗೆ ಪರಿಭಾವಿಸಲಾಗಿದೆ. ಆಸ್ತಿ ಎಂದರೆ ಯಾವುದು ಎಂಬುದನ್ನು ವಿವರಿಸಿಕೊಳ್ಳುವುದು ಮುಖ್ಯವಾಗಿದೆ. ಪ್ರಾಚೀನ ಕಾಲದಿಂದಲೂ ಮಹಿಳೆಯನ್ನು ಭೂಮಿಗೆ ಹೋಲಿಸಿಕೊಂಡೇ ಬಂದಿರುವುದು ಕಂಡುಬರುತ್ತದೆ. ಹಾಗೆಯೇ ಭೂಮಿಯನ್ನು ಫಲವಂತಿಕೆಯ ಸಂಕೇತವಾಗಿ ಕಾಣುವುದರ ಜೊತೆಗೆ ಆಸ್ತಿಯ ಸಂಕೇತವಾಗಿಯೂ ಕಾಣಲಾಗಿದೆ. ಭೂಮಿಯು ಒಂದು ಆಸ್ತಿಯ ರೂಪವಾಗಿದೆ. ಆಸ್ತಿಯನ್ನು ಮುಖ್ಯವಾಗಿ ಎರಡು ವಿಧಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯದು ಸ್ಥಿರ ಆಸ್ತಿಯಾದರೆ, ಎರಡನೆಯದು ಚರ ಆಸ್ತಿಯಾಗಿದೆ. ಕೃಷಿ ಪ್ರಧಾನವಾದ ಭಾರತದಂತಹ ಭಾವನಿಷ್ಠ ರಾಷ್ಟ್ರದಲ್ಲಿ ಸ್ಥಿರ ಆಸ್ತಿಗೆ ಒಳಪಡುವ ಭೂಮಿಯು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಹಾಗಾಗಿ ಆಸ್ತಿ ಎಂದ ಕೂಡಲೇ ನಮ್ಮ ಗಮನ ಭೂಮಿಯ ಮೇಲೆಯೇ ಬೀಳುತ್ತದೆ. ಆದರೆ ಇನ್ನೊಂದು ಬಗೆಯ ಆಸ್ತಿ ಇರುವುದು ಕಂಡು ಬರುತ್ತದೆ ಅದು ಚರ ಆಸ್ತಿ. ಇದು ಅಶಾಶ್ವತವಾದದ್ದು, ಚಲಿಸುವಂತದ್ದು. ಈ ಪ್ರಕಾರದಲ್ಲಿ ವಾಹನಗಳು, ಪಾಲಿಸಿಗಳು, ಷೇರುಗಳು, ಬಾಂಡುಗಳು

ಮುಂತಾದವು ಕಂಡುಬರುತ್ತವೆ. ಆಸ್ತಿ ಕುರಿತಂತೆ ಹಲವಾರು ವಿದ್ವಾಂಸರು ತಮ್ಮದೇ ಆದಂತಹ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

"ಆಸ್ತಿ ಎಂದರೆ ಇದೆ ಎಂದರ್ಥ. ಅಸ್ತಿತ್ವದಲ್ಲಿರುವುದು ಯಾವುದೋ ಅದು ಆಸ್ತಿ"[೧]. ಗ್ರೀಫ್ಸ್ ಟ್ಯಾಕ್ಸ್‌ರವರ ಪ್ರಕಾರ "ಗೋಚರವಾದ ಅಥವಾ ಅಗೋಚರವಾದ ವಸ್ತುಗಳು, ಪೆನ್‌ಷನ್, ಕ್ಯಾಷ್‌ಗ್ರಾಂಟ್, ಪ್ರೀವಿಪರ್ಸ್, ಸಾಲಗಳು ಯಾವುದನ್ನು ಸಂಪಾದಿಸಬಹುದೋ ಮತ್ತು ಅನುಭವಿಸಬಹುದೋ ಅಥವಾ ಉಪಯೋಗಿಸಬಹುದೋ ಅವೆಲ್ಲವೂ ಆಸ್ತಿ ಎನಿಸಿಕೊಂಡಿವೆ"[೨].

ಹೆಗಲ್‌ರವರ ಪ್ರಕಾರ " ಆಸ್ತಿ ಎಂದರೆ ಒಬ್ಬ ವ್ಯಕ್ತಿಯ ಸ್ವೇಚ್ಛಾತನಕ್ಕೆ ಸೇರಿದ ಒಂದು ಕೋರಿಕೆಯ ಭಾವನೆ".

ಸ್ಪೆನ್ಸರ್‌ರವರ ಪ್ರಕಾರ "ಆಸ್ತಿಯು ವ್ಯಕ್ತಿಯ ಕಷ್ಟತನದ ದುಡಿತದ ಫಲಾವಾಗಿದೆ"[೩].

ಇಂಡಿಯನ್ ರಿಜಿಸ್ಟ್ರೇಷನ್ ಶಾಸನ ವಿಧಿ ನಿಯಮದ ಪ್ರಕಾರ "ಕಟ್ಟಡಗಳು, ಭೂಮಿ, ದಾರಿ ಹಕ್ಕುಗಳು, ದೀಪಗಳು, ಭೂಮಿಗೆ ಅಂಟಿಕೊಂಡಿರುವ ವಸ್ತುಗಳು, ಭೂಮಿಯ ಸಹಾಯದಿಂದ ಉಪಯೋಗಿಸುವ ಎಲ್ಲಾ ವಸ್ತುಗಳು ಆಸ್ತಿಗಳಾಗಿವೆ"[೪]. ಹೀಗೆ ಆಸ್ತಿಯ ಕುರಿತಂತೆ ಹಲವಾರು ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಮುಖ್ಯವಾಗಿ ವ್ಯವಸ್ಥೆಯಲ್ಲಿ ಸ್ಥಿರ ಮತ್ತು ಚರ ಆಸ್ತಿಗಳೆರಡರ ಮೇಲೂ ಪುರುಷನು ತನ್ನ ಅಧಿಪತ್ಯವನ್ನು ಸಾಧಿಸಿದ್ದಾನೆ. ಆದರೂ ಸಹ ಇಂದಿನ ಮಹಿಳೆಯರು ಶಿಕ್ಷಣಕ್ಕೆ ತೆರೆದುಕೊಂಡಿದ್ದಾರಾದ್ದರಿಂದ ಆಸ್ತಿಯ ಮೇಲಿನ ಹಕ್ಕಿನ ಕುರಿತಂತೆ ಮಹಿಳೆಯರು ತಮ್ಮ ಅಧಿಕಾರವನ್ನು ಚಲಾಯಿಸುವ ಮಟ್ಟಕ್ಕೆ ಬಂದು ತಲುಪಿದ್ದಾರೆ. ಇದಕ್ಕೆ ಕಾರಣ ನಮ್ಮ ಕಾನೂನು ವ್ಯವಸ್ಥೆ. ಮಹಿಳಾ ಪರವಾದ ಕಾನೂನುಗಳು ಜಾರಿಗೆ ಬರುವಲ್ಲಿ ಹಲವು ಬಗೆಯ ಹೋರಾಟಗಳು ನಡೆದಿವೆ. ಈ ಹಿಂದೆ ಅಂದರೆ ೧೯ನೆಯ ಶತಮಾನದ ಅವಧಿಯಲ್ಲಿ ಅಂದರೆ ಸಮಾಜ ಸುಧಾರಣಾ ಚಳುವಳಿಗಳ ಮುಖ್ಯ ವಿಷಯಗಳಾಗಿದ್ದಂತಹ ಸತೀ ಪದ್ಧತಿ ನಿಷೇಧ, ಬಾಲ್ಯ ವಿವಾಹ ಪದ್ಧತಿ ನಿಷೇಧ, ವಿಧವಾ ಪುನರ್ ವಿವಾಹ ಮುಂತಾದ ವಿಷಯಗಳು ಆ ಸಂದರ್ಭದ ಮಹಿಳೆಯರಲ್ಲಿ ಆತ್ಮಸ್ಥೈರ್ಯವನ್ನು ಹೆಚ್ಚಿಸಿತ್ತು. ಅಂದಿನ ಸಮಾಜ ಸುಧಾರಣಾ ಕ್ರಾಂತಿಯು ಮುಂದೆ ಮಹಿಳೆಯರ ಜೀವನದಲ್ಲಿ ಒಂದು ಆಶಾಕಿರಣವಾಗಿ ಬೆಳೆಯಿತು. ಏಕೆಂದರೆ ಅಂದಿನ ಸಂದರ್ಭದಲ್ಲಿನ ಸಮಾಜ ಸುಧಾರಕರಾದ ರಾಜಾರಾಮ್ ಮೋಹನ್‌ರಾಯ್, ಜ್ಯೋತಿರಾವ್ ಫುಲೆ, ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ ಮುಂತಾದ ಮಹನೀಯರ ಹೋರಾಟದ ಫಲವಾಗಿ ಸಮಾಜದಲ್ಲಿದ್ದ ಹಲವು ಮಹಿಳಾ ವಿರೋಧಿ ಸಂಪ್ರದಾಯ ಮತ್ತು ಪದ್ಧತಿಗಳನ್ನು ಹೊಡೆದೋಡಿಸಲು ಹಲವು ಕಾನೂನುಗಳು ಜಾರಿಗೆ ಬಂದವು. ಜ್ಯೋತಿರಾವ್ ಫುಲೆಯವರು ಮಹಿಳೆಯರಿಗಾಗಿಯೇ ಪ್ರತ್ಯೇಕ ಶಿಕ್ಷಣವನ್ನು ನೀಡುವುದರ ಮೂಲಕ ಒಂದು ಹೊಸ ಅಧ್ಯಾಯವನ್ನು ಆರಂಭಿಸಿದರು. ತದನಂತರದಲ್ಲಿ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ

ದೊರೆಯಿತು. ವೇದಗಳ ಕಾಲದಲ್ಲಿ ಅಂದರೆ ಋಗ್ವೇದದ ಕಾಲದಲ್ಲಿ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಲಾಗಿತ್ತು ಎಂದು ಹೇಳಲು ಗಾರ್ಗೇಯಿ, ಮೈತ್ರೇಯಿ ಮುಂತಾದವರ ಹೆಸರುಗಳನ್ನು ಉದಾಹರಿಸಲಾಗುತ್ತದೆ. ಆದರೆ ಆ ಸಂದರ್ಭದಲ್ಲಿಯೇ ಇದ್ದಂತಹ ಎಲ್ಲ ಮಹಿಳೆಯರಿಗೆ ಈ ಬಗೆಯ ಶಿಕ್ಷಣವನ್ನು ನೀಡಲಾಗಿತ್ತೇ ಎಂಬುದರ ಕುರಿತು ಕೆಲವು ಜಿಜ್ಞಾಸೆಗಳು ಇವೆ. ಏಕೆಂದರೆ ಆ ಸಂದರ್ಭಕ್ಕಾಗಲೇ ಪಿತೃಪ್ರಧಾನ ವ್ಯವಸ್ಥೆ ಭದ್ರವಾಗಿ ತಳವೂರಿತ್ತು. ಹಾಗಾಗಿ ಕೆಲವು ಉನ್ನತ ವರ್ಗದ ಮಹಿಳೆಯರಾದ ಗಾರ್ಗೇಯಿ, ಮೈತ್ರೇಯಿ, ಲೋಪಮುದ್ರಾ ಮುಂತಾದ ಮಹಿಳೆಯರನ್ನು ಹೊರತುಪಡಿಸಿ ಬೇರಾವ ಮಹಿಳೆಯರಿಗೆ ಶಿಕ್ಷಣಕ್ಕೆ ತೆರೆದುಕೊಳ್ಳಲು ಅವಕಾಶವಿದ್ದಿಲ್ಲ ಎಂಬುದು ತಿಳಿಯುತ್ತದೆ. ಆದರೆ ಸಮಾಜ ಸುಧಾರಣಾ ಕಾಲಘಟ್ಟದಲ್ಲಿ ಜ್ಯೋತಿರಾವ್ ಪುಲೆ ಮತ್ತು ಸಾವಿತ್ರಿಭಾಯಿ ಪುಲೆಯವರು ಹಾಗೆಯೇ ಡಾ. ದೋಂಡೋ ಕೇಶೋಪಂತ ಕರ್ವೆಯವರು ಮಾಡಿದ ಸಾಧನೆ ಮಹತ್ತರವಾದುದು. ಸ್ತ್ರೀ ಶಿಕ್ಷಣದ ಮೂಲಕ ವೈಚಾರಿಕ ಜಾಗೃತಿಯನ್ನು ಮೂಡಿಸಿದ ಕೀರ್ತಿ ಪುಲೆಯವರಿಗೆ ಸಲ್ಲುತ್ತದೆ. ಅಂದಿನ ಪ್ರಯತ್ನದ ಫಲವಾಗಿ ಇಂದು ಮಹಿಳೆಯರು ಶಿಕ್ಷಣದ ಹಕ್ಕನ್ನು ಪಡೆದಿದ್ದಾರೆ ಎಂದರೆ ತಪ್ಪಾಗಲಾರದು. ಹಾಗೆಯೇ ಮಹಿಳೆಯರು ಶಿಕ್ಷಣವನ್ನು ಪಡೆಯುವುದರ ಮೂಲಕ ತಮ್ಮ ಅಸ್ತಿತ್ವವನ್ನು ಮರು ರೂಪಿಸಿಕೊಳ್ಳುತ್ತಿದ್ದಾರೆ. ಮುಖ್ಯವಾಗಿ ಮಹಿಳಾ ಸಬಲೀಕರಣ ಎಂಬುದು ಅವರ ಹಕ್ಕಿನ ಪರಿಭಾಷೆಯಾಗಿ ರೂಪುಗೊಂಡಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಮಹಿಳೆಯರ ಮೇಲೆ ಹಿಡಿತವನ್ನು ಸಾಧಿಸಿದಂತಹ ಪುರುಷ ಅವರ ಅಸ್ತಿತ್ವವನ್ನು ಇಲ್ಲವಾಗಿಸಿಬಿಟ್ಟಿದ್ದಾನೆ. ಈ ಹಿನ್ನೆಲೆಯಲ್ಲಿ ಅವರ ಅಸ್ತಿತ್ವವನ್ನು ಪುನರ್ ರೂಪಿಸಿಕೊಳ್ಳಲು ಅಥವಾ ಅವರ ಅಸ್ಮಿತೆಯನ್ನು ಕಾಪಾಡಿಕೊಳ್ಳಲು ಅವರು ಆರ್ಥಿಕವಾಗಿ ಸದೃಢರಾಗಬೇಕಾದುದು ಅನಿವಾರ್ಯವಾಗಿತ್ತು. ಆ ಕಾರಣಕ್ಕಾಗಿ ಕಾನೂನಾತ್ಮಕ ನಿಯಮಗಳೂ ಅವರಿಗೆ ಸಹಕಾರಿಯಾದವು. ಮುಖ್ಯವಾಗಿ ಮಹಿಳೆಯರ ಆರ್ಥಿಕ, ಸಾಮಾಜಿಕ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಹಲವಾರು ಕಾನೂನುಗಳು ರೂಪಿತವಾದವು. ಬಾಲ್ಯವಿವಾಹ ನಿಷೇಧ, ಸತಿಪದ್ಧತಿಯ ನಿಷೇಧ, ವರದಕ್ಷಿಣೆ ನಿಷೇಧ, ಬಾಲ ಕಾರ್ಮಿಕ ನಿಷೇಧ ಕಾಯಿದೆ, ಅತ್ಯಾಚಾರ ನಿಷೇಧ ಕಾಯಿದೆ ಹೀಗೆ ಹಲವಾರು ಕಾನೂನುಗಳು ಜಾರಿಯಾದವು. ಈ ಕಾನೂನುಗಳ ಜೊತೆಗೆ ಮಹಿಳೆಯರ ಆರ್ಥಿಕ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಹಾಗೂ ವ್ಯವಸ್ಥೆಯಲ್ಲಿನ ಲಿಂಗ ಅಸಮಾನತೆಯನ್ನು ಹೋಗಲಾಡಿಸುವ ಸಲುವಾಗಿ ಆಸ್ತಿಹಕ್ಕಿನ ಕಾನೂನನ್ನು ಜಾರಿಗೆ ತರಲಾಯಿತು. ಈ ಕಾಯಿದೆ ಹಲವಾರು ತಿದ್ದುಪಡಿಗಳ ಮೂಲಕ 'ಹಿಂದೂ ಉತ್ತರಾಧಿಕಾರ ಅಧಿನಿಯಮ-೨೦೦೫'ರಂತೆ ಜಾರಿಯಾಗಿದೆ. ಇದರ ಪ್ರಕಾರ ಮಗು ಹುಟ್ಟಿನಿಂದಲೇ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಬಹುದಾಗಿದೆ. ಆ ಮಗು ಹೆಣ್ಣಾಗಿರಬಹುದು ಅಥವಾ ಗಂಡಾಗಿರಬಹುದು. ಈ ಹಿನ್ನಲೆಯಲ್ಲಿ ಕಾಯಿದೆ ಜಾರಿಗೆ ಬಂದು ಹಲವು ವರ್ಷಗಳು ಗತಿಸಿವೆ. ಇದರ ಅರಿವನ್ನು ಪಡೆಯುವುದರ ಜೊತೆ ಜೊತೆಗೆ ಈ ಕಾಯಿದೆಯ ಲಾಭವನ್ನು ಹಲವಾರು ಮಹಿಳೆಯರು ಪಡೆದಿರುವುದು ಕಂಡುಬರುತ್ತದೆ.

ಮುಖ್ಯವಾಗಿ ಮನುಷ್ಯರ ಎಲ್ಲಾ ಆಗುಹೋಗುಗಳಿಗೆ ಕುಟುಂಬವೇ ಮೂಲ ಕಾರಣವಾಗಿದೆ. ಈ ಕುಟುಂಬ ವ್ಯವಸ್ಥೆಯು ಎಲ್ಲಾ ಸಂದರ್ಭದಲ್ಲಿಯೂ ಕೂಡ ಒಂದೇ ತೆರನಾಗಿರುವುದಿಲ್ಲ. ಮನುಷ್ಯರ ಅಲೆಮಾರಿ ಜೀವನದಿಂದ ಹಿಡಿದು ಇಲ್ಲಿಯವರೆಗೆ ಹಲವಾರು ಬಗೆಯ ಸ್ಥಿತ್ಯಂತರಗಳು ಸಂಭವಿಸಿವೆ; ಸಂಭವಿಸುತ್ತಲೇ ಇವೆ. ಮುಖ್ಯವಾಗಿ ಒಂದು ಕಾಲಘಟ್ಟದಲ್ಲಿ ಮಹಿಳೆ ಕುಟುಂಬದ ಎಲ್ಲಾ ಅಧಿಕಾರಗಳನ್ನು ಹೊಂದಿದ್ದಳು. ಕಾಲಾನಂತರದಲ್ಲಿ ಈ ಅಧಿಕಾರಗಳು ಪುರುಷನ ಕೈ ಸೇರಲ್ಪಟ್ಟವು. ಹಾಗಾಗಿ ಕುಟುಂಬಕ್ಕೆ ಸಂಬಂಧಿಸಿದಂತೆ ಅಂದರೆ ಕುಟುಂಬದ ಸದಸ್ಯರು ಯಾವ ಬಗೆಯ ಸಂಪನ್ಮೂಲಗಳನ್ನು ತಮ್ಮ ಸ್ವಂತದ್ದು ಎಂದು ಭಾವಿಸಿದ್ದರೋ ಆ ಸಂಪನ್ಮೂಲಗಳು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಹಾಗೆಯೇ ವರ್ಗಾಯಿಸಲ್ಪಟ್ಟವು. ಉತ್ಪಾದನಾ ಚಟುವಟಿಕೆಗಳಿಗೆ ಸಂಬಂಧಿಸಿದ ಎಲ್ಲಾ ಅಂಶಗಳೂ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದವು. ಕುಟುಂಬದಲ್ಲಿಯ ಎಲ್ಲಾ ಸಂಪನ್ಮೂಲಗಳು ಆಸ್ತಿಯ ರೂಪವನ್ನು ಪಡೆದು ಮನುಷ್ಯನಲ್ಲಿ ಖಾಸಗೀತನವನ್ನು ಸೃಷ್ಟಿಸಿದವು. ಇದು ಮುಂದೆ ಹಲವು ಬಗೆಯ ಅಸಮಾನತೆಗಳಿಗೆ ಎಡೆಮಾಡಿಕೊಟ್ಟಿತು. ಈ ಹಿನ್ನಲೆಯಲ್ಲಿ ಇಂದು ನಾವು ಗುರುತಿಸಿಕೊಂಡಿರುವ ಸ್ಥಿರ ಮತ್ತು ಚರ ಆಸ್ತಿಗಳು ಯಾವ ಯಾವ ಕಾಲಘಟ್ಟದಲ್ಲಿ ಯಾರ ವಶದಲ್ಲಿದ್ದವು ಮತ್ತು ಅವುಗಳು ಹೇಗೆ ವರ್ಗಾಯಿಸಲ್ಪಡುತ್ತಿದ್ದವು ಎಂಬುದನ್ನು ತಿಳಿಯುವುದು ಮುಖ್ಯವಾಗಿದೆ. ವ್ಯವಸ್ಥೆಯಲ್ಲಿ ಕುಟುಂಬವೇ ಪ್ರಾಥಮಿಕ ಸಂಸ್ಥೆಯಾಗಿದ್ದು, ಈ ನೆಲೆಯಲ್ಲಿಯೇ ಆಸ್ತಿಯ ನೆಲೆಗಳನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಆಸ್ತಿ ಎಂಬುದು ಮಾನವನ ಪ್ರಾರಂಭದ ಘಟ್ಟದಿಂದ ಹಿಡಿದು ಇಲ್ಲಿಯವರೆಗೆ ಹೇಗೆ ಬದಲಾಗುತ್ತಾ ಬಂದಿದೆ ಎಂಬುದನ್ನು ತಿಳಿಯಲು ಮುಖ್ಯವಾಗಿ ಎರಡು ವಿಧಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ೧. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆಗಳು ೨. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆಗಳು. ಈ ಎರಡು ಬಗೆಯ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿಯ ಮೇಲೆ ಒಡೆತನ,ಅಧಿಕಾರ, ಹಕ್ಕುಗಳು ಯಾವ ಬಗೆಯದ್ದಾಗಿದ್ದವು ಎಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೩.೧. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆ**

ಮಾನವ ಸಮಾಜದ ಹುಟ್ಟು ಮತ್ತು ವಿಕಾಸದೊಂದಿಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟು ಮತ್ತು ಬೆಳವಣಿಗೆ ಏರ್ಪಟ್ಟಿದೆ. ಆ ಕಾರಣಕ್ಕಾಗಿ ಇದನ್ನು ಜಗತ್ತಿನ ಮೊಟ್ಟ ಮೊದಲ ಕುಟುಂಬ ವ್ಯವಸ್ಥೆ ಎಂದು ಗುರುತಿಸಲಾಗುತ್ತಿದೆ. ಆದರೆ ಕೆಲವು ವಿದ್ವಾಂಸರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಏಕೆಂದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು ಎಂಬುದೇ ಒಂದು ಮಿತ್ ಎಂದು ಹೇಳುತ್ತಾರೆ. ಆದರೂ ಈ ಕುಟುಂಬ ವ್ಯವಸ್ಥೆಯ ಮತ್ತು ಸ್ತ್ರೀ–ಪುರುಷರ ಸ್ಥಾನಮಾನಗಳ ಕುರಿತಂತೆ ಹಲವಾರು ಚರ್ಚೆಗಳು ನಡೆದಿವೆ. ಮಾತೃಪ್ರಧಾನ ಕುಟುಂಬಗಳೆಂದರೆ "ಸಮಾಜದಲ್ಲಿ ಪ್ರಜನನ ಶಕ್ತಿ ಇದ್ದ ಎಲ್ಲಾ ಸ್ತ್ರೀಯರಿಂದ ತಾಯಿ ಮಕ್ಕಳನ್ನು

ಒಳಗೊಂಡ ಬೇರೆ ಬೇರೆ ಕುಟುಂಬಗಳು ಪ್ರಾರಂಭದಲ್ಲಿ ಅಸ್ಪಷ್ಟರೂಪದಲ್ಲಿ ಆದವು. ಇವೇ ಮಾತೃಪ್ರಧಾನ ಕುಟುಂಬಗಳು"[೫]. ಎಂದು ಗುರುತಿಸಲಾಗಿದೆ. ಹಾಗೆಯೇ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು ಎಂಬುದಕ್ಕೆ "ಫೆಡ್ರಿಕ್ ಎಂಗಲ್ಸ್‌ನು ತನ್ನ ಆರಿಜನ್ ಆಫ್ ಫ್ಯಾಮಿಲಿ, ಪ್ರೈವೇಟ್ ಪ್ರಾಪರ್ಟಿ ಅಂಡ್ ಸ್ಟೇಟ್ ಎಂಬ ಪುಸ್ತಕದಲ್ಲಿ ಆಧುನಿಕ ಸಮಾಜದ ಪೂರ್ವದಲ್ಲಿ ಮತ್ತು ಖಾಸಗೀ ಆಸ್ತಿಯ ಪರಿಕಲ್ಪನೆ ಹುಟ್ಟಿಕೊಳ್ಳುವ ಮೊದಲು ಮಾತೃಪ್ರಧಾನ ವ್ಯವಸ್ಥೆ ಇತ್ತು ಎಂದು ಹೇಳುತ್ತಾನೆ"[೬]. ಹೀಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಹುಟ್ಟಿನ ಕಾರಣಕ್ಕೂ ಮೊದಲು ಮಹಿಳೆ ಕೃಷಿಯನ್ನು ಕಂಡುಹಿಡಿದಿದ್ದಳು. ಆ ನಂತರದಲ್ಲಿ ಕುಟುಂಬ ವ್ಯವಸ್ಥೆ ರೂಪುಗೊಂಡಿತು. ನಂತರದಲ್ಲಿ ಇವರು ಕುಟುಂಬದಲ್ಲಿ ಅಧಿಕಾರವನ್ನು ಸ್ಥಾಪಿಸಿದುದು ಒಂದು ಸಾಧನೆಯೇ ಸರಿ. ಹಾಗಾಗಿ ಮಹಿಳೆಯರು ಕೃಷಿಯನ್ನು ಕಂಡುಹಿಡಿದರು ಎಂಬುದಕ್ಕೆ ಹಲವಾರು ಉಲ್ಲೇಖಗಳು ದೊರೆಯುತ್ತವೆ. "ಮಹಿಳೆಯರು ಗರ್ಭಧರಿಸಿ ಮಕ್ಕಳನ್ನು ಹೆತ್ತು, ಲಾಲನೆ–ಪಾಲನೆ ಮಾಡಿ, ಸಂರಕ್ಷಿಸುವುದರಿಂದ ಬೆಳೆಸುವುದರಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವುದರಿಂದ ಕುಟುಂಬದೊಳಗಿನ ಆಗುಹೋಗುಗಳಲ್ಲಿ ಮಹಿಳೆಯರದ್ದೇ ಮೇಲುಗೈಯಾಯಿತು. ಇದು ಮಾತೃಪ್ರಧಾನ ವ್ಯವಸ್ಥೆಯ ಹುಟ್ಟಿನ ಮೂಲವಾಗಿದೆ. ಹೀಗೆ ಮಹಿಳೆ ತನ್ನ ಪ್ರಜನನ ಸಾಮರ್ಥ್ಯ ಮತ್ತು ಕಾರ್ಯದ ಮೂಲಕ ಮಕ್ಕಳಿಗೆ ಉತ್ತರದಾಯಿಯಾದಳು. ಈ ಜವಾಬ್ದಾರಿಯನ್ನು ತಾಯಿಯಾಗಿ ಮಹಿಳೆ ಯಶಸ್ವಿಯಾಗಿ ನಿರ್ವಹಿಸ ತೊಡಗಿದ್ದರಿಂದ ಸಹಜವಾಗಿ ಆಕೆಯ ಮಕ್ಕಳ ಮೇಲೆ ತನ್ನ ಸುತ್ತಮುತ್ತಲಿನ ನೈಸರ್ಗಿಕ ಸಂಪತ್ತಿನ ಮೇಲೆ ನಿಯಂತ್ರಣ ಪ್ರಾಪ್ತವಾಯಿತು. ಹೀಗೆ ಮಹಿಳೆಯರು ಜಗತ್ತಿನ ಮೊಟ್ಟಮೊದಲ ಪೀಳಿಗೆಯ ರೈತರಾದರು"[೭]. ಈ ಒಂದು ಅಂಶದ ಪ್ರಕಾರ ಕೃಷಿಯನ್ನು ಮಹಿಳೆಯೇ ಕಂಡುಹಿಡಿದಳು ಎಂಬುದು ತಿಳಿದುಬರುತ್ತದೆ. ಮಾನವ ಅಲೆಮಾರಿ ಜೀವನದಿಂದ ಮುಕ್ತಿ ಹೊಂದಿ ಒಂದು ಕಡೆ ನೆಲೆಸುವಂತಾದಾಗ ಸ್ತ್ರೀಯರು ತಮ್ಮ ಸುತ್ತಮುತ್ತಲಿನ ಪ್ರದೇಶದಲ್ಲಿ ಇದ್ದ ಹಣ್ಣುಹಂಪಲುಗಳನ್ನು ಹುಡುಕಿ ತೆಗೆದು ತಿಂದ ನಂತರ ಉಳಿದ ಬೀಜಗಳನ್ನು ಅಲ್ಲಿಯೇ ಬೀಸಾಕುತ್ತಿದ್ದರು. ಈ ಬೀಜಗಳು ಮೊಳಕೆಯೊಡೆದು ಗಿಡವಾಗಿ ಬೆಳೆಯಲು ಪ್ರಾರಂಭಿಸಿದವು. ಇದನ್ನು ಮಹಿಳೆ ಸೂಕ್ಷ್ಮವಾಗಿ ಗಮನಿಸುತ್ತಾ ಬಂದಳು. ಈ ಪ್ರಕ್ರಿಯೆ ಅವಳಲ್ಲಿ ಕುತೂಹಲವನ್ನು ಹುಟ್ಟಿಸಿತು. ಈ ಕುತೂಹಲವೇ ಮುಂದೆ ಕೃಷಿಯ ಆವಿಷ್ಕಾರಕ್ಕೆ ನಾಂದಿಯಾಯಿತು. ಈ ಕಾರ್ಯ ಸ್ತ್ರೀಯರಿಂದ ಆವಿಷ್ಕಾರಗೊಂಡ ನಂತರ ಇದರ ಪೂರ್ತಿ ಜವಾಬ್ದಾರಿ ಸ್ತ್ರೀಯರದ್ದೇ ಆಯಿತು. ಮಹಿಳೆ ಕೃಷಿಯನ್ನು ಆವಿಷ್ಕರಿಸಿದಳು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಹಲವು ಜನಾಂಗಗಳಲ್ಲಿ ಬಗೆಬಗೆಯ ಕಥಾನಕಗಳು ಹುಟ್ಟಿಕೊಂಡಿವೆ. ಅಮೆರಿಕಾದಲ್ಲಿನ ಒಂದು ಆದಿವಾಸಿ ಜನರಲ್ಲಿ ಪ್ರಚಲಿತವಿರುವ ದಂತಕತೆಯ ಪ್ರಕಾರ ಸ್ತ್ರೀಯರು ಅರಣ್ಯದಲ್ಲಿ ಮೊದಲು ಸಸ್ಯವನ್ನು ಹುಡುಕಿದರು. ಸಾಯುವಾಗ ಆ ಸ್ತ್ರೀ ತಾನು ಸತ್ತ ಮೇಲೆ ತನ್ನ ಶರೀರವನ್ನು ನೆಲದ ಮೇಲೆಲ್ಲಾ ಎಳೆದಾಡಬೇಕೆಂದು ತಿಳಿಸಿದ್ದಳು. ಅದೇರೀತಿ ಆಕೆಯ ಸಂಬಂಧಿಕರು ಮಾಡಿದಾಗ, ಆಕೆಯ ದೇಹ ಸ್ಪರ್ಶಿಸಿದ ಜಾಗದಲ್ಲೆಲ್ಲಾ ಬೆಳೆ ಸಮೃದ್ಧಿಯಾಯಿತು. ಈ ಬಗೆಯ ದಂತಕತೆಗಳು ಜಗತ್ತಿನ

ಬೇರೆ ಬೇರೆ ಆದಿವಾಸಿ ಸಮುದಾಯಗಳಲ್ಲಿಯೂ ಪ್ರಚಲಿತವಾಗಿವೆ. ಹೀಗೆ ಮಹಿಳೆ ಕೃಷಿಯನ್ನು ಆವಿಷ್ಕರಿಸಿದಳು ಎಂಬುದಕ್ಕೆ ಹಲವು ಕಥಾನಕಗಳು ಪೂರಕವಾಗಿ ನಿಲ್ಲುತ್ತವೆ. ಜೊತೆಗೆ ಇಡೀ ಕುಟುಂಬದ ಎಲ್ಲಾ ಆಗುಹೋಗುಗಳಿಗೆ ಇವಳೇ ಕಾರಣಕರ್ತಳಾದಳು.

ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ತಾಯಿಯೇ ಕುಟುಂಬದ ಎಲ್ಲಾ ಅಧಿಕಾರವನ್ನು ಹೊಂದಿದ್ದಳು. ತಾಯಿಯ ಆಜ್ಞೆಯೇ ಅಂತಿಮವಾಗಿತ್ತು. ಈ ವ್ಯವಸ್ಥೆಯಲ್ಲಿ ವಿವಾಹದ ನಂತರ ಮಹಿಳೆ ತನ್ನ ಮನೆಯಲ್ಲಿಯೇ ಉಳಿಯುತ್ತಿದ್ದಳು. ಗಂಡನಾದವನು ತನ್ನ ಮನೆಯಲ್ಲಿ ವಾಸಮಾಡದೇ ಹೆಂಡತಿಯ ಮನೆಗೆ ಬಂದು ವಾಸ ಮಾಡುತ್ತಿದ್ದ. ಈ ಸಂದರ್ಭದಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಪುರುಷನಿಗೆ ಯಾವುದೇ ಅಧಿಕಾರ ಇರುತ್ತಿದ್ದಿಲ್ಲ. ಅವನು ಮಹಿಳೆಯ ಅಡಿಯಾಳಾಗಿಯೇ ಜೀವಿಸಬೇಕಿತ್ತು. ಮುಖ್ಯವಾಗಿ ತಾಯಿಯ ಮೂಲಕವೇ ಮಕ್ಕಳನ್ನು ಗುರುತಿಸಲಾಗುತ್ತಿತ್ತು. ಹಾಗಾಗಿ ತಂದೆಯ ಪಾತ್ರ ಗೌಣವಾಗಿತ್ತು. ಭಾರತದಲ್ಲಿ ಈ ಬಗೆಯ ಕುಟುಂಬಗಳು ಇರುವುದು ಕಂಡುಬಂದಿವೆ. ಆಸ್ತಿಯ ವಿಚಾರಕ್ಕೆ ಬಂದರೆ ಆಸ್ತಿಯು ತಾಯಿಯಿಂದ ತನ್ನ ಹೆಣ್ಣು ಮಕ್ಕಳಿಗೇ ವರ್ಗವಾಗುತ್ತಿತ್ತು. ಅಂದರೆ ಆಸ್ತಿಯ ಉತ್ತರಾಧಿಕಾರತ್ವವು ಹೆಣ್ಣು ಮಕ್ಕಳಿಗೆ ವಂಶಪಾರಂಪರ್ಯವಾಗಿ ಸಾಗಿ ಬರುತ್ತಿತ್ತು. ಭಾರತದ ಈಶಾನ್ಯ ಭಾರತದಲ್ಲಿ ಖಾಸಿಸ್ ಜನಾಂಗಗಳಲ್ಲಿ ಇಂದಿಗೂ ಮಾತೃಪ್ರಧಾನ ವ್ಯವಸ್ಥೆ ಇರುವುದು ಕಂಡುಬರುತ್ತದೆ. ಈ ಜನರ ಜೀವನೋಪಾಯದ ಪ್ರಧಾನ ಮಾರ್ಗವೆಂದರೆ ಕೃಷಿ. ಈ ಜನಾಂಗದಲ್ಲಿ ಮನುಷ್ಯನ ಉಗಮ ಸ್ತ್ರೀಯರಿಂದಲೇ ಎಂಬ ನಂಬಿಕೆ ಇದೆ. ಇವರಲ್ಲಿ ಮಾತೃರೂಪಿ ಆರಾಧನೆಯೇ ಹೆಚ್ಚು. ಗಂಡು ದೇವತೆಗಳಿದ್ದರೂ ಸ್ತ್ರೀ ದೇವತೆಗಳಿಗೆ ಪ್ರಮುಖ ಸ್ಥಾನಮಾನವಿದೆ. ಹೀಗೆ ಭಾರತದಲ್ಲಿ ಖಾಸಿ ಜನಾಂಗದ ಜೊತೆಗೆ "ಕೇರಳದ ನಾಯರ್ ಅಥವಾ ತರ್ವಾಡ ಎಂದು ಕರೆಯುವ ಜನಾಂಗಗಳಲ್ಲಿ ತಾಯಿಯೇ ಪ್ರಧಾನ ಪಾತ್ರ ವಹಿಸುತ್ತಾಳೆ. ಹಿರಿಯ ಮಗಳಿಗೆ ತಾಯಿಯ ಆಸ್ತಿಯ ಬಹುಭಾಗ ದೊರೆಯುತ್ತದೆ. ಅಂತೆಯೇ ಖಾಸಿಸ್ ಜನಾಂಗದಲ್ಲಿ ಪೂಜಾರಿಣಿ (ಲ್ಯಾನ್ಗಡೋಹ್)ಯು ಧಾರ್ಮಿಕ ಕಾರ್ಯಕ್ರಮಗಳಲ್ಲಿ ತುಂಬಾ ಮುಖ್ಯವಾಗಿರುತ್ತಾಳೆ. ವಾಯುವ್ಯ ಭಾರತದ ಗಾರೋ ಜನಾಂಗದಲ್ಲಿಯೂ ಮಾತೃಪ್ರಧಾನ ವ್ಯವಸ್ಥೆಯನ್ನು ನೋಡಬಹುದು. ಇಲ್ಲಿಯೂ ತಾಯಿಯ ಮೂಲಕವೇ ಕುಟುಂಬದ ಹಿರಿಯ ಮಗಳಿಗೆ ಆಸ್ತಿಯ ಹಕ್ಕು ದೊರೆಯುತ್ತದೆ. ಅಲ್ಲದೆ ಗಂಡಿಗೆ ಪ್ರಧಾನ ಸ್ಥಾನಮಾನ ಇಲ್ಲ. ಇಲ್ಲಿಯ ಕುಟುಂಬಗಳನ್ನು ಮಹಾರಿಯರು ಎಂದು ಕರೆಯಲಾಗುತ್ತದೆ. ಮಹಾರಿಯರು ಎಂದರೆ ಮಾತೃಮೂಲದವರು ಎಂದು ಅರ್ಥೈಸಲಾಗಿದೆ. ಉತ್ತರ ಭಾರತದಲ್ಲಿ ಕಂಡುಬರುವ ಹಲಬಾ, ಕೈಕಾ, ಕರ್ಮಿ, ಮಾಂಗ್, ರಜ್ಜಹರ್ ಮೊದಲಾದ ಜನಾಂಗಗಳಲ್ಲಿ ಇಂದಿಗೂ ಮಾತೃಪ್ರಧಾನ ಸಮಾಜವು ಇದೆ"[೮] ಎಂದು ಗುರುತಿಸಲಾಗಿದೆ.

ಈ ಹಿಂದೆ ಹೇಳಿದಂತೆ ಕೇರಳದ ನಾಯರ್ ಕುಟುಂಬ ಮಾತೃಪ್ರಧಾನ ವ್ಯವಸ್ಥೆಯನ್ನು ಹೊಂದಿತ್ತು ಎಂಬುದಾಗಿ ತಿಳಿಯಲಾಗಿದೆ. ಆದರೆ ಪ್ರಾರಂಭದಲ್ಲಿ ಮಾತೃಪ್ರಧಾನವಾಗಿದ್ದು

ನಂತರದಲ್ಲಿ ಮಾತೃವಂಶೀಯ ಕುಟುಂಬ ಪದ್ಧತಿಯು ಆ ಸಮುದಾಯದಲ್ಲಿ ರೂಢಿಗೆ ಬಂದಿರುವುದು ಕಂಡುಬರುತ್ತದೆ. ಜೊತೆಗೆ "ಕರ್ನಾಟಕದ ಕರಾವಳಿ ಜಿಲ್ಲೆಗಳಾದ ಉಡುಪಿ ಮತ್ತು ದಕ್ಷಿಣ ಕನ್ನಡದ ನಾಡವರು ಅಥವಾ ಬಂಟರು ಹಾಗೂ ಪೂಜಾರಿ (ಈಡಿಗ) ಜನಾಂಗಗಳಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದೆ. ಭಾರತದ ಈಶಾನ್ಯ ರಾಜ್ಯಗಳಾದ ಅಸ್ಸಾಂ, ಮಿಜೋರಾಂ, ಅರುಣಾಚಲ ಪ್ರದೇಶ, ನಾಗಾಲ್ಯಾಂಡ್, ಬೋಡೋ ಪ್ರದೇಶಗಳ ಬುಡಕಟ್ಟು ಜನರೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದವರಾಗಿದ್ದಾರೆ. ಈ ಎಲ್ಲಾ ಜನಾಂಗಗಳಲ್ಲೂ ಭೂ ಮಾಲಿಕತ್ವವು ಹೆಂಗಸರಿಗೆ ಸೇರಿದೆ. ಮಾತೃಪ್ರಧಾನ ಕುಟುಂಬಗಳಲ್ಲಿ ಪುರುಷನ ಪಾತ್ರವು ಬಹುಮಟ್ಟಿಗೆ ಕುಟುಂಬದ ಸಂರಕ್ಷಕನಾಗಿದ್ದಿರುವುದು. ಪುರುಷನು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಪೊಲೀಸನಂತೆ ಕಾವಲಿನವಾಗುವನು. ಮೇನೆಜರನಂತೆ ಕುಟುಂಬದ ವ್ಯವಹಾರಗಳನ್ನು ಮಾಲೀಕರ ನಿರ್ದೇಶನಕ್ಕೊಳಪಟ್ಟು ನಡೆಸುವನು. ಒಟ್ಟಿನಲ್ಲಿ ಅಳಿಯಕಟ್ಟು ಪರಂಪರೆಯಲ್ಲಿ ಪುರುಷನು ಶೇಕಡಾ ನೂರಕ್ಕೆ ನೂರರಷ್ಟು ಪತ್ನಿ ನಿಷ್ಠನಾಗಿರುವನು"[೯]. ಹೀಗೆ ಕರ್ನಾಟಕವನ್ನು ಒಳಗೊಂಡಂತೆ ಭಾರತದಲ್ಲೆಲ್ಲಾ ಈ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿರುವ ಜನಾಂಗಗಳು ಕಂಡುಬರುತ್ತವೆ. ಆದರೆ ಇಂದು ಇವುಗಳು ತಮ್ಮ ಚಹರೆಯನ್ನು ಕಳೆದುಕೊಂಡಿವೆ ಎಂದು ಹೇಳಲಾಗುತ್ತಿದೆ. ಕುಟುಂಬದಲ್ಲಿ ಮಾತೃವಿನ ಬದಲಾಗಿ ಪಿತೃವಿನ ಸ್ಥಾನಮಾನಗಳು ಅಧಿಕವಾಗಿರುವ ಅಂಶಗಳು ಗೋಚರಿಸುತ್ತಿವೆ.

ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ತನ್ನದೇ ಆದಂತಹ ಕೆಲವು ಲಕ್ಷಣಗಳನ್ನು ಹೊಂದಿದೆ. ಅವುಗಳೆಂದರೆ,

೧. "ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಯಜಮಾನಿಕೆಯು ಮಹಿಳೆಯರಲ್ಲಿಯೇ ಕೇಂದ್ರೀಕೃತವಾಗಿರುತ್ತದೆ. ಅದು ಅನೇಕ ತಲೆಮಾರುಗಳಲ್ಲೂ ಮಹಿಳೆಯರ ನಡುವೆ ವರ್ಗಾವಣೆಯಾಗುತ್ತಿರುತ್ತದೆ.

೨. ಆದಾಯ ಸೃಜಿಸಬಲ್ಲ ಆರ್ಥಿಕ ಸಂಪನ್ಮೂಲಗಳು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರ ಮಾಲೀಕತ್ವಕ್ಕೆ ಒಳಪಟ್ಟಿರುತ್ತವೆ.

೩. ಕುಟುಂಬದ ಎಲ್ಲಾ ಆಗುಹೋಗುಗಳನ್ನು ಮನೆಯ ಹಿರಿಯಾಕೆ ಯಜಮಾನತಿಯೇ ನಿರ್ಧರಿಸುವಳು. ಆಕೆಯ ತೀರ್ಮಾನವನ್ನು ಯಾರೂ ಉಲ್ಲಂಘಿಸುವುದಿಲ್ಲ.

೪. ಎಲ್ಲಾ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲೂ 'ಅಳಿಯಕಟ್ಟು' ಪರಂಪರೆ ಊರ್ಜಿತದಲ್ಲಿರುತ್ತದೆ. ಅಳಿಯಕಟ್ಟು ಎಂದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಅಳಿಯನು ಹೆಣ್ಣು ಕೊಟ್ಟ ಅತ್ತೆಯ ಮನೆಯ ವಾರಸುದಾರನಾಗುತ್ತಾನೆ. ಆತನು ವಿವಾಹದ ನಂತರ ತನ್ನ ಹೆಂಡತಿಯ ಮನೆಯಲ್ಲಿಯೇ ವಾಸಿಸುತ್ತಾನೆ. ಆತನಿಗೆ ತನ್ನ ತಂದೆಯ ಆಸ್ತಿಯಲ್ಲಿ ಪಾಲು ದೊರಕುವುದಿಲ್ಲ"[೧೦].

ಈ ಬಗೆಯ ಲಕ್ಷಣಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಆದರೆ ಇದರ ಕುರಿತಂತೆ ಡಾ. ಶೈಲಜಾ ಹಿರೇಮಠರವರು ತಮ್ಮ "ಮಾತೃಪ್ರಧಾನ ಪರಿಕಲ್ಪನೆ" ಎಂಬ ಪುಸ್ತಕದಲ್ಲಿ "ಪ್ರಜನನ ಕ್ರಿಯೆ ಮತ್ತು ಮಾತೃತ್ವ ಇವೆರಡೂ ಭಿನ್ನಭಿನ್ನವಾಗಿವೆ. ಮೊದಲನೆಯದು ಹೆಣ್ಣಿನ ಜೈವಿಕ ಸಹಜ ಕ್ರಿಯೆಯನ್ನು ಹೇಳಿದರೆ, ಎರಡನೆಯದು ಆಕೆಯ ಪ್ರಜನನ ಸಾಮರ್ಥ್ಯವನ್ನು ಒಂದು ಸಾಮಾಜಿಕ ಮೌಲ್ಯವಾಗಿಸಿದ ಪಿತೃಪ್ರಧಾನ ಪರಂಪರೆಯ ಕಥನವನ್ನು ಬಿತ್ತರಿಸುತ್ತದೆ. 'ಮಾತೃಪ್ರಧಾನ' ಎನ್ನುವುದು ಪಿತೃಪ್ರಧಾನ ವ್ಯವಸ್ಥೆಯ ಧೋರಣೆಯೂ ಹೌದು, ರಾಜಕೀಯ ದೃಷ್ಟಿಕೋನವೂ ಹೌದು, ಅಂತಿಮವಾಗಿ ಅಲ್ಲಿಂದಲೇ ರೂಪುಗೊಂಡ ಪರಿಕಲ್ಪನೆಯೂ ಹೌದು. ಹೀಗಾಗಿ ಮಾತೃಪ್ರಧಾನತೆಯನ್ನು ಸ್ತ್ರೀ ನಿಷ್ಠ ನೆಲೆಯಲ್ಲಿ ನಿರ್ವಚಿಸಲಾಗುವುದಿಲ್ಲ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಬಂಟ ಸಮುದಾಯದಲ್ಲಿ ಅಳಿಯ ಸಂತಾನ ಪದ್ಧತಿ ಜಾರಿಯಲ್ಲಿದೆ. ಆದರೆ ಇದನ್ನು ಸ್ತ್ರೀ ಪ್ರಧಾನ ವ್ಯವಸ್ಥೆ ಎಂದು ಕರೆಯಲಾಗುವುದಿಲ್ಲ. ಏಕೆಂದರೆ ಪುರುಷಪ್ರಧಾನತೆಯ ಪ್ರಭಾವ ಈ ಸಮಾಜಗಳಿಗೂ ಹರಡಿ ಈ ಪದ್ಧತಿಯು ಅಳಿಸಿ ಹೋಗುತ್ತಿದೆ ಎಂಬಂಥ ಅಂಶಗಳು ಕಂಡುಬರುತ್ತಿವೆ. "ಈ ವ್ಯವಸ್ಥೆಯಲ್ಲಿ ಉತ್ತರಾಧಿಕಾರವು ತಾಯಿಯಿಂದ ಮಗಳಿಗೆ ಹೋಗುವುದು ನೆಪಕ್ಕೆ ಮಾತ್ರ. ಅವರಿಗೆ ಆಸ್ತಿಯನ್ನು ಮಾರಾಟ ಮಾಡುವ ಹಕ್ಕು ಇರುವುದಿಲ್ಲ. ಕುಟುಂಬದ ಎಲ್ಲಾ ವ್ಯವಹಾರವನ್ನು ಅಣ್ಣತಮ್ಮಂದಿರೇ ನೋಡಿಕೊಳ್ಳುತ್ತಾರೆ. ಇಲ್ಲಿಯೂ ಸ್ತ್ರೀಯರು ಪುರುಷರ ಅಧೀನದಲ್ಲಿಯೇ ಇರಬೇಕಾಗುತ್ತದೆ. ಪುರುಷರ ಸಂಬಂಧ ಮಾತ್ರ ಬೇರೆಯಾಗಿರುತ್ತದಷ್ಟೇ ಎಂದು ಹೇಳಲಾಗುತ್ತದೆ. ಕೆಲವು ಬುಡಕಟ್ಟು ಜನಾಂಗಗಳಲ್ಲಿಯೂ ಸ್ತ್ರೀ ಪ್ರಧಾನ ವ್ಯವಸ್ಥೆಯಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಪುರುಷಪ್ರಧಾನ ವ್ಯವಸ್ಥೆಯೇ ಅಂತಿಮವಲ್ಲ, ಸಾರ್ವತ್ರಿಕವಲ್ಲ ಅದಕ್ಕೊಂದು ಪರ್ಯಾಯ ಇತ್ತು. ಇದೆ ಎಂಬುದನ್ನು ಮಾತೃಪ್ರಧಾನ ವ್ಯವಸ್ಥೆ ಸೂಚಿಸುತ್ತದೆ"[11]. ಹೀಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯ ಸ್ಥಾನಮಾನಗಳನ್ನು ಗುರುತಿಸಬಹುದಾಗಿದೆ. ಮುಖ್ಯವಾಗಿ ಇತ್ತೀಚಿನ ಕೆಲವು ಅಧ್ಯಯನಗಳ ಪ್ರಕಾರ ಈ ಹಿಂದೆ ಇದ್ದಂತಹ ಮಾತೃಪ್ರಧಾನ ಕುಟುಂಬಗಳು ಈಗ ಮಾತೃವಂಶೀಯ ಕುಟುಂಬಗಳಾಗಿ ಮಾರ್ಪಟ್ಟಿರುವ ಅಂಶಗಳು ಬೆಳಕಿಗೆ ಬಂದಿವೆ. ಅಂದರೆ ಮಾತೃಪ್ರಧಾನ ಸಮಾಜದ ಶಿಥಿಲಗೊಂಡ ಅವಸ್ಥೆಯ ನಂತರದ ಘಟ್ಟವನ್ನು ಮಾತೃವಂಶೀಯ ಸಮಾಜ ಎಂದು ಗುರುತಿಸಬಹುದಾಗಿದೆ. ಮಾತೃಪ್ರಧಾನ ಸಮಾಜದಲ್ಲಿ ಹೆಣ್ಣು ಮಕ್ಕಳು ಆ ಕುಟುಂಬದ ಸಂತಾನವಾಗುತ್ತಾರೆ. ಇದರಿಂದಾಗಿಯೇ ಆಸ್ತಿಯ ಹಕ್ಕು ಹೆಣ್ಣಿನದಾಗಿರುತ್ತದೆ. ಪುರುಷನು ಒಂದು ವೇಳೆ ಸ್ವಯಾರ್ಜಿತ ಆಸ್ತಿಯನ್ನು ಹೊಂದಿದ್ದನು ಎಂದರೆ, ಆಸ್ತಿ ಅವನು ಮರಣಿಸಿದ ನಂತರ ಆತನ ವಂಶಕ್ಕೆ ಸೇರುತ್ತದೆ. ಅದನ್ನು ಹೊರತುಪಡಿಸಿದರೆ ತನ್ನ ಮಕ್ಕಳಿಗಲ್ಲ. ಒಂದು ವೇಳೆ ಹೆಣ್ಣು ಸಂತಾನ ಇಲ್ಲದೇ ಹೋದರೆ ಹೆಣ್ಣನ್ನು ದತ್ತು ತೆಗೆದುಕೊಂಡು ವಂಶವನ್ನು ಮುಂದುವರಿಸುವ ಅವಕಾಶ ಇದೆ. ಈ ಬಗೆಯ ಕುಟುಂಬಗಳಲ್ಲಿ ತಾಯಿಯ ಗಂಡು ಮತ್ತು

ಹೆಣ್ಣುಮಕ್ಕಳು ಒಂದೇ ಕುಟುಂಬದಲ್ಲಿ ವಾಸಿಸುತ್ತಾರೆ. ಮನೆಯ ಉಸ್ತುವಾರಿಯನ್ನು ಹಿರಿಯ ಸೋದರಿ ಅಥವಾ ಹಿರಿಯ ಸೋದರ ನೋಡಿಕೊಳ್ಳುತ್ತಿರುತ್ತಾರೆ. ಇಲ್ಲಿ ಹಿರಿಯ ಸೋದರನು ಉಸ್ತುವಾರಿಯನ್ನು ನೋಡಿಕೊಂಡರೂ ಆಸ್ತಿಯ ಮೇಲೆ ಯಾವುದೇ ಅಧಿಕಾರವಿರುವುದಿಲ್ಲ. ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ "ಖಾಸಿ ಜನಾಂಗದಲ್ಲಿ ಕೊನೆಯ ಮಗಳಿಗೆ ಆಸ್ತಿಯಲ್ಲಿ ಹೆಚ್ಚಿನ ಭಾಗ ಸಿಗುತ್ತದೆ. ಯಾಕೆಂದರೆ ವಯಸ್ಸಾದವರು ರಕ್ಷಣೆಗಾಗಿ ಹಾಗೂ ವಂಶದ ಎಲ್ಲ ರೀತಿಯ ಆಚರಣೆಗಳನ್ನು ಮುಂದುವರಿಸಿಕೊಂಡು ಹೋಗಲು ಈ ರೀತಿಯ ಏರ್ಪಾಡನ್ನು ಮಾಡಿದ್ದಾರೆ. ಆದರೆ ಗಾರೋಗಳಲ್ಲಿ ತಮ್ಮ ಹೆಣ್ಣು ಮಕ್ಕಳಲ್ಲಿ ಒಬ್ಬಾಕೆಯನ್ನು ಕುಲದ ಉತ್ತರಾಧಿಕಾರಿಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ನಾಯರ್ ಜನಾಂಗದಲ್ಲಿ ತಮ್ಮ ಒಡಹುಟ್ಟಿದ ಸೋದರನೊಂದಿಗೆ ಹಂಚಿಕೆ ಮಾಡಿಕೊಳ್ಳುತ್ತಾರೆ"[೧೨]. ಭಾರತದ ಹಲವು ಭಾಗಗಳಲ್ಲಿ ಈ ಬಗೆಯ ಮಾತೃವಂಶೀಯ ಕುಟುಂಬ ವ್ಯವಸ್ಥೆಯನ್ನು ಹೊಂದಿರುವ ಸಮುದಾಯಗಳನ್ನು ನೋಡಬಹುದಾಗಿದೆ. "ಅಬಟ್ಟನ್, ಅಂಪಲವಾಸಿ, ಚಕ್ಯಾರ್, ಕವಟಿ, ಶ್ರೀಕೃಷ್ಣವಕ್ಕೆರ್, ಕುಡುನಿ, ಕರುವಂ, ಕುರುವಲ್, ವಲಯರಾಯನ್, ಮಾರವನ್, ಮಳಯಾಳಿ, ಪಳಿಯಾನ್, ಪಣನ್, ವರಿಯಾರ್, ವಿಲ್ಲರು, ವಿಸ್ತನ್ ಹೀಗೆ ಮುಂತಾದ ಜನಾಂಗಗಳು ಭಾರತದಲ್ಲಿ ಕಂಡುಬರುವಂತಹ ಮಾತೃವಂಶಿಯ ಕುಟುಂಬಗಳಾಗಿವೆ"[೧೩]. ದಕ್ಷಿಣ ಭಾರತದಲ್ಲಿನ ಮಾತೃಪ್ರಧಾನ ಕುಟುಂಬಗಳು ಎಂದಕೂಡಲೇ ಕೇರಳದ ನಾಯರ್, ಬಂಟ, ಖಾಸಿ ಜನಾಂಗಗಳು ಎಂಬುದು ನಮ್ಮ ಆಲೋಚನೆಗೆ ಬರುತ್ತವೆ. ಆದರೆ ಇವುಗಳು ಇಂದು ಮಾತೃವಂಶೀಯ ಕುಟುಂಬಗಳಾಗಿವೆ. ಮುಖ್ಯವಾಗಿ ಕೇರಳದ ನಾಯರ್ ಕುಟುಂಬದ ಕುರಿತಂತೆ ಹೇಳುವುದಾದರೆ ಈ ಕುಟುಂಬವು ಮಾತೃವಂಶೀಯದ್ದಾಗಿದೆ. "ನಾಯರ್‌ಗಳಲ್ಲಿ ಹೆಣ್ಣು ಋತುಮತಿಯಾದಾಗ ಸಾಂಕೇತಿಕವಾಗಿ ಆಚರಿಸುವ ಮಟ್ಟದಲ್ಲಿ ಮಾತೃ ವೈವಾಹಿಕ ಸಂಬಂಧ ಇರುತ್ತಿತ್ತು. ಹಾಗೂ ಅತ್ಯಲ್ಪ ಸಮಯದಲ್ಲಿ ಆಚರಣಾತ್ಮಕವಾಗಿ ಆ ಸಂಬಂಧವನ್ನು ಮುರಿಯಲಾಗುತ್ತಿತ್ತು. ಆ ನಂತರ ತಮ್ಮ ಮನೆಗೆ ರಾತ್ರಿ ಭೇಟಿ ಕೊಡುವ ಗಂಡುಗಳ ಜೊತೆ ಪ್ರೇಮ ಸಂಬಂಧವನ್ನು ಹೊಂದಲು ಹೆಣ್ಣು ಮಕ್ಕಳಿಗೆ ಅವಕಾಶ ಕಲ್ಪಿಸಲಾಗುತ್ತಿತ್ತು. ಅಣ್ಣ ತಮ್ಮಂದಿರು, ಅವರ ಅಕ್ಕ ತಂಗಿಯರು ಅವರೆಲ್ಲರ ಮಕ್ಕಳನ್ನೊಳಗೊಂಡ ಒಟ್ಟು ಸಮೂಹವು ಮಾತೃವಂಶೀಯ ಅವಿಭಕ್ತ ಕುಟುಂಬವಾಗಿರುತ್ತಿತ್ತು. ತಾಯಿಯ ಸಂಗಾತಿ ಅಥವಾ ತನ್ನ ಹುಟ್ಟಿಗೆ ಕಾರಣನಾದ ಗಂಡಸಿನ ಜೊತೆ ಭಾವನಾತ್ಮಕ ಸಂಬಂಧವನ್ನು ರೂಢಿಸಿಕೊಳ್ಳದಂತೆ ಮಕ್ಕಳನ್ನು ಬೆಳೆಸಲಾಗುತ್ತಿತ್ತು. ಆಸ್ತಿಯ ಒಡೆತನವುಳ್ಳ ಮಾತೃವಂಶೀಯ ನಾಯರ್ ಕುಟುಂಬಗಳಲ್ಲಿ ಹೀಗಾಗಿ ತಂದೆಯ ಅಸ್ತಿತ್ವಕ್ಕೆ ಗೌಣ ಸ್ಥಾನವಿರುತ್ತಿತ್ತು"[೧೪]. ಆಸ್ತಿಯ ಅಥವಾ ಉತ್ತರಾಧಿಕಾರ ವಿಷಯಕ್ಕೆ ಬಂದಾಗ ನಾಯರ್ ಕುಟುಂಬಕ್ಕೆ ತರವಾಡು ಎಂತಲೂ ಕರೆಯಲಾಗುತ್ತದೆ. ಮುಖ್ಯವಾಗಿ ಈ ತರವಾಡಿನಲ್ಲಿ ಒಬ್ಬ ಸ್ತ್ರೀ, ಆಕೆಯ ಗಂಡು ಮತ್ತು ಹೆಣ್ಣು ಮಕ್ಕಳು ಮತ್ತು ಆ ಹೆಣ್ಣು ಮಕ್ಕಳ ಮಕ್ಕಳು ವಾಸಿಸುತ್ತಿರುತ್ತಾರೆ. ಇಲ್ಲಿ ಗಂಡು ಮಕ್ಕಳ ಮಕ್ಕಳು ಅವರ ಪತ್ನಿಯರ ತರವಾಡಿಗೆ ಸಂಬಂಧಿಸಿರುತ್ತಾರೆ. ಇದು ಮಾತೃವಂಶೀಯ ಕುಟುಂಬ ವ್ಯವಸ್ಥೆಯಾಗಿರುವುದರಿಂದ ಇಲ್ಲಿ ಕುಟುಂಬದ ಮಹಿಳೆ ಹಿರಿಯಳಂತೆ ಕಂಡುಬಂದರೂ ಆಸ್ತಿಯ

ಉಸ್ತುವಾರಿಯೆಲ್ಲವೂ ಪುರುಷನದ್ದೇ ಆಗಿರುತ್ತದೆ. ಮುಖ್ಯವಾಗಿ ಆಸ್ತಿಯ ಮೇಲೆ ಸಮಾನವಾದ ಅಧಿಕಾರವಿರುತ್ತದೆ. ಆದರೆ ಇದನ್ನು ವಿಭಜನೆ ಮಾಡಿಕೊಳ್ಳುವಂತಿರಲಿಲ್ಲ. ಅಂದರೆ ಅವಿಭಾಜ್ಯವಾಗಿರುತ್ತದೆ. ಆ ಕಾರಣಕ್ಕಾಗಿಯೇ ಈ ಕುಟುಂಬದಲ್ಲಿ ವಾಸಿಸುವ ಸದಸ್ಯರಿಗೆ ಆಸ್ತಿಯಲ್ಲಿ ತಮ್ಮ ಭಾಗವನ್ನು ಕೇಳಲು ಹಕ್ಕಿರುವುದಿಲ್ಲ. ತರವಾಡಿನ ಒಟ್ಟು ಆಸ್ತಿಯನ್ನು ನೋಡಿಕೊಳ್ಳುವುದಕ್ಕೆ ಕುಟುಂಬದ ಹಿರಿಯ ಪುರುಷನನ್ನು ನೇಮಿಸಿರುತ್ತಾರೆ. ಈತನನ್ನು ಕರ್ಣವರ್ ಎಂದು ಕರೆಯುತ್ತಾರೆ. ಈತನದು ಆಸ್ತಿಯನ್ನು ನೋಡಿಕೊಳ್ಳುವುದೊಂದೇ ಕಾರ್ಯ. ಅದಕ್ಕೆ ಬದಲಾಗಿ ಆಸ್ತಿಯನ್ನು ಬೇರ್ಪಡಿಸಲು ಯತ್ನಿಸಿದರೆ ಅಥವಾ ಆ ಆಸ್ತಿಯ ಮೇಲೆ ಸ್ವಂತ ನಿರ್ಣಯದ ಮೂಲಕ ತನಗಿಷ್ಟ ಬಂದಂತೆ ಅಧಿಕಾರವನ್ನು ಚಲಾಯಿಸುವಂತಿಲ್ಲ. ಒಂದುವೇಳೆ ಹಾಗೇನಾದರೂ ಮಾಡಿದರೆ ಅದನ್ನು ಪ್ರಶ್ನಿಸುವ ಹಕ್ಕು ಅಥವಾ ಆ ಸ್ಥಾನದಿಂದ ಕೆಳಗಿಳಿಸುವ ಹಕ್ಕು ಕುಟುಂಬದ ಎಲ್ಲಾ ಸದಸ್ಯರಿಗೂ ಇರುತ್ತದೆ. ಆದರೆ ಒಳ್ಳೆಯ ಉದ್ದೇಶದಿಂದ ನ್ಯಾಯ ಸಮ್ಮತವಾಗಿ ವರ್ತಿಸಿದರೆ ಆತನನ್ನು ಪ್ರಶ್ನಿಸುತ್ತಿರಲಿಲ್ಲ. ಆದರೂ ಕರ್ಣವರ್‌ಗೆ ವಿಶೇಷ ಅಧಿಕಾರಗಳನ್ನು ಕೊಡಲಾಗುತ್ತಿತ್ತು. ಆ ಕಾರಣಕ್ಕಾಗಿಯೇ ಆತನನ್ನು ಪರಮಾಧಿಕಾರಿ ಎಂದು ಕರೆಯಲಾಗುತ್ತಿತ್ತು. ಏಕೆಂದರೆ ವಿಶೇಷ ಅಧಿಕಾರಗಳಾದ ಒಟ್ಟು ತರವಾಡಿನ ಆಸ್ತಿಯನ್ನು ನೋಡಿಕೊಳ್ಳುವ ಹಕ್ಕು ಆತನಿಗೆ ಇತ್ತು. ಆ ಆಸ್ತಿಯನ್ನು ತನ್ನ ಹೆಸರಿನಲ್ಲಿ ಆಧಾರ, ಭೋಗ್ಯ ಮಾಡಿಕೊಳ್ಳಬಹುದಾಗಿತ್ತು. ತನ್ನ ಹೆಸರಿನಲ್ಲಿ ಜಮೀನನ್ನು ಕೊಳ್ಳಬಹುದಾಗಿತ್ತು. ಹೀಗೆ ಹಲವು ವಿಶೇಷ ಅಧಿಕಾರಗಳನ್ನು ಪಡೆದಿದ್ದನು. ಆದರೆ ಇತ್ತೀಚಿನ ದಿನಗಳಲ್ಲಿ "ತರವಾಡು ನಿರ್ವಹಿಸಲಾರದಷ್ಟು ವಿಸ್ತಾರವಾಗಿದ್ದರಿಂದ ಸಣ್ಣ ಸಣ್ಣ ಕುಟುಂಬಗಳಾಗಿ ಒಡೆಯುತ್ತವೆ. ಇಂತಹ ಸಣ್ಣ ಕುಟುಂಬಗಳಿಗೆ ತವಳಿ ಎಂದು ಹೆಸರು. ಈ ರೀತಿಯ ಕುಟುಂಬಗಳ ಸಂಖ್ಯೆ ತರವಾಡಿನ ಸದಸ್ಯರ ಒಪ್ಪಿಗೆಯನ್ನು ಮುಖ್ಯ ಸ್ತ್ರೀಯ ಸಾಲನ್ನು ಅವಲಂಬಿಸಿರುತ್ತದೆ. ತವಳಿಯು ಸ್ತ್ರೀ, ಆಕೆಯ ಮಕ್ಕಳು ಮತ್ತು ಆಕೆಯ ಹೆಣ್ಣುಮಕ್ಕಳ ಮಕ್ಕಳನ್ನೊಳಗೊಂಡು ಆಕೆಯ ವಂಶ ಕ್ರಮದಲ್ಲಿ ಬರುವ ಸ್ತ್ರೀ ಸಂತತಿಯವರು ಸೇರಿರುವ ಒಂದು ಗುಂಪು. ತರವಾಡಿನ ಆಸ್ತಿಯನ್ನು ತವಳಿಗಳಿಗೆ ಸಮನಾಗಿ ಹಂಚಲಾಗುತ್ತದೆ"[೧೫]. ಹೀಗೆ ನಾಯರ್ ಸಮುದಾಯದಲ್ಲಿ ಹಲವಾರು ಬದಲಾವಣೆಗಳು ಗೋಚರಿಸುತ್ತಾ ಬಂದವು. ಮುಖ್ಯವಾಗಿ ತರವಾಡು, ತವಳಿಗಳು ಇವು ಕುಟುಂಬದ ಆಸ್ತಿಯನ್ನು ಕೇಂದ್ರವಾಗಿಟ್ಟುಕೊಂಡೇ ಜಾರಿಗೆ ಬಂದಂತಹುಗಳಾಗಿವೆ. ಒಟ್ಟಿನಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಇದ್ದಂತಹ ತಾಯಿಯ ಅಧಿಕಾರ ಕ್ರಮೇಣವಾಗಿ ಕಳೆದು ಹೋಗುತ್ತಾ ಬಂದು ಮಾತೃವಂಶೀಯ ಕುಟುಂಬ ವ್ಯವಸ್ಥೆಯ ಹುಟ್ಟಿಗೆ ಕಾರಣವಾಯಿತು. ಕುಟುಂಬದಲ್ಲಿ ಹಂತಹಂತವಾಗಿ ಪುರುಷನು ಅಧಿಕಾರವನ್ನು ಪಡೆಯಲು ಪ್ರಾರಂಭಿಸಿದನು. ಆ ಕಾರಣಕ್ಕಾಗಿಯೇ ಮಹಿಳೆ ಈ ಮಾತೃವಂಶೀಯ ಕುಟುಂಬ ವ್ಯವಸ್ಥೆಯಲ್ಲಿ ಹೆಚ್ಚಿನ ಅಧಿಕಾರವನ್ನು ಹೊಂದಿರಲಿಲ್ಲ. ಮುಂದೆ ಇದು ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಒಂದು ಮಾರ್ಗವನ್ನು ತೋರಿಸಿಕೊಟ್ಟಿತು.

ಪ್ರಾಚೀನ ನಾಗರಿಕತೆಗಳ ಸಂದರ್ಭದ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನಮಾನವನ್ನು ಗುರುತಿಸುವುದಾದರೆ, ಅಂದಿನ ನಾಗರಿಕತೆಗಳಲ್ಲಿ ಮಹಿಳೆಯೇ ಕುಟುಂಬದ ಹಿರಿಯಳಾಗಿದ್ದು, ಸಮಸ್ತ ಆಸ್ತಿಗೆ ಒಡೆಯಳಾಗಿದ್ದಳು. ಆಕೆಯೇ ಆಸ್ತಿಯ ಉತ್ತರಾಧಿಕಾರದ ಹಕ್ಕನ್ನು ಹೊಂದಿದ್ದು ಮನೆಯ ಯಜಮಾನಿಯಂತೆ ಪರಿಗಣಿಸಲ್ಪಡುತ್ತಿದ್ದಳು. ಕುಟುಂಬದಲ್ಲಿ ತಾಯಿಗೆ ವಿಶೇಷವಾದ ಸ್ಥಾನಮಾನವಿತ್ತು. ಹಾಗಾಗಿ ಎಲ್ಲ ಬಗೆಯ ಹಕ್ಕುಗಳನ್ನು ತಾಯಿಯೇ ಚಲಾಯಿಸುತ್ತಿದ್ದಳು. ಈ ಕುರಿತಂತೆ "ಫೆಡ್ರಿಕ್ ಏಂಜಲ್ಸ್‌ನು ತಾಯಿಯ ಹಕ್ಕನ್ನೇ ಮಾನ್ಯ ಮಾಡಿದ್ದಾನೆ. ಆತ ಉತ್ತಮ ಸಮಾಜದ ನಿರ್ಮಾಣಕ್ಕೆ ತಾಯಿಗೆ ಗೌರವದ ಮತ್ತು ಮುಖಂಡತ್ವದ ಸ್ಥಾನವನ್ನು ನೀಡುವುದು ಯುಕ್ತವಾದದ್ದು ಎಂದು ಪ್ರತಿಪಾಧಿಸಿದ್ದಾನೆ"[೧೬]. ಹೀಗೆ ಕುಟುಂಬದಲ್ಲಿ ತಾಯಿಯ ಹಕ್ಕಿನ ಕುರಿತಂತೆ ಮಾತನಾಡಿದ್ದಾರೆ. ಮುಖ್ಯವಾಗಿ ಒಂದು ಕುಟುಂಬ ಅಥವಾ ಸಮಾಜ ಉತ್ತಮವಾಗಿ ನಿರ್ಮಾಣವಾಗಬೇಕಾದರೆ ತಾಯಿಯನ್ನು ಉನ್ನತ ಸ್ಥಾನದಲ್ಲಿ ಇರಿಸುವುದು ಮತ್ತು ಅವಳಿಗೆ ಮುಖಂಡತ್ವ ನೀಡಬೇಕು ಎಂದಿದ್ದಾನೆ ಏಂಜೆಲ್ಸ್. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ತಾಯಿಯೇ ಪ್ರಮುಖ ಸ್ಥಾನ ಹೊಂದಿದ್ದು, ಆಸ್ತಿಯ ಉತ್ತರಾಧಿಕಾರವೂ ಮಹಿಳೆಗೇ ವರ್ಗಾವಣೆಯಾಗುತ್ತಿದ್ದ ಸಂದರ್ಭದಲ್ಲಿ ಯಾವುದೇ ರೀತಿಯ ತಾರತಮ್ಯಗಳು ಇರಲಿಲ್ಲ ಹಾಗೂ ಒಂದು ಉತ್ತಮ ಕುಟುಂಬ ಅಥವಾ ಒಂದು ಉತ್ತಮ ಸಮಾಜ ನಿರ್ಮಾಣವಾಗಿತ್ತು ಎಂಬುದನ್ನು ಸೂಚ್ಯವಾಗಿ ಹೇಳಿದ್ದಾನೆ. ಮುಖ್ಯವಾಗಿ ಮಹಿಳೆಯರು ಆಡಳಿತದ ಚುಕ್ಕಾಣಿಯನ್ನು ಹಿಡಿದಿರುವ ಹಲವು ಉದಾಹರಣೆಗಳು ಪ್ರಪಂಚದಾದ್ಯಂತ ಕಂಡುಬರುತ್ತವೆ. "ಪ್ರಥಮ ಮಹಿಳಾ ಆಡಳಿತಗಾರ್ತಿಯರನ್ನು ನೀಡಿದ ಕೀರ್ತಿ ಈಜಿಪ್ತಿನ ನಾಗರಿಕತೆಯಲ್ಲಿ ಕಂಡುಬರುತ್ತದೆ. ಶಿಲಾಯುಗದ ಸಂಸ್ಕೃತಿಯಲ್ಲಿಯೇ ಜನರು ಬದುಕನ್ನು ನಡೆಸುತ್ತಿದ್ದರೂ ಸ್ತ್ರೀಯರನ್ನು ಅತ್ಯಂತ ಗೌರವದಿಂದ ಈಜಿಪ್ಟ್‌ನ ನಾಗರಿಕತೆ ಕಂಡಿದೆ. ಸಮಾಜದಲ್ಲಿ ಮಹಿಳೆಯರಿಗೆ ಉತ್ತಮ ಸ್ಥಾನಮಾನಗಳಿದ್ದ ರಾಣಿ ಆಳ್ವಿಕೆ ಜಾರಿಯಲ್ಲಿರುವುದನ್ನು ಇಲ್ಲಿ ಮಾತ್ರ ಕಾಣಬಹುದಾಗಿದೆ. ಸ್ವಕುಟುಂಬ ವಿವಾಹ ಪದ್ಧತಿ ರೂಢಿಯಲ್ಲಿದ್ದು ತಂದೆ, ಮಗಳನ್ನು, ಸೋದರನು ಸೋದರಿಯನ್ನು ವರಿಸುತ್ತಿದ್ದರು. ಅದರ ಉದ್ದೇಶ ತಮ್ಮ ಕುಟುಂಬದ ಆಸ್ತಿ ಮತ್ತು ಅಧಿಕಾರ ಬೇರೆಯವರ ಪಾಲಾಗಬಾರದು ಎಂಬುದೇ ಆಗಿತ್ತು"[೧೭]. ಮುಖ್ಯವಾಗಿ ವಿವಾಹ ಪದ್ದತಿಯು ಆಸ್ತಿಹಕ್ಕನ್ನು ಪುರುಷಕೇಂದ್ರಿತವಾಗಿಯೇ ಗುರುತಿಸುತ್ತದೆ. ಹೀಗೆ ಪ್ರಾಚೀನ ನಾಗರಿಕತೆಗಳಲ್ಲಿ ಮಹಿಳೆಯರನ್ನು ಅತ್ಯಂತ ಗೌರವದಿಂದ ಕಾಣುವುದು ಒಂದು ಬಗೆಯದ್ದಾದರೆ ಅವರ ವಿವಾಹ ಸಂಬಂಧಗಳನ್ನು ತಮ್ಮಲ್ಲಿಯೇ ಮಾಡಿಕೊಳ್ಳುತ್ತಿದ್ದುದು ಮತ್ತೊಂದು ಬಗೆ. ಈ ವಿವಾಹಗಳಿಗೆ ಕಾರಣ ಆಸ್ತಿ. ಮುಖ್ಯವಾಗಿ ಕುಟುಂಬದ ಆಸ್ತಿ ಬೇರೆಯವರ ಪಾಲಾಗಬಾರದು ಎಂಬುದು ಈ ವಿವಾಹದ ಮುಖ್ಯ ಉದ್ದೇಶವಾಗಿತ್ತು. ಮುಖ್ಯವಾಗಿ ಆಸ್ತಿಯ ಕಾರಣವಾಗಿ ಕುಟುಂಬದಲ್ಲಿ, ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳು ಸಂಭವಿಸಿದವು. ಈ ಬದಲಾವಣೆಗಳೇ ಮುಂದೆ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಕಾರಣವಾದವು.

## ೩.೨. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಪರಿಕಲ್ಪನೆ

ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಅವನತಿ ಹೊಂದುತ್ತಾ ಸಾಗಿದಂತೆಲ್ಲಾ ಪಿತೃಪ್ರಧಾನತೆ ಮುನ್ನೆಲೆಗೆ ಬರತೊಡಗಿತು. ಇದು ಯಾವಾಗ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಂಡಿತೋ ಆವಾಗಿನಿಂದ ಮಹಿಳೆ ಹಂತಹಂತವಾಗಿ ಪುರುಷನ ಅಡಿಯಾಳಾಗಿ ಜೀವಿಸಲು ಆರಂಭಿಸಿದಳು. ಮಹಿಳೆಯ ಮೇಲೆ ಪುರುಷ ಅಧಿಕಾರವನ್ನು ಚಲಾಯಿಸಲಾರಂಭಿಸಿದನು. ಈ ಬಗೆಯ ಕುಟುಂಬದ ಪರಿವರ್ತನೆಯಲ್ಲಿ ಆದ ಬದಲಾವಣೆಗಳು ಸ್ತ್ರೀಯ ಸ್ಥಾನಮಾನಗಳನ್ನು ಹೀನಾಯ ಸ್ಥಿತಿಗೆ ತಂದವು. ಸಾಮಾಜಿಕ ಮತ್ತು ಜೈವಿಕ ಉತ್ಪಾದನೆಯಲ್ಲಿಯೂ ಪುರುಷ ಪ್ರಮುಖ ಪಾತ್ರ ವಹಿಸತೊಡಗಿದ. ವಾಸ್ತವವಾಗಿ ಇಂದು ಮಹಿಳೆಯರು ಇರುವಂತಹ ಸಾಮಾಜಿಕ ಪರಿಸ್ಥಿತಿಯು ಪಿತೃಪ್ರಧಾನ ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ. ಈ ಮೌಲ್ಯಗಳಡಿಯಲ್ಲಿ ಸಿಲುಕಿರುವ ಮಹಿಳೆಯರ ಈ ಅಧೀನ ಸ್ಥಿತಿಯು ಒಂದು ಬಗೆಯಲ್ಲಿ ಗುಲಾಮಿ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತದೆ. ಮುಖ್ಯವಾಗಿ ಕುಟುಂಬದ ಹಿರಿಯ ಅಥವಾ ಒಡೆಯ ಎಂದೇ ಪುರುಷನನ್ನು ಸಂಬೋಧಿಸಲಾಗುತ್ತದೆ. ಆ ಕಾರಣಕ್ಕಾಗಿಯೇ ಕುಟುಂಬದಲ್ಲಿ ಮಹಿಳೆ ಎರಡನೆಯ ದರ್ಜೆಯ ಸ್ಥಾನದಲ್ಲಿ ಉಳಿದಿದ್ದಾಳೆ. ಕುಟುಂಬದಲ್ಲಿ ಪುರುಷ ರೂಪಿಸಿರುವ ಮೌಲ್ಯಗಳಿಂದ ಮಹಿಳೆ ಇಂದಿಗೂ ಹೊರ ಬರಲಾಗುತ್ತಿಲ್ಲ. ಹಾಗಾಗಿ ಇಂದು ಜಾರಿಯಲ್ಲಿರುವ ಕುಟುಂಬ ವ್ಯವಸ್ಥೆಗಳೆಲ್ಲವೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗಳಾಗಿವೆ. ಈ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಯಾವುದೇ ಬಗೆಯ ಅಧಿಕಾರವಿಲ್ಲ. ಆಸ್ತಿಯ ಒಡೆತನಕ್ಕೆ ಸಂಬಂಧಿಸಿದಂತೆ ಮಹಿಳೆಗೆ ಯಾವುದೇ ಹಕ್ಕುಗಳಿಲ್ಲ. ಈ ವ್ಯವಸ್ಥೆಯಲ್ಲಿ ಆಸ್ತಿಯ ಒಡೆತನವು ಪುರುಷನಿಂದ ಪುರುಷನಿಗೆ ವರ್ಗವಾಗುತ್ತದೆ. ಕುಟುಂಬದ ಉತ್ತರಾಧಿಕಾರಿ ಪುರುಷನೇ. ಹಾಗಾಗಿ ವಸಾಹತುಶಾಹಿ ಆಡಳಿತ ಸಂದರ್ಭದಲ್ಲಿ ಕೆಲವು ಸಮಾಜ ಸುಧಾರಕರ ಪ್ರಯತ್ನದ ಫಲವಾಗಿ ಮಹಿಳೆಯರಿಗೆ ಕುಟುಂಬದ ಆಸ್ತಿಯಲ್ಲಿ ಪಾಲು ದೊರೆಯಬೇಕು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಹೋರಾಟಗಳು ನಡೆದವು. ಆ ಕಾರಣಕ್ಕಾಗಿಯೇ ೧೯೨೮ರಲ್ಲಿ ಮಹಿಳೆಯರ ಆಸ್ತಿಗೆ ಸಂಬಂಧಿಸಿದಂತೆ ಕೆಲವು ನಿಯಮಗಳು ಜಾರಿಗೆ ಬಂದವು. ಈ ಹೋರಾಟಗಳು ಹಾಗೆಯೇ ಮುಂದುವರೆದುದರ ಪರಿಣಾಮವಾಗಿ ತಂದೆಯ ಆಸ್ತಿಯಲ್ಲಿ ಮಗಳಿಗೆ ಸಂಪೂರ್ಣವಾದ ಹಕ್ಕು ದೊರೆಯುವಂತಹ ಕಾಯಿದೆ ಜಾರಿಗೆ ಬಂದಿದೆ. ಆದರೆ ಈ ಹಿಂದಿನಿಂದಲೂ ಜಾರಿಯಲ್ಲಿರುವ ಸಾಮಾಜಿಕ ಮೌಲ್ಯಗಳು ಮಹಿಳೆಯರಿಗೆ ಆಸ್ತಿ ಹಕ್ಕನ್ನು ಪಡೆಯಲು ಸಾಧ್ಯವಾಗದಂತೆ ಮಾಡುತ್ತಿವೆ. ಮುಖ್ಯವಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ರೂಪಾಂತರಗೊಂಡ ಚಲನೆ ಇಲ್ಲಿ ಬಹಳ ಮುಖ್ಯವಾದುದು. ಇದನ್ನು ಸ್ಪಷ್ಟಪಡಿಸಿಕೊಳ್ಳುವ ಅಗತ್ಯವಿದೆ. ಆ ಸಂದರ್ಭದಲ್ಲಿ ಹಲವಾರು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಪಿತೃಪ್ರಧಾನ ಕುಟುಂಬ ರಚನೆಗೆ ಕಾರಣವಾದವು. ಈ ಒಂದು ಚಲನೆಯನ್ನು ಗಮನಿಸಿದರೆ ಆಸ್ತಿಯ ಮೇಲಿನ ಅಧಿಕಾರವೂ ಮಹಿಳೆಯಿಂದ

ಪುರುಷನಿಗೆ ಹೇಗೆ ವರ್ಗಾಯಿಸಲ್ಪಟ್ಟಿತು ಮತ್ತು ಅದರ ಮೇಲಿನ ಹಕ್ಕು, ಅಧಿಕಾರ ಹೇಗೆ ರೂಪಾಂತರಗೊಂಡಿತು ಎಂಬುದನ್ನು ತಿಳಿಯಬಹುದಾಗಿದೆ. ಆ ಕಾರಣಕ್ಕಾಗಿಯೇ ಮೊದಲು ಇದ್ದ ಮಾತೃಪ್ರಧಾನ ಕುಟುಂಬ ವ್ಯವಸ್ಥೆ, ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಾಗಿ ರೂಪಾಂತರಗೊಂಡಿದ್ದರ ಕುರಿತು ವಿದ್ವಾಂಸರು ಹಲವು ಬಗೆಯಲ್ಲಿ ವಿವರಿಸುತ್ತಾ ಸಾಗಿದ್ದಾರೆ.

ಮನುಷ್ಯ ಅಲೆಮಾರಿ ಜೀವನದಿಂದ ಒಂದೆಡೆ ನೆಲೆಸಲು ಯಾವಾಗ ಆರಂಭಿಸಿದನೋ ಆವಾಗಿನಿಂದಲೇ ಕೆಲಸದ ಹಂಚಿಕೆಗಳು ಆರಂಭವಾದವು. ಪುರುಷ ಬೇಟೆಯಾಡಲು ಹೊರ ಹೋದರೆ ಮಹಿಳೆ ಮನೆಯಲ್ಲಿಯೇ ಇರುತ್ತಿದ್ದಳು. ಬೆಂಕಿಯ ಬಳಕೆಯ ಬಗ್ಗೆ ಯಾವಾಗ ತಿಳಿದುಕೊಂಡನೋ ಆವಾಗಿನಿಂದ ಪ್ರಾಣಿಗಳ ಬೇಟೆಯನ್ನೇ ಆಹಾರಕ್ಕೆಂದು ನಂಬಿದ. ನಂತರದಲ್ಲಿ ಬೇಟೆಯಾಡಲು ಬೇಕಾದ ಸಲಕರಣೆಗಳನ್ನು ತಯಾರಿಸಿಕೊಂಡನು. ಇವರು ಒಂದೊಂದು ಗುಂಪಿನಲ್ಲಿ ವಾಸಮಾಡುತ್ತಿದ್ದರು. ಹೀಗೆ ಹಲವಾರು ಬಣಗಳು ರಚನೆಗೊಂಡಿದ್ದವು. ಈ ಬಣಗಳಲ್ಲಿ "ಕೂಟ ವಿವಾಹ" ಪದ್ಧತಿ ಜಾರಿಯಲ್ಲಿತ್ತು. ಅಂದರೆ ಸಹೋದರ–ಸಹೋದರಿಯರಲ್ಲಿ, ತಂದೆ–ತಾಯಿ ತಮ್ಮ ಮಕ್ಕಳೊಂದಿಗೆ ವಿವಾಹವಾಗುತ್ತಿದ್ದರು. ಆಗಿನ ಕಾಲಕ್ಕೆ ಅಸೂಯೆ, ಸ್ವಂತಕ್ಕಾಗಿ ಪಡೆಯಬೇಕೆಂಬ ಸ್ವಾರ್ಥ, ಸ್ವಂತ ಆಸ್ತಿಯ ಪರಿಕಲ್ಪನೆಗಳೇ ಇರಲಿಲ್ಲ. ಈ ಹಂತದಲ್ಲಿ ಸ್ತ್ರೀಯು ಉಚ್ಚ ಸ್ಥಾನವನ್ನು ಹೊಂದಿದ್ದಳು. ಕಾಲಾನಂತರದಲ್ಲಿ ಮಡಿಕೆ ತಯಾರಿಕೆ, ಆಯುಧಗಳ ಬಳಕೆ, ಬೇಸಾಯಕ್ಕೆ ದನಗಳನ್ನು, ಭೂಮಿಯನ್ನು ಎಲ್ಲವನ್ನೂ ತನ್ನ ಆಸ್ತಿಯನ್ನಾಗಿ ಮಾಡಿಕೊಂಡ. ಬಣದ ಸದಸ್ಯರ ಸಂಖ್ಯೆ ಅಧಿಕವಾಗಿ ಸಾಗಿದಂತೆಲ್ಲಾ ಉತ್ಪಾದನೆಯನ್ನೂ ಹೆಚ್ಚಿಸತೊಡಗಿದ. ಅನಂತರದಲ್ಲಿ ತನ್ನ ಬಣದಲ್ಲಿಯೇ ಮದುವೆ ಯಾಗುವುದನ್ನು ನಿಷೇಧಿಸಿದ. ಮತ್ತೊಂದು ಬಣದೊಂದಿಗೆ ಸಂಬಂಧವನ್ನು ಏರ್ಪಡಿಸಿಕೊಂಡ. ಇದರಿಂದಾಗಿ ಕೂಡಿಕೆ ವಿವಾಹ ಜಾರಿಯಾಯಿತು. ಇಲ್ಲಿಂದ ವಿವಾಹ ನಿರ್ಬಂಧಗಳು ಏರ್ಪಟ್ಟವು. ಸಹೋದರ ಮತ್ತು ಸಹೋದರಿಯರ ವಿವಾಹವನ್ನು ನಿಷೇಧಿಸಲಾಯಿತು. ಕೂಡಿಕೆ ವಿವಾಹವು ಸಂಪ್ರದಾಯದಲ್ಲಿ ಪಾತಿವ್ರತ್ಯವನ್ನು ಆರೋಪಿಸಲಾಯಿತು. ಅಂದಿನಿಂದ ಒಬ್ಬ ಗಂಡಸಿಗೆ ಒಂದು ಹೆಣ್ಣು ಎಂಬುದು ರೂಢಿಗೆ ಬಂತು. ಆಹಾರಕ್ಕಾಗಿ ಬೇಕಾದ ಕಚ್ಚಾ ವಸ್ತುಗಳನ್ನು ಒದಗಿಸುವುದು ಪುರುಷ ಎಂಬುದಾಗಿಯೂ, ಮನೆ, ಮಕ್ಕಳು, ನೇಯ್ಗೆ, ಹೊಲಿಗೆ ಮುಂತಾದವು ಸ್ತ್ರೀಗೆ ಹಂಚಿಕೆಯಾದವು. ಇದರಿಂದಾಗಿ ಸ್ತ್ರೀ–ಪುರುಷರು ಉತ್ಪಾದನೆ ಉಪಕರಣಗಳು ಅವರವರ ಆಸ್ತಿಗಳಾದವು. ಭೂಮಿ, ಸಾಕು ಪ್ರಾಣಿಗಳು, ಆಯುಧಗಳು ಪುರುಷನ ಖಾಸಗಿ ಆಸ್ತಿಗಳಾದವು. ಪುರುಷನ ಅಧೀನದಲ್ಲಿದ್ದಂತಹ ಉಪಕರಣಗಳಿಂದ ಉತ್ಪಾದನೆ ಆರಂಭವಾಯಿತು. ಹೀಗೆ ಮಹಿಳೆ ಹಂತಹಂತವಾಗಿ ಪುರುಷನ ಅಧೀನಕ್ಕೆ ಒಳಪಟ್ಟಳು. ಕಾಲಾನಂತರದಲ್ಲಿ ಈ ಕೂಡಿಕೆ ವಿವಾಹವು ಮರೆಯಾಗಿ ಇದರ ಭಾಗದಲ್ಲಿ ಏಕಪತಿ ವಿವಾಹ ಜಾರಿಗೆ ಬಂದಿತು. ಆ ಸಂದರ್ಭದಲ್ಲಿ ಸ್ತ್ರೀಯರ ಸ್ಥಾನ ತುಂಬಾ ಕೆಳಹಂತಕ್ಕೆ ತಳ್ಳಲ್ಪಟ್ಟಿತು. ಆದರೂ ತಾಯಿಯ ಹಕ್ಕು ಮಾತ್ರ ಹಾಗೆಯೇ ಉಳಿದುಕೊಂಡಿತ್ತು. ಗಂಡ ಆಸ್ತಿಯ

ಮಾಲೀಕನಾದರೂ ಅದನ್ನು ತನ್ನ ಸಂತತಿಗೆ ವಾರಸುದಾರತ್ವ ಕೊಡಲು ತಾಯಿಯ ಹಕ್ಕು ಅಡ್ಡಿಯಾಗಿತ್ತು. ಆ ಕಾರಣಕ್ಕಾಗಿ ತಾಯಿಯ ಹಕ್ಕನ್ನು ಕುಟುಂಬದಿಂದ ಕಿತ್ತೊಗೆಯಲು ಪುರುಷ ಯೋಚಿಸತೊಡಗಿದ. ಆ ಸಂದರ್ಭಕ್ಕಾಗಲೇ ಪುರುಷ ಮಹಿಳೆಗಿಂತ ತುಂಬಾ ಬಲಿಷ್ಠನಾಗಿದ್ದ. ಆ ಕಾರಣಕ್ಕೆ ಪ್ರತಿಯೊಂದು ಉತ್ಪಾದನಾ ಚಟುವಟಿಕೆಗಳಿಗೂ ಪುರುಷನ ಪಾತ್ರ ಬಹಳ ಮಹತ್ವದ್ದಾಗಿತ್ತು. ನಂತರದಲ್ಲಿ ಪುರುಷ ಕುಟುಂಬದಲ್ಲಿನ ಅಧಿಕಾರವನ್ನು ವಹಿಸಿಕೊಂಡ. ಯಾವಾಗ ತನ್ನ ಕುಟುಂಬದ ಅಧಿಕಾರವನ್ನು ಪುರುಷ ಹೊಂದಿದನೋ ಆವಾಗಿನಿಂದ ಮಹಿಳೆ ಆಸ್ತಿ ಹಕ್ಕಿನಿಂದ ವಂಚಿತಳಾದಳು. ಹೆಣ್ಣು ಈ ಸಂದರ್ಭದಲ್ಲಿ ಪುರುಷನ ಅಡಿಯಾಳಾಗಿಯೇ ಇರುವಂತೆ ರೂಪಿಸಲ್ಪಟ್ಟಳು. ಹೀಗೆ ಮಾತೃಪ್ರಧಾನತೆ ಇರುವಂತಹ ಸ್ಥಾನದಲ್ಲಿ ಪಿತೃಪ್ರಧಾನತೆ ಸ್ಥಾಪಿತವಾಯಿತು. ಮಹಿಳೆ ಈ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಡಿ ಸಿಲುಕಿ ಅದರಿಂದ ಹೊರಬರಲಾಗದೇ ಹಲವಾರು ಬಗೆಯ ಹಿಂಸೆಯನ್ನು ಅನುಭವಿಸುತ್ತಲೇ ಬಂದಿದ್ದಾಳೆ.

"ಕೃಷಿಯು ಸಂಘಟಿಸಲ್ಪಟ್ಟು ಅದು ಆಹಾರ ಪೂರೈಕೆಯ ಪ್ರತಿ ಮೂಲವಾಗಿ ಪರಿಣಮಿಸಿದ ನಂತರದಲ್ಲಿ ಪುರುಷರು ಶಾಶ್ವತವಾಗಿ ನೆಲೆನಿಲ್ಲುವುದು ಆರಂಭವಾಯಿತು. ಪ್ರಾಯಶಃ ಇದು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಆರಂಭವೆಂದು ತೋರುತ್ತದೆ. ಧರ್ಮದ ಸಂಬಂಧ ರಾಜ್ಯ, ಸಾಮ್ರಾಜ್ಯಗಳ ಹುಟ್ಟು ಮತ್ತು ಬೆಳವಣಿಗೆ ವ್ಯಾಪಕವಾದಂತೆ ಕ್ರಿಸ್ತಶಕದಿಂದೀಚೆಗೆ ಕ್ರಮೇಣವಾಗಿ ಪುರುಷನು ಭೂ ಸಂಪನ್ಮೂಲಗಳ ಮೇಲೆ ಪ್ರಭುತ್ವ ಸಾಧಿಸಿದಂತೆ, ಫಲವಂತಿಕೆಯ ಮೇಲೂ ತನ್ನ ಪ್ರಭುತ್ವವನ್ನು ಸಾಧಿಸಿದನು. ಇದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಅವಸಾನದ ಮತ್ತು ಹೆಣ್ಣಿನ ಶೋಷಣೆಯ ಪ್ರಾರಂಭವನ್ನು ಪ್ರತಿನಿಧಿಸುವುದು. ಅಂದರೆ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಪ್ರತಿನಿಧಿಸುವುದು"[೧೮].

ಇನ್ನೂ ಕೆಲವು ಅಭಿಪ್ರಾಯಗಳಂತೆ "ಕೃಷಿ ಹಾಗೂ ಅದರ ಉಪಭೋಗಗಳಿಂದ ಮಾತೃ ಸಮಾಜ ತನ್ನ ಅವನತಿಯನ್ನು ಹೊಂದುತ್ತಾ ನಡೆದಂತೆ ಪಿತೃಪ್ರಧಾನ ಸಮಾಜದ ಕಡೆ ಮುಖ ಮಾಡಿತು. ಹೀಗೆ ಪಿತೃಪ್ರಧಾನ ವ್ಯವಸ್ಥೆಗೆ ಸ್ಥಿತ್ಯಂತರಗೊಂಡಾಗ ತಾಯಿಯ ಬದಲಾಗಿ ತಂದೆಗೆ ಹೆಚ್ಚು ಮನ್ನಣೆ ದೊರೆಯಿತು. ಮಾತೃಪ್ರಧಾನ ಸಾಮಾಜಿಕ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಗೆ ಸ್ಥಿತ್ಯಂತರಗೊಂಡಿದ್ದನ್ನು As the great historical defeat of the faminine sex ಎಂದು ಹೇಳಲಾಗಿದೆ"[೧೯]. ಈ ಕಾರಣದಿಂದಾಗಿ ಮಹಿಳೆಯರ ಜೀವನ ಕ್ರಮವೂ ಬದಲಾಗುತ್ತಾ ಸಾಗಿತು. ಮುಖ್ಯವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ಯಾವ ವಿಧದಿಂದಲೂ ಪುರುಷರಿಗೆ ಸಮಾನಳಲ್ಲ. ಹಾಗಾಗಿ ಅವಳು ಮನೆಯ ಒಳಗಿನ ಕೆಲಸಗಳನ್ನು ಮಾಡಲು ಮಾತ್ರ ಸೀಮಿತಳು ಎಂಬ ಅಭಿಪ್ರಾಯ ಮೂಡಿಬಂದಿತು. ಹಾಗಾಗಿ ಮಕ್ಕಳನ್ನು ಪಡೆಯುವಲ್ಲಿ ಗಂಡಿನದೇ ಪ್ರಧಾನ ಪಾತ್ರ ವಹಿಸುತ್ತದೆ ಎಂಬ ಅಂಶವೂ ಕೂಡ ಮಹಿಳೆಯರ ಅಧೋಗತಿಗೆ ಕಾರಣವಾಯಿತು. ಹೀಗೆ ಹಲವು ಬಗೆಯಲ್ಲಿ ಮಹಿಳೆ ಕುಟುಂಬದಲ್ಲಿ ತನ್ನ ಅಸ್ತಿತ್ವವನ್ನು

ಕಳೆದುಕೊಂಡಳು. ಹಾಗಾಗಿಯೇ ಇಂದು ಜಾರಿಯಲ್ಲಿರುವ ಮೌಲ್ಯಗಳೆಲ್ಲವೂ ಪುರುಷನಿಗೆ ಪೂರಕವಾಗಿ ಮತ್ತು ಮಹಿಳೆಯರಿಗೆ ಮಾರಕವಾಗಿದ್ದನ್ನು ಗಮನಿಸಬಹುದು.

ಉತ್ತರಾಧಿಕಾರ ಅಥವಾ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಮಾತೃಪ್ರಧಾನ ಸಮಾಜ ಶಿಥಿಲಗೊಂಡು ಪಿತೃಪ್ರಧಾನ ಸಮಾಜ ರೂಪುಗೊಳ್ಳುವಂಥ ಸಮಯದಲ್ಲಿ ಉತ್ತರಾಧಿಕಾರದ ಅವಸ್ಥೆ ಹೇಗೆ ಬದಲಾಗುತ್ತಾ ಸಾಗಿತು ಎನ್ನುವುದಕ್ಕೆ ಒಂದು ಉತ್ತಮ ಉದಾಹರಣೆಯನ್ನು ಇತಿಹಾಸದಿಂದಲೇ ನೋಡಬಹುದಾಗಿದೆ. ಅಂದರೆ ರೋಮ್ ಸಾಮ್ರಾಜ್ಯದ ಇತಿಹಾಸದಲ್ಲಿ ಮಾವನ ಆಸ್ತಿಯನ್ನು ಅಳಿಯನು ಪಡೆಯುವುದನ್ನು ಕಾಣಬಹುದಾಗಿದೆ. ಅಂದರೆ "ರೋಮ್ ಸಾಮ್ರಾಜ್ಯದಲ್ಲಿನ ರಾಜ ಸಂತತಿಯಲ್ಲಿ ಮಾವನ (ಹೆಂಡತಿ ತಂದೆ) ಆಸ್ತಿ ಅಳಿಯಂದಿರಿಗೇ ಸೇರುತ್ತದೆ. ಇದು ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಗೆ ಸಾಗುತ್ತಿರುವುದರ ಹಂತವೆಂದು ಹೇಳಬಹುದು"[೨೦].

೧೮೭೭ರಲ್ಲಿ ಪ್ರಕಟವಾದ ಮಾರ್ಗನ್‌ನ "ಪುರಾತನ ಸಮಾಜ" ಎಂಬ ಪುಸ್ತಕವು ಕೌಟುಂಬಿಕ ಬಾಂಧವ್ಯಗಳ ಸ್ವರೂಪವನ್ನು ವಿವರವಾಗಿ ವಿಶ್ಲೇಷಿಸುತ್ತದೆ. ಮಾನವ ಕುಲದ ಇತಿಹಾಸವನ್ನು ಮಾರ್ಗನ್‌ರವರು ಕಿರತಾವಸ್ಥೆ, ಅನಾಗರಿಕಾವಸ್ಥೆ ಹಾಗೂ ನಾಗರೀಕಾವಸ್ಥೆ ಎಂಬ ಮೂರು ಕಾಲಘಟ್ಟಗಳಲ್ಲಿ ವರ್ಗೀಕರಿಸುತ್ತಾರೆ. ಮುಖ್ಯವಾಗಿ ಇವರ ಅಭಿಪ್ರಾಯದಂತೆ ಕಿರಾತಾವಸ್ಥೆ, ಅನಾಗರೀಕಾವಸ್ಥೆಗಳಲ್ಲಿ ಮಹಿಳೆಗೆ ಉತ್ತಮವಾದ ಸ್ಥಾನಮಾನಗಳು ಇದ್ದವು. ನಂತರ ನಾಗರಿಕಾವಸ್ಥೆ ಯಾವಾಗ ಆರಂಭವಾಯಿತೋ ಅಂದಿನಿಂದ ಮಹಿಳೆಯ ಅವನತಿ ಪ್ರಾರಂಭವಾಯಿತು. ದುಡಿಮೆಯಿಂದ ದೊರೆತ ಸಂಪತ್ತು ಕುಟುಂಬಗಳ ಖಾಸಗಿ ಆಸ್ತಿಯಾಗಿ ಪರಿಣಮಿಸಿದಾಗ ಅಲ್ಲಿಯವರೆಗೆ ಜಾರಿಯಲ್ಲಿದ್ದ ಯುಗ್ಮ ವಿವಾಹ ಹಾಗೂ ಮಾತೃ ಅಧಿಕಾರ ಗೋತ್ರದ ಕುಟುಂಬ ಪದ್ಧತಿಯ ಮೇಲೆ ಪರಿಣಾಮ ಬೀರಿತು. "ಮಾನವ ಕುಲದ ಅತ್ಯಂತ ಕ್ರಾಂತಿಕಾರಕ ಘಟನೆಯೆಂದರೆ ಸಂತತಿಯ ಮೇಲಿನ ಮಾತೃ ಅಧಿಕಾರವನ್ನು ಕಿತ್ತೊಗೆದು ಪಿತೃ ಅಧಿಕಾರವನ್ನು ಜಾರಿಗೊಳಿಸಿದ್ದೇ ಆಗಿದೆ. ಅಂದರೆ ಕುಟುಂಬದಲ್ಲಿ ಸಂಪತ್ತು ಅಧಿಕವಾದಂತೆ ಗಂಡಸಿಗೆ ಅದು ಪ್ರಮುಖ ಸ್ಥಾನವನ್ನು ಒದಗಿಸಿಕೊಟ್ಟಿತು. ಈ ಹೊಸ ಸ್ಥಾನಮಾನದ ದೃಢೀಕರಣದಿಂದ ಆಸ್ತಿಯ ಉತ್ತರಾಧಿಕಾರತ್ವ ದೊರಕುವಂತೆ ಮಾಡಲಾಯಿತು"[೨೧].

ಕೆಲವು ಸಂಪ್ರದಾಯವಾದಿಗಳ ಪ್ರಕಾರ ಪಿತೃಪ್ರಧಾನತೆ ಎಂಬುದು ಜೀವ ವೈಜ್ಞಾನಿಕವಾಗಿ ಅಥವಾ ಸಹಜವಾಗಿ ನಿರ್ಧರಿತವಾಗುವ ಒಂದು ವ್ಯವಸ್ಥೆ ಹಾಗಾಗಿ ಮಹಿಳೆಯರು ಸಹಜವಾಗಿ ಕೆಳಮಟ್ಟದವರು ಆದ್ದರಿಂದ ಅವರು ಪುರುಷರಿಗೆ ಅಧೀನರಾಗಿಯೇ ಇರಬೇಕು ಎನ್ನುತ್ತಾರೆ. ಹಾಗೆಯೇ ಸ್ತ್ರೀವಾದಿ ಸಿದ್ಧಾಂತಗಳೂ ಸಹ ಪಿತೃಪ್ರಧಾನ ವ್ಯವಸ್ಥೆಯ ಹುಟ್ಟಿನ ಬಗೆಗೆ ಮಾತನಾಡುತ್ತವೆ. ಮುಖ್ಯವಾಗಿ ಉದಾರವಾದಿ ಸ್ತ್ರೀವಾದಿ ಸಿದ್ಧಾಂತದ ಪ್ರತಿಪಾದಕಿಯಾದ ಮೇರಿ ವುಲ್‌ಸ್ಟೋನ್ ಕ್ರಾಫ್ಟ್ ಬರೆದ 'A vindication of the rights of

women' ಎಂಬ ಗ್ರಂಥದಲ್ಲಿ ಪಿತೃಪ್ರಧಾನತೆಯನ್ನು ನೇರವಾಗಿ ಪ್ರಶ್ನಿಸದಿದ್ದರೂ ಪರೋಕ್ಷವಾಗಿ ಪ್ರಶ್ನಿಸಿರುವುದು ಕಂಡುಬರುತ್ತದೆ. ಇವರು ಹೇಳುವಂತೆ "ಸ್ತ್ರೀಯರನ್ನು ಶಿಕ್ಷಣ ಮತ್ತು ವೈಜ್ಞಾನಿಕತೆ ಯಿಂದ ವಂಚಿತರನ್ನಾಗಿಸುವ ಮೂಲಕ ಪಿತೃಪ್ರಧಾನತೆ ಬೇರೂರುವಂತೆ ಮಾಡಲಾಯಿತು" ಎನ್ನುತ್ತಾರೆ. ಹಾಗೆಯೇ ಜೆ.ಎಸ್.ಮಿಲ್ ಎನ್ನುವವರು "ಮಹಿಳೆಯರು ಸಹಜವಾಗಿಯೇ ಅಧೀನರು ಎಂದು ನಂಬುವ ಪುರುಷರು ಅಜ್ಞಾನದಿಂದ ಸೃಷ್ಟಿಸಿದ ವ್ಯವಸ್ಥೆ ಈ ಪಿತೃಪ್ರಧಾನ ವ್ಯವಸ್ಥೆ" ಎನ್ನುತ್ತಾರೆ. ಮಾರ್ಕ್ಸ್‌ವಾದದ ಪ್ರತಿಪಾದಕರಾದ ಫ್ರೆಡ್ರಿಕ್ ಏಂಗೆಲ್ಸ್ ತನ್ನ 'Origins of the family, private and the state' ಎಂಬ ಪುಸ್ತಕದಲ್ಲಿ "ಖಾಸಗೀ ಆಸ್ತಿಯ ಪರಿಕಲ್ಪನೆಯೊಂದಿಗೆಯೇ ಮಹಿಳೆಯ ಅಧೀನತೆ ಪ್ರಾರಂಭವಾಯಿತು. ಇದರೊಂದಿಗೆ ಜಗತ್ತಿನ ಸ್ತ್ರೀಯರ ಚಾರಿತ್ರಿಕ ಸೋಲು ಪ್ರಾರಂಭವಾಯಿತು"[೨೨] ಎನ್ನುತ್ತಾನೆ.

ಸಮಾಜವಾದಿ ಮಹಿಳಾವಾದಿಯಾದ ಝಿಯಲ್ಲಾ ಐನ್‌ಸ್ಟೇನ್ ತನ್ನ 'ಕ್ಯಾಪಿಟಲಿಸ್ಟ್ ಪೇಟ್ರಿಯಾರ್ಕಿ' ಎನ್ನುವ ಪುಸ್ತಕದಲ್ಲಿ "ಪಿತೃಪ್ರಧಾನತೆ ಆರ್ಥಿಕತೆ ಮತ್ತು ಲೈಂಗಿಕತೆಗಳ ಮಿಶ್ರಣ" ಎನ್ನುತ್ತಾರೆ. ಇವರು ಹೀಗೆ ಹೇಳುವುದರ ಮೂಲಕ ಪ್ರಜನನ ಮತ್ತು ಉತ್ಪಾದನೆ ಇವುಗಳ ನಡುವೆ ಇರುವ ಸಂಬಂಧದ ಬಗೆಗೆ ತಮ್ಮ ಗಮನವನ್ನು ಹರಿಸುತ್ತಾರೆ. ಆ ಮೂಲಕ ಬಂಡವಾಳಶಾಹಿಯ ನಡುವಿನ ಕುಟುಂಬದ ಪಾತ್ರವನ್ನು ಅರ್ಥಮಾಡಿಕೊಳ್ಳಲು ಯತ್ನಿಸುತ್ತಾರೆ. ಹಾಗೆಯೇ ಭಾರತದ ಪ್ರಮುಖ ಮಹಿಳಾವಾದಿ ಉಮಾ ಚಕ್ರವರ್ತಿ ಅವರು "ಪಿತೃಪ್ರಧಾನ ವ್ಯವಸ್ಥೆ ಅಸ್ತಿತ್ವಕ್ಕೆ ಬಂದುದಕ್ಕೆ ಕಾರಣ ಜಾತಿ ಮತ್ತು ಲಿಂಗವ್ಯವಸ್ಥೆ ಹಾಗೆಯೇ ಶ್ರಮ ವಿಭಜನೆಯೂ ಇದಕ್ಕೆ ಕಾರಣ"[೨೩] ಎಂದು ಹೇಳುತ್ತಾರೆ. ಹೀಗೆ ಪಿತೃಪ್ರಧಾನ ವ್ಯವಸ್ಥೆಯ ಕುರಿತಂತೆ ಹಲವಾರು ಅಭಿಪ್ರಾಯಗಳು ಇರುವುದನ್ನು ಕಾಣಬಹುದಾಗಿದೆ. ಆದರೆ ನಿಖರವಾಗಿ ಒಂದು ಅಭಿಪ್ರಾಯಕ್ಕೆ ಬರುವುದು ಕಷ್ಟಸಾಧ್ಯವಾಗಿದೆ. ಹೀಗೆ ಒಂದು ಕಾಲಘಟ್ಟದಲ್ಲಿ ಮಹಿಳೆ ಪ್ರಮುಖವಾದ ಸ್ಥಾನವನ್ನು, ಅಧಿಕಾರವನ್ನು ಹೊಂದಿದ್ದಳು. ಅದು ಕ್ರಮೇಣವಾಗಿ ಹಲವು ಕಾರಣಗಳಿಗಾಗಿ ಆ ಸ್ಥಾನವನ್ನು ಪುರುಷನು ಆಕ್ರಮಿಸಿದನು. ಆ ಕಾರಣಕ್ಕಾಗಿ ಮಹಿಳೆಯ ಸಂತತಿಯ ಮೂಲಕ ವಂಶವನ್ನು ನಿರ್ಧರಿಸುವುದನ್ನು ಮತ್ತು ಉತ್ತರಾಧಿಕಾರ ಪಡೆಯುವ ಹಕ್ಕನ್ನು ಮಹಿಳೆ ಕಳೆದುಕೊಂಡಳು. ಈ ಉತ್ತರಾಧಿಕಾರದ ಹಕ್ಕನ್ನು ಪುರುಷ ಪಡೆದುಕೊಂಡನು. ಇವುಗಳ ಮದ್ಯದಲ್ಲಿಯೇ ಭಾರತದಲ್ಲಿ ಹಲವಾರು ಬುಡಕಟ್ಟು ಸಮುದಾಯಗಳು ಇಂದಿಗೂ ತಮ್ಮ ಸಮುದಾಯದ ವಂಶಾವಳಿಯನ್ನು ಮಾತೃಪ್ರಧಾನತೆಯ ಮೂಲಕ ಮತ್ತು ಪಿತೃಪ್ರಧಾನತೆಯ ಮೂಲಕ ಗುರುತಿಸುವುದು ಕಂಡುಬರುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮಿಸೌರಿ ಬುಡಕಟ್ಟುಗಳು. ಇವು ಎಂಟು ಬಗೆಯಲ್ಲಿವೆ. ಈ ಎಂಟರಲ್ಲಿ ಆರು ಬುಡಕಟ್ಟುಗಳು ಪುರುಷನಿಂದ ವಂಶಾವಳಿಯನ್ನು ಗುರುತಿಸುವ ಪದ್ಧತಿಯನ್ನು ಹೊಂದಿವೆ. ಉಳಿದ ಎರಡು ಬುಡಕಟ್ಟು ಗುಂಪುಗಳಲ್ಲಿ ಸ್ತ್ರೀ ಸಂತತಿಯಿಂದ ವಂಶಾವಳಿ ಗುರುತಿಸುವ ಪದ್ಧತಿ ಹೊಂದಿವೆ. ಕೆಲವು ಬುಡಕಟ್ಟು ಗುಂಪುಗಳಲ್ಲಿ ಆಸ್ತಿಯನ್ನು ಪಡೆಯುವುದಕ್ಕೆ

ಅನುಕೂಲವಾಗುವಂತೆ ತಂದೆಯ ಗೋತ್ರದಲ್ಲಿರುವ ಹೆಸರನ್ನು ಮಕ್ಕಳಿಗೆ ಇಡುವ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ. ಈ ಕುರಿತಂತೆ ಮಾರ್ಕ್ಸ್ ಹಲವು ಬಗೆಯಲ್ಲಿ ಟೀಕೆಯನ್ನು ಮಾಡುತ್ತಾನೆ. "ಹೆಸರನ್ನು ಬದಲಿಸುವ ಮೂಲಕ ವಸ್ತುಗಳನ್ನು ಬದಲಿಸಲು ಹವಣಿಸುವುದು ಮಾನವನ ಅಂತರ್ಗತ ಕುತರ್ಕ! ನೇರ ಹಿತಾಸಕ್ತಿಯು ಸಾಕಷ್ಟು ಪ್ರೇರಣೆ ಒದಗಿಸಿದೆಡೆಯಲ್ಲೆಲ್ಲ, ಪರಂಪರೆಯನ್ನು ಮುರಿಯಲು ಪರಂಪರೆಯಲ್ಲಿಯೇ ಉಪಾಯಗಳನ್ನು ಕಂಡುಕೊಳ್ಳುವುದು"[೨೪]. ಹೀಗೆ ಪುರುಷನು ತನ್ನ ಅಸ್ತಿತ್ವವನ್ನು ನೆಲೆಯೂರಿಸಿಕೊಳ್ಳಲು ಏನೆಲ್ಲಾ ಉಪಾಯಗಳನ್ನು ಮಾಡಬೇಕೋ ಅವುಗಳೆಲ್ಲವನ್ನು ಮಾಡಿದನು. ಆ ಕಾರಣಕ್ಕಾಗಿಯೇ ಇಂದಿಗೂ ಪುರುಷ ಅಧಿಕಾರ ಕೇಂದ್ರದಲ್ಲಿರುವುದನ್ನು ಕಾಣುತ್ತೇವೆ. ಮುಖ್ಯವಾಗಿ ಮಹಿಳೆಯರು ಧರ್ಮ, ಕುಟುಂಬ, ವಿವಾಹಗಳಂಥ ಸಂಸ್ಥೆಗಳ ನಿಯಮಗಳಿಗೆ ಬದ್ಧರಾಗಿರುವುದರಿಂದ ಅಧೀನ ನೆಲೆಗೆ ಬಂದುಬಿಟ್ಟಿದ್ದಾರೆ. ಈ ಹಿಂದೆಯೇ ಹೇಳಿದಂತೆ ವಿವಾಹವು ಮಹಿಳೆಯರ ಆಸ್ತಿಹಕ್ಕನ್ನು ಪುರುಷ ನೆಲೆಯಲ್ಲಿಯೇ ಗುರುತಿಸುವಂತೆ ಮಾಡುತ್ತದೆ. ಮುಖ್ಯವಾಗಿ ವಿವಾಹದ ನಿಯಮಗಳಂತೂ ಯಾವ ಧರ್ಮದಲ್ಲಿಯೂ ಮಹಿಳೆಯ ಪರವಾಗಿ ಇಲ್ಲ. ಅದು ಏನಿದ್ದರೂ ಪುರುಷನ ಹಕ್ಕುಗಳನ್ನು ಮತ್ತು ಮಹಿಳೆಯರ ಖಚಿತವಾದ ಬಾಧ್ಯತೆಗಳನ್ನು ಮತ್ತು ಹಕ್ಕುಗಳನ್ನು ಹೇಳುವ ವಿಧಿಯೇ ಆಗಿರುವುದನ್ನು ಕಾಣಬಹುದಾಗಿದೆ. ಹಿಂದೂ ಧರ್ಮವು ಮಹಿಳೆಗೆ ಅತ್ಯುನ್ನತವಾದ ಸ್ಥಾನವನ್ನು ಮತ್ತು ಗೌರವವನ್ನು ಒದಗಿಸಿಕೊಡುವುದರ ಮೂಲಕ ಪೂಜ್ಯನೀಯವಾಗಿಸಿದೆ. ಆದರೆ ಇದೇ ಧರ್ಮ ಗೌರವ, ಅತ್ಯುನ್ನತ ಸ್ಥಾನದ ಹೆಸರಿನಲ್ಲಿ ಮಹಿಳೆಯನ್ನು ಅಧೀನ ನೆಲೆಗೆ ತಳ್ಳಲ್ಪಟ್ಟಿದೆ. ಅಂದರೆ ಮಹಿಳೆಗೆ ಯಾವುದೇ ಸ್ವಾತಂತ್ರ್ಯವಿರದ ಹಾಗೆ ನೋಡಿಕೊಳ್ಳುತ್ತಿದೆ. ಅಂದರೆ ಮಹಿಳೆ ಯಾವಾಗಲೂ ಪುರುಷರ ರಕ್ಷಣೆಯಲ್ಲಿಯೇ ಇರಬೇಕು ಎಂದು ಹೇಳುತ್ತದೆ. ವಿವಾಹದ ಮೂಲಕ ಇನ್ನೊಬ್ಬರ ಸ್ವತ್ತಾಗುವ ಮಹಿಳೆ ಪತ್ನಿಯಾಗಿ ತನ್ನ ಕರ್ತವ್ಯಗಳನ್ನು ಅತ್ಯಂತ ಜವಾಬ್ದಾರಿಯಿಂದ ನಿರ್ವಹಿಸಬೇಕಾದ ಅನಿವಾರ್ಯತೆಗೆ ಒಳಗಾಗುವಂತೆ ಮಾಡಲಾಗಿದೆ. ಮಹಿಳೆ ಧರ್ಮ, ಸಂಪ್ರದಾಯ, ಸಾಮಾಜಿಕ ಆಚರಣೆಗಳು ಹಾಕಿಕೊಡುವ ಸೀಮಿತ ಚೌಕಟ್ಟಿನಲ್ಲಿಯೇ ಕಾರ್ಯನಿರ್ವಹಿಸಬೇಕು. ಮಹಿಳೆಯ ಮುಂದೆ 'ಆದರ್ಶ ನಾರಿ' ಎಂಬ ಬೃಹತ್ತಾದ ಒಂದು ಆಶಾಗೋಪುರವನ್ನು ಸೃಷ್ಟಿಸಲಾಗಿದೆ. ಈ ಆದರ್ಶನಾರಿಯ ಕಲ್ಪನೆಯಲ್ಲಿ ಸಮಾಜ ಒಪ್ಪಿತ ಕಾರ್ಯಗಳನ್ನು ಮಾಡಲು ಮುಂದಾಗುತ್ತಿದ್ದಾಳೆ. ಅಂದರೆ ಆದರ್ಶನಾರಿಯಾದವಳು ಪತಿಗಾಗಿ ಎಂಥಹ ತ್ಯಾಗಕ್ಕೂ ಸಿದ್ಧಳಾಗಬೇಕು ಮತ್ತು ಎಂಥಹದ್ದೇ ಕಷ್ಟವನ್ನಾದರೂ ಸಹಿಸುವಂತಿರಬೇಕು. ಈ ಮಾನದಂಡಗಳು ಸ್ತ್ರೀಯರಿಗೆ ಮಾತ್ರ ಮೀಸಲಾಗಿರುವುದರಿಂದ ಸೀತೆ, ಸಾವಿತ್ರಿ, ಪಾರ್ವತಿ ಇವರುಗಳು ಆದರ್ಶನಾರಿಯರ ಸಾಲಿಗೆ ಸೇರಲ್ಪಟ್ಟರು.

ದೇಶದ ಪ್ರಸಿದ್ಧ ಗ್ರಂಥಗಳಾದ ರಾಮಾಯಣ ಮತ್ತು ಮಹಾಭಾರತಗಳು ಈ ಆದರ್ಶನಾರಿಯ ಮತ್ತು ಪಾತಿವೃತ್ಯದ ಸಂಗತಿಗಳ ಕೋಶಗಳಾಗಿವೆ. ಇಲ್ಲಿ ಬರುವಂತಹ ಸ್ತ್ರೀ ಪಾತ್ರಗಳನ್ನು ಗಮನಿಸಿದರೆ ಈ ಅಂಶ ತಿಳಿದುಬರುತ್ತದೆ. ಮುಖ್ಯವಾಗಿ "ಅಹಲ್ಯಾ, ದ್ರೌಪದಿ,

ತಾರಾ, ಕುಂತಿ, ಮಂಡೋದರಿಯರು ಪ್ರಾರ್ಥನೆಗೆ ಅರ್ಹರಾದ ಗಣ್ಯ ಪಂಚಕನ್ಯೆಯರು, ಇವರನ್ನು ಸ್ಮರಿಸಿ ದಿನವನ್ನಾರಂಭಿಸಿದ ಹೆಂಗಸಿನ ಮಹಾಪಾತಕಗಳು ನಾಶವಾಗಿ ಬಿಡುತ್ತವೆ. ಎರಡನೆಯ ಗುಂಪು ಸೀತೆ, ಸಾವಿತ್ರಿ, ಪಾರ್ವತಿಯರದು. ಇವರೇ ಆದರ್ಶ ಸ್ತ್ರೀತ್ವದ ಮಾದರಿಗಳು. ಇವೆರಡೂ ಗುಂಪುಗಳಿಗೆ ಸೇರದಿದ್ದರೂ ನಮ್ಮ ಗಾಂಧಿ, ವಿವೇಕಾನಂದ, ರವೀಂದ್ರನಾಥರಂತಹ ಆಧುನಿಕ ಚಿಂತಕರ ಮೆಚ್ಚುಗೆ ಗಳಿಸಿದ ಇನ್ನು ಕೆಲವು ಪಾತ್ರಗಳಿವೆ. ದಮಯಂತಿ, ಶಕುಂತಲಾ, ಮೈತ್ರೇಯಿ,, ಸುಭದ್ರ, ಗಾಲವಿಯರು ವಿಭಿನ್ನ ಕಾರಣಗಳಿಗೆ ಗಳಿಸಿದ್ದಾರೆ. ಈ ಗುಂಪುಗಳನ್ನು ಉದ್ದೇಶ ಪೂರ್ವಕವಾಗಿಯೇ ಮಾಡಲಾಗಿದೆ. ಪ್ರಾರ್ಥನೆಗೆ ಸಲ್ಲುವವರು, ಮೆಚ್ಚುಗೆಗೆ ಪಾತ್ರರಾದವರು ಹಾಗೂ ಅನುಕರಣೀಯರು ಸ್ಥಾನಗಳಿಸಿದ್ದಾರೆ. ಆದರೆ ಪ್ರಸ್ತುತಕ್ಕೆ ಎಲ್ಲರೂ ಆದರ್ಶ ಮಾದರಿಗಳೇನಲ್ಲ. ಸೀತೆ, ಸಾವಿತ್ರಿ, ಪಾರ್ವತಿಯರನ್ನಷ್ಟೇ ಪ್ರತ್ಯೇಕವಾಗಿಸಿ ನಮ್ಮ ಹೆಣ್ಣು ಮಕ್ಕಳಿಗೆ ಆದರ್ಶ ಮಾದರಿಗಳೆಂದು ತೋರಿಸಲಾಗಿದೆ. ಉಳಿದ ಹೆಂಗಸರೆಲ್ಲರೂ ಒಂದಲ್ಲಾ ಒಂದು ಕಾರಣಕ್ಕೆ ವಿವಾಹದ ರೂಢಿಗತ ಚೌಕಟ್ಟಿನ ಆಚೆಗೆ ನಿಂತವರೇ ಆಗಿದ್ದಾರೆ. ಹಾಗೆಯೇ ಮೈತ್ರೇಯಿ, ಗಾಲವಿಯರಂತಹ ಬುದ್ಧಿ ಜೀವಿಗಳು. ಇವರುಗಳು ಪತಿದೇವರೆಂಬ ಪುರುಷರ ಬೌದ್ಧಿಕ ಸಾಮರ್ಥ್ಯಕ್ಕೆ ಸವಾಲೆಂಬಂತೆ ನಿಲ್ಲಬಲ್ಲ ಪಾಂಡಿತ್ಯವನ್ನು ಉಳ್ಳವರಾಗಿದ್ದಾರೆ. ಹಾಗಾಗಿ ಸೀತೆ, ಸಾವಿತ್ರಿ, ಪಾರ್ವತಿಯರು ಆದರ್ಶ ಸ್ತ್ರೀಯರಾಗುತ್ತಾರೆ"[39]. ಮುಖ್ಯವಾಗಿ ವಿವಾಹ ಮತ್ತು ಅದಕ್ಕೆ ಸಂಬಂಧಿಸಿದಂತೆ ಹಲವಾರು ಕಟ್ಟುಪಾಡುಗಳು ಮಹಿಳೆಯರ ಮೇಲೆ ಬಂದೆರಗುತ್ತವೆ. ಅಂದರೆ ಅವಿವಾಹಿತತನ, ವೈಧವ್ಯ, ರೂಢಿ ಸಂಪ್ರದಾಯಗಳು ಮಹಿಳೆಯರ ಹಕ್ಕು ಬಾಧ್ಯತೆಗಳನ್ನು ಕಿತ್ತುಕೊಂಡಿವೆ. ಹಾಗೆಯೇ ಪಾತಿವ್ರತ್ಯ, ಶೀಲ, ತಾಯ್ತನ, ಪತಿಗೆ ನಿಷ್ಠಯಿಂದಿರುವುದು, ವಂಶ ಬೆಳೆಸುವುದು ಇವನ್ನು ಮೀರುವುದು ಮಹಿಳೆಗೆ ನಿರ್ಬಂಧವಾಗಿದೆ. ಒಂದುವೇಳೆ ಮಹಿಳೆ ಇವುಗಳನ್ನು ಮೀರಿದ್ದೇ ಆದಲ್ಲಿ ಅವಳಿಗೆ ಕ್ಷಮೆ ಇಲ್ಲ. ಜೊತೆಗೆ ಶಿಕ್ಷೆ ಕಟ್ಟಿಟ್ಟ ಬುತ್ತಿ.



ವಿವಾಹವು ಮಹಿಳೆಗೆ ಪಾತಿವ್ರತ್ಯ ಎಂಬ ಮೌಲ್ಯವನ್ನು ಬಿತ್ತಿದೆ. ಪಾತಿವ್ರತ್ಯವನ್ನು ಕಾಪಾಡಿಕೊಳ್ಳುವುದೆ ಮಹಿಳೆಯ ಆದ್ಯ ಕರ್ತವ್ಯವಾಗಿರುತ್ತದೆ. ಇದಕ್ಕೆ ಇನ್ನಿಲ್ಲದ ಪಾಮುಖ್ಯತೆಯನ್ನು ಒದಗಿಸಿಕೊಡಲಾಗಿದೆ. ಮುಖ್ಯವಾಗಿ "ಹೀಗೆ ಪಾತಿವ್ರತ್ಯ ಇಷ್ಟೊಂದು ಮುಖ್ಯವಾಗಲು ಕಾರಣವೇನು, ಈ ಪ್ರಶ್ನೆ ಎದುರಾಗುತ್ತದೆ. ಆಸ್ತಿ ಎಂಬುದು ಸಮಾಜದಲ್ಲಿ ಅಸ್ತಿತ್ವ ಪಡೆದಾಗ ದೊಡ್ಡ ಸಮಸ್ಯೆ ತಲೆದೋರಿತು. ಅದನ್ನು ಸಂಪಾದಿಸಿದವರು ಗತಿಸಿದ ಮೇಲೆ ಯಾರಿಗೆ ಸಲ್ಲಬೇಕು? ಬಹಳ ಸರಳ ಉತ್ತರ ಅದು ಅವರ ಮಕ್ಕಳಿಗೆ ಸಲ್ಲಬೇಕು. ಇವರ ಮಕ್ಕಳೇ ಎಂದು ಖಾತ್ರಿಗೊಳಿಸುವುದು ಹೇಗೆ? ಅದಕ್ಕಿರುವುದು ಎರಡೇ ದಾರಿ. ಒಂದು ಮದುವೆಗೆ ಮೊದಲು ಹುಡುಗಿ ಕನ್ಯೆಯಾಗಿರಬೇಕು. ಎರಡು ಮದುವೆಯ ನಂತರ ಪತಿಗೆ ಮಾತ್ರ ನಿಷ್ಠಳಾಗಿರಬೇಕು. ಬೇರೆ ಯಾರೊಡನೆಯೂ ದೈಹಿಕ ಸಂಬಂಧ ಪಡೆಯಲಾಗದ ಸ್ಥಿತಿ ತರಬೇಕು. ಆದ್ದರಿಂದಲೇ ಪಾತಿವ್ರತ್ಯವೆಂಬ ಮೌಲ್ಯದ ಜೊತೆಗೇ ಶೀಲ, ಕನ್ಯತ್ವಗಳು ಪ್ರಾಮುಖ್ಯತೆ

ಪಡೆಯುತ್ತವೆ. ಅದನ್ನು ಖಾತರಿಗೊಳಿಸಿಕೊಳ್ಳುವುದಕ್ಕಾಗಿಯೇ ಹೆಣ್ಣಿನ ಮೇಲೆ ಎಲ್ಲಾ ನಿರ್ಬಂಧಗಳೂ ಹೇರಲ್ಪಟ್ಟಿವೆ. ಅವಳ ಸ್ವಾತಂತ್ರ್ಯವನ್ನು ಕಬಳಿಸಿವೆ. ಹೀಗೆ ಹೆಣ್ಣಿಗೆ ಆಸ್ತಿಯಲ್ಲಿ ಕಿಂಚಿತ್ ಪಾಲು ಇಲ್ಲದಿದ್ದರೂ ಅದು ಹೆಣ್ಣಿಗೆ ಉರುಳಾಗಿ ಅವಳನ್ನು ಗೃಹ/ ಅಂತಃಪುರ ಬಂಧಿಯಾಗಿ ಮಾಡಿದೆ.[illegible] ಹೀಗೆ ಪಾತಿವ್ರತ್ಯವು ಮಹಿಳೆಯರನ್ನು ಆಸ್ತಿಯಿಂದ ವಂಚಿತರನ್ನಾಗಿ ಮಾಡಿದೆ.

ಈ ವಿವಾಹ ಪದ್ಧತಿಯ ಮತ್ತೊಂದು ಮುಖವೆಂದರೆ ಬಾಲ್ಯವಿವಾಹ. ಈ ವಿವಾಹಕ್ಕೆ ಹಲವಾರು ಕಾರಣಗಳಿವೆಯಾದರೂ ಅವುಗಳಲ್ಲಿ ಮುಖ್ಯವಾಗಿ ಸಂಬಂಧಗಳನ್ನು ಉಳಿಸಿ ಕೊಳ್ಳುವುದು ಒಂದಾಗಿದೆ. ಹಾಗೆಯೇ ಈ ಸಂಬಂಧಗಳನ್ನು ಉಳಿಸಿಕೊಳ್ಳುವ ನೆಪದಲ್ಲಿ ಆಸ್ತಿಯನ್ನು ಕಾಪಾಡಿಕೊಳ್ಳುವುದೂ ಒಂದು ಕಾರಣವಾಗಿರುತ್ತದೆ. ಹಾಗಾಗಿಯೇ ಇದೊಂದು ಧಾರ್ಮಿಕ ಆಚರಣೆಯಾಗಿ ರೂಢಿಗೆ ಬಂದಿತ್ತು ಎಂಬುದನ್ನು ಹಲವಾರು ದಾಖಲೆಗಳಿಂದ ಗುರುತಿಸಬಹುದಾಗಿದೆ. ಹಾಗೆಯೇ ವರದಕ್ಷಿಣೆ ಪದ್ಧತಿ, ವೈಧವ್ಯ ಪದ್ಧತಿಗಳೂ ವಿವಾಹ ಸಂಸ್ಥೆಯಿಂದ ಹುಟ್ಟಿಕೊಂಡ ಶೋಷಣೆಯ ಬಗೆಗಳಾಗಿವೆ. ಒಟ್ಟಾರೆಯಾಗಿ ವಿವಾಹವು ಆದರ್ಶದ ಹೆಸರಿನಲ್ಲಿ ಮಹಿಳೆಯರನ್ನು ಶೋಷಿಸುತ್ತಲೇ ಬರುತ್ತಲಿದೆ. ಮಹಿಳೆಯ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದೆ. ಇಂದಿನ ಆಧುನಿಕತೆಯ ಸಂದರ್ಭದಲ್ಲಿಯೂ ವಿವಾಹವು ಮಹಿಳೆಗೆ ಪರಮೋಚ್ಚ ಗುರಿಯಾಗಿದೆ. ಇದನ್ನು ನಿರಾಕರಿಸಿದ್ದೇ ಆದಲ್ಲಿ ಸಮಾಜದಿಂದ ನಿಂದಿಸಲ್ಪಡುತ್ತಾಳೆ. ಸಮಾಜವು ಮಹಿಳೆಯಿಂದ ಯಾವುದೇ ತೆರನಾದ ಪ್ರತ್ಯೇಕ ವ್ಯಕ್ತಿತ್ವವಿಲ್ಲದ, ಪ್ರತ್ಯೇಕ ಜೀವನೋದ್ದೇಶವಿಲ್ಲದ, ತಮ್ಮದೇ ಆದಂತಹ ಪ್ರತ್ಯೇಕ ಆಸೆ ಆಕಾಂಕ್ಷೆಗಳು ಇಲ್ಲದುದನ್ನು ನೀರೀಕ್ಷಿಸಿತು. ಹಾಗಾಗಿಯೇ ಮಹಿಳೆಯ ಜೀವನದ ಪರಮ ಉದ್ದೇಶ ವಿವಾಹ ಮತ್ತು ತಾಯ್ತನವಾಯಿತು.

ಇನ್ನೊಂದು ಅಂಶವೆಂದರೆ ಮಹಿಳೆಯ ಲೈಂಗಿಕತೆಯನ್ನು ನಿಯಂತ್ರಿಸುವ ಬಹುಮುಖ್ಯ ವಾದ ಸಾಮಾಜಿಕ ಸಂಸ್ಥೆಯೇ ವಿವಾಹ. ಮುಖ್ಯವಾಗಿ ನಾಗರಿಕತೆಯ ಹೆಸರಿನಲ್ಲಿ ಸಮಾಜದ ಸದಸ್ಯರಿಗೆ ಲೈಂಗಿಕತೆಯನ್ನು ಕ್ರಮಬದ್ಧಗೊಳಿಸಲು ಹುಟ್ಟಿಕೊಂಡ ಸಂಸ್ಥೆಯಾಗಿದೆ. ಹೆಣ್ಣಿನ ಲೈಂಗಿಕತೆ ಎಂಬುದು ಫಲವಂತಿಕೆಯ ಪ್ರಶ್ನೆಯಾಗಿದೆ. ಅಂದರೆ ಕುಟುಂಬದ ವಂಶವನ್ನು ಬೆಳೆಸುವ ಒಂದು ಯಂತ್ರವಾಗಿ ಮಾತ್ರ ಮಾರ್ಪಟ್ಟಿದ್ದಾಳೆ. ಇವೆಲ್ಲವೂ ಆಗಿರುವುದು ವಿವಾಹ ಸಂಸ್ಥೆಯಿಂದಲೇ. ಒಟ್ಟಾರೆಯಾಗಿ ಹಿಂದೂ ವಿವಾಹ ಪದ್ಧತಿಯಲ್ಲಿ ವಿವಾಹವು ಏಳೇಳು ಜನ್ಮದ ಸತಿಪತಿಯರ ಅಪೂರ್ವ ಸಂಬಂಧವೆಂದು ವೈಭವೀಕರಿಸಲಾಗಿದೆ. ಇಲ್ಲಿ ಪುರುಷ ಮೇಲ್‌ಸ್ತರದಲ್ಲಿ ಮತ್ತು ಮಹಿಳೆ ಕೆಳಸ್ತರದಲ್ಲಿ ಇರುವುದನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಕುಟುಂಬವೇ ಮಹಿಳೆಯ ಎಲ್ಲಾ ಆಗುಹೋಗುಗಳಿಗೆ ಕಾರಣವಾಗಿದೆ. ಈ ಕಾರಣಕ್ಕಾಗಿ ಲಿಂಗ ಅಸಮಾನತೆಗಳು ಹೆಚ್ಚು ಕುಟುಂಬದಿಂದ ಆರಂಭವಾಗಿ ಸಾಮಾಜಿಕ ವ್ಯವಸ್ಥೆಯಲ್ಲಿಯೂ ವಿಸ್ತರಿಸಿಕೊಂಡಿವೆ.

ಸಮಾಜದಲ್ಲಿ ಸ್ತ್ರೀ ವಿರೋಧಿ ಮೌಲ್ಯಗಳನ್ನು ಸ್ಥಾಪಿಸಲು ಅನೇಕ ಅಂಶಗಳು ಮಹಿಳೆಯರ ಮೇಲೆ ಆರೋಪಿಸಲಾಯಿತು. ಋತುಚಕ್ರದ ನೆಪ ಹೇಳಿ ಅಶುದ್ಧ ಹಾಗೂ ಮೈಲಿಗೆ ಹೆಸರಿನಲ್ಲಿ ಸ್ತ್ರೀಯರನ್ನು ದೂರವಿಡಲಾಯಿತು. ಹಾಗೆಯೇ ಪುನರ್ಜನ್ಮದ ಪರಿಕಲ್ಪನೆಯು ಮಹಿಳೆಯ ಸ್ಥಾನಮಾನದ ಮೇಲೆ ಅತ್ಯಂತ ತೀವ್ರವಾದ ಪರಿಣಾಮ ಬೀರಿತು. ಪುರುಷರು ಧಾರ್ಮಿಕ ವಿಧಿಗಳನ್ನು ನಡೆಸುವುದರಿಂದ ಮಾತ್ರವೇ ಮೃತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗುವುದೆಂಬ ಸಿದ್ಧ ನಂಬಿಕೆಯ ಕಾರಣವಾಗಿ ಸ್ತ್ರೀಯರು ಧಾರ್ಮಿಕ ವಿಧಿಗಳಲ್ಲಿ ಪಾಲ್ಗೊಳ್ಳದಂತೆ ತಡೆಯಲಾಯಿತು. ಹೀಗೆ ಪ್ರತಿಯೊಂದು ಮೌಲ್ಯವೂ ಮಹಿಳೆಯನ್ನು ಅಧೀನ ನೆಲೆಗೆ ತಳ್ಳಲ್ಪಟ್ಟಿತು. ಅಂದರೆ ಮುಖ್ಯವಾಗಿ ಹಿರಿಯರ ಆತ್ಮಕ್ಕೆ ಮೋಕ್ಷವನ್ನು ದೊರಕಿಸಿಕೊಡಲು ನಡೆಸಬೇಕಾದ ಧಾರ್ಮಿಕ ಕ್ರಿಯಾವಿಧಿಗಳು ಪೂರ್ವಜರಿಂದ ಬಂದ ಆಸ್ತಿಯನ್ನು ಕಾಪಾಡುವುದು ಮತ್ತು ಇಳಿ ವಯಸ್ಸಿನಲ್ಲಿ ತಂದೆ–ತಾಯಿಯನ್ನು ರಕ್ಷಣೆ ಮಾಡುವುದು. ಈ ಬಗೆಯ ಉದ್ದೇಶಗಳನ್ನು ಹೊಂದಿತ್ತು. ಈ ಕಾರಣಗಳಿಂದಾಗಿ ಸಮಾಜದಲ್ಲಿ ಪುರುಷ ಪ್ರಧಾನ ಮೌಲ್ಯಗಳು ಬಲಿಷ್ಠಗೊಳ್ಳತೊಡಗಿದವು.

ಒಟ್ಟಾರೆಯಾಗಿ "ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ಸಾಮಾಜಿಕವಾಗಿ, ಆರ್ಥಿಕವಾಗಿ ಪರಾವಲಂಬಿಯಾಗುತ್ತಾಳೆ. ಗಂಡು ಮಗುವಿನಿಂದ ಉತ್ತರಾಧಿಕಾರ ಹಾಗೂ ಸಂತತಿ ಬೆಳವಣಿಗೆಯನ್ನು ಗುರುತಿಸುವುದರಿಂದ ಮಹಿಳೆ ಗಂಡು ಮಗುವನ್ನು ಹೆರುವ ಸಾಮರ್ಥ್ಯದ ಮೇಲೆ ಅವಳ ಸ್ಥಾನ ನಿರ್ಧಾರವಾಗುತ್ತದೆ. ಮಹಿಳೆಗೆ ಕುಟುಂಬದ ಆಸ್ತಿಯಲ್ಲಿ ಪಾಲು ದೊರೆಯುತಿಲ್ಲ. ಕಾನೂನಿನಲ್ಲಿದ್ದರೂ ಸಾಂಸ್ಕೃತಿಕ ಹಾಗೂ ಸಾಮಾಜಿಕ ರಚನೆಗಳು ಇದಕ್ಕೆ ಅಡ್ಡಿಯಾಗಿವೆ. ಮಹಿಳೆ ವಿವಾಹಕ್ಕೆ ಮೊದಲು ತಂದೆಯ ಮನೆಗೆ ಸೇರಿದವಳಾಗಿರುವುದಿಲ್ಲ. ವಿವಾಹದ ನಂತರ ಪತಿಯ ಮನೆಯಲ್ಲೂ ಸಂಪೂರ್ಣವಾದ ಸದಸ್ಯತ್ವ ದೊರಕುವುದಿಲ್ಲ. ಅದು ಅವಳ ನಡವಳಿಕೆ ಗಂಡನ ಮನೆಯವರ ನಂಬಿಕೆ ವಿಶ್ವಾಸ ಗಳಿಸುವುದನ್ನು ಅವಲಂಬಿಸಿರುತ್ತದೆ. ಮತ್ತು ಮಹಿಳೆಯ ಜೀವನವನ್ನು ಕುಟುಂಬವು ನಿಯಂತ್ರಿಸುತ್ತದೆ. ಮಕ್ಕಳ ಮೇಲೆ ಅಧಿಕಾರ ಇರುವುದಿಲ್ಲ"[೨೭]. ಈ ಬಗೆಯ ಎಲ್ಲಾ ಮೌಲ್ಯಗಳಿಂದ ಮಹಿಳೆ ಕುಟುಂಬದ ಆಸ್ತಿಯಿಂದ ವಂಚಿತಳಾಗಿದ್ದರೂ ಪ್ರಾಚೀನ ನಾಗರೀಕತೆಗಳಲ್ಲಿ ಮಹಿಳೆಯರಿಗೆ ಉನ್ನತ ಸ್ಥಾನವನ್ನು ನೀಡಲಾಗಿತ್ತು. ಮುಖ್ಯವಾಗಿ ಸ್ತ್ರೀಯರಿಗೆ ಸಮಾನ ಹಕ್ಕುಗಳನ್ನು ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಪಾಲು ನೀಡಬೇಕೆಂದು ಮೆಸಪಟೋಮಿಯಾ ನಾಗರೀಕತೆಯಲ್ಲಿ ದೊರೆತಿರುವ "ಹಮ್ಮೂರಬಿ ಶಾಸನ" ಹೇಳುತ್ತದೆ. ಚೀನಾ ನಾಗರೀಕತೆಯಲ್ಲೂ ಸ್ತ್ರೀಯರು ಮತ್ತು ಪುರುಷರಿಗೆ ಸಮಾಜದಲ್ಲಿ ಸಮಾನ ಹಕ್ಕುಗಳು ಇರಬೇಕೆಂದು ಪ್ರತಿಪಾಧಿಸಿರುವುದನ್ನು ತತ್ವಜ್ಞಾನಿ ಕನ್‌ಫ್ಯೂಷಿಯಸ್‌ನ ಬರಹಗಳು ತಿಳಿಸುತ್ತವೆ. ಅಂದರೆ "ಕ್ರಿ.ಪೂ. ೧೮ನೆಯ ಶತಮಾನದ ಹಮ್ಮೂರಬಿಯ (ಬೆಬಿಲೇನಿಯಾದ ರಾಜ) ಶಾಸನದಲ್ಲಿ ವಿವಾಹಿತ ಮಹಿಳೆಗೆ ವೈಯಕ್ತಿಕ ಮತ್ತು ಆರ್ಥಿಕ ಸ್ವಾತಂತ್ರ್ಯ ನೀಡಿರುವುದು

ದಾಖಲಾಗಿದೆ. ಆ ಕಾಲದಲ್ಲಿ ನೀಡಲಾಗುತ್ತಿದ್ದ ಕನ್ಯಾಶುಲ್ಕದಲ್ಲಿ ಸೇರಿದ ಜಮೀನು ಮತ್ತಿತರ ಆಸ್ತಿಗಳು ಹೆಣ್ಣಿಗೆ ಸೇರಿದ್ದಾಗಿರುತ್ತಿತ್ತು. ವಿವಾಹವು ಹೆಣ್ಣು-ಗಂಡುಗಳ ಇಚ್ಛೆಯನ್ನಾಧರಿಸಿತ್ತು. ಯಾವುದೇ ಹೆಣ್ಣು ತಾನು ಇಚ್ಛಿಸಿದಲ್ಲಿ ತನ್ನ ಗಂಡನಿಂದ ವಿಚ್ಛೇದನ ಪಡೆದು ತನಗೆ ಸೇರಿದ ಆಸ್ತಿಯೊಡನೆ ತವರಿಗೆ ಮರಳಬಹುದಾಗಿತ್ತು"[೨೮]. ಹೀಗೆ ಹಲವು ಬಗೆಯ ನಾಗರೀಕತೆಗಳಲ್ಲಿ ಮಹಿಳೆಯ ಸ್ಥಾನದ ಕುರಿತಂತೆ ತುಂಬಾ ಭಿನ್ನವಾದ ಮಾಹಿತಿಗಳು ದೊರೆಯುತ್ತವೆ. ಹಾಗೆಯೇ ಗ್ರೀಸ್‌ನ ನಾಗರೀಕತೆಯಲ್ಲಿ ಮಹಿಳೆಯರ ಸ್ಥಾನಮಾನ ಅತ್ಯಂತ ಕರುಣಾಜನಕವಾಗಿದ್ದರೆ, ಪ್ರಾಚೀನ ಈಜಿಪ್ಟ್‌ನ ನಾಗರಿಕತೆಯಲ್ಲಿ ಮಹಿಳೆಯರ ಸ್ಥಾನ ಉತ್ತಮವಾಗಿತ್ತು. ಈ ನಾಗರಿಕತೆಯಲ್ಲಿ ಮಹಿಳೆಯರು ಆಡಳಿತದಲ್ಲಿಯೂ ಅಧಿಕಾರವನ್ನು ಹೊಂದಿದ್ದರು ಎಂಬುದಾಗಿ ತಿಳಿದುಬರುತ್ತದೆ. "ಈಜಿಪ್ಟ್‌ನ ಇತಿಹಾಸಕಾರರು ಹೇಳುವಂತೆ ಎಂದಿಗೂ ನಿನ್ನ ತಾಯಿಯನ್ನು ಮರೆಯಬೇಡ, ಎಷ್ಟು ತಿಂಗಳು ನಿನ್ನನ್ನು ಹೊಟ್ಟೆಯಲ್ಲಿ ಹೊತ್ತಿದ್ದಳು ಅವಳು! ನೀನು ಹುಟ್ಟಿದ ಮೇಲೆ ಮೂರು ವರ್ಷ ನಿನ್ನನ್ನು ಎತ್ತಿಕೊಂಡು ಓಡಾಡಿದಳು; ನಿನಗೆ ಹಾಲುಣಿಸಿದಳು; ನಿನ್ನ ಹೊಲಸಿಗೆ ಬೇಸರಿಸದೆ ಲಾಲಿಸಿ, ಪಾಲಿಸಿದಳು ಎಂದು ಸ್ತ್ರೀಯರನ್ನು ಕುರಿತು ಮೌಲಿಕ ಮಾತುಗಳನ್ನು ಹೇಳುತ್ತಾರೆ. ಇದರಿಂದ ಈಜಿಪ್ಟ್ ನಾಗರಿಕತೆಯ ಸಮಾಜದಲ್ಲಿ ತಾಯಿಗೆ ಗೌರವ ಸ್ಥಾನವಿದ್ದು ಆಸ್ತಿಗೆ ಒಡೆಯಳಾಗಿದ್ದು, ಆಸ್ತಿಯ ಒಡೆತನವು ತಾಯಿಯ ಕಡೆಯಿಂದ ಸಾಗುತ್ತಿದ್ದುದು ಕಂಡುಬರುತ್ತದೆ"[೨೯]. ಇಲ್ಲಿ ಆಸ್ತಿಯ ಒಡೆತನವು ತಾಯಿಯ ಕಡೆಯಿಂದ ಸಾಗುತ್ತದೆ ಎಂದು ಹೇಳುವುದರಿಂದ ಇಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು ಎಂಬುದಾಗಿ ನಿರ್ಧರಿಸಲಾಗುವುದಿಲ್ಲ. ಏಕೆಂದರೆ ಇತಿಹಾಸಕಾರರು ಹೇಳಿದ ಮಾತುಗಳನ್ನು ಗಮನಿಸಿದರೆ ಆ ಸಂದರ್ಭದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು ಎಂತಲೇ ಗೋಚರಿಸುತ್ತದೆ. ಆದರೆ ತಾಯಿಯಾದವಳಿಗೆ ವಿಶೇಷವಾದ ಸ್ಥಾನ ಮತ್ತು ಅಧಿಕಾರವನ್ನು ಕೊಡಲಾಗಿತ್ತು ಎಂಬುದಾಗಿಯಷ್ಟೇ ಗ್ರಹಿಸಬಹುದಾಗಿದೆ.

ವೇದಗಳ ಕಾಲದಲ್ಲಿ ಮುಖ್ಯವಾಗಿ ಋಗ್ವೇದದ ಕಾಲದಲ್ಲಿ ಮಹಿಳೆಯರಿಗೆ ಉನ್ನತವಾದ ಸ್ಥಾನಮಾನಗಳು ಇದ್ದವು. ಸ್ತ್ರೀ- ಪುರುಷರಿಬ್ಬರಿಗೂ ಸಮಾನವಾದ ಅವಕಾಶಗಳು, ಅಧಿಕಾರಗಳು ಇದ್ದವು ಎಂಬುದು ತಿಳಿದುಬರುತ್ತದೆ. ಸ್ತ್ರೀಯರು ಸಭೆ-ಸಮಾರಂಭಗಳಲ್ಲಿ ಯಜ್ಞಯಾಗಾಧಿಗಳಲ್ಲಿ ಮತ್ತು ಬೌದ್ಧಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು ಎಂಬುದಕ್ಕೆ ಉಲ್ಲೇಖಗಳು ದೊರೆಯುತ್ತವೆ. ಈ ಕಾಲದಲ್ಲಿ ಮಹಿಳೆ ಮನೆಯ ಒಡತಿಯಾಗಿದ್ದಳು. ಮನೆಯ ಆಗುಹೋಗುಗಳಿಗೆಲ್ಲಾ ಮಹಿಳೆಯೇ ಜವಾಬ್ದಾರಳಾಗಿದ್ದಳು. ಮುಖ್ಯವಾಗಿ ಹಣಕಾಸು ವಹಿವಾಟವನ್ನು ಸ್ತ್ರೀಯರೇ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಈ ಕಾಲದ ಮಹಿಳೆಯರು ನಾರಿಶಕ್ತಿ ಮತ್ತು ಸ್ವಾತಂತ್ರ್ಯದ ಪ್ರತೀಕದಂತಿದ್ದರು. ಋಗ್ವೇದದ ಸಂದರ್ಭದಲ್ಲಿ ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಅಧಿಕಾರವಿರುವಂತೆಯೇ ಹೆಣ್ಣು ಮಕ್ಕಳಿಗೂ ಸಮಾನ ಅಧಿಕಾರವನ್ನು ನೀಡಲಾಗಿತ್ತು. ಮಹಿಳೆ ತಾನು ವಿವಾಹವಾಗುವ ಪುರುಷನನ್ನು ತಾನೇ ಆಯ್ಕೆ

ಮಾಡಿಕೊಳ್ಳಲು ಸ್ವಾತಂತ್ರ್ಯವನ್ನು ಪಡೆದಿದ್ದಳು. ಒಟ್ಟಾರೆಯಾಗಿ ಆ ಕಾಲದ ಸಂದರ್ಭದ ವ್ಯವಸ್ಥೆಯಲ್ಲಿ ಪಿತೃಪ್ರಧಾನ ವ್ಯವಸ್ಥೆ ಇದ್ದರೂ ಮಹಿಳೆಯರಿಗೆ ಉನ್ನತವಾದ ಅಧಿಕಾರಗಳು ಲಭ್ಯವಿದ್ದ ಉಲ್ಲೇಖಗಳು ದೊರೆಯುತ್ತವೆ. ಋಗ್ವೇದದ ನಂತರದ ಕಾಲಘಟ್ಟಗಳಲ್ಲಿ ಮಹಿಳೆಯರ ಸ್ಥಿತಿಗತಿಗಳು ಅಧೋಗತಿಗೆ ಇಳಿದವು. ಮುಖ್ಯವಾಗಿ ಯಾವ ಋಗ್ವೇದವು ಮಹಿಳೆಯರಿಗೆ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ವಾತಂತ್ರ್ಯಗಳನ್ನು ನೀಡಿತ್ತೋ ಆ ಕಾಲಘಟ್ಟದ ಕೊನೆಯಲ್ಲಿ ಮಹಿಳೆಯರ ಅವನತಿಯ ಸೂಚನೆಗಳು ದೊರೆಯತೊಡಗಿದವು. ಸ್ಮೃತಿಗಳ ಕಾಲದಲ್ಲಿ ಧರ್ಮಸೂತ್ರಗಳು ಪ್ರಚಲಿತವಾಗುವ ಕಾಲದಿಂದ ಈಚೆಗೆ ಮಹಿಳೆಯರ ಸ್ಥಿತಿ ದಿನದಿಂದ ದಿನಕ್ಕೆ ಹೀನಾಯವಾಗುತ್ತಾ ಬಂದಿತು. ಧರ್ಮಶಾಸ್ತ್ರಜ್ಞರ ಸಂಕುಚಿತ ಮನೋಭಾವದಿಂದಾಗಿ ಆಸ್ತಿ ಒಡೆತನ ಹೊಂದುವುದರಿಂದ ಮಹಿಳೆ ದೂರವೇ ಉಳಿದಳು. ಮತ್ತೆ ಪುರುಷನ ಅಧೀನಳಾದಳು. ಜೊತೆಗೆ ಆಕೆಯೇ ಸ್ವತಃ ಒಂದು ಆಸ್ತಿಯಾಗಿ ಪರಿವರ್ತನೆಯಾಗತೊಡಗಿದಳು. ಆ ಸಂದರ್ಭದಲ್ಲಿದ್ದ ಕಾತ್ಯಾಯನನ ಪ್ರಕಾರ "ಪತ್ನಿಯು ಸ್ವತಂತ್ರ್ಯವಾಗಿ ಹಣ ಗಳಿಸಬಹುದು. ಆದರೆ ಆಕೆಯ ಸಂಪಾದನೆ ಪತಿಗೇ ಸೇರಬೇಕು" ಎಂದು ಹೇಳಿದ್ದಾನೆ. ಬೋದಾಯನನು "ಸ್ತ್ರೀಯರಿಗೆ ಅನುವಂಶಿಕ ಹಕ್ಕಿಲ್ಲ ಅವರು ತಂದೆಯ ಆಸ್ತಿಗೆ ವಾರಸುದಾರರಾಗುವುದಿಲ್ಲ ಎಂದಿದ್ದಾನೆ. ಒಂದು ವೇಳೆ ತಂದೆ–ತಾಯಿಗೆ ಒಬ್ಬಳೇ ಮಗಳಿದ್ದರೂ ಅವಳಿಗೆ ಆಸ್ತಿಯ ಹಕ್ಕು ಬರಲಾರದು. ಆದರೆ ಅವಳ (ಮಗಳ ಮಗ) ಪೌಹಿತ್ರನಾದುದರಿಂದ ತಾತನ ಆಸ್ತಿಯಲ್ಲಿ ಅವನಿಗೆ ಹಕ್ಕಿರುತ್ತದೆ"[೩೦] ಎಂದಿದ್ದಾನೆ. ಈ ಬಗೆಯಲ್ಲಿ ಧರ್ಮಶಾಸ್ತ್ರದಲ್ಲಿ ಮಹಿಳೆಗೆ ಆಸ್ತಿಯ ಹಕ್ಕು ನೀಡಲೇಬಾರದು ಎಂಬ ನಿಲುವನ್ನು ತಾಳಿರುವುದು ಕಂಡುಬರುತ್ತದೆ. ಆದರೆ ಅದೇ ಸಂದರ್ಭದ ಸಾಮಾಜಿಕ ವ್ಯವಸ್ಥೆಯಲ್ಲಿ ಇದ್ದ ಯಜ್ಞವಲ್ಕ್ಯ, ವಿಜ್ಞಾನೇಶ್ವರರಂಥವರು ಮಹಿಳೆಗೆ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕು ಎಂಬ ವಾದವನ್ನು ಮಂಡಿಸಿರುವುದು ಕಂಡುಬರುತ್ತದೆ. ಆ ಸಂದರ್ಭದಲ್ಲಿ ಪಿತೃಪ್ರಧಾನ ವ್ಯವಸ್ಥೆ ಜಾರಿಯಲ್ಲಿತ್ತು. ಆದರೂ ಸಂಪ್ರದಾಯಗಳನ್ನು ಧಿಕ್ಕರಿಸಿ ಅವರು ತಮ್ಮ ಹೇಳಿಕೆಗಳನ್ನು ಮಂಡಿಸಿರುವುದು ಕಂಡುಬರುತ್ತದೆ. ಯಜ್ಞಾವಲ್ಕ್ಯನ ಪ್ರಕಾರ "ಸಂಬಂಧಿಗಳು ಸ್ತ್ರೀಗೆ ಕೊಡುವ ಯಾವ ಬಳುವಳಿಯೇ ಆಗಲೀ ಅದು ಅವಳ ಸ್ವತ್ತೆಂದು ಅವರು ಸಾರಿದ್ದಾರೆ. ಪತಿ ಏನಾದರೂ ವಿನಾಕಾರಣ ಪತ್ನಿಯನ್ನು ತ್ಯಜಿಸಿದರೆ ಅವನ ಆಸ್ತಿಯಲ್ಲಿ ಮೂರನೆಯ ಒಂದು ಪಾಲು ಆಕೆಗೆ ಸಿಗುತ್ತಿತ್ತು ಎಂದಿರುವರು"[೩೧].

ವಿಜ್ಞಾನೇಶ್ವರನ 'ಮಿತಾಕ್ಷರ ಸಂಹಿತೆ'ಯಲ್ಲಿಯೂ ಮಹಿಳೆಯರ ಆಸ್ತಿಹಕ್ಕು, ಉತ್ತರಾಧಿಕಾರದ ಅಗತ್ಯವನ್ನು ಅರಿತು ಮಹಿಳೆಯರಿಗೆ ಆಸ್ತಿಹಕ್ಕಿನ ಒಡೆತನಕ್ಕೆ ಯೋಗ್ಯರನ್ನಾಗಿ ಕಾಣುವಂತೆ ಮಾಡಿದ್ದಾರೆ. ಆದರೆ ಸ್ಮೃತಿಗಳ ಈ ಕಾಲದ ಸಂದರ್ಭದಲ್ಲಿ ಯಜ್ಞಾವಲ್ಕ್ಯ ಮತ್ತು ವಿಜ್ಞಾನೇಶ್ವರರು ತಳೆದ ಈ ನಿಲುವುಗಳು ಆಸ್ತಿಯಲ್ಲಿ ಸಂಪೂರ್ಣವಾದ ಅಧಿಕಾರವನ್ನು ನೀಡಿಲ್ಲ. ಇವರು ಹೇಳುತ್ತಿರುವುದು ಸ್ತ್ರೀಧನದ ಕುರಿತು. ಸ್ತ್ರೀಧನ ಮತ್ತು ಆಸ್ತಿ ಹಕ್ಕು ಇವೆರಡೂ ಬೇರೆ ಬೇರೆಯಾಗಿವೆ. ಸ್ತ್ರೀಧನವೆಂಬುದು ಅಲ್ಪ ಪ್ರಮಾಣದ ಸ್ವತ್ತಾಗಿರುತ್ತದೆ. ಹಾಗಾಗಿ ಈ ಸ್ವತ್ತಿನ

ಕುರಿತಂತೆ ವಿಚಾರವನ್ನು ಮಂಡಿಸಿದ್ದಾರೆ. ಜೊತೆಗೆ ಪತಿ ಪತ್ನಿಯನ್ನು ತ್ಯಜಿಸಿದರೆ ಅವನ ಆಸ್ತಿಯಲ್ಲಿ ಮೂರನೆಯ ಒಂದು ಭಾಗದಷ್ಟು ಆಸ್ತಿಯನ್ನು ಪಡೆಯಬಹುದು ಎಂದು ಹೇಳಿದ್ದಾನೆ. ಆದರೆ ಪತ್ನಿ ಪತಿಯನ್ನು ತ್ಯಜಿಸಿದರೆ ಆಸ್ತಿಯ ಕುರಿತಾದ ಅವರ ನಿಲುವು ಏನಾಗಿದ್ದಿತು ಎಂಬುದರ ವಿಚಾರವನ್ನು ಮಂಡಿಸಿಲ್ಲ. ಹಾಗಾಗಿ ಈ ಚಿಂತನೆಗಳೆಲ್ಲವೂ ಪಿತೃಪ್ರಧಾನ ಮೌಲ್ಯ ಗಳಡಿಯಲ್ಲಿಯೇ ರೂಪುಗೊಂಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಇಂದಿಗೂ ಈ ಮೌಲ್ಯಗಳು ತುಂಬಾ ಬಲಿಷ್ಠಗೊಂಡಿವೆ. ಆದರೆ ಕೆಲವು ಕುಟುಂಬ ವ್ಯವಸ್ಥೆಗಳಲ್ಲಿ ಆಸ್ತಿ ಪರಿಕಲ್ಪನೆಗೆ ಸಂಬಂಧಿಸಿದಂತೆ ಪಿತೃಪ್ರಧಾನತೆ ಜಾರಿಯಲ್ಲಿದ್ದರೂ, ಆ ಆಸ್ತಿಯ ವಿಲೇವಾರಿ ಮತ್ತು ಅದನ್ನು ನೋಡಿಕೊಳ್ಳುವ ಜವಾಬ್ದಾರಿಯ ವಿಷಯದಲ್ಲಿ ಭಿನ್ನತೆ ಇರುವುದನ್ನು ಕಾಣ ಬಹುದಾಗಿದೆ. ಹಿಂದೂ ಸಮಾಜದಲ್ಲಿ ಇರುವಂತಹ ಅವಿಭಕ್ತ ಕುಟುಂಬ ವ್ಯವಸ್ಥೆಗೆ ಹೋಲಿಸಿದರೆ ತುಂಬಾ ಭಿನ್ನವಾದಂತಹ ಆಸ್ತಿ ಪರಿಕಲ್ಪನೆಯ ನೆಲೆಗಳನ್ನು ಕಾಣಬಹುದಾಗಿದೆ.

ಆಸ್ತಿ ಹಕ್ಕಿನ ಕಾನೂನು ಜಾರಿಯಾಗುವುದಕ್ಕಿಂತಲೂ ಮುಂಚೆ ಆಸ್ತಿಯ ವಾರಸು ದಾರಿಕೆಗೆ ಸಂಬಂಧಿಸಿದಂತೆ ಎರಡು ರೀತಿಯ ಪದ್ಧತಿಗಳು ಜಾರಿಯಲ್ಲಿದ್ದವು. ಅವುಗಳೆಂದರೆ ಮಿತಾಕ್ಷರ ಮತ್ತು ದಾಯಭಾಗ ಪದ್ಧತಿಗಳು. ಮುಖ್ಯವಾಗಿ ಧರ್ಮಶಾಸ್ತ್ರಗಳ ಕಾಲವು ಕಾನೂನುಗಳ ಸೃಷ್ಠಿಯ ಕಾಲವಾದರೆ ಅವುಗಳ ನಂತರದ ಕಾಲವು ಆ ಕಾನೂನುಗಳನ್ನು ವಿಶ್ಲೇಷಿಸಿ, ವಿಸ್ತರಿಸುವ ಮತ್ತು ಕ್ರೋಢೀಕರಿಸುವ ಕಾಲವಾಗಿದೆ. ಈ ಸಂದರ್ಭ ದಲ್ಲಿಯೇ ಮಿತಾಕ್ಷರ ಮತ್ತು ದಾಯಭಾಗ ಪದ್ದತಿಗಳು ಜಾರಿಗೆ ಬಂದವು. ಈ ಎರಡೂ ಕಾನೂನುಗಳು ಹಿಂದೂ ಒಟ್ಟು ಕುಟುಂಬ, ವಾರಸುದಾರಿಕೆ ಮತ್ತು ಆಸ್ತಿಹಕ್ಕಿಗೆ ಸಂಬಂಧಿಸಿದುದಾಗಿವೆ. ದಾಯಭಾಗ ಪದ್ದತಿಯು ಬಂಗಾಳದಲ್ಲಿ ಜಾರಿಯಲ್ಲಿದ್ದರೆ ಭಾರತದ ಉಳಿದ ಭಾಗಗಳಲ್ಲಿ ಮಿತಾಕ್ಷರ ಪದ್ಧತಿಯು ಜಾರಿಯಲ್ಲಿತ್ತು. ಈ ಪದ್ಧತಿಗಳನ್ನು ಒಂದೊಂದಾಗಿ ವಿವರಿಸಿಕೊಳ್ಳುವುದು ಅಗತ್ಯವಾಗಿದೆ.

೧. **ಮಿತಾಕ್ಷರ ಪದ್ಧತಿ/ಸಂಹಿತೆ** : ಕ್ರಿ.ಶ. ೧೧ನೆಯ ಶತಮಾನದಲ್ಲಿ ವಿಜ್ಞಾನೇಶ್ವರನು ಯಜ್ಞಾವಲ್ಕ್ಯ ಸ್ಮೃತಿಯ ಮೇಲೆ ಕೆಲವು ವ್ಯಾಖ್ಯಾನಗಳನ್ನು ರಚಿಸಿದನು. ಅವುಗಳೇ ಮಿತಾಕ್ಷರ ಸಂಹಿತೆಯಾಗಿದೆ. ಈ ಮಿತಾಕ್ಷರ ಕಾನೂನಿನಲ್ಲಿ ಬನಾರಸ್ (ಉತ್ತರ ಪ್ರದೇಶ), ಮಿಥಿಲಾ (ಉತ್ತರ ಬಿಹಾರ), ಮುಂಬಯಿ (ಪಶ್ಚಿಮ ಭಾರತ), ಮದ್ರಾಸ್ (ದಕ್ಷಿಣ ಭಾರತ) ಎಂಬ ನಾಲ್ಕು ಉಪಶಾಖೆಗಳಿದ್ದವು. ಮಿತಾಕ್ಷರ ಕಾನೂನು ಸುಮಾರು ಒಂಬತ್ತು ಶತಮಾನಗಳ ಕಾಲ ಹಿಂದೂ ಕಾನೂನಿನ ಆಧಾರ ಗ್ರಂಥವಾಗಿತ್ತು. ಈ ಪದ್ದತಿಯು ಎರಡು ಬಗೆಯ ಆಸ್ತಿಯನ್ನು ಗುರುತಿಸುತ್ತದೆ. ಮುಖ್ಯವಾಗಿ ಅವಿಭಕ್ತ ಕುಟುಂಬದ ಆಸ್ತಿ ಮತ್ತು ಪ್ರತ್ಯೇಕ ಆಸ್ತಿ ಎಂದು. ಹಿಂದೂ ಕಾನೂನಿನ ಇತಿಹಾಸದ ಆರಂಭ ಕಾಲದ ಸಮಾಜದಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ದ್ದವಾದ್ದರಿಂದ ಮತ್ತು ಪಿತ್ರಾರ್ಜಿತ ಆಸ್ತಿ ವ್ಯವಸ್ಥೆಯೇ ಜಾರಿಯಲ್ಲಿದ್ದುದರಿಂದ ಅವಿಭಕ್ತ ಕುಟುಂಬದ ಆಸ್ತಿಯನ್ನು ಗುರುತಿಸಲಾಗುತ್ತದೆ. ಮುಖ್ಯವಾಗಿ ಇಲ್ಲಿ ಅವಿಭಕ್ತ ಕುಟುಂಬದ ಆಸ್ತಿ

ಪಿತ್ರಾರ್ಜಿತ ಆಸ್ತಿಯಾಗಿತ್ತು. "ಈ ಆಸ್ತಿ ವಿಭಾಗದಲ್ಲಿ ತಂದೆ, ತಾತ (ತಂದೆಯ ತಂದೆ), ಮುತ್ತಾತ (ತಂದೆಯ ತಂದೆಯ ತಂದೆ) ಮತ್ತು ತಂದೆಯ ತಂದೆಯ ತಂದೆಯಿಂದ ಪ್ರಾಪ್ತವಾದ ಆಸ್ತಿ ಮತ್ತು ಒಟ್ಟಾಗಿ ಅರ್ಜಿಸಿದ ಅಥವಾ ಪ್ರತ್ಯೇಕವಾಗಿ ಅರ್ಜಿಸಿ ಒಟ್ಟು ಆಸ್ತಿಗೆ ಸೇರ್ಪಡೆ ಮಾಡಿದ ಆಸ್ತಿಯೂ ಇದರಲ್ಲಿ ಸೇರುತ್ತದೆ. ಮೇಲೆ ಹೇಳಿದಂತೆ ತಂದೆ, ಮಗ, ಮೊಮ್ಮಗ, ಮರಿಮಗ ಹೀಗೆ ನಾಲ್ಕು ತಲೆಮಾರಿನ ಪುರುಷ ಸಂತಾನ ಹುಟ್ಟಿನಿಂದಲೇ ದಾಯಾದಿಗಳಾಗಿ ಆಸ್ತಿಗೆ ವಾರಸುದಾರರೆನಿಸಿರುತ್ತಾರೆ."[೩೨] ಪ್ರತ್ಯೇಕ ಆಸ್ತಿಯಲ್ಲಿ ಪ್ರತಿಯೊಬ್ಬ ದಾಯಾದಿಗೂ ಪಾಲು ಕೇಳುವ ಹಕ್ಕು ಇರುತ್ತದೆ. ಹಾಗೆ ಪಡೆದ ಪಾಲು ಅವನ ಪ್ರತ್ಯೇಕ ಆಸ್ತಿ ಎಂದು ಕರೆಸಿಕೊಳ್ಳುತ್ತದೆ. ಈ ಪದ್ಧತಿಯಲ್ಲಿ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯುವ ಹಕ್ಕು ಇರಲಿಲ್ಲ. ಹೆಂಡತಿಯಾಗಿ ಮತ್ತು ಅವಿವಾಹಿತ ಮಗಳಾಗಿ ಅವಳು ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಜೀವನಾಂಶ ಪಡೆಯುವುದಕ್ಕೆ ಮಾತ್ರ ಅವಳ ಆಸ್ತಿ ಹಕ್ಕು ಸೀಮಿತವಾಗಿತ್ತು. ದಾಯಾದಿಯ ವಿಧವೆಗೆ ಗಂಡು ಸಂತಾನವಿಲ್ಲದಿದ್ದಲ್ಲಿ,. ಸಗೋತ್ರದ ಮೊಮ್ಮಕ್ಕಳು ಅಥವಾ ಮರಿಮಕ್ಕಳು (ಗಂಡು ಮಕ್ಕಳು) ಇಲ್ಲದಿದ್ದಲ್ಲಿ ಮಾತ್ರ ತನ್ನ ಗಂಡನ ಆಸ್ತಿಯಲ್ಲಿ ಸೀಮಿತ ಹಕ್ಕನ್ನು ಪಡೆಯುತ್ತಿದ್ದಳು. ಅದೂ ಅವಳು ಶುದ್ಧ ಚಾರಿತ್ರ್ಯವನ್ನು ಹೊಂದಿದವಳಾಗಿದ್ದರೆ ಮಾತ್ರ. ಅವಳ ನಂತರ ಅದು ಗಂಡನ ದಾಯಾದಿಗಳಿಗೇ ಸೇರುತ್ತಿತ್ತು. "ಯಜ್ಞಾವಲ್ಕ್ಯನ ಕಾಲದವರೆಗೆ 'ಮಗಳ ಮಗ 'ನನ್ನು ಬಿಟ್ಟರೆ ಮತ್ತೆ ಯಾವ ಸ್ತ್ರೀ ಸಂಬಂಧಿಗಳಿಗೂ ವಾರಸುದಾರಿಕೆಯ ಹಕ್ಕನ್ನು ಕೊಡಲಾಗಿಲ್ಲ ಎನ್ನುವುದು ವಿಶೇಷ. ಇವರು ಹತ್ತಿರದ ಸಂಬಂಧಿಗಳನ್ನು 'ಬಂಧುಗಳು' ಎಂಬುದಾಗಿ ವಾರಸುದಾರಿಕೆಯ ಪಟ್ಟಿಯಲ್ಲಿ ಸೇರಿಸಿದ್ದಾನೆ. ಮುಂದೆ ವಿಜ್ಞಾನೇಶ್ವರನು ತನ್ನ ಮಿತಾಕ್ಷರ ಕಾನೂನಿನಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹತ್ತಿರದ ಸ್ತ್ರೀ ಸಂಬಂಧಿಗಳನ್ನು ವಾರಸುದಾರರನ್ನಾಗಿಸಲು 'ಸಪಿಂಡ' ಎನ್ನುವ ಪದದ ಅರ್ಥವನ್ನು ಹಿಗ್ಗಿಸಿ ಅವರನ್ನು 'ಭಿನ್ನಗೋತ್ರ ಸಪಿಂಡ ಸಂಬಂಧಿಗಳು' ಎಂದಿದ್ದಾನೆ. ಮಿತಾಕ್ಷರ ಶಾಖೆಯಲ್ಲಿನ ವಾರಸು ದಾರಿಕೆಯ ನಿಯಮಗಳಿಗೆ ಯಜ್ಞಾವಲ್ಕ್ಯನ ಸ್ಮೃತಿಯೇ ಬಹುಮುಖ್ಯ ಆಧಾರ."[೩೩]

**೨. ದಾಯಭಾಗ ಪದ್ಧತಿ** : ದಾಯಭಾಗ ಹಿಂದೂ ಕಾನೂನನ್ನು ಜೀಮೂತವಾಹನನು ಕ್ರೋಢೀಕರಿಸಿದ್ದಾನೆ. ಇದು ಬಂಗಾಳ ಮತ್ತು ಅಸ್ಸಾಂನಲ್ಲಿ ಜಾರಿಯಲ್ಲಿದೆ. ಈ ಪದ್ಧತಿಗೂ ಮತ್ತು ಮಿತಾಕ್ಷರ ಪದ್ಧತಿಗೂ ಹಲವಾರು ಮೂಲಭೂತ ವ್ಯತ್ಯಾಸಗಳಿವೆ. ಈ ಪದ್ದತಿಯು ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಮತ್ತು ಪಿತ್ರಾರ್ಜಿತ ಆಸ್ತಿ ಪರಿಕಲ್ಪನೆಯನ್ನು ಒಪ್ಪಿಕೊಳ್ಳುವುದಿಲ್ಲ. ಇದರಲ್ಲಿ ಆಸ್ತಿಯನ್ನು ಸಂಪೂರ್ಣವಾಗಿ ವಿಲೇವಾರಿ ಮಾಡುವ ಹಕ್ಕನ್ನು ತಂದೆಗೆ ನೀಡಿದೆ. ಅಂದರೆ ಆಸ್ತಿಯ ಒಡೆಯ ತಂದೆಯೇ ಆಗಿದ್ದಾನೆ. ತಂದೆ ಬದುಕಿರುವಾಗಲೇ ಮಕ್ಕಳು ಆಸ್ತಿಯಲ್ಲಿ ಪಾಲನ್ನು ಕೇಳುವಂತಿಲ್ಲ. ಈ ಹಿನ್ನಲೆಯಲ್ಲಿ ತಂದೆಯ ಮರಣಾ ನಂತರವೇ ಅವನ ಆಸ್ತಿ ಮತ್ತು ಆಸ್ತಿಯಲ್ಲಿನ ಪಾಲು ವಾರಸುದಾರಿಕೆಯ ಮೂಲಕ ಅವನ ವಾರಸುದಾರರಿಗೆ ಹೋಗುತ್ತದೆ. "ದಾಯಭಾಗ ಕಾನೂನಿನಲ್ಲಿ ಮಗ, ಮೊಮ್ಮಗ, ಮರಿಮಗನೊಂದಿಗೆ ಪುರುಷನ

ವಿಧವೆ, ಮಗಳು, ತಾಯಿ, ತಂದೆಯ ತಂದೆಯ ತಾಯಿಯರನ್ನು 'ಸಪಿಂಡ' ಸಂಬಂಧಿಗಳಾಗಿ ಗುರುತಿಸಿ ಅವನ ಆಸ್ತಿಗೆ ವಾರಸುದಾರರನ್ನಾಗಿ ಗುರುತಿಸಿರುವುದು ಇದರ ವಿಶೇಷತೆ. ಆದರೆ ಉಳಿದ ಯಾವ ಸ್ತ್ರೀ ಸಂಬಂಧಿಗಳನ್ನು ಈ ಶಾಖೆ ವಾರಸುದಾರರನ್ನಾಗಿ ಗುರುತಿಸುವುದಿಲ್ಲ. ಈ ಸ್ತ್ರೀ ಸಪಿಂಡ ಸಂಬಂಧಿಗಳು ಮಗ, ಮೊಮ್ಮಗ, ಮರಿಮಗನಿಲ್ಲದಾಗ ಮಾತ್ರ ಮೇಲೆ ಹೇಳಿದ ಅನುಕ್ರಮದಲ್ಲಿ ಆಸ್ತಿಗೆ ವಾರಸುದಾರರಾಗುತ್ತಾರೆ.[೩೪]

ಈ ಎರಡೂ ಪದ್ದತಿಗಳಲ್ಲಿ ಸ್ಥಿರ ಆಸ್ತಿಯನ್ನು ಮಹಿಳೆ ತೀರಾ ನಿರ್ಬಂಧಿತ ಸನ್ನಿವೇಶಗಳಲ್ಲಿ ಮಾತ್ರ ಪಡೆಯುತ್ತಿದ್ದಳು. ಮಹಿಳೆ ಈ ಅಧಿಕಾರವನ್ನು ಪಡೆದರೂ ಅದು ಶಾಶ್ವತವಾಗಿರಲಿಲ್ಲ. ಅದು ಸೀಮಿತ ಅವಧಿಗೆ ಮಾತ್ರ ಇರುತ್ತಿತ್ತು. ಮಹಿಳೆಗೆ ಹಲವಾರು ನಿರ್ಬಂಧಗಳು ಇದ್ದವು. ಹಾಗಾಗಿ ಆಸ್ತಿಯ ಒಡೆತನವಾಗಲೀ ಅಥವಾ ವಿಲೇವಾರಿ ಮಾಡುವಂತಹ ಅಧಿಕಾರ ಇರಲಿಲ್ಲ. ಆದರೆ ಪುರುಷನಿಗೆ ಈ ಎಲ್ಲಾ ಅಧಿಕಾರಗಳು ಇದ್ದವು. ಹೀಗೆ ಮಹಿಳೆಯರ ಕುರಿತಾಗಿ ತಾರತಮ್ಯ ಮನೋಭಾವನೆಯನ್ನು ಹೊಂದಲಾಗಿತ್ತು.

ಹಿಂದೂ ಮಹಿಳೆಯರ ಆಸ್ತಿಯನ್ನು ಎರಡು ವಿಧಗಳಾಗಿ ವಿಂಗಡಿಸಲಾಗಿದೆ. ಒಂದು ನಿರಂಕುಶ ಅಥವಾ ಪೂರ್ಣ ಒಡೆತನವನ್ನು ಹೊಂದಿರುವ ಆಸ್ತಿಗಳು, ಎರಡನೆಯದಾಗಿ ಸೀಮಿತ ಒಡೆತನವನ್ನು ಹೊಂದಿರುವ ಆಸ್ತಿಗಳು. ಪೂರ್ವ ಕಾಲದಿಂದ ಬಂದಂತಹ ಆಸ್ತಿಯನ್ನು ಸ್ತ್ರೀಧನವೆಂದು ಮತ್ತು ಇತ್ತೀಚಿನ ದಿನಗಳಲ್ಲಿ ಬಂದಂತಹ ಆಸ್ತಿಯನ್ನು ಮಹಿಳಾ ಆಸ್ತಿ ಎಂದು ಕರೆಯಲಾಗುತ್ತದೆ. ಹಿಂದೂ ಮಹಿಳೆಯರ ಆಸ್ತಿಯ ಒಡೆತನಕ್ಕೆ ಸಂಬಂಧಿಸಿದಂತೆ ಸ್ತ್ರೀಧನ ಮತ್ತು ಮಹಿಳಾ ಆಸ್ತಿಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಹಾಗಾಗಿ ಸ್ತ್ರೀಧನ ಮತ್ತು ಮಹಿಳಾ ಆಸ್ತಿ ಇವುಗಳನ್ನು ಸಂಪೂರ್ಣವಾಗಿ ಮತ್ತು ವಿವರವಾಗಿ ತಿಳಿದುಕೊಳ್ಳುವುದು ಮುಖ್ಯವೆನಿಸುತ್ತದೆ.

**ಅ. ಸ್ತ್ರೀಧನ**

ಸ್ತ್ರೀಧನ ಎಂಬ ಪದವು 'ಸ್ತ್ರೀ' ಮತ್ತು 'ಧನ' ಎಂಬ ಎರಡು ಪದಗಳಿಂದ ಕೂಡಿದೆ. ಅಂದರೆ ಪದ ನಿಷ್ಪತ್ತಿಯ ಪ್ರಕಾರದ ಅರ್ಥದಲ್ಲಿ ಮಹಿಳೆಯು ಆಸ್ತಿಯನ್ನು ಹೊಂದಿರುವುದು ಅಥವಾ ಆಸ್ತಿಯು ಮಹಿಳೆಗೆ ಸೇರಿರುವುದು ಎಂದು ಅರ್ಥ. ಆದರೆ ಕಾನೂನಿನ ಪ್ರಕಾರ ಹಿಂದೂ ಮಹಿಳೆಗೆ ಅವಳ ವಿವಾಹದ ಮೊದಲು ಹಾಗೂ ನಂತರ ಕೊಡಮಾಡಲ್ಪಟ್ಟಂತಹ ಉಡುಗೊರೆಯಾಗಿದೆ. ಇವೆರಡನ್ನೂ ಸಂಯೋಜಿಸಿ ಹೇಳುವುದಾದರೆ ಮಹಿಳೆಯು ಆಸ್ತಿಯ ಮೇಲೆ ಸಂಪೂರ್ಣವಾದ ಒಡೆತನವನ್ನು ಹೊಂದಿರುವುದು ಎಂದರ್ಥ. ಹಲವಾರು ವಿದ್ವಾಂಸರು, ಚಿಂತಕರು ಹಾಗೂ ಹಲವು ಜ್ಞಾನಶಾಖೆಗಳ ಪ್ರಕಾರ ಇದು ಭಿನ್ನವಾದ ಅರ್ಥದಲ್ಲಿ ಬಳಕೆಯಾಗಿದೆ. ಸ್ಮೃತಿಗಳಲ್ಲಿ ಮತ್ತು ಬುದ್ಧಾಯಣದಲ್ಲಿ ತಿಳಿಸಿರುವಂತೆ ಸ್ತ್ರೀಧನವೆಂದರೆ ಮಹಿಳೆಯ ನಿರಂಕುಶ ಆಸ್ತಿ ಎಂದು. ಆಧುನಿಕ ಹಿಂದೂ ಉತ್ತರಾಧಿಕಾರ ಕಾನೂನಿನಡಿಯಲ್ಲಿ ಸ್ತ್ರೀಧನವು ಯಾವುದೇ ನಿರ್ಧಿಷ್ಟ ಆಸ್ತಿಯನ್ನು ಪ್ರತಿನಿಧಿಸುವುದಿಲ್ಲ. ಆದರೆ ಅವಳ ಪೂರ್ವ

ಜನ್ಮದಿಂದ ಬಂದಂತಹ ಹಾಗೂ ಮಹಿಳೆಯು ಪೂರ್ಣ ಮಾಲೀಕತ್ವ ಹೊಂದುವ ಅಥವಾ ಹೊಂದಬಹುದಾದ ಎಲ್ಲಾ ಆಸ್ತಿಗಳನ್ನು ಇದು ಒಳಗೊಳ್ಳುತ್ತದೆ. ಒಟ್ಟಾರೆಯಾಗಿ ಸ್ತ್ರೀಧನ ಎಂದರೆ ಸ್ತ್ರೀಯರಿಗೆ ಸೇರಿದ ಸ್ವತ್ತು. ಈ ಸ್ವತ್ತು ಮಹಿಳೆಗೆ ಅವಳ ಬಂಧುಗಳಿಂದ ದಾನದ ಮೂಲಕ ಪಡೆದುಕೊಂಡ ಆಸ್ತಿಯಾಗಿರುತ್ತಿತ್ತು. ಸ್ತ್ರೀಧನವು ಚರ ಮತ್ತು ಸ್ಥಿರ ಎರಡೂ ವಿಧದ ಆಸ್ತಿಯನ್ನೊಳಗೊಂಡಿರುತ್ತಿತ್ತು." ವಿವಾಹ ವಾಗುವಾಗ ಮತ್ತು ವಿವಾಹಕ್ಕೆ ಮುನ್ನ ಪ್ರೀತಿಯ ಸಂಕೇತವಾಗಿ ಕೊಟ್ಟ ಆಸ್ತಿ, ಸಹೋದರ, ತಂದೆ, ತಾಯಿಯಿಂದ ಪಡೆದ ಆಸ್ತಿ ಎಲ್ಲವೂ ಸ್ತ್ರೀಧನವೆನಿಸಿಕೊಳ್ಳುತ್ತದೆ ಎಂದು ಮನು ಹೇಳಿದ್ದಾನೆ."[೩೫] ಹೀಗೆ ಸ್ತ್ರೀಧನದಿಂದ ಖರೀದಿಸಿದ ಆಸ್ತಿ ಹಾಗೂ ಜೀವನಾಂಶಕ್ಕೆ ಬದಲಾಗಿ ಪಡೆದ ಆಸ್ತಿಗಳೂ ಸಹ ಸ್ತ್ರೀಧನವೆಂದು ಪರಿಗಣಿಸಲ್ಪಡುತ್ತವೆ. ಈ ರೀತಿಯಾಗಿ ಮಹಿಳೆಯು ಹೊಂದಿದ ಸ್ತ್ರೀಧನದ ಒಡತಿ ಮಹಿಳೆಯೇ ಆಗಿರುತ್ತಿದ್ದಳು. ಅದರ ಸಂಪೂರ್ಣ ನಿರುಪಾಧಿಕ ಹಕ್ಕು ಮಹಿಳೆಯರದ್ದೇ ಆಗಿರುತ್ತಿತ್ತು. ಆಸ್ತಿಯ ಸಂಪೂರ್ಣ ಒಡೆತನವನ್ನು ಹೊಂದಿದ್ದ ಮಹಿಳೆ ಅದನ್ನು ಪರಭಾರೆ ಮಾಡುವ ಹಕ್ಕು ಅವಳದ್ದೇ ಆಗಿರುತ್ತಿತ್ತು. ಅವಳು ಆ ಆಸ್ತಿಯನ್ನು ಗೇಣಿ, ಅಡಮಾನ, ಮಾರಾಟ, ದಾನ ಹೀಗೆ ತನ್ನಿಷ್ಟದಂತೆ ವಿಲೆ ಮಾಡುವ ಹಕ್ಕನ್ನು ಹೊಂದಿರುತ್ತಿದ್ದಳು. ಸ್ತ್ರೀಧನದ ಮೇಲೆ ಅವಳ ಪತಿಗೆ ಯಾವುದೇ ಹಕ್ಕು ಇರಲಿಲ್ಲ. ಕಷ್ಟ ಕಾಲದಲ್ಲಿ ಅದನ್ನು ಬಳಕೆ ಮಾಡಿಕೊಳ್ಳುವ ಅವಕಾಶವಿತ್ತಾದರೂ ಅದರ ಮೌಲ್ಯವನ್ನು ಅಥವಾ ಆಸ್ತಿಯನ್ನು ಅವಳಿಗೆ ಹಿಂತಿರುಗಿಸಬೇಕಾದ ನೈತಿಕ ಹೊಣೆಗಾರಿಕೆ ಪುರುಷನ ದ್ದಾಗಿರುತ್ತಿತ್ತು. ಹೀಗಾಗಿ ಸ್ತ್ರೀಧನ ಸಂಪೂರ್ಣವಾಗಿ ಮಹಿಳೆಯರ ಒಡೆತನದಲ್ಲಿಯೇ ಇರುತ್ತಿದ್ದಂತಹ ಆಸ್ತಿಯಾಗಿತ್ತು. ಮಹಿಳೆಯ ಮರಣದ ನಂತರ ಆ ಆಸ್ತಿಯ ವಾರಸುದಾರಿಕೆ ಅವಳ ವಾರಸುದಾರರಲ್ಲಿ ಹಂಚಿಕೆಯಾಗುತ್ತಿತ್ತೇ ವಿನಃ ಪತಿಯ ವಾರಸುದಾರರಿಗೆ ಆಸ್ತಿಯಲ್ಲಿ ಯಾವ ಹಕ್ಕು ಪ್ರಾಪ್ತವಾಗುತ್ತಿರಲಿಲ್ಲ. ಹೀಗಾಗಿ ಸ್ತ್ರೀಧನದ ಸ್ವಾಧೀನತೆಯ ಎಲ್ಲ ಹಕ್ಕುಗಳೂ ಮಹಿಳೆಗೆ ಸೀಮಿತವಾಗಿದ್ದವು.

"ಸ್ತ್ರೀಧನ ಎನ್ನುವ ಪದವನ್ನು ಮೊದಲು ಬಳಸಿರುವುದು ಗೌತಮನ ಧರ್ಮಸೂತ್ರದಲ್ಲಿ. ಸಂಸ್ಕೃತದ ಕಾನೂನು ಪುಸ್ತಕಗಳಲ್ಲಿ ಸ್ತ್ರೀಧನದ ಬಗ್ಗೆ ವಿಸ್ತಾರವಾದ ಚರ್ಚೆ ಕಂಡುಬರುತ್ತದೆ. ಮಿತಾಕ್ಷರ ಹಿಂದೂ ಕಾನೂನು ಹಿಂದೂ ಸ್ತ್ರೀಯರ ಒಡೆತನಕ್ಕೆ ಬಂದ ಎಲ್ಲಾ ಆಸ್ತಿಗಳನ್ನು, ಅದರ ಮೇಲಿನ ಅವಳ ಅಧಿಕಾರ ಪರಿಮಿತವಾಗಿದ್ದರೂ ಸಹ ಅವಳ ಸ್ತ್ರೀಧನ ಎಂಬುದಾಗಿ ಮಾನ್ಯ ಮಾಡುತ್ತದೆ. ಆದರೆ ದಾಯಭಾಗ ಹಿಂದೂ ಕಾನೂನಿನ ಜೀಮೂತವಾಹನನು ತನ್ನ ಗಂಡನ ಜೀವಿತಾವಧಿಯಲ್ಲಿಯೂ ಹೆಂಡತಿಗೆ ತನ್ನ ಆಸ್ತಿಯ ಮೇಲೆ ಸಂಪೂರ್ಣ ಅಧಿಕಾರವಿದ್ದಲ್ಲಿ ಅದನ್ನು ಮಾತ್ರ ಸ್ತ್ರೀಧನವೆಂದು ಮಾನ್ಯ ಮಾಡುತ್ತಾನೆ."[೩೬] ಹೀಗೆ ಸ್ತ್ರೀಧನವೆಂದು ಮಾನ್ಯ ಮಾಡುವ ಆಸ್ತಿ ಯಾವುವು ಎಂಬುದರ ಕುರಿತಂತೆ ಸಾಕಷ್ಟು ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ಸ್ಮೃತಿಗಳ ಕಾಲದ ಸಂದರ್ಭದಲ್ಲಿ ಹಲವಾರು ಸ್ಮೃತಿಕಾರರು ಸ್ತ್ರೀಧನದ ಕುರಿತಂತೆ

ತಮ್ಮದೇ ಆದಂತಹ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಹೀಗೆ ಸ್ತ್ರೀಧನದ ಕುರಿತಂತೆ ವಿವರವಾಗಿ ವಿಶ್ಲೇಷಿಸಲಾಗಿದೆ. ಸ್ತ್ರೀಧನವೆಂದರೆ,

ಅ. "ವಿವಾಹದ ಸಮಯದಲ್ಲಿ ಹೋಮಕುಂಡದ ಎದುರು ಆಕೆಗೆ ಕೊಡುವ ಬಳುವಳಿ.

ಆ. ಪತಿಯ ಗೃಹಕ್ಕೆ ತೆರಳುವಾಗ ಕೊಡುವ ಬಳುವಳಿ.

ಇ. ಪ್ರೀತಿಧನ ಅಥವಾ ಪಾದವಂದನಿಕಾ ಎಂದರೆ ಅತ್ತೆ ಮಾವಂದಿರು ಆಕೆಗೆ ಪ್ರೀತಿಯಿಂದ ಕೊಡುವ ವಸ್ತು ಅಥವಾ ಹಣ. ಹಾಗೆಯೇ ಇತರ ಹಿರಿಯರಿಗೆ ನಮಸ್ಕರಿಸಿದಾಗ ಅವರು ಕೊಡುವ ಬಳುವಳಿ.

ಈ. ತಂದೆಯಿಂದ, ತಾಯಿಯಿಂದ, ಸೋದರನಿಂದ ಬರುವ ಬಳುವಳಿ"[೩೭] ಎಂದು ಹೇಳಲಾಗುತ್ತದೆ.

ಮನು : ವಸ್ತುಗಳು, ಆಭರಣಗಳು ಮತ್ತು ಹಣ ಮಾತ್ರ ಸ್ತ್ರೀಧನ. ಅಂದರೆ ಅಧ್ಯಗ್ನಿ (ವಿವಾಹದ ಸಂದರ್ಬದಲ್ಲಿ ಕೊಟ್ಟಂತಹ), ಅಧ್ಯಾವಹನಿಕ (ವಧು ವರರನ್ನು ಹಿಂಬಾಲಿಸಿ ಮನೆಗೆ ಹೋಗುವಾಗ ಕೊಟ್ಟಿದ್ದು), ದತ್ತಂಪ್ರಿತೆ ಕರ್ಮಣಿ (ತಂದೆ, ತಾಯಿ ಸಹೋದರರು ಪ್ರೀತಿ ವಾತ್ಸಲ್ಯದಿಂದ ಕೊಟ್ಟಿರುವುದು) ಈ ಎಲ್ಲಾ ರೀತಿಯ ಉಡುಗೊರೆಗಳನ್ನು ಸ್ತ್ರೀಧನದ ಪ್ರಕಾರಗಳಲ್ಲಿ ಬರುತ್ತವೆ.

**ಯಾಜ್ಞವಲ್ಕ್ಯ:** "ವಧುವಿಗೆ ಮದುವೆಯ ಸಮಯದಲ್ಲಿ ತಂದೆ, ತಾಯಿ, ಸಹೋದರರಷ್ಟೇ ಅಲ್ಲ. ಯಾರೇ ಕೊಡುವ ಉಡುಗೊರೆ, ಕಾಣಿಕೆ, ಸ್ವತ್ತು ಮತ್ತು ಮದುವೆಯ ನಂತರ ಕೊಡಲ್ಪಡುವ ಉಡುಗೊರೆ ಕಾಣಿಕೆಗಳು ಹಾಗೂ ಗಂಡ ಇನ್ನೊಂದು ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿನ ಆಸ್ತಿ – ಪಾಸ್ತಿ ಎಲ್ಲವೂ ಸ್ತ್ರೀಧನವಾಗುತ್ತದೆ."[೩೮]

**ವಿಷ್ಣು** : ವಿವಾಹದ ಸಂದರ್ಭದಲ್ಲಿ ಅಗ್ನಿ ಕುಂಡದ ಎದುರು ಮಹಿಳೆಗೆ ತನ್ನ ತಂದೆ, ತಾಯಿ ಮತ್ತು ಸಹೋದರರಿಂದ ಪಡೆದಂತಹ ಯಾವುದೇ ವಿಧದ ವಸ್ತು ಅಥವಾ ತನ್ನ ಪತಿಯಿಂದ ಮರು ವಿವಾಹದ ಸಂದರ್ಭದಲ್ಲಿ ಅಥವಾ ವಿವಾಹದ ನಂತರ ತನ್ನ ಬಂಧುಗಳಿಂದ ಪಡೆದ ಉಡುಗೊರೆಗಳು ಸ್ತ್ರೀಧನವಾಗಿರುತ್ತವೆ.

"ಹಿಂದೂ ಸ್ತ್ರೀ ಆರ್ಜಿಸಿದ ಅಥವಾ ಸ್ವಾಧೀನತೆ ಹೊಂದಿರುವ ಎಲ್ಲಾ ಆಸ್ತಿಯನ್ನು ಸ್ತ್ರೀಧನವೆಂದು ಪರಿಗಣಿಸಲಾಗುತ್ತದೆ. ಮದುವೆಯಲ್ಲಿ ನೀಡಲಾದ ವರದಕ್ಷಿಣೆಯನ್ನು ಅವಳಿಗೆ ಸೇರಿದ ಸ್ತ್ರೀಧನವೆಂದು ಪರಿಗಣಿಸಲಾಗುತ್ತದೆ."[೩೯]

ಇತರೆ ಸ್ಮೃತಿಕಾರರಾದ ಆಪಸ್ತಂಭ, ವ್ಯಾಸ ಮತ್ತು ದೇವಲರೂ ಸ್ತ್ರೀಧನದ ಕುರಿತಾಗಿ ಇದೇ ರೀತಿಯ ಚರ್ಚೆಗಳನ್ನು ಮಾಡಿದ್ದಾರೆ. ಅಧ್ಯಾಗ್ನಿ, ಅಧ್ಯಾವಹನಿಕ, ಪ್ರೀತಿದತ್ತ ಮತ್ತು ತಂದೆ

ತಾಯಿ, ಬಂಧುಗಳಿಂದ ಹಣದ ರೂಪದಲ್ಲಿ ಪಡೆದ ಅವಂಧಿಕ, ಶುಲ್ಕ ಅಥವಾ ಅನಿವಧೇಯ ಗಳನ್ನು ಸ್ತ್ರೀಧನವೆಂದು ಗುರುತಿಸಿದ್ದಾರೆ.

**ಕಾತ್ಯಾಯನ** : ವಿವಾಹಿತ ಸಂದರ್ಭದಲ್ಲಿ ಪಡೆದ ವಸ್ತುಗಳು, ಗಂಡನ ಮನೆಗೆ ತೆರಳುವಂತಹ ಸಂದರ್ಭದಲ್ಲಿ ಪಡೆದಂತಹ ಉಡುಗೊರೆಗಳು ಮತ್ತು ವಿಧವಾ ಸಂದರ್ಭದಲ್ಲಿ ಪಡೆದುಕೊಂಡ ಉಡುಗೊರೆಗಳನ್ನು ಸ್ತ್ರೀಧನ ಎಂದು ಕರೆಯುತ್ತಾನೆ. ಈತನ ಪ್ರಕಾರ ಅವಳ ತಂದೆ, ಗಂಡ ಮತ್ತು ಸಹೋದರರಿಗೆ ಸ್ತ್ರೀಧನವನ್ನು ಬಳಸುವ ಅಥವಾ ಪರಭಾರೆ ಮಾಡುವ ಹಕ್ಕು ಇರುವುದಿಲ್ಲ. ಯಾರಾದರೂ ಅವಳ ಸಮ್ಮತಿಯಿಲ್ಲದೇ ಅವಳ ಆಸ್ತಿಯನ್ನು ಬಳಸಿಕೊಂಡರೆ ಬಡ್ಡಿ ಸಮೇತವಾಗಿ ಹಿಂದಿರುಗಿಸಬೇಕಾಗುತ್ತದೆ ಮತ್ತು ರಾಜನಿಗೆ ದಂಡವನ್ನೂ ಕಟ್ಟಬೇಕಾಗುವುದು. ಒಂದುವೇಳೆ ಗಂಡನಿಂದ ಪೀಡಿಸಲ್ಪಟ್ಟರೆ ಅಥವಾ ಯಾವುದಾದರೂ ಕಾಯಿಲೆಯಿಂದ ಬಳಲುತ್ತಿದ್ದರೆ ಅಥವಾ ಸಾಲಗಾರರಿಂದ ಕಿರುಕುಳವನ್ನು ಅನುಭವಿಸುತ್ತಿದ್ದರೆ ಮಹಿಳೆ ಸ್ವಯಂ ಇಚ್ಛೆಯಿಂದ ಸ್ತ್ರೀಧನವನ್ನು ಕೊಡಬಹುದು. ನಂತರ ಪತಿಯು ಅದನ್ನು ಹಿಂದಿರುಗಿಸಬೇಕಾಗುತ್ತದೆ. ಸ್ತ್ರೀಧನದಲ್ಲಿಯೂ ಹಲವು ಪ್ರಕಾರಗಳನ್ನಾಗಿ ವಿಂಗಡಿಸಲಾಗಿದ್ದು, ಕಾತ್ಯಾಯನ ಸ್ಮೃತಿಯಲ್ಲಿ ೨೭ ವಿಧದ ಸ್ವತ್ತುಗಳನ್ನು, ವಸ್ತುಗಳನ್ನು ಸ್ತ್ರೀಧನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ,

೧. "ಅದ್ಯಾವಹನಿಕ ಸ್ತ್ರೀಧನ: ಮದುವೆಯ ಸಂದರ್ಭದಲ್ಲಿ ಅಗ್ನಿ ಸಮಕ್ಷಮದಲ್ಲಿ ಕೊಡಲ್ಪಡುವ ಕಾಣಿಕೆಗಳು, ಉಡುಗೊರೆಗಳು, ವಧು ವರರನ್ನು ಹಿಂಬಾಲಿಸಿ ಮನೆಗೆ ಹೋಗುವಾಗ ಕೊಟ್ಟಿದ್ದು.
೨. ಪ್ರೀತಿದತ್ತ ಸ್ತ್ರೀಧನ : ಅತ್ತೆ, ಮಾವ ಮತ್ತು ಹಿರಿಯರು ಕೊಟ್ಟಿದ್ದು.
೩. ಕನ್ಯಾ ಶುಲ್ಕ ಸ್ತ್ರೀಧನ : ಪಾತ್ರೆ, ಪಗಡೆ, ಹೈನುದನ, ಆಭರಣ, ವಸ್ತು ಮತ್ತು ಹಣ.
೪. ಅನ್ವಾದೇಯ ಸ್ತ್ರೀಧನ : ಮದುವೆಯ ನಂತರ ತಂದೆ ಮತ್ತು ಗಂಡಿನ ಕಡೆಯವರು ಕೊಟ್ಟದ್ದು.
೫. ಸೌದಾಯಿಕ ಸ್ತ್ರೀಧನ : ವಿವಾಹಿತ ಸ್ತ್ರೀ ಗಂಡನ ಮನೆಯಲ್ಲಿ, ಅವಿವಾಹಿತ ಕನ್ಯೆ ತಂದೆಯ ಮನೆಯಲ್ಲಿ ಸಹೋದರರಿಂದ, ತಂದೆ ತಾಯಿಯಿಂದ ಪಡೆಯುವ ಸ್ವತ್ತು"[೪೦]

ಹೀಗೆ ವಿವಿಧ ಪ್ರಕಾರಗಳಲ್ಲಿ ಮಹಿಳೆಗೆ ಚರ ಮತ್ತು ಸ್ಥಿರಾಸ್ಥಿಯನ್ನು ಸ್ತ್ರೀಧನದ ರೂಪದಲ್ಲಿ ನೀಡಲಾಗುತ್ತಿತ್ತು. ಈ ಸ್ತ್ರೀಧನದ ವಾರಸುದಾರಿಕೆಯು ಮಹಿಳೆಯರದ್ದೇ ಆಗಿರುತ್ತಿತ್ತು. ಆದ್ದರಿಂದ ಹಿಂದೂ ಸ್ತ್ರೀ ಮರಣ ಹೊಂದಿದಾಗ ಅವಳು ತನ್ನ ಸ್ತ್ರೀಧನವನ್ನು ಬಿಟ್ಟು ಹೋಗಿದ್ದರೆ ಅದರ ವಾರಸಾ ಹಕ್ಕು ಅವಳ ಹೆಣ್ಣು ಮಕ್ಕಳಲ್ಲಿ ಹಂಚಿಕೆಯಾಗುತ್ತದೆ. ಅದು ಈ ಕೆಳಗಿನಂತಿದೆ.

೧. "ಅವಿವಾಹಿತ ಮಗಳು

೨. ಜೀವನಾಧಾರವಿಲ್ಲದ ವಿವಾಹಿತ ಮಗಳು

೩. ಜೀವನಾಧಾರವಿರುವ ವಿವಾಹಿತ ಮಗಳು"[೪೧]

ಹೆಣ್ಣು ಮಕ್ಕಳಿರದ ಮಹಿಳೆಯ ಸ್ತ್ರೀಧನದ ವಾರಸಾ ಹಕ್ಕು ಗಂಡ ಮತ್ತು ಗಂಡು ಮಕ್ಕಳಿಗೆ ಸೇರುತ್ತದೆ. ಒಂದು ವೇಳೆ ಸ್ತ್ರೀಧನ ಗಂಡನ ಕಡೆಯಿಂದ ಬಂದಿದ್ದಾದರೆ ಗಂಡನ ವಾರಸುದಾರರಿಗೆ, ತಂದೆಯ ಕಡೆಯಿಂದ ಬಂದಿದ್ದಾದರೆ ತಂದೆಯ ಕಡೆಯ ವಾರಸುದಾರರಿಗೆ ಸೇರುತ್ತದೆ.

ಈ ಮೇಲಿನ ಸ್ಮೃತಿಕಾರರ ಜೊತೆಗೆ ವಿಜ್ಞಾನೇಶ್ವರನ ಮಿತಾಕ್ಷರ ಮತ್ತು ಜೀಮೂತ ವಾಹನನ ದಾಯಭಾಗ ಪ್ರಮುಖವಾದ ಕೃತಿಗಳಾಗಿವೆ. ವಿಜ್ಞಾನೇಶ್ವರನ ಪ್ರಕಾರ "ಸ್ತ್ರೀಗೆ ತಾಯಿ, ತಂದೆ, ಪತಿ, ಸೋದರರ ಮತ್ತು ಸಂಬಂಧಿಗಳು ಕೊಡುವ ವಸ್ತುಗಳೆಲ್ಲವೂ, ಹಕ್ಕಿನ ಪ್ರಕಾರ ಬರುವ ಆಸ್ತಿಯೂ ಸ್ತ್ರೀಧನ"[೪೨] ಎಂದಿದ್ದಾರೆ. ಇವರ ಪ್ರಕಾರ ಸ್ತ್ರೀಧನವು ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ.

ಅ. ತಂದೆ, ತಾಯಿ, ಪತಿ ಮತ್ತು ಸಹೋದರರಿಂದ ಪಡೆದ ಉಡುಗೊರೆಗಳು

ಆ. ವಿವಾಹದ ಸಂಧರ್ಭದಲ್ಲಿ ಅಗ್ನಿಕುಂಡದೆದುರು ತಾಯಿ ಮತ್ತು ಇತರರಿಂದ ಪಡೆದ ಉಡುಗೊರೆಗಳು

ಇ. ಎರಡನೆಯ ಮದುವೆಯ ಸಂದರ್ಭದಲ್ಲಿ ಪಡೆದಂತಹ ಉಡುಗೊರೆಗಳು ಅಥವಾ ಪತಿಯು ಎರಡನೆಯ ವಿವಾಹವಾಗುವಾಗ ಮೊದಲ ಪತ್ನಿಗೆ ನೀಡಿರುವಂತಹ ಉಡುಗೊರೆಗಳು

"ಮಿತಾಕ್ಷರದಲ್ಲಿ ಸ್ತ್ರೀಧನದ ಬಡ್ಡಿಯ ಉಲ್ಲೇಖವಿರುವುದರಿಂದ ಒಡವೆ ವಸ್ತುಗಳ ಜೊತೆಗೆ ಹಣವೂ ಇರುತ್ತಿತ್ತು ಎಂಬುದು ಸ್ಪಷ್ಟ. ಮನುಸ್ಮೃತಿಯ ಆರು ವಿಭಾಗದ ಸ್ತ್ರೀಧನ ಸಹಸ್ರ ವರ್ಷಗಳಲ್ಲಿ ಮೂರು ವಿಭಾಗಗಳಿಗೆ ಇಳಿದಿತ್ತು. ತಂದೆಯು ತನ್ನ ಆಸ್ತಿಯನ್ನು ಸ್ವಂತ ಇಚ್ಛೆಯಿಂದ ಸಮಾನ ವಿಭಾಗ ಮಾಡಿ ಪುತ್ರರಿಗೆ ಕೊಡಮಾಡಿದಾಗ, ಪತ್ನಿಗೂ ಅಷ್ಟೇ ಪಾಲನ್ನು ಕೊಡಬೇಕೆಂಬ ಯಜ್ಞಾವಲ್ಕ್ಯನ ನಿರ್ದೇಶನವನ್ನು ಮಿತಾಕ್ಷರ ಎತ್ತಿಹಿಡಿದಿದೆ. ಸ್ಮೃತಿಕಾರನಿಗೂ ಟೀಕಾಕಾರನಿಗೂ ೮-೧೦ ವರ್ಷಗಳ ಅಂತರವಿದ್ದುದನ್ನು ಗಮನಿಸಿದಾಗ ಸ್ತ್ರೀಧನದ ಮಟ್ಟಿಗೆ ತನ್ನ ಯುಗಧರ್ಮಕ್ಕೆ ಮೀರಿಯೇ ವಿಜ್ಞಾನೇಶ್ವರ ಉದಾರ ಮನೋಭಾವ ತಳೆದಿದ್ದಾನೆ ಎಂದು ಹೇಳಬೇಕಾಗುತ್ತದೆ."[೪೩]

"ಜೀಮೂತವಾಹನನ (೧೨ನೆಯ ಶತಮಾನ) ದಾಯಭಾಗ ಪದ್ಧತಿ ಪ್ರಚಲಿತವಿದ್ದ ಬಂಗಾಳದಲ್ಲಿ ಅವಿಭಕ್ತ ಕುಟುಂಬದ ವಿಧವೆಗೆ, ನಿಧನ ಹೊಂದಿದ ಪತಿಯ ಆಸ್ತಿ ಪಾಲಿನ ಹಕ್ಕನ್ನು ಕೊಡಮಾಡಲಾಗಿತ್ತು. ಈ ಔಧಾರ್ಯವೇ ಆಕೆಯ ಪಾಲಿಗೆ ದಹಿಸುವ ಅಗ್ನಿಯಾಗಿ ಪರಿಣಮಿಸಿತು. ಸತಿ ಹೋಗಲು ಇದು ಒತ್ತಾಯಿಸಿತು. ಆಸ್ತಿ ಮತ್ತು ಬಂಗಾರದ ಕಾರಣವಾಗಿ

ಬಲವಂತವಾಗಿ ಸ್ತ್ರೀಯರನ್ನು ಬೆಂಕಿಗೆ ನೂಕಿದ ಉದಾಹರಣೆಗಳು ಬೇಕಾದಷ್ಟಿದ್ದವು. ಕಾಲಾಂತರದಲ್ಲಿ ಕನ್ನಡ ಮಹಿಳೆಗೆ ದೊರೆಯುತ್ತಿದ್ದ ಸ್ತ್ರೀಧನವು ಕಡಿಮೆಯಾಗುತ್ತಾ ಹೋದರೂ ಅದು ಅವಳ ಜೀವ ಉಳಿಸಲೂ ಸಹಾಯ ಮಾಡಿತ್ತು ಎಂಬ ಸತ್ಯವನ್ನು ಒಪ್ಪಿಕೊಳ್ಳ ಬೇಕಾಗಿದೆ."[೪೪] ಹೀಗೆ ಹಲವು ವಿಮರ್ಶಕರು ಸ್ತ್ರೀಧನದ ಬಗ್ಗೆ ತಮ್ಮದೇ ಆದಂತಹ ವ್ಯಾಖ್ಯಾನಗಳನ್ನು ನೀಡಿರುವುದನ್ನು ಕಾಣಬಹುದಾಗಿದೆ.

**ಅ.ಆ. ಸ್ತ್ರೀಧನದ ಮೂಲಗಳು :–**

೧. ಬಂಧುಗಳಿಂದ ಪಡೆದ ಉಡುಗೊರೆಗಳು

೨. ಮಹಿಳೆ ಅವಿವಾಹಿತಳಾಗಿದ್ದಾಗ ಅಥವಾ ಕೌಮಾರ್ಯದಲ್ಲಿ ಅಪರಿಚಿತರಿಂದ ದತ್ತವಾದ ಉಡುಗೊರೆಗಳು.

೩. ಪಿತ್ರಾರ್ಜಿತವಾಗಿ ಪಡೆದಂತಹ ಆಸ್ತಿ

೪. ಸಂರಕ್ಷಣೆಯ ಅಥವಾ ಪೋಷಣೆಯ ಬದಲಾಗಿ ಪಡೆದಂತಹ ಆಸ್ತಿ.

೫. ಜಾಣ್ಮೆ ಅಥವಾ ಕೌಶಲದಿಂದ ಪಡೆದಂತಹ ಆಸ್ತಿ.

೬. ರಾಜಿ ಒಪ್ಪಂದದಿಂದ ಪಡೆದುಕೊಂಡ ಆಸ್ತಿ.

೭. ವ್ಯತಿರಿಕ್ತ ಸ್ವಾಧೀನದಿಂದ ಪಡೆದುಕೊಂಡ ಆಸ್ತಿ.

೮. ಸ್ತ್ರೀಧನದ ಗಳಿಕೆಯಿಂದ ಅಥವಾ ಸ್ತ್ರೀಧನದ ಆದಾಯವನ್ನು ಉಳಿತಾಯ ಮಾಡಿ ಅದರಿಂದ ಖರೀದಿಸಿದ ಆಸ್ತಿ.

೯. ಮೇಲೆ ಹೇಳಿದ ಮೂಲಗಳಿಂದ ಹೊರತಾಗಿ ಇತರೆ ಮೂಲಗಳಿಂದ ನ್ಯಾಯ ಸಮ್ಮತವಾಗಿ ಸ್ವಾದೀನ ಪಡಿಸಿಕೊಂಡ ಆಸ್ತಿ. ಇವುಗಳೆಲ್ಲವೂ ಸ್ತ್ರೀಧನದ ಮೂಲಗಳಾಗಿವೆ. ಈ ಮೇಲಿನ ಎಲ್ಲಾ ಮೂಲಗಳಿಂದ ಮಹಿಳೆ ಯಾವುದೇ ಬಗೆ ಸ್ವತ್ತನ್ನು ಪಡೆದುಕೊಂಡರೆ ಅದನ್ನು ಸ್ತ್ರೀಧನವೆಂತಲೇ ಪರಿಗಣಿಸಲಾಗುತ್ತದೆ. ಈ ಬಗೆಯಲ್ಲಿ ಪಡೆದುಕೊಂಡ ಎಲ್ಲಾ ಆಸ್ತಿಯ ಮೇಲೆ ಮಹಿಳೆಯರು ತಮ್ಮದೇ ಆದ ಅಧಿಕಾರವನ್ನು ಪಡೆದುಕೊಂಡಿರುತ್ತಾರೆ. ಈ ಬಗೆಯ ಅಧಿಕಾರವನ್ನು ಹೇಗೆ ಹೊಂದಿರುತ್ತಾರೆ ಎಂಬುದನ್ನು ತಿಳಿಯುವುದು ಅಗತ್ಯವಾಗಿದೆ.

**ಅ.ಇ. ಸ್ತ್ರೀಧನದ ಮೇಲೆ ಮಹಿಳೆಯ ಹಕ್ಕು :–**

ಸಮಾಜದಲ್ಲಿ ಮಹಿಳೆಯರ ಸ್ಥಾನದ ಮೇಲೆ ಮತ್ತು ತಾನು ಪಡೆದ ಸ್ತ್ರೀಧನದ ಮೂಲಗಳ ಮೇಲೆ ಮಹಿಳೆಯರ ಹಕ್ಕು ಮತ್ತು ಅಧಿಕಾರ ನಿರ್ಧಾರಿತವಾಗಿರುತ್ತದೆ. ಅಂದರೆ ವಿವಾಹಿತ, ಅವಿವಾಹಿತ, ವಿಧವೆ ಈ ಎಲ್ಲಾ ಸಂದರ್ಭಗಳಲ್ಲೂ ಸ್ತ್ರೀಧನದ ಮೇಲಿನ ಹಕ್ಕು ಮತ್ತು ಅಧಿಕಾರ ಬದಲಾವಣೆಗೆ ಒಳಪಟ್ಟಿರುತ್ತದೆ.

೧. ವಿವಾಹಿತ ಸ್ಥಿತಿ : ಸ್ತ್ರೀಧನದ ಸ್ವರೂಪಕ್ಕನುಗುಣವಾಗಿ ಸ್ತ್ರೀಧನದ ಹಸ್ತಾಂತರದ ಹಕ್ಕು ಹಲವು ರೀತಿಯದ್ದಾಗಿರುತ್ತದೆ. ಹಾಗಾಗಿ ಸ್ತ್ರೀಧನವನ್ನು ಸೌಧಾಯಿಕ ಮತ್ತು ಅಸೌಧಾಯಿಕವೆಂದು ವಿಭಾಗಿಸಲಾಗಿದೆ. ಮದುವೆಯ ಕಾಲದಲ್ಲಿ ಸೌಧಾಯಿಕ ಸ್ತ್ರೀಧನವು ಹೆಣ್ಣಿನಿಂದ ಸ್ವತಂತ್ರವಾಗಿ ಹಸ್ತಾಂತರಿಸಬಹುದಾಗಿದೆ. ಆದರೆ ಅಸೌಧಾಯಿಕ ಸ್ತ್ರೀಧನವು ಅವಳು ಮತ್ತು ಅವಳ ಪತಿಯ ಒಪ್ಪಿಗೆಯೊಂದಿಗೆ ಹಸ್ತಾಂತರಿಸಬೇಕಾಗುತ್ತದೆ. ಈ ನಿಯಮವು ಗಂಡ ಹೆಂಡತಿ ಒಟ್ಟಿಗೆ ಜೀವಿಸುವ ಷರತ್ತನ್ನು ಅನ್ವಯಿಸಿರುತ್ತದೆ. ಒಂದುವೇಳೆ ಇಬ್ಬರೂ ಬೇರೆ ಬೇರೆಯಾಗಿದ್ದರೆ ಅಸೌಧಾಯಿಕ ಸ್ತ್ರೀಧನವು ಪತಿಯ ಒಪ್ಪಿಗೆಯಿಲ್ಲದೇ ಹೆಂಡತಿಯಿಂದ ಹಸ್ತಾಂತರಿಸಲ್ಪಡುತ್ತದೆ. ಸಾಮಾನ್ಯವಾಗಿ ಗಂಡನಿಗೆ ಹೆಂಡತಿಯ ಸ್ತ್ರೀಧನದ ಮೇಲೆ ಅಧಿಕಾರವಿರುವುದಿಲ್ಲ. ಕೆಲವು ತುರ್ತು ಸಂದರ್ಭಗಳಲ್ಲಿ ಹೆಂಡತಿಯ ಒಪ್ಪಿಗೆಯಿರದೆ ಸ್ತ್ರೀಧನವನ್ನು ಬಳಸಲಾಗುತ್ತದೆ ಅಥವಾ ಹಸ್ತಾಂತರಿಸಲಾಗುತ್ತದೆ.

೨. ವಿಧವಾ ಸ್ಥಿತಿ : ಮಹಿಳೆ ವಿಧವೆಯಾದ ಸಂದರ್ಭದಲ್ಲಿ, ಅಂತಹ ಮಹಿಳೆಗೆ ಪ್ರತ್ಯೇಕವಾಗಿ ಮತ್ತು ಅನಿರ್ಭಂಧಿತವಾಗಿ ಆಸ್ತಿಯನ್ನು ಹಸ್ತಾಂತರ ಮಾಡುವ ಅಧಿಕಾರವಿರುತ್ತದೆ. ಆ ಆಸ್ತಿಯು ಆಕೆಯ ಗಂಡ ಜೀವಂತವಿದ್ದಾಗ ಪಡೆದು ಕೊಂಡದ್ದಾಗಿರಬಹುದು ಅಥವಾ ಮರಣದ ನಂತರ ಪಡೆದು ಕೊಂಡದ್ದಾಗಿರಬಹುದು. ಅವಳು ಆಸ್ತಿಯನ್ನು ಯಾವುದೇ ನಿರ್ಬಂಧವಿಲ್ಲದೆ ಪರಭಾರೆ ಮಾಡಬಹುದು. ಆದರೆ ಮಹಿಳೆಯರ ಆಸ್ತಿಯ ಉತ್ತರಾಧಿಕಾರದ ಪ್ರಶ್ನೆ ಬಂದಾಗ ಅವಳ ನಡತೆಯನ್ನು ಪರಿಗಣಿಸಲಾಗುತ್ತದೆ.

ವಿಧವಾ ಮಹಿಳೆಯರಿಗಿಂತ ನೃತ್ಯಮಾಡುವ ಮಹಿಳೆಯರ ಉತ್ತರಾಧಿಕಾರದ ಹಕ್ಕುಗಳು ಸಂಪೂರ್ಣವಾಗಿ ಭಿನ್ನವಾಗಿರುತ್ತವೆ. ಈ ಮಹಿಳೆಯರು ನೃತ್ಯಮಾಡುವ ಆಚರಣೆಯನ್ನು ಕುಟುಂಬದ ಪದ್ಧತಿಯಾಗಿ ಅನುಸರಿಸಿಕೊಂಡು ಬಂದಿರುತ್ತಾರೆ. ಇವರ ಪ್ರಕಾರವಾಗಿ ನೈತಿಕ ಅಥವಾ ಅನೈತಿಕ ಎಂಬ ಬೇಧಗಳು ಹುಟ್ಟುವುದಿಲ್ಲ. ಈ ಮಹಿಳೆಯರಿಗೆ ಹುಟ್ಟಿದ ಎಲ್ಲಾ ಮಕ್ಕಳು ಒಂದೇ ಎಂದು ಮತ್ತು ನೈತಿಕವಾಗಿಯೇ ಪರಿಗಣಿಸಲ್ಪಡುತ್ತಾರೆ. ದೇವದಾಸಿ ಮತ್ತು ನೃತ್ಯಗಾರ್ತಿಯರ ಆಸ್ತಿಯ ಉತ್ತರಾಧಿಕಾರವು ಚಾಲ್ತಿಯಲ್ಲಿರುವ ಹಾಗೂ ಬಳಕೆಯಲ್ಲಿರುವ ಸಂಪ್ರದಾಯಗಳ ಪ್ರಕಾರ ರಚಿತವಾಗಿತ್ತು. ತಾಯಿ ಮತ್ತು ಮಗಳ ನಡುವೆ ಯಾವುದೇ ದಾಯಾದಿತ್ವ ಬೆಳೆಯಲು ಅವಕಾಶವಿಲ್ಲ. ಹಾಗಾಗಿ ಇಂದಿಗೂ ಮಗಳು ತಾಯಿಯ ವಿರುದ್ಧ ಆಸ್ತಿಯಲ್ಲಿ ಭಾಗವನ್ನು ಕೇಳಿರುವಂತಹ ಉದಾಹರಣೆಗಳು ಸಿಕ್ಕಿಲ್ಲ ಎಂದೇ ಹೇಳಬಹುದು.

ಒಟ್ಟಾರೆಯಾಗಿ ಸ್ತ್ರೀಧನವನ್ನು ವಿವಿಧ ಸ್ಮೃತಿಕಾರರು ಮತ್ತು ವಿಮರ್ಶಕರಿಂದ ಹಿಡಿದು ಪ್ರಸ್ತುತ ನ್ಯಾಯಾಲಯಗಳ ತೀರ್ಪಿನವರೆಗೆ ಅರ್ಥೈಸಲಾಗಿದೆ. ಇದು ಮಹಿಳೆಯರಿಗೆ ದತ್ತವಾದ ಹಕ್ಕಾಗಿದೆ. ಇದರ ಮೇಲೆ ಪುರುಷರಿಗೆ ಯಾವುದೇ ಬಗೆಯ ಅಧಿಕಾರವಿರುವುದಿಲ್ಲ. ಕೆಲವು

ಪ್ರತ್ಯೇಕ ಸಂದರ್ಭಗಳಲ್ಲಿ ಅಧಿಕಾರವನ್ನು ನೀಡಿದೆಯಾದರೂ, ಆ ಅಧಿಕಾರದಿಂದ ವಿನಿಯೋಗಿಸಿದ ಹಣವನ್ನು ಪುನಃ ಹಿಂತಿರುಗಿಸಬೇಕಾದ ಜವಾಬ್ದಾರಿ ಪುರುಷನದ್ದಾಗಿರುತ್ತದೆ. ಹೀಗೆ ಸ್ತ್ರೀಯರು ತಮಗೆ ದೊರೆತಂಥ ಆಸ್ತಿಯ ಮೇಲೆ ತಮ್ಮ ಸಂಪೂರ್ಣವಾದ ಹಕ್ಕನ್ನು ಹೊಂದಿರುತ್ತಾರೆ.

**ಆ. ಮಹಿಳಾ ಆಸ್ತಿ**

ಸ್ತ್ರೀಧನವಲ್ಲದ, ಬೇರೆ ಮೂಲಗಳಿಂದ ಅಂದರೆ ವಾರಸುದಾರಿಕೆಯಿಂದ ಅಥವಾ ಇನ್ನಿತರ ಮೂಲದಿಂದ ಬಂದ ಆಸ್ತಿಯನ್ನು ಮಹಿಳೆಯ ಆಸ್ತಿ ಎಂದು ಪರಿಗಣಿಸಲಾಗುತ್ತದೆ. ಮಹಿಳೆಯೂ ಆಸ್ತಿಯ ಒಡೆಯಳಾಗಬಹುದಿತ್ತು ಎಂಬುದಕ್ಕೆ ವೇದಗಳ ಕಾಲದಿಂದಲೂ ಸಾಕ್ಷ್ಯಾಧಾರಗಳು ದೊರೆಯುತ್ತವೆ. ಮಹಿಳೆಯರ ಸ್ಥಾನಮಾನ ವೇದಗಳ ಕಾಲದಲ್ಲಿ ಉತ್ತಮವಾಗಿತ್ತು ಎಂದು ಹೇಳಲಾಗುತ್ತದೆ. ಋಗ್ವೇದದ ಕಾಲದಲ್ಲಿ "ಕುಟುಂಬದ ಆಸ್ತಿಯ ಹಂಚಿಕೆಯ ಬಗ್ಗೆ ಸ್ಪಷ್ಟ ಮಾಹಿತಿ ದೊರೆಯದಿದ್ದರೂ ಹಲವು ಶ್ಲೋಕಗಳು ಸ್ತ್ರೀಯರಿಗೆ ಆಸ್ತಿಯಲ್ಲಿ ಪಾಲು ಇತ್ತು ಎಂಬುದನ್ನು ಸೂಚಿಸುತ್ತವೆ."[೪೫] ಅಲ್ಲದೆ ತಂದೆಯ ಆಸ್ತಿಯಲ್ಲಿ ಮಗಳು ಪಾಲು/ಹಕ್ಕು ಹೊಂದಿರುತ್ತಿದ್ದಳು ಎಂಬುದಕ್ಕೆ ಉದಾಹರಣೆಯೆಂಬಂತೆ, "ನನ್ನ ಮಗಳಿಗೆ ಸಲ್ಲಬೇಕಾದ ಅಂತಸ್ತು, ಆಸ್ತಿ ಸಂಪಾದಿಸಲು ಅವಳಿಗಿರುವ ಅರ್ಹತೆಗೆ ಮತ್ತು ಅವಳು ಮಾಡುವ ಧರ್ಮ ಕಾರ್ಯಗಳಿಗೆ ಅಡ್ಡಿಮಾಡಬಾರದು"[೪೬] ಎಂದಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಆ ಸಂದರ್ಭದಲ್ಲಿ ಮಗಳಿಗೆ ಆಸ್ತಿಯ ಹಕ್ಕಿತ್ತು. ವೇದಗಳ ಕಾಲದಲ್ಲಿ ತಂದೆ – ತಾಯಿಯರ ಆಸ್ತಿಯಲ್ಲಿ ಮಹಿಳೆಯು ಪಾಲು ಪಡೆಯುವುದರ ಜೊತೆಗೆ ತಂದೆ ತಾಯಿ ಅಂತ್ಯಕ್ರಿಯೆಯಲ್ಲಿಯೂ ಪುರುಷರೊಟ್ಟಿಗೆ ಮಹಿಳೆಯರೂ ಭಾಗವಹಿಸುವ ಹಕ್ಕನ್ನು ಹೊಂದಿದ್ದರು. "ವೇದ ಉಪನಿಷತ್ತುಗಳ ಕಾಲದಲ್ಲಿನ ಭಾರತದ ಮಹಿಳೆಗೆ ಉತ್ತಮವಾದ ಸ್ಥಾನವಿತ್ತು. ಪುತ್ರನಿಲ್ಲದ ವಂಶದಲ್ಲಿ ಪುತ್ರಿಗೆ ಆಸ್ತಿಯ ಹಕ್ಕಿತ್ತು. ತಂದೆಯ ತಾಯಿಯರ ಅಂತ್ಯಕ್ರಿಯೆಗಳನ್ನು ಮಾಡಲು ಅವಳಿಗೆ ಹಕ್ಕಿತ್ತು."[೪೭] ವೇದಗಳ ಕಾಲದಲ್ಲಿ ಮಹಿಳೆಯ ಸ್ಥಾನಮಾನದಲ್ಲಿ ಉತ್ತಮ ಸ್ಥಿತಿಯಿರುವುದು ಇದರಿಂದ ಸ್ಪಷ್ಟಗೊಳ್ಳುತ್ತದೆ ಮತ್ತು ಆಸ್ತಿ ಹಕ್ಕನ್ನು ಮಹಿಳೆಯರು ಪಡೆದಿದ್ದರು ಎಂಬುದು ತಿಳಿದು ಬರುತ್ತದೆ. ಅದೇ ರೀತಿಯಾಗಿ ಸ್ಮೃತಿಗಳ ಕಾಲದಲ್ಲಿ ಮಹಿಳೆಯರಿಗೆ ಆಸ್ತಿಹಕ್ಕು ಇತ್ತೆಂಬುದನ್ನು ಅಂದಿನ ಧರ್ಮ ಗ್ರಂಥಗಳು ಸ್ಪಷ್ಟಪಡಿಸುತ್ತವೆ. ಈ ರೀತಿಯಾಗಿ ವಾರಸುದಾರಿಕೆ ಅಥವಾ ಇತರೆ ಮೂಲದಿಂದ ಮಹಿಳೆಯು ಹೊಂದಿದ್ದ ಆಸ್ತಿಯ ವಾರಸುದಾರಿಕೆ / ಒಡೆತನವೆಲ್ಲವು ನಿರ್ಬಂಧಿತವಾಗಿತ್ತು ಅಂದರೆ

- ಮಹಿಳೆಯು ತಾನು ಹೊಂದಿದ ಆಸ್ತಿಯ ಪರಭಾರೆಯ ಹಕ್ಕನ್ನು ಹೊಂದಿರಲಿಲ್ಲ

೦ ಅವಳ ಮರಣದ ನಂತರ ಆಸ್ತಿಯು ಹಿಂದಿನ ಪೂರ್ಣ ಪ್ರಮಾಣದ ಒಡೆಯನ ವಾರಸುದಾರರಿಗೆ ಹಕ್ಕನ್ನು ತಂದು ಕೊಡುತ್ತಿತ್ತು.

ಆದರೆ ಆಸ್ತಿಯ ಅಭಿವೃದ್ಧಿಯ ಸಂದರ್ಭದಲ್ಲಿ ಪೂರ್ಣ ಪ್ರಮಾಣದ ಒಡೆಯನ ಅವಲಂಬಿತರ ಅಗತ್ಯಗಳನ್ನು ಪೂರೈಸಬೇಕಾದ ಸಂದರ್ಭಗಳಲ್ಲಿ ಅಥವಾ ಮಹಿಳೆಯ ಸ್ವಂತ ಅಗತ್ಯಗಳ ಪೂರೈಕೆಗಾಗಿ ಕಡ್ಡಾಯ ಧಾರ್ಮಿಕ ಆಚರಣೆ, ಹೆಣ್ಣು ಮಗಳ ಮದುವೆ ಪತಿಯ ಅಂತ್ಯ ಸಂಸ್ಕಾರ ಮುಂತಾದ ಸಂದರ್ಭಗಳಲ್ಲಿ ಮಾತ್ರ ಆಸ್ತಿಯ ಪರಭಾರೆ ಮಾಡುವ ಹಕ್ಕು ಮಹಿಳೆಗೆ ಪ್ರಾಪ್ತವಾಗುತ್ತಿತ್ತು.

"ಉತ್ತರಾಧಿಕಾರದ ಉದ್ದೇಶಕ್ಕಾಗಿ ಹಿಂದೂ ಮಹಿಳೆಯ ಆಸ್ತಿಯನ್ನು ಮೂರು ವರ್ಗಗಳನ್ನಾಗಿ ವಿಂಗಡಿಸಲಾಗಿದೆ.

೧. ಮಹಿಳೆ ತನ್ನ ತಾಯಿ ಅಥವಾ ತಂದೆಯಿಂದ ಉತ್ತರಾಧಿಕಾರ ಕ್ರಮದಿಂದ ಪಡೆದ ಆಸ್ತಿ– ಮಹಿಳೆಗೆ ಮಗ ಅಥವಾ ಮಗಳಿಲ್ಲದಿದ್ದರೆ ಇದು ಅವಳ ತಂದೆಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

೨. ಮಹಿಳೆ ತನ್ನ ಗಂಡ ಅಥವಾ ತನ್ನ ಮಾವನಿಂದ (ಗಂಡನ ತಂದೆ) ಪಡೆದ ಆಸ್ತಿ– ಇದು ಆ ಮಹಿಳೆಯ ಉತ್ತರಾಧಿಕಾರಿಯಾಗಿ ಮಗ ಅಥವಾ ಮಗಳು ಇಲ್ಲದಿದ್ದರೆ ಪತಿಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

೩. ಮಹಿಳೆಗೆ ಇತರೆ ಯಾವುದೇ ರೀತಿಯಿಂದ ಅಥವಾ ಯಾವುದೇ ಮೂಲದಿಂದ ಪಡೆದ ಆಸ್ತಿ– ಇದು ಅವಳ ನಿರುಪಾಧಿಕ ಆಸ್ತಿಯಾಗಿರುತ್ತದೆ."೪೮ ಹೀಗೆ ಮಹಿಳಾ ಆಸ್ತಿಯು ಸಹ ಸ್ತ್ರೀಧನದಿಂದ ಬೇರೆಯಾಗಿಯೇ ಗುರುತಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಹಿಂದೂ ಅವಿಭಕ್ತ ಕುಟುಂಬ ಪದ್ಧತಿಯು ಪಿತೃಪ್ರಧಾನ ಹಾಗೂ ಪಿತೃವಂಶೀಯ ಕುಟುಂಬಗಳಾಗಿದ್ದು, ದಕ್ಷಿಣ ಭಾರತದ ಕೊಡಗರಲ್ಲಿ ಮತ್ತು ನಂಬೂದ್ರಿಗಳಲ್ಲಿಯೂ ಸಹ ಪಿತೃಪ್ರಧಾನ ಕುಟುಂಬ ಪದ್ಧತಿ ಇರುವುದು ಕಂಡುಬರುತ್ತದೆ. ನಂಬೂದರಿಗಳಲ್ಲಿ ಇರುವಂತಹ ಆಸ್ತಿಯ ಪರಿಕಲ್ಪನೆಯು, ಹಿಂದೂ ಅವಿಭಕ್ತ ಕುಟುಂಬಗಳ ಆಸ್ತಿ ಪರಿಕಲ್ಪನೆಗಿಂತ ತುಂಬಾ ಭಿನ್ನವಾಗಿರುವುದು ತಿಳಿದುಬರುತ್ತದೆ. ಏಕೆಂದರೆ ಹಿಂದೂ ಅವಿಭಕ್ತ ಕುಟುಂಬಗಳಲ್ಲಿ ಆಸ್ತಿಯನ್ನು ವಿಭಾಗಿಸಬಹುದಾಗಿದೆ. ಮತ್ತು ತಂದೆಯು ಸಾಲ ಮಾಡಿ ಮರಣ ಹೊಂದಿದ್ದಲ್ಲಿ ಆ ಸಾಲವನ್ನು ತೀರಿಸುವ ಜವಾಬ್ದಾರಿ ಅವನ ಮಗನಿಗಿರುತ್ತದೆ. ಇದು ಅವನ ಧರ್ಮ ಮತ್ತು ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ನಂಬೂದರಿಗಳಲ್ಲಿ ಇದು ಹಾಗಿರುವುದಿಲ್ಲ. ನಂಬೂದ್ರಿಗಳ ಅವಿಭಕ್ತ ಕುಟುಂಬಕ್ಕೆ 'ಇಲ್ಲಂ' ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಈ ಇಲ್ಲಂಗಳಲ್ಲಿ ಆಸ್ತಿಯು ಅವಿಭಾಜ್ಯವಾಗಿರುತ್ತದೆ. ಅಂದರೆ ಆಸ್ತಿಯು ವಿಭಜನೆಯಾಗಲು ಸಾಧ್ಯವೇ ಇಲ್ಲ. ಇಲ್ಲಂಗಳಲ್ಲಿ ತಂದೆಯು ಮಾಡಿದ ಸಾಲವನ್ನು ಮಕ್ಕಳು ತೀರಿಸುವ ಹಾಗಿಲ್ಲ. ಏಕೆಂದರೆ ಇಲ್ಲಿನ ಆಸ್ತಿ

ಕುಟುಂಬದ ಸದಸ್ಯರೆಲ್ಲರ ಹೆಸರಿನಲ್ಲಿರುತ್ತದೆ. ಹಾಗೆಯೇ ತಂದೆಗೆ ಆಸ್ತಿಯಲ್ಲಿ ನಿರ್ದಿಷ್ಟವಾದಂತಹ ಭಾಗ ಇರುವುದಿಲ್ಲ. ಹಾಗಾಗಿ ತಂದೆ ಮಾಡಿದ ಸಾಲವನ್ನು ಮಗನು ತೀರಿಸುವುದು ನ್ಯಾಯಸಮ್ಮತವಲ್ಲ ಎಂಬುದು ಅವರಲ್ಲಿನ ನ್ಯಾಯಾಧೀಶರು ಹೇಳುತ್ತಾರೆ. ಇಲ್ಲಂಗಳಲ್ಲಿ ಆಸ್ತಿಯ ಒಡೆತನಕ್ಕೂ ಮತ್ತು ವಿವಾಹಕ್ಕೂ ಒಂದು ಬಗೆಯ ಅವಿನಾಭಾವ ಸಂಬಂಧವಿರುತ್ತದೆ. ಏಕೆಂದರೆ "ನಂಬೂದರಿಗಳಲ್ಲಿ ಜ್ಯೇಷ್ಠ ಪುತ್ರನು ಮಾತ್ರ ನಂಬೂದರಿ ಹೆಣ್ಣು ಮಗಳನ್ನು ವಿವಾಹವಾಗಿ ಮಕ್ಕಳನ್ನು ಪಡೆದು ಕುಟುಂಬವನ್ನು ಮುಂದುವರಿಸುತ್ತಾನೆ. ಇಲ್ಲಂನ ಜೇಷ್ಠ ಪುತ್ರನ ಹೊರತು ಇತರ ಕಿರಿಯ ಸದಸ್ಯರು ಸಾಮಾನ್ಯವಾಗಿ ನಂಬೂದ್ರಿ ಸ್ತ್ರೀಯರನ್ನು ವಿವಾಹವಾಗುವುದಿಲ್ಲ. ಇಲ್ಲಿ ಮುಖ್ಯವಾಗಿ ಆಸ್ತಿ ವಿಭಜನೆಯ ಹಕ್ಕನ್ನು ಮೊಟಕುಗೊಳಿಸುವುದರಿಂದ ಇಲ್ಲಂನ ಇತರ ಸದಸ್ಯರು ಜೀವನಾಂಶವನ್ನು ಪಡೆಯುವ ಹಕ್ಕನ್ನು ಮಾತ್ರ ಪಡೆದಿರುತ್ತಾರೆ. ಜೇಷ್ಠ ಪುತ್ರನಿಗೆ ಆಸ್ತಿಯ ಮೇಲಿನ ಸಂಪೂರ್ಣ ಅಧಿಕಾರವಿದ್ದರೂ ಆತ ಆಸ್ತಿಯ ಧರ್ಮದರ್ಶಿಯಿದ್ದಂತೆ. ಇತರ ಸದಸ್ಯರ ವ್ಯಕ್ತ ಅಥವಾ ಅವ್ಯಕ್ತ ಅನುಮತಿ ಇಲ್ಲದೆ ಆಸ್ತಿಯ ಯಾವ ಒಂದು ಭಾಗವನ್ನೇ ಆಗಲೀ ಶಾಶ್ವತವಾಗಿ ಮಾರುವ ಇಲ್ಲವೇ ದಾನ ಕೊಡುವ ಹಕ್ಕಿರುವುದಿಲ್ಲ. ಒಂದು ಬಹುಮುಖ್ಯ ವಿಷಯವೆಂದರೆ ಅವಿಭಾಜ್ಯದ ಇಲ್ಲಂ ಆಸ್ತಿಯನ್ನು ಸ್ತ್ರೀ–ಪುರುಷ ಸದಸ್ಯರು ವಂಶ ಪಾರಂಪರ್ಯವಾಗಿ ಅನುಭವಿಸುವಂತೆ ಮಾಡುವ ಉದ್ದೇಶದಿಂದ ಕರ್ತನು ಆಸ್ತಿಯನ್ನು ಪೋಲು ಇಲ್ಲವೇ ಪರಭಾರೆ ಮಾಡದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಸದಸ್ಯನ ಮೇಲೆ ಹೊರಿಸಲಾಗಿದೆ"೪೯. ಹೀಗೆ ಇಲ್ಲಂಗಳಲ್ಲಿ ಆಸ್ತಿಯ ಮೇಲಿನ ಒಡೆತನ ಕುಟುಂಬದ ಸದಸ್ಯರೆಲ್ಲರಿಗೂ ಅನ್ವಯವಾಗುತ್ತದೆ. ಮುಖ್ಯವಾಗಿ ಗಂಡ ಹೆಂಡತಿಯ ಅನುಮತಿಯನ್ನು ಪಡೆಯದೇ ಆಸ್ತಿಯನ್ನು ಬೇರೊಬ್ಬರಿಗೆ ದಾನ ಮಾಡುವುದಾಗಲೀ ಅಥವಾ ಬೇರೊಬ್ಬರಿಗೆ ಮಾರುವುದಾಗಲೀ ಮಾಡುವ ಹಾಗಿಲ್ಲ. ಒಂದು ವೇಳೆ ಹಾಗೆ ಮಾಡಿದ್ದೇ ಆದರೆ ಹೆಂಡತಿ ಆತನ ಮೇಲೆ ಕೇಸ್ ದಾಖಲಿಸಬಹುದಾಗಿದೆ. ಅದನ್ನು ಪ್ರಶ್ನಿಸುವ ಹಕ್ಕು ಆ ಮಹಿಳೆಗಿದೆ. ಪ್ರಮುಖ ಸಂಗತಿಯೆಂದರೆ ಕುಟುಂಬದಲ್ಲಿನ ಎಲ್ಲಾ ಸ್ತ್ರೀಯರ ಒಪ್ಪಿಗೆ ಇಲ್ಲದೆ ಆಸ್ತಿಯನ್ನು ಯಾರಿಗೂ ಮಾರುವಂತಿಲ್ಲ. ಈ ಬಗೆಯ ನಿಯಮಗಳು ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಆದರೆ ಹಿಂದೂ ಅವಿಭಕ್ತ ಕುಟುಂಬದಲ್ಲಿ ಸ್ತ್ರೀಯರಿಗೆ ಆಸ್ತಿಯಲ್ಲಿ ಸಮಾನ ಅಧಿಕಾರವಿರುವುದಿಲ್ಲ. ಹೀಗೆ ಇಲ್ಲಂಗಳಲ್ಲಿ ಇರುವಂತೆ ಸ್ತ್ರೀ ಪುರುಷ ಸಮಾನ ಎಂಬ ಭಾವನೆ ಬೇರೆ ಯಾವ ಜನಾಂಗಗಳಲ್ಲಿಯೂ ಕಂಡುಬರುವುದಿಲ್ಲ. ಈ ಕುಟುಂಬ ವ್ಯವಸ್ಥೆಯಲ್ಲಿಯೂ ಪಿತೃಪ್ರಧಾನ ಮೌಲ್ಯಗಳು ಆಸ್ತಿಯ ಒಡೆತನವನ್ನು ಪಡೆಯಲು ಹಲವಾರು ರಾಜಕಾರಣಗಳನ್ನು ಮಾಡುತ್ತಾ ಬಂದಿವೆ. ಅವುಗಳಲ್ಲಿ ಮುಖ್ಯವಾದುದು ವಿವಾಹ. ನಂಬೂದ್ರಿಗಳಲ್ಲಿ ವರದಕ್ಷಿಣೆ ಪದ್ಧತಿ ಜಾರಿಯಲ್ಲಿದ್ದು ಇದು ತುಂಬಾ ಅಧಿಕವಾಗಿತ್ತು. ಹಾಗಾಗಿ ಇಲ್ಲಂನ ಆಸ್ತಿಯ ಬಹುಭಾಗ ಕರಗಿ ಹೋಗುತ್ತಿತ್ತು. ಈ ಕಾರಣಕ್ಕಾಗಿಯೇ ನಂಬೂದ್ರಿಗಳಲ್ಲಿ ಜೇಷ್ಠ ಪುತ್ರನು ತನ್ನ ಜಾತಿ ವರ್ಗದ ಹೆಣ್ಣನ್ನೇ ವಿವಾಹವಾಗಬೇಕು ಎಂಬ ಪದ್ಧತಿ ರೂಢಿಗೆ ಬಂದಿತು. ಒಟ್ಟಾರೆಯಾಗಿ

ಇಲ್ಲಂಗಳಲ್ಲಿನ ಆಸ್ತಿಯ ಮೇಲಿನ ಅಧಿಕಾರ ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾಗಿತ್ತು ಎಂಬುದು ಗಮನಿಸಬೇಕಾದ ಸಂಗತಿ.

"ಪಿತೃಪ್ರಧಾನ ವ್ಯವಸ್ಥೆ ಚಾಲ್ತಿಗೆ ಬಂದಾಗಿನಿಂದಲೂ ಮಾತೃತ್ವದ ವೈಭವೀಕರಣ, ಬಂಜೆತನ ಕುರಿತು ತಿರಸ್ಕಾರ ಬೆಳೆದುಕೊಂಡು ಬಂದಿದೆ. ಭಾರತೀಯ ಸಂಸ್ಕೃತಿಯಲ್ಲಿ ಮಾತೃತ್ವವನ್ನು ಆರಾಧಿಸುವ ಪ್ರಕ್ರಿಯೆ ಪ್ರಧಾನವಾಗಿ ಕಂಡುಬರುತ್ತದೆ. ಭಾರತದ ತತ್ವಶಾಸ್ತ್ರಜ್ಞರು ಹೆಣ್ಣಿನ ಮಾತೃತ್ವವನ್ನು ದೈವಿಕ ನೆಲೆಯಲ್ಲಿಯೇ ಇಟ್ಟು ಅತಿಯಾದ ವೈಭವೀಕರಣ ಮಾಡಿರುವರು. ಪಿತೃ ಎನ್ನುವುದು ತಂದೆತನವನ್ನು ಮಾತ್ರ ಪ್ರತಿನಿಧಿಸುವುದಿಲ್ಲ. ಪಾಲಕ, ರಕ್ಷಕ, ಪೂರ್ವಜ ಮೊದಲಾದ ಅರ್ಥವನ್ನು ಕೊಡುತ್ತದೆ. ಪಿತೃ ಪದಕ್ಕೆ ಇರುವ ಅರ್ಥಗಳೇ ಪಿತೃಪ್ರಧಾನವು ಮಾತೃಪ್ರಧಾನ ಪರಿಕಲ್ಪನೆಗಿಂತ ಹಿರಿದಾದ ಅರ್ಥವ್ಯಾಪ್ತಿ ಹೊಂದಿದೆ ಎನ್ನುವುದನ್ನು ಸಾಬೀತುಪಡಿಸುತ್ತದೆ."೫೦. ಹಾಗಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಪುರುಷನೇ ಅಂತಿಮ. ಅವನು ಹೇಳಿದ್ದನ್ನು ಪಾಲಿಸುವವಳು ಮಾತ್ರ ಮಹಿಳೆಯಾಗಿರುತ್ತಾಳೆ.

ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳು ತುಂಬಾ ಬಲಿಷ್ಠಗೊಂಡಿವೆ. ಇದು ಪಿತೃಪ್ರಧಾನ ಮೌಲ್ಯಗಳನ್ನು ಪೋಷಿಸುತ್ತಾ ಬಂದಿದೆ. ಈ ಸಂದರ್ಭದಲ್ಲಿಯೂ ಸಹ ಮಹಿಳೆಯರು ತಮ್ಮ ಕುಟುಂಬದ ಆಸ್ತಿಯಿಂದ ವಂಚಿತರಾಗುವಂತೆ ಮಾಡಲು ಹಲವಾರು ಕಾರಣಗಳನ್ನು ಒದಗಿಸಿಕೊಟ್ಟಿದೆ. ಆಸ್ತಿಯ ಸ್ವರೂಪಗಳು ಮತ್ತು ಪರಿಕಲ್ಪನೆಗಳು ತುಂಬಾ ಬದಲಾಗಿವೆ. ಮುಖ್ಯವಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ಎಂಬುದು ಕೇವಲ ಮನೆಯಾಗಿತ್ತು. ತದನಂತರದಲ್ಲಿ ಜಾರಿಗೆ ಬಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯು ಮನೆ, ಜಮೀನು ಅಥವಾ ಭೂಮಿ, ಕೃಷಿ ಉಪಕರಣಗಳು, ವಾಹನಗಳು ಮತ್ತು ಕೊನೆಯಲ್ಲಿ ಮಹಿಳೆ ಇವುಗಳನ್ನು ತನ್ನ ಆಸ್ತಿ ಎಂದು ಗುರುತಿಸಿಕೊಂಡಿತ್ತು. ಆದರೆ ಜಾಗತೀಕರಣ ಯಾವಾಗ ಭಾರತಕ್ಕೆ ಕಾಲಿಟ್ಟಿತೋ ಆವಾಗಿನಿಂದ ಈ ಆಸ್ತಿಯ ಪರಿಕಲ್ಪನೆಯಲ್ಲಿ ಬಹಳಷ್ಟು ಬದಲಾವಣೆಗಳು ಸಂಭವಿಸಿದವು. ಮುಖ್ಯವಾಗಿ ಆಸ್ತಿಯು ತನ್ನ ಸ್ವರೂಪವನ್ನೇ ಬದಲಿಸಿತು. ಈ ಸಂದರ್ಭದಲ್ಲಿ ಮೇಲೆ ತಿಳಿಸಿದ ಆಸ್ತಿಗಳ ಜೊತೆಗೆ ಪಾಲಿಸಿಗಳು, ಷೇರುಗಳು, ವಾಹನಗಳು, ಡಿಬೆಂಚರುಗಳು ಮುಂತಾದ ರೂಪದಲ್ಲಿ ಹುಟ್ಟಿಕೊಂಡವು. ಇವುಗಳು ಚರ ಆಸ್ತಿಗಳಾಗಿವೆ. ಇಂದು ಹೆಚ್ಚಾಗಿ ಸ್ಥಿರ ಆಸ್ತಿಗಳ ಜೊತೆಗೆ ಚರ ಆಸ್ತಿಗೂ ಸಹ ತುಂಬಾ ಬೇಡಿಕೆ ಬಂದಿರುವುದು ಕಂಡುಬರುತ್ತದೆ. ಪ್ರಸ್ತುತ ಪಾಲಿಸಿಗಳು, ಷೇರುಗಳು ಇಲ್ಲದೇ ಇರುವ ಕುಟುಂಬಗಳನ್ನು ನೋಡುವುದು ಅಸಾಧ್ಯವಾಗಿದೆ. ಹಾಗಾಗಿ ಕುಟುಂಬದ ಹಿರಿಯ ಎಂದು ಎನಿಸಿಕೊಂಡಿರುವ ಪುರುಷ ಇಂದು ಹೆಚ್ಚು ಹೆಚ್ಚು ಈ ಪಾಲಿಸಿಗಳ ಮೇಲೆ ಮತ್ತು ಷೇರುಗಳ ಮೇಲೆ ಹಣವನ್ನು ಹೂಡಿಕೆ ಮಾಡುತ್ತಿರುವುದು ಕಂಡುಬರುತ್ತಿದೆ. ಇದೇ ಆಸ್ತಿಯನ್ನು ದ್ವಿಗುಣಗೊಳಿಸುವ ಮಾರ್ಗವಾಗಿ ಮಾರ್ಪಟ್ಟಿದೆ. ಮುಖ್ಯವಾಗಿ ಈ ಪಾಲಿಸಿಗಳಿಗೆ ಹಣವನ್ನು ಹೂಡಿಕೆ ಮಾಡುವುದರಿಂದ ಲಾಭದ ಖಚಿತತೆ ಮತ್ತು ಜೀವನಕ್ಕೆ ಭದ್ರತೆಯನ್ನು ಒದಗಿಸುತ್ತದೆ

ಎಂಬ ಕಾರಣಕ್ಕಾಗಿ ಬೆಂಬಲಿಸುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಕುಟುಂಬದಲ್ಲಿ ಚಿಕ್ಕ ಚಿಕ್ಕ ಮಕ್ಕಳ ಹೆಸರಿನಲ್ಲಿಯೇ ಪಾಲಿಸಿಗಳನ್ನು ಮಾಡಿಸುವುದು, ಅದರಲ್ಲಿಯೂ ಹೆಣ್ಣುಮಕ್ಕಳ ಹೆಸರಿನಲ್ಲಿ ಮಾಡಿಸುವುದರಿಂದ ಮುಂದೆ ಬರಬಹುದಾದ ತೊಂದರೆಗಳನ್ನು ತಪ್ಪಿಸಿಕೊಳ್ಳಬಹುದು ಎಂಬ ಕಾರಣಕ್ಕೆ ಈ ಪಾಲಿಸಿಗಳನ್ನು ಅವರ ಹೆಸರಿನಲ್ಲಿ ಮಾಡಿಸಲಾಗುತ್ತದೆ. ಇಲ್ಲಿ ಗಮನಿಸಬೇಕಿರುವುದು ಏನೆಂದರೆ ಗಂಡು ಮಕ್ಕಳ ಹೆಸರಿಗೆ ಮಾಡಿಸುವ ಪಾಲಿಸಿಗಳು ಅದು ಅವರಿಗೆ ಆಸ್ತಿಯ ರೂಪದಲ್ಲಿ ಒದಗಿಬರುತ್ತದೆ. ಅದೇ ಹೆಣ್ಣು ಮಕ್ಕಳ ವಿಷಯಕ್ಕೆ ಬಂದಾಗ ಈ ಪಾಲಿಸಿಗಳು ಆಸ್ತಿಯಾಗಿ ಒದಗಿಬರಬಹುದು ಅಥವಾ ಬಾರದೇ ಇರಬಹುದು. ಹೆಣ್ಣು ಮಕ್ಕಳ ವಿಷಯದಲ್ಲಿ ಕೆಲವು ಸಂದಿಗ್ಧತೆಗಳು ಎದುರುಗೊಳ್ಳುತ್ತವೆ. ಇದಕ್ಕೆಲ್ಲಾ ಕಾರಣ ಜಾಗತೀಕರಣ ಮತ್ತು ಆಧುನೀಕರಣ ಎಂದು ಹೇಳಬಹುದಾಗಿದೆ. ಏಕೆಂದರೆ ವ್ಯವಸ್ಥೆಯಲ್ಲಿ ಉತ್ಪಾದನಾ ಚಟುವಟಿಕೆಗಳು ತ್ವರಿತಗತಿಯಲ್ಲಿ ಅಭಿವೃದ್ಧಿ ಹೊಂದುತ್ತಾ ಸಾಗಿದಂತೆ ಆರ್ಥಿಕ ಚಟುವಟಿಕೆಗಳೂ ಸಹ ಅಷ್ಟೇ ವೇಗವಾಗಿ ಚಲನಶೀಲಗೊಂಡಿರುತ್ತವೆ. ಆ ಕಾರಣಕ್ಕಾಗಿ ವೇಗಕ್ಕೆ ತಕ್ಕಂತೆ ಜನರೂ ಸಹ ಅತೀ ಶೀಘ್ರದಲ್ಲಿಯೇ ಅಭಿವೃದ್ಧಿ ಹೊಂದುವತ್ತ ಮುಖ ಮಾಡಿರುವುದು ಕಂಡುಬರುತ್ತದೆ. ಇಂದಿನ ವೇಗಯುತ ಸಮಾಜಕ್ಕೆ ಅಥವಾ ಸ್ಪರ್ದಾತ್ಮಕ ಜಗತ್ತಿಗೆ ಈ ಜಾಗತೀಕರಣವೇ ಕಾರಣ. ಇದರ ಕಾರಣವಾಗಿಯೇ ದೇಶದಲ್ಲೆಲ್ಲಾ ಕೈಗಾರಿಕಾ ಕ್ರಾಂತಿಯೇ ನಡೆಯುತ್ತಿದ್ದು. ಎಲ್ಲೆಡೆಯಲ್ಲಿಯೂ ಸ್ಪರ್ಧೆ ಕಂಡುಬರುತ್ತಿದೆ. ಮುಖ್ಯವಾಗಿ ಜಾಗತೀಕರಣದ ಮುಖ್ಯ ಬೇರು ಇರುವುದೇ ಕೈಗಾರಿಕಾ ಕ್ರಾಂತಿಯಲ್ಲಿ. ೧೭ನೆಯ ಶತಮಾನದಲ್ಲಿ ಆರಂಭವಾದ ಬಂಡವಾಳಶಾಹಿ ಕೈಗಾರಿಕಾ ಕ್ರಾಂತಿ ೧೮, ೧೯ನೆಯ ಶತಮಾನಗಳಲ್ಲಿ ಯುರೋಪ್ ದೇಶಗಳಲ್ಲಿ ಅಧಿಕ ಸಂಪತ್ತನ್ನು ಮತ್ತು ತಂತ್ರಜ್ಞಾನವನ್ನು ಒದಗಿಸಿತು. ಇದಕ್ಕೆ ಪೂರಕವಾಗಿ ಅಧಿಕ ಲಾಭಗಳಿಕೆಯ ಉದ್ದೇಶದಿಂದ ತೃತೀಯ ಜಗತ್ತನ್ನೇ ಕಚ್ಚಾ ವಸ್ತುಗಳನ್ನು ಒದಗಿಸುವ ಕೇಂದ್ರಗಳನ್ನಾಗಿ ಮಾಡಿಕೊಳ್ಳಲಾಯಿತು. ಇದರ ಪರಿಣಾಮವಾಗಿ ಭಾರತ ದೇಶವು ೧೯೯೧ರಿಂದ ಮುಕ್ತ ಮಾರುಕಟ್ಟೆಗೆ ತೆರೆದುಕೊಂಡಿದೆ. ಅಂದಿನಿಂದಲೂ ಭಾರತದಲ್ಲಿ ಸ್ಪರ್ಧಾತ್ಮಕ ಸನ್ನಿವೇಷಗಳನ್ನೇ ಕಾಣಲಾಗುತ್ತಿದೆ. ಈ ಹಿನ್ನಲೆಯಲ್ಲಿ ಭಾರತದಲ್ಲಿ ಬಂಡವಾಳದ ಹೂಡಿಕೆಯ ಪ್ರಮಾಣ ಅಧಿಕವಾಗಿ ಕೈಗಾರಿಕೆಗಳ ಸ್ಥಾಪನೆಯೂ ಅಧಿಕವಾದವು. ಜಾಗತೀಕರಣದಿಂದ ವ್ಯವಸ್ಥೆಯಲ್ಲಿ ಹಲವು ಬದಲಾವಣೆಗಳು ಸಂಭವಿಸಿದವು. ಮುಖ್ಯವಾಗಿ ಕೈಗಾರಿಕೆಗಳ ಸ್ಥಾಪನೆಯಿಂದ ಉದ್ಯೋಗಾವಕಾಶಗಳು ಹೆಚ್ಚಿದವು ಅದರಿಂದ ಜನರ ಆರ್ಥಿಕ ಮಟ್ಟ ಸುಧಾರಿಸಲು ಆರಂಭವಾಯಿತು. ಆದರೆ ಜಾಗತೀಕರಣದಿಂದ ಪ್ರಯೋಜನೆಗಳಿಗಿಂತ ಹೆಚ್ಚಿನದಾಗಿ ನಷ್ಟಗಳೇ ಸಂಭವಿಸಿದುದು ಕಂಡುಬರುತ್ತದೆ. ಮುಖ್ಯವಾಗಿ ಜಾಗತೀಕರಣದ ಕುರಿತಂತೆ ಮಾತನಾಡುವುದಾದರೆ ಅದೊಂದು ದೊಡ್ಡ ಬಗೆಯ ಚರ್ಚೆಯನ್ನೇ ಬಯಸುತ್ತದೆ. ಆದರೆ ಇಲ್ಲಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಹಿಳೆಯರ ಮೇಲೆ ಜಾಗತೀಕರಣ ಯಾವ ಬಗೆಯ ಪರಿಣಾಮವನ್ನು ಉಂಟುಮಾಡಿದೆ ಎಂಬುದನ್ನಷ್ಟೇ ಚರ್ಚೆಗೆ ಒಳಪಡಿಸಲಾಗಿದೆ.

ಜಾಗತೀಕರಣಕ್ಕೂ ಮತ್ತು ಕುಟುಂಬದ ಆರ್ಥಿಕತೆಗೂ ನೇರವಾದ ಸಂಬಂಧವಿದೆ. ಹಾಗಾಗಿ ಜಾಗತೀಕರಣದ ಕಾರಣವಾಗಿ ಕುಟುಂಬದ ಆಸ್ತಿಯಲ್ಲಿ ಆದಂತಹ ಪಲ್ಲಟಗಳನ್ನು ಮತ್ತು ಆಸ್ತಿಯ ವಿಲೇವಾರಿಯಲ್ಲಿನ ಬದಲಾವಣೆಗಳನ್ನು ತಿಳಿಯುವುದು ಮುಖ್ಯವಾಗಿದೆ. ಇದರ ಜೊತೆಗೆ ಈ ಆಸ್ತಿ ವಿಲೇವಾರಿಯಲ್ಲಿ ಮಹಿಳೆಯರಿಗೆ ಆಗುವ ಅನ್ಯಾಯಗಳನ್ನು ಕುರಿತಂತೆ ಚರ್ಚಿಸಬೇಕಾಗಿದೆ. ಅಂದರೆ ಸ್ಥಿರ ಆಸ್ತಿಯು ಚರ ಆಸ್ತಿಯ ರೂಪವನ್ನು ಪಡೆಯುವುದರ ಮೂಲಕ ಒಟ್ಟು ಕುಟುಂಬದ ಆಸ್ತಿಯಲ್ಲಿ ಮಹಿಳೆಯರಿಗೆ ಪಾಲು ಇಲ್ಲದಂತಾಗುತ್ತಿದೆ. ಭಾರತವು ಹಳ್ಳಿಗಳ ದೇಶವಾಗಿರುವುದರಿಂದ ಮುಖ್ಯವಾಗಿ ಕೈಗಾರಿಕೆಗಳು ಗ್ರಾಮೀಣ ಪ್ರದೇಶಗಳಲ್ಲಿಯೂ ಸ್ಥಾಪಿಸಲ್ಪಟ್ಟಿರುವುದು ಕಂಡುಬರುತ್ತದೆ. ಅಂದರೆ ಮೂಲಭೂತ ಸೌಲಭ್ಯಗಳು ಎಲ್ಲಿ ದೊರೆಯುತ್ತವೆಯೋ ಅಂತಹ ಸ್ಥಳಗಳು ಕೈಗಾರಿಕೆಗಳ ಸ್ಥಾಪನೆಗೆ ಸೂಕ್ತ ತಾಣವಾಗಿವೆ. ಹಾಗಾಗಿ ಗ್ರಾಮೀಣ ಪ್ರದೇಶಗಳಲ್ಲಿ ಇಂದು ದೊಡ್ಡ ದೊಡ್ಡ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ. ಈ ಕೈಗಾರಿಕೆಗಳ ಸ್ಥಾಪನೆಗೆ ಸಾವಿರಾರು ಎಕರೆ ಭೂಮಿ ಬೇಕಾಗುತ್ತದೆ. ಈ ಭೂಮಿಯು ಗ್ರಾಮೀಣ ಭಾಗದ ಬಡ ರೈತರದ್ದಾಗಿರುತ್ತದೆಯಾದ್ದರಿಂದ ಇದುವೇ ರೈತರ ಆಸ್ತಿಯಾಗಿರುತ್ತದೆ. ಆದರೆ ಕೈಗಾರಿಕೆಗಳ ಸ್ಥಾಪನೆಯ ಕಾರಣವಾಗಿ ಸ್ತಿರವಾಗಿದ್ದ ಭೂಮಿಗೆ ಮೌಲ್ಯ ದೊರೆಯುತ್ತದೆ. ನಂತರ ಈ ಮೌಲ್ಯ ನಾನಾ ಬಗೆಯ ಆಸ್ತಿಯ ರೂಪದಲ್ಲಿ ಚಲಾವಣೆಗೆ ಬರುತ್ತದೆ. ಅಂದರೆ ಸ್ತಿರ ಆಸ್ತಿಯೆಂದು ರಕ್ಷಿಸಲ್ಪಟ್ಟ ಭೂಮಿಗೆ ಮೌಲ್ಯ ದೊರೆತ ನಂತರ ಅದು ಚರ ಆಸ್ತಿಯಾಗಿ ಮಾರ್ಪಡುತ್ತದೆ. ಈ ಚರ ಆಸ್ತಿಯು ಪಾಲಸಿ, ಷೇರುಗಳ, ಬಾಂಡುಗಳ ರೂಪದಲ್ಲಿ ಮತ್ತು ವಾಹನಗಳ ರೂಪದಲ್ಲಿ ಹೀಗೆ ನಾನಾ ರೀತಿಯ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಹೀಗೆ ರೂಪಾಂತರಗೊಂಡಂತಹ ವುಗಳೆಲ್ಲಾ ಕಾನೂನಿನ ದೃಷ್ಟಿಯಲ್ಲಿ ಚರ ಆಸ್ತಿಗಳಾಗಿರುತ್ತವೆ. ಕಾನೂನಿನ ದೃಷ್ಟಿಯಲ್ಲಿ ಸ್ಥಿರ ಮತ್ತು ಚರ ಆಸ್ತಿಗಳೆಲ್ಲವೂ ಒಂದೇ. ಮುಖ್ಯವಾಗಿ ಸ್ಥಿರ ಆಸ್ತಿಯಿದ್ದಂತಹ ಸಂದರ್ಭದಲ್ಲಿ ಕುಟುಂಬದಲ್ಲಿನ ಮಹಿಳೆಯರು ತನ್ನ ತಂದೆಯ ಅಥವಾ ತಾತನ ಆಸ್ತಿಯಲ್ಲಿ ಪಾಲು ಕೇಳಲು ಮುಂದಾಗುತ್ತಾರೆ. ಆದರೆ ಚರ ಆಸ್ತಿಯನ್ನು ಅವರು ಅಷ್ಟಾಗಿ ಪರಿಗಣಿಸುವುದಿಲ್ಲ ಎಂಬ ಕಾರಣಕ್ಕೆ ಪುರುಷರು ತಂದೆಯ ಅಥವಾ ತಾತನ ಆಸ್ತಿಗೆ ಯಾವಾಗ ಮೌಲ್ಯಗಳು ದೊರೆಯುತ್ತವೆಯೋ ಆವಾಗಲೇ ಆ ಮೌಲ್ಯವನ್ನು ಪಾಲಿಸಿಗಳ ರೂಪದಲ್ಲಿ ಅಥವಾ ಷೇರುಗಳ ರೂಪದಲ್ಲಿ ಅಥವಾ ವಾಹನಗಳ ರೂಪದಲ್ಲಿ ಬದಲಾಯಿಸುತ್ತಿದ್ದಾರೆ. ಈ ಕಾರಣಕ್ಕಾಗಿ ಮಹಿಳೆಯರು ತಮ್ಮ ತಂದೆಯ ಅಥವಾ ತಾತನ ಆಸ್ತಿಯಿಂದ ವಂಚಿತರಾಗುತ್ತಿದ್ದಾರೆ. ಒಂದುವೇಳೆ ಆಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದಲ್ಲಿ ಏನಾದರೂ ಕೇಸ್ ದಾಖಲಿಸಿದರೆ ಅಂತಹ ಸಂದರ್ಭದಲ್ಲಿ ನ್ಯಾಯಾಲಯವು ಸ್ಥಿರ ಮತ್ತು ಚರ ಆಸ್ತಿಗಳೆರಡನ್ನೂ ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಆದರೆ ಕೇಸ್ ದಾಖಲಿಸಿದವರು ಯಾವುದಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ ಎಂಬುದು ಮುಖ್ಯವಾಗಿರುತ್ತದೆ.

ನ್ಯಾಯಾಲಯಗಳಲ್ಲಿ ಮುಖ್ಯವಾಗಿ ಸ್ಥಿರ ಆಸ್ತಿಗೆ ಸಂಬಂಧಿಸಿದಂತೆ ಹೆಚ್ಚಿನ ಕೇಸ್‌ಗಳು ದಾಖಲಾಗಿರುತ್ತವೆ. ಕಾನೂನಿನ ದೃಷ್ಟಿಯಲ್ಲಿ ಸ್ಥಿರ ಮತ್ತು ಚರ ಆಸ್ತಿಗಳೆರಡೂ ಬೇರೆ ಬೇರೆಯದ್ದಾದರೂ ನ್ಯಾಯಾಲಯಗಳು ಅವುಗಳಿಗೆ ಮೌಲ್ಯವನ್ನು ನಿಗಧಿಪಡಿಸುವುದರ ಮೂಲಕ ಒಂದೇ ನೆಲೆಯಲ್ಲಿ ನೋಡುತ್ತವೆ. ಆ ಕಾರಣಕ್ಕಾಗಿ ನ್ಯಾಯಾಲಯಗಳು ಆಸ್ತಿಯನ್ನು ವಿಲೇವಾರಿ ಮಾಡುವಂತಹ ಸಂದರ್ಭದಲ್ಲಿ ಅಥವಾ ಕೇಸ್ ದಾಖಲಿಸಿಕೊಳ್ಳುವ ಸಂದರ್ಭದಲ್ಲಿ ಒಟ್ಟು ಆಸ್ತಿಯನ್ನು ಎರಡು ವಿಧದಲ್ಲಿ ವಿಭಾಗಿಸಿಕೊಳ್ಳುತ್ತದೆ. ಅಂದರೆ ಮೊದಲು ಸ್ಥಿರ ಮತ್ತು ಚರ ಆಸ್ತಿಗಳಿಗೆ ಒಂದು ಮೌಲ್ಯವನ್ನು ನಿಗಧಿಪಡಿಸುತ್ತದೆ. ಆ ಮೌಲ್ಯ ಐದು ಲಕ್ಷ ಅಥವಾ ಅದಕ್ಕಿಂತ ಕಡಿಮೆ ಇದ್ದರೆ ಅಂತಹ ಕೇಸ್‌ಗಳನ್ನು ಫಸ್ಟ್ ಡಿವಿಜನ್ ನ್ಯಾಯಾಲಯಗಳ ವ್ಯಾಪ್ತಿಗೆ ಒಳಪಡಿಸಲಾಗುತ್ತದೆ. ಹಾಗೆಯೇ ಆಸ್ತಿಯ ಒಟ್ಟು ಮೌಲ್ಯ ಐದು ಲಕ್ಷಕ್ಕಿಂತ ಅಧಿಕವಾಗಿದ್ದರೆ ಅಂತಹ ಕೇಸ್‌ಗಳನ್ನು ಸೆಕೆಂಡರಿ ಡಿವಿಜನ್ ನ್ಯಾಯಾಲಯಗಳ ವ್ಯಾಪ್ತಿಗೆ ಒಳಪಡಿಸಲಾಗುತ್ತದೆ. ಹೀಗೆ ಎರಡು ನ್ಯಾಯಾಲಯಗಳಲ್ಲಿ ಆಸ್ತಿಯ ಕುರಿತಾದ ಕೇಸ್‌ಗಳನ್ನು ದಾಖಲಿಸಿಕೊಳ್ಳುತ್ತದೆ. ಹಾಗಾಗಿ ಇಲ್ಲಿ ಯಾವುದೇ ತಾರತಮ್ಯ ನಡೆಯುವುದಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಿರುವುದು ಏನೆಂದರೆ ಚರಾಸ್ತಿಯ ಸಾಲಿನಲ್ಲಿ ಬರುವಂತಹ ಪಾಲಿಸಿಗಳ ವಿಚಾರದಲ್ಲಿ ಯಾವುದೇ ತಕರಾರುಗಳು ಬರುವುದು ಕಂಡುಬರುವುದಿಲ್ಲ. ಅಂದರೆ ಈ ಪಾಲಿಸಿಗಳಲ್ಲಿ ನಾಮಿನಿಯ ಹೆಸರನ್ನೂ ನಮೂದಿಸಲ್ಪಟ್ಟಿರುತ್ತದೆ. ಅಂದರೆ ಮುಖ್ಯ ಪಾಲಿಸಿದಾರನು ಮರಣ ಹೊಂದಿದರೆ ಆ ಪಾಲಿಸಿಯ ವಾರಸುದಾರರನ್ನು ಈ ಮೊದಲೇ ನಿರ್ಧರಿಸಲಾಗಿರುತ್ತದೆ. ಹಾಗಾಗಿ ಆಸ್ತಿಯ ಕುರಿತಂತೆ ವ್ಯಾಜ್ಯಗಳೇನಾದರೂ ಕಂಡುಬಂದರೆ ಅವುಗಳು ಕೇವಲ ಸ್ಥಿರ ಆಸ್ತಿಯದ್ದಾಗಿರುತ್ತವೆ. ಕೆಲವು ಸಂದರ್ಭಗಳಲ್ಲಿ ಚರಾಸ್ತಿಯದ್ದೂ ಆಗಿರುತ್ತವೆ. ಈ ಕಾರಣಕ್ಕಾಗಿ ಅಂದರೆ ಕುಟುಂಬದ ಆಸ್ತಿಯಲ್ಲಿ ಪಾಲನ್ನು ಪಡೆಯುವ ಮಹಿಳೆಯರು ಈ ಚರ ಆಸ್ತಿಯಲ್ಲಿ ಪಾಲನ್ನು ಕೇಳಲು ಮುಂದೆ ಬರುವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಪಾಲಿಸಿಗಳ ಬಗೆಗಾಗಲೀ ಅಥವಾ ಷೇರುಗಳ ಬಗೆಗಾಗಲೀ ಗ್ರಾಮೀಣ ಭಾಗದ ಜನರಲ್ಲಿ ಅರಿವೇ ಇರುವುದಿಲ್ಲ. ಅದರಲ್ಲೂ ಮಹಿಳೆಯರ ವಿಚಾರಕ್ಕೆ ಬಂದರೆ ಕುಟುಂಬದಲ್ಲಿನ ಪುರುಷನು ಅವರಿಗೆ ತಿಳಿಯದಂತೆಯೇ ನೋಡಿಕೊಳ್ಳುತ್ತಿರುತ್ತಾನೆ. ಆ ಕಾರಣಕ್ಕಾಗಿ ಮಹಿಳೆಯರು ಈ ಪಾಲಿಸಿಗಳ ಬಗೆಗೆ ಅಷ್ಟೊಂದು ಆಸಕ್ತಿಯನ್ನು ವಹಿಸಿರುವುದಿಲ್ಲ. ಜೊತೆಗೆ ಇನ್ನೊಂದು ಕಾರಣ ಅವುಗಳಿಗೆ ಈಗಾಗಲೇ ವಾರಸುದಾರರನ್ನು ನಿರ್ಧರಿಸಲಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಗಮನಿಸಿ ಪುರುಷ ವ್ಯವಸ್ಥೆ ಅದನ್ನು ಸರಿಯಾಗಿ ಬಳಸಿಕೊಳ್ಳುತ್ತದೆ. ಅಂದರೆ ಸ್ಥಿರ ಆಸ್ತಿಗೆ ಹಣದ ರೂಪವನ್ನು ಕೊಡುವುದರ ಮೂಲಕ ಆ ಹಣಕ್ಕೆ ಪಾಲಿಸಿಗಳ ಸ್ವರೂಪವನ್ನು ಕೊಟ್ಟು ಒಟ್ಟು ಆಸ್ತಿಗೆ ತಾನೇ ವಾರಸುದಾರನಾಗುವ ಹುನ್ನಾರವನ್ನು ಮಾಡುತ್ತಾನೆ. ಹೀಗೆ ಮಾಡುವುದಕ್ಕೆ ಮುಖ್ಯ ಕಾರಣಗಳಲ್ಲಿ ಜಾಗತೀಕರಣದ ಪ್ರಭಾವವೂ ಒಂದು. ಸಂಶೋಧನಾ ಅಧ್ಯಯನ ವ್ಯಾಪ್ತಿಯಲ್ಲಿ ಅಂದರೆ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಈ ಬಗೆಯ ಕೇಸ್‌ಗಳು ಅಧಿಕವಾಗಿ ಕಂಡುಬರುತ್ತವೆ. ಮುಖ್ಯವಾಗಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಹೊಸಪೇಟೆ, ಸಂಡೂರು ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿ

ಗಣಿಗಾರಿಕೆಯ ಕಾರಣವಾಗಿ ಹೆಚ್ಚಿನ ಭೂಮಿಯು ಮೌಲ್ಯವನ್ನು ಪಡೆದುಕೊಂಡು ಹಣದ ರೂಪದಲ್ಲಿ ಚಲಾವಣೆಗೆ ಬಂದಿತು. ಈ ಸಂದರ್ಭದಲ್ಲಿ ಕುಟುಂಬದ ಮಹಿಳೆಯರು ಈ ಆಸ್ತಿಯಿಂದ ವಂಚಿತರಾದ ಹಲವು ಉದಾಹರಣೆಗಳು ಕಂಡುಬರುತ್ತವೆ. ಎಷ್ಟೋ ಜನ ಮಹಿಳೆಯರು ತಮ್ಮ ತಂದೆಯ ಅಥವಾ ತಾತನ ಆಸ್ತಿಯಲ್ಲಿ ಸಂಪೂರ್ಣವಾದ ಪಾಲನ್ನು ಪಡೆಯದೇ ಅಲ್ಪ ಸ್ವಲ್ಪ ಹಣವನ್ನಷ್ಟೇ ಪಡೆದು ಆಸ್ತಿಯಿಂದ ವಂಚಿತರಾಗಿರುವುದು ಕಂಡುಬರುತ್ತದೆ. ಈ ಬಗೆಯ ಪ್ರಕರಣಗಳು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರೆತಿದ್ದು ಅವುಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹೀಗೆ ಜಾಗತೀಕರಣದ ಕಾರಣವಾಗಿ ಖಾಸಗೀ ಒಡೆತನಕ್ಕೆ ಹೆಚ್ಚಿನ ಮಹತ್ವ ಬಂದೊದಗಿತು. ಈ ಖಾಸಗೀ ಒಡೆತನ ಎಂಬುದು ಹಿಂದಿನಿಂದಲೂ ಜಾರಿಯಲ್ಲಿತ್ತು. ಆದರೆ ಜಾಗತೀಕರಣದ ಪ್ರವೇಶದಿಂದ ಅದು ಇನ್ನಷ್ಟು ಗಟ್ಟಿಗೊಂಡಿತು. ಇದು ಎಷ್ಟೇ ಗಟ್ಟಿಗೊಂಡಿದ್ದರೂ ಕಾನೂನಿನಡಿಯಲ್ಲಿ ಸ್ತ್ರೀಪುರುಷರಿಬ್ಬರಿಗೂ ಸಮಾನವಾದ ಹಕ್ಕುಗಳಿವೆ ಎಂಬುದನ್ನು ಮರೆಯುವ ಹಾಗಿಲ್ಲ.

**ಉಲ್ಲೇಖಗಳು**


೧. ನಾಯಕ ಹಾ.ಮಾ.(ಪ್ರ.ಸಂ.), ಕನ್ನಡ ವಿಶ್ವಕೋಶ, ಸಂಪುಟ–೨, ೧೯೭೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ,ಮೈಸೂರು, ಪು–೧೨೩.

೨. ಹೊಯ್ಸಳಶರ್ಮ ಕೆ, ನ್ಯಾಯಶಾಸ್ತ್ರದರ್ಪಣ, ೧೯೮೬, ಶಾನವಾಣಿ ಪ್ರಕಾಶನ, ಬೆಂಗಳೂರು, ಪು–೩೪೪.

೩. ಅದೇ ಪು–೩೪೭.

೪. ಅದೇ, ಪು–೩೫೦.

೫. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,ಹಂಪಿ, ಪು–೧೬೬.

೬. ಹೇಮಲತಾ ಹೆಚ್.ಎಮ್, ಮಹಿಳಾ ಅಧ್ಯಯನ–೧, ೨೦೦೪, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು–೪೦.

೭. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೨೦೦೩, ಮಾನವ ಅಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು, ಪುಟ–೨೬.

೮. ಕಲವೀರ ಮನ್ವಾಚಾರ, ಮಾತೃ ದೇವತಾ ಆರಾಧನೆ : ಉಗಮ ಮತ್ತು ವಿಕಾಸ, ೨೦೦೪, ಪಿಎಚ್.ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ ಕ.ವಿ.ವಿ. ಹಂಪಿ, ಪುಟ–೨೦೩.

೯. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೨೦೦೩, ಮಾನವ ಅಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು, ಪುಟ–೨೮.

೧೦. ಅದೇ ಪುಟ–೨೭.

೧೧. ಹೇಮಲತಾ ಎಚ್.ಎಂ, ಮಹಿಳಾ ಅಧ್ಯಯನ–೧, ೨೦೦೪, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪುಟ–೪೧.

೧೨. ಸುನಂದಮ್ಮ ಆರ್,ಮಹಿಳಾ ಸಂಸ್ಕೃತಿ, ೨೦೦೫, ಸಮತಾ ಅಧ್ಯಯನ ಕೇಂದ್ರ ಮೈಸೂರು, ಪುಟ–೧೨೪.

೧೩. ಕಲವೀರ ಮನ್ವಾಚಾರಿ, ಮಾತೃ ದೇವತಾ ಆರಾಧನೆ : ಉಗಮ ಮತ್ತು ವಿಕಾಸ, ೨೦೦೪, ಪಿಎಚ್.ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ ಕ.ವಿ.ವಿ. ಹಂಪಿ, ಪುಟ–೨೦೦.

೧೪. ಡಾ. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು, ೨೦೦೨, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ಪುಟ–೧೬೮.

೧೫. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ೨೦೦೩, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ–೧೪೦.

೧೬. ಹಾಲತಿ ಸೋಮಶೇಖರ್, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ೨೦೦೭, ವಿಸ್ಮಯ ಪ್ರಕಾಶನ, ಮೈಸೂರು, ಪುಟ–೨೯.

೧೭. ಅದೇ ಪುಟ–೨೮.

೧೮. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೨೦೦೩, ಮಾನವ ಅಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು, ಪುಟ–೨೮.

೧೯. ಕಲವೀರ ಮನ್ವಾಚಾರಿ, ಮಾತೃ ದೇವತಾ ಆರಾಧನೆ : ಉಗಮ ಮತ್ತು ವಿಕಾಸ, ೨೦೦೪, ಪಿಎಚ್.ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ ಕ.ವಿ.ವಿ. ಹಂಪಿ, ಪುಟ–೨೦೫.

೨೦. ಸುನಂದಮ್ಮ ಆರ್, ಮಹಿಳಾ ಸಂಸ್ಕೃತಿ, ೨೦೦೫, ಸಮತಾ ಅಧ್ಯಯನ ಕೇಂದ್ರ, ಮೈಸೂರು, ಪುಟ–೧೨೧.

೨೧. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು, ೨೦೦೨, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ಪುಟ–೧೭೩.

೨೨. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕುಗಳು: ಮಾನವ ಹಕ್ಕುಗಳ ನೆಲೆಯಲ್ಲಿ, ೨೦೦೯, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೭೩.

೨೩. ಅದೇ ಪು-೭೪.

೨೪. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು, ೨೦೦೨, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ಪುಟ-೧೭೪.

೨೫. ಶ್ರೀಮತಿ ಎಚ್.ಎಸ್. ಹೆಣ್ಣು-ಹೆಂಗಸು, ೨೦೦೪, ಬೈಲದಕೆರೆ ಪ್ರಕಾಶನ, ಮಂಡ್ಯ, ಪು-೬.

೨೬. ನಾಗರಾಜ್ ಜಿ.ಎನ್. ಪಾತಿವ್ರತ್ಯ: ಕಿಂಚಿತ್ ಪಾಲೂ ಇಲ್ಲದಿದ್ದರೂ ಹೆಣ್ಣಿಗೆ ಉರುಳಾದ ಆಸ್ತಿ, ಸಂವಾದ, ಮಾರ್ಚ್ ೨೦೧೬, ಸಂಪುಟ-೧೪, ಸಂಚಿಕೆ-೫, ಸ್ಫೂರ್ತಿಧಾಮ, ಬೆಂಗಳೂರು

೨೭. ಹೇಮಲತಾ ಎಚ್.ಎಂ, ಮಹಿಳಾ ಅಧ್ಯಯನ, ೨೦೦೪, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪುಟ-೪೧,೪೨.

೨೮. ಹಾಲತಿ ಸೋಮಶೇಖರ, ಮಹಿಳಾ ಚಳವಳಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು, ಪುಟ-೩೦, ೨೦೦೭.

೨೯. ಅದೇ ಪುಟ-೩೩.

೩೦. ವೆಂಕಟರಾಮಪ್ಪ ಕೆ.ಎನ್, ಸ್ತ್ರೀ ಮತ್ತು ಸಮಾಜ, ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೩೫.

೩೧. ನಿರೂಪಮಾ, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ೧೯೯೬, ಆರತಿ ಪಬ್ಲಿಕೇಷನ್ಸ್, ಬೆಂಗಳೂರು, ಪುಟ-೬೮.

೩೨. ಗೀತಾ ಕೆ.ಎಸ್; ಮಹಿಳೆ, ಕಾನೂನು ಮತ್ತು ನ್ಯಾಯ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ೨೦೦೮; ಪು-೧೩೮.

೩೩. ರಾಗೌ (ಸಂ); ಮಹಿಳಾ ಅಧ್ಯಯನದ ಆಯಾಮಗಳು; ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು; ೨೦೦೮; ಪು-೧೮.

೩೪. ಅದೇ ಪು-೧೯.

೩೫. ಗೀತಾ ಕೆ.ಎಸ್; ಮಹಿಳೆ ಕಾನೂನು, ನ್ಯಾಯ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ೨೦೦೮ ಪು.೧೪೨.

೩೬. ಹೇಮಲತಾ ಮಹಿಷಿ; ಮಹಿಳೆ ಮತ್ತು ಆಸ್ತಿಹಕ್ಕು; ಶ್ರೀಮತಿ ಯಶೋದಾ ರಾಗೌ ಟ್ರಸ್ಟ್,ಮೈಸೂರು; ೧೯೯೯; ಪು.೨೧

೩೭. ಪದ್ಮಾವತಮ್ಮ ಕೆ; ಮಹಿಳೆ ಮತ್ತು ಆಸ್ತಿ ಹಕ್ಕು; ೨೦೦೨; ಕ.ಸಾ.ಪ ಬೆಂಗಳೂರು; ಪು. ೧೧.

೩೮. ಶ್ರೀನಿವಾಸ ಸಿರನೂರ್‌ಕರ್; ವಿಜ್ಞಾನೇಶ್ವರ ಮಿತಾಕ್ಷರ; ಪ್ರಸಾರಾಂಗ ಗು.ವಿ.ಗು; ೨೦೦೫; ಪು ೬೧.

೩೯. ಗೀತಾ ಕೃಷ್ಣಮೂರ್ತಿ; ಮಹಿಳೆ ಸಮಾಜ ಕಾನೂನು; ನವಕರ್ನಾಟಕ ಪ್ರಕಾಶನ, ಬೆಂಗಳೂರು; ೨೦೦೧,ಪು ೩೫.

೪೦. ಶ್ರೀನಿವಾಸ ಸಿರ್‌ನೂರ್‌ಕರ್; ವಿಜ್ಞಾನೇಶ್ವರ ಮಿತಾಕ್ಷರ; ಪ್ರಸಾರಾಂಗ ಗು.ವಿ.ಗು; ೨೦೦೫; ಪು ೩೨.

೪೧. ಹೇಮಲತಾ ಮಹಿಷಿ, ಮಹಿಳೆ ಮತ್ತು ಆಸ್ತಿಹಕ್ಕು; ಶ್ರೀಮತಿ ಯಶೋದಾ ರಾಗೌ ಟ್ರಸ್ಟ್, ಮೈಸೂರು, ೧೯೯೯, ಪು ೨೨

೪೨. ಪದ್ಮಾವತಮ್ಮ ಕೆ; ಮಹಿಳೆ ಮತ್ತು ಆಸ್ತಿ ಹಕ್ಕು; ಕ.ಸಾ.ಪ ಬೆಂಗಳೂರು;೨೦೦೨, ಪು ೧೨

೪೩. ಜ್ಯೋತ್ಸ್ನಾ ಕಾಮತ್; ಮಹಿಳೆ : ಒಂದು ಅಧ್ಯಯನ; ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು; ೧೯೯೯; ಪು–೬೫.

೪೪. ಅದೇ, ಪು–೬೬

೪೫. ಇಂದಿರಾ ಆರ್; ಭಾರತದಲ್ಲಿ ಮಹಿಳೆಯರು: ಐತಿಹಾಸಿ ಮತ್ತು ಸಾಂಸ್ಕೃತಿಕ ದೃಷ್ಟಿಕೋನ; ಮಹಿಳಾ ಅಧ್ಯಯನ ಸಂ.೧, ಸಂ.೨; ೧೯೯೯; ಪು ೨೨.

೪೬. ಪದ್ಮಾವತಮ್ಮ ಕೆ; ಮಹಿಳೆ ಮತ್ತು ಆಸ್ತಿ ಹಕ್ಕು; ಕ.ಸಾ.ಪ ಬೆಂಗಳೂರು;೨೦೦೨, ಪು ೬.

೪೭. ಮಂಗಳಾ ಚಿ.ನ; ಎಚ್ಚೆತ್ತ ಹಾದಿಯಲ್ಲಿ ಮಹಿಳೆ; ಪ್ರಸಾರಾಂಗ, ಬೆ.ವಿ.ಬೆಂಗಳೂರು; ೧೯೯೦; ಪು ೭

೪೮. ಗೀತಾ ಕೆ.ಎಸ್; ಮಹಿಳೆ ಕಾನೂನು, ನ್ಯಾಯ; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು; ೨೦೦೮; ಪು–೧೪೪

೪೯. ನಂಜಮ್ಮಣ್ಣಿ ಎಂ, ಭಾರತೀಯ ಸಾಮಾಜಿಕ ಸಂಸ್ಥೆಗಳು, ೨೦೦೩, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ–೧೪೬.

೫೦. ಶೈಲಜ ಹಿರೇಮಠ, ಮಾತೃಪ್ರಧಾನ ಪರಿಕಲ್ಪನೆ, ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ಪು–೯.

# ಅಧ್ಯಾಯ ನಾಲ್ಕು

# ಆಧುನಿಕ ಸಂದರ್ಭದಲ್ಲಿ ಆಸ್ತಿಹಕ್ಕು ಪರಿಕಲ್ಪನೆಗಳು ಹಾಗೂ ಕಾನೂನು

೪.೧. ವಸಾಹತು ಸಂದರ್ಭದಲ್ಲಿ ಆಸ್ತಿಹಕ್ಕು ಪರಿಕಲ್ಪನೆಗಳು ಹಾಗೂ ಕಾನೂನು

೪.೨. ವಸಾಹತು ನಂತರ ಆಸ್ತಿಹಕ್ಕು ಪರಿಕಲ್ಪನೆಗಳು ಹಾಗೂ ಕಾನೂನು

# ಅಧ್ಯಾಯ ನಾಲ್ಕು

# ಆಧುನಿಕ ಸಂದರ್ಭದಲ್ಲಿ ಆಸ್ತಿಹಕ್ಕಿನ ಪರಿಕಲ್ಪನೆಗಳು ಹಾಗೂ ಕಾನೂನು

ತಿದ್ದುಪಡಿಗಳನ್ನು ತರುವುದರ ಮೂಲಕ ಈ ಕಾನೂನನ್ನು ಗಟ್ಟಿಗೊಳಿಸುವ ಕಾರ್ಯ ನಡೆಯಿತು ಆಸ್ತಿಹಕ್ಕು ಕಾನೂನು ಇಂದು ನಿನ್ನೆಯದಲ್ಲ. ಇದಕ್ಕೆ ಹಲವಾರು ವರ್ಷಗಳ ಇತಿಹಾಸವಿದೆ. ಮುಖ್ಯವಾಗಿ ಆಸ್ತಿಹಕ್ಕಿನಲ್ಲಿ ಮಹಿಳೆಯರಿಗೆ ಪುರುಷರಷ್ಟೇ ಸಮಪಾಲನ್ನು ಪಡೆಯುವುದರ ಕುರಿತಂತೆ ಕಾನೂನು ಜಾರಿಯಾಗಲು ವ್ಯವಸ್ಥೆಯಲ್ಲಿ ಹಲವಾರು ಚಳುವಳಿಗಳು, ಶಾಸನಾತ್ಮಕ ಹೋರಾಟಗಳು ನಡೆದಿವೆ. ಈ ಹೋರಾಟಗಳ ಪ್ರತಿಫಲವಾಗಿ ಪ್ರಸ್ತುತ ಆಸ್ತಿಯಲ್ಲಿ ಮಹಿಳೆಯರಿಗೆ ಪುರುಷನಷ್ಟೇ ಸಮಪಾಲನ್ನು ಕೊಡಬೇಕೆಂಬ ಕಾನೂನು ಜಾರಿಯಲ್ಲಿದೆ. ಆದರೆ ವ್ಯವಸ್ಥೆ ಈ ಹಕ್ಕನ್ನು ಒಮ್ಮೆಲೆ ಕೊಡಲಿಲ್ಲವೆಂಬುದು ಇಲ್ಲಿ ಮುಖ್ಯವೆನಿಸುತ್ತದೆ. ಕಾಲಕಾಲಕ್ಕೆ ಆಸ್ತಿಹಕ್ಕಿನ ಕಾನೂನಿನಲ್ಲಿ ಹಲವಾರು. ಈ ತಿದ್ದುಪಡಿಗಳಿಂದಾಗಿ ಮಹಿಳೆಯರಿಗೆ ಆಸ್ತಿಯಲ್ಲಿ ಪುರುಷನಷ್ಟೇ ಸಮಪಾಲನ್ನು ಪಡೆಯಲು ಸಹಕಾರಿಯಾಯಿತು. ಭಾರತದಲ್ಲಿ ವಿವಾಹ, ವಿಚ್ಛೇದನೆ, ದತ್ತಕ ಮುಂತಾದವುಗಳಿಗೆ ಸಂಬಂಧಿಸಿದಂತೆ ಭಿನ್ನ ಧರ್ಮಿಯರಿಗೆ ವಿಭಿನ್ನವಾದ ಕಾನೂನುಗಳು ಅನ್ವಯಿಸುತ್ತವೆ. ಹಾಗೆಯೇ ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆಯೂ ಬೇರೆ ಬೇರೆ ಧರ್ಮಗಳಿಗೆ ಸೇರಿದ ಧರ್ಮೀಯರಿಗೆ ಆಯಾ ಧರ್ಮದಲ್ಲಿ ಚಾಲ್ತಿಯಲ್ಲಿರುವ ಕಾನೂನುಗಳು ಅನ್ವಯಿಸುತ್ತವೆ. ಹಿಂದೂಗಳಿಗೆ ಹಿಂದೂ ಉತ್ತರಾಧಿಕಾರ ಕಾಯಿದೆ, ಕ್ರಿಶ್ಚಿಯನ್ನರಿಗೆ ಭಾರತೀಯ ವಾರಸಾ ಅಧಿನಿಯಮ ೧೯೨೫ ಅನ್ವಯವಾಗುತ್ತದೆ. ಮತ್ತು ಭಾರತೀಯ ಮುಸ್ಲಿಂಮರಿಗೆ ಉತ್ತರಾಧಿಕಾರ ವಿಷಯಕ್ಕೆ ಸಂಬಂಧಿಸಿದಂತೆ ಮುಸ್ಲಿಂ ವೈಯಕ್ತಿಕ ಕಾನೂನುಗಳು ನೇರವಾಗಿ ಅನ್ವಯಿಸುತ್ತವೆ. ಮುಖ್ಯವಾಗಿ ಈ ಅಧ್ಯಾಯದಲ್ಲಿ ಹಿಂದೂ ವಾರಸಾ ಅಧಿನಿಯಮಕ್ಕೆ ಸಂಬಂಧಿಸಿದಂತೆ ಆಸ್ತಿ ಹಕ್ಕಿನ ಕಾನೂನಿನಲ್ಲಾದ ಬದಲಾವಣೆಗಳನ್ನು ವಿವರವಾಗಿ

ಚರ್ಚಿಸಲಾಗಿದೆ. ಜೊತೆಗೆ ಮುಸ್ಲಿಂ ವಾರಸಾ ವೈಯಕ್ತಿಕ ಕಾನೂನು ಮತ್ತು ಕ್ರಿಶ್ಚಿಯನ್ ವಾರಸಾ ಅಧಿನಿಯಮಗಳನ್ನೂ ಚರ್ಚಿಸಲಾಗಿದೆ.

ಇಲ್ಲಿ ಮುಖ್ಯವಾಗಿ ಹಿಂದೂ ಎಂದರೆ ಯಾರು ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕಾದ ಅಗತ್ಯವಿದೆ. ೧೯೨೫ರ ಭಾರತೀಯ ಉತ್ತರಾಧಿಕಾರ ಅಧಿನಿಯಮದ ಪ್ರಕಾರ ಹಿಂದೂಗಳೆಂದರೆ "ಬ್ರಾಹ್ಮಣ, ವೈಶ್ಯ, ಕ್ಷತ್ರಿಯ ಹಾಗೂ ಶೂದ್ರರು ಮತ್ತು ಹಿಂದೂ ಸಂಪ್ರದಾಯವನ್ನು ಪಾಲಿಸುವವರು ಹಾಗೂ ಯಾರಿಗೆ ಹಿಂದೂ ಕಾಯಿದೆ ಅನ್ವಯಿಸುತ್ತದೆ ಅಂತಹವರೆಲ್ಲ ಹಿಂದೂಗಳಾಗುತ್ತಾರೆ. ಈ ಕಲಂನ ಅನ್ವಯದಂತೆ ಬೌದ್ಧರು, ಶಿಖ್ಖರು, ಜೈನರು, ವೀರಶೈವರು ಸಹ ಹಿಂದೂಗಳೆಂದೇ ಭಾವಿಸಲಾಗುತ್ತದೆ"[೧].

೧೯೫೬ರ ಹಿಂದೂ ವಾರಸಾ ಅಧಿನಿಯದ ಅನುಷ್ಠಾನದ ಪ್ರಕಾರ ಹಿಂದೂಗಳೆಂದರೆ:

"ಎ) ವೀರಶೈವ, ಲಿಂಗಾಯತ ಅಥವಾ ಬ್ರಹ್ಮೋ, ಪ್ರಾರ್ಥನಾ ಅಥವಾ ಆರ್ಯ ಸಮಾಜದ ಅನುಯಾಯಿಯು ಸೇರಿದಂತೆ ಯಾವುದೇ ರೂಪ ಅಥವಾ ವಿಕಾಸದ ಹಿಂದೂ ಧರ್ಮದ ಯಾವನೇ ವ್ಯಕ್ತಿಗೆ,

ಬಿ) ಬೌದ್ಧ, ಜೈನ ಅಥವಾ ಸಿಖ್ ಧರ್ಮದ ಯಾವನೇ ವ್ಯಕ್ತಿಗೆ ಮತ್ತು

ಸಿ) ಈ ಅಧಿನಿಯಮವು ಅನುಮೋದಿತವಾಗಿರದೇ ಇದ್ದರೆ, ಇಲ್ಲಿ ಹೇಳಿದ ಯಾವುದೇ ವಿಷಯಗಳ ಬಗ್ಗೆ ಅವನು ಹಿಂದೂ ಕಾನೂನಿಗೆ ಅಥವಾ ಅಂಥ ಕಾನೂನಿನ ಭಾಗವಾಗಿರುವ ಯಾವುದೇ ರೂಢಿಗೆ ಅಥವಾ ಆಚರಣೆಗೆ ಒಳಪಡುತ್ತಿರಲಿಲ್ಲವೆಂದು ರುಜುವಾತುಪಡಿಸಿದ ಹೊರತು ಮುಸ್ಲಿಂ, ಕ್ರೈಸ್ತ, ಪಾರ್ಸಿ ಅಥವಾ ಯಹೂದಿ ಧರ್ಮಕ್ಕೆ ಸೇರಿದವರಲ್ಲದ ಯಾವನೇ ಇತರ ವ್ಯಕ್ತಿಗೆ–ಅನ್ವಯಿಸುತ್ತದೆ.

ವಿವರಣೆ: ಈ ಕೆಳಕಂಡ ವ್ಯಕ್ತಿಗಳು ಸಂದರ್ಭಾನುಸಾರ, ಹಿಂದೂ, ಬೌದ್ಧ, ಜೈನ ಅಥವಾ ಸಿಖ್ ಧರ್ಮದವರಾಗಿರುತ್ತಾರೆ.

ಎ) ತಂದೆ ತಾಯಿಗಳಿಬ್ಬರೂ ಹಿಂದೂ, ಸಿಖ್,ಬೌದ್ಧ, ಜೈನ ಧರ್ಮದವರಾಗಿದ್ದು, ಅವರ ಯಾವುದೇ ಔರಸವಾದ ಅಥವಾ ಅನೌರಸವಾದ ಮಗು,

ಬಿ) ತಂದೆ ತಾಯಿಗಳಲ್ಲೊಬ್ಬರು ಹಿಂದೂ, ಬೌದ್ಧ, ಜೈನ ಹಾಗೂ ಸಿಖ್ ಧರ್ಮದವರಾಗಿದ್ದು, ಅಂಥ ತಂದೆ ಅಥವಾ ತಾಯಿಯು ಸೇರಿರುವ ಅಥವಾ ಸೇರಿದ್ದ ತಾಂಡದ, ಜನಾಂಗದ ಗುಂಪಿ ಅಥವಾ ಕುಟುಂಬದ ವ್ಯಕ್ತಿಯಂತೆ ಬೆಳೆದು ಬಂದ ಯಾವುದೇ ಔರಸ ಅಥವಾ ಅನೌರಸ ಮಗು,

ಸಿ) ಹಿಂದೂ, ಬೌದ್ಧ, ಜೈನ ಹಾಗೂ ಸಿಖ್ ಧರ್ಮಕ್ಕೆ ಮತಾಂತರ ಹೊಂದಿದ ಅಥವಾ ಮತ್ತೆ ಮತಾಂತರಗೊಂಡ ಯಾವನೇ ವ್ಯಕ್ತಿ[೨೨] ಹೀಗೆ ಹಿಂದೂ ಎಂದರೆ ಯಾರು ಎಂಬುದನ್ನು ಕಾಲ ಕಾಲಕ್ಕೆ ಬಂದ ಕಾಯಿದೆಗಳು ವ್ಯಾಖ್ಯಾನಿಸುತ್ತಾ ಬಂದಿರುವುದು ಕಂಡುಬರುತ್ತದೆ.

ಹಿಂದೂ ಧರ್ಮೀಯರಿಗೆ ಸಂಬಂಧಿಸಿದಂತೆ ವಾರಸಾ ಅಧಿನಿಯಮವನ್ನು ವಿವರವಾಗಿ ವಿಶ್ಲೇಷಿಸುವ ಅಗತ್ಯವಿದೆ. ಈ ಹಿನ್ನಲೆಯಲ್ಲಿ ಅಧ್ಯಾಯವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಒಂದು ವಸಾಹತು ಕಾಲಘಟ್ಟದಲ್ಲಿ ಆಸ್ತಿಹಕ್ಕಿನ ಕುರಿತ ಕಾಯಿದೆಗಳು ಮತ್ತು ಎರಡನೆಯದಾಗಿ ವಸಾಹತು ನಂತರದ ಕಾಲಘಟ್ಟದಲ್ಲಿ ಆಸ್ತಿಹಕ್ಕಿನ ಕಾಯಿದೆಗಳು ಎಂದು. ಆಸ್ತಿ ಹಕ್ಕು ಕಾಯಿದೆಯಲ್ಲಾದ ಈ ಬದಲಾವಣೆಗಳು ಮಹಿಳೆಯರಿಗೆ ಯಾವ ಬಗೆಯ ಅನುಕೂಲಗಳನ್ನು ಒದಗಿಸಿಕೊಟ್ಟವು ಎಂಬುದನ್ನು ಈ ಮುಂದಿನಂತೆ ವಿವರಿಸಿಕೊಳ್ಳಲಾಗಿದೆ.

**೪.೧. ವಸಾಹತು ಸಂದರ್ಭದಲ್ಲಿ ಆಸ್ತಿ ಹಕ್ಕಿನ ಪರಿಕಲ್ಪನೆಗಳು ಮತ್ತು ಕಾಯಿದೆಗಳು**

ಭಾರತಕ್ಕೆ ಯಾವಾಗ ಪರಕೀಯರು ಪ್ರವೇಶಿಸಿದರೋ ಅಂದಿನಿಂದ ದೇಶದಲ್ಲಿ ಹೊಸ ಬಗೆಯ ಬದಲಾವಣೆಗಳು ಸಂಭವಿಸಿದವು. ಮುಖ್ಯವಾಗಿ ಹಲವು ವರ್ಷಗಳ ಕಾಲ ಭಾರತವನ್ನು ಆಳಿದ ಬ್ರಿಟಿಷರ ಆಳ್ವಿಕೆ ಒಂದು ಸಂಚಲನವನ್ನೇ ಸೃಷ್ಟಿಸಿತು. ಅಂದು ಇದ್ದ ಹಲವು ಅಂಧ ಕಾನೂನುಗಳಿಗೆ ಕತ್ತರಿಯನ್ನು ಹಾಕಲಾಯಿತು. ಹಾಗೆಯೇ ಮಹಿಳೆಯರ ಪರವಾದ ಹಲವು ಕಾನೂನುಗಳ ಜಾರಿಗೆ ಬಂದ ಸಂದರ್ಭ ಅದಾಗಿತ್ತು. ಈ ಬಗೆಯ ಬದಲಾವಣೆಗಳು ಬ್ರಿಟಿಷರ ವೈಯಕ್ತಿಕ ಹಿತಾಸಕ್ತಿಯಿಂದ ಆದುದಲ್ಲ. ಬದಲಾಗಿ ಅಂದಿನ ಸಂದರ್ಭದ ಪ್ರಗತಿಪರ ಚಿಂತಕರು, ವಿಚಾರವಂತರೆಲ್ಲಾ ಸೇರಿ ಬ್ರಿಟಿಷ್ ಆಡಳಿತ ವ್ಯವಸ್ಥೆಯ ಮೇಲೆ ಒತ್ತಡವನ್ನು ಹಾಕುವುದರ ಮೂಲಕ ವ್ಯವಸ್ಥೆಯಲ್ಲಿ ಇದ್ದ ಅನಿಷ್ಠ ಪದ್ಧತಿಗಳನ್ನು ಹೊಡೆದೋಡಿಸಲು ಕಾರಣರಾದರು. ಆ ನಿಟ್ಟಿನಲ್ಲಿ ಹತ್ತೊಂಭತ್ತನೆಯ ಶತಮಾನದಲ್ಲಿ ಆರಂಭವಾದ ಸಮಾಜ ಸುಧಾರಣಾ ಚಳುವಳಿಯ ಮೂಲ ಉದ್ದೇಶ ಅಸಮಾನತೆಯನ್ನು ನೀಗಿಸುವುದು ಹಾಗೂ ಆಚರಣೆ, ನಂಬಿಕೆಯ ಹೆಸರಿನಲ್ಲಿ ಉಚ್ಛ್ರಾಯ ಸ್ಥಿತಿಯನ್ನು ತಲುಪಿದ್ದ ಲಿಂಗ ತಾರತಮ್ಯವನ್ನು ಹೋಗಲಾಡಿಸುವುದು ಆಗಿತ್ತು. ಹಾಗಾಗಿ ಈ ಸುಧಾರಣಾವಾದಿ ಚಳುವಳಿಯ ಪ್ರಭಾವದಿಂದಾಗಿ ಬ್ರಿಟಿಷ್ ಸರ್ಕಾರವು ಸತಿ ಪದ್ಧತಿಯೆಂಬ ಪೈಶಾಚಿಕ ಆಚರಣೆಯನ್ನು ನಿಷೇಧಿಸುವ ಕಾನೂನನ್ನು ೧೮೨೯ರಲ್ಲಿ ಜಾರಿಗೆ ತಂದಿತು. ಈ ಕಾನೂನಿನ ಜೊತೆ ಜೊತೆಗೆ ಮಹಿಳಾ ಪರವಾದ ವಿಧವಾ ಪುನರ್ ವಿವಾಹ ಅಧಿನಿಯಮ, ಬಾಲ್ಯವಿವಾಹ ನಿಷೇಧಗಳಂಥ ಹಲವು ಕಾನೂನುಗಳು ಜಾರಿಯಾದವು. ಹಾಗೆಯೇ ಆ ಸಂದರ್ಭದಲ್ಲಿ ಮಹಿಳೆಯರ ಆಸ್ತಿಹಕ್ಕಿನ ಕುರಿತು ಹಲವಾರು ಚರ್ಚೆಗಳು ನಡೆದವು. ಅಲ್ಲಿಯವರೆಗೆ ಆಸ್ತಿಹಕ್ಕು ಎಂಬುದು ಕುಟುಂಬದ ಯಜಮಾನನ ವಶದಲ್ಲಿರುತ್ತಿತ್ತು. ಹಾಗೆಯೇ ಅಂದಿನ ಕುಟುಂಬ ವ್ಯವಸ್ಥೆಯು ಅವಿಭಕ್ತ ಕುಟುಂಬವಾಗಿದ್ದು ಪಿತೃಪ್ರಧಾನ ಮೌಲ್ಯಗಳಿಂದ ಕೂಡಿತ್ತು. ಈ ಪಿತೃಪ್ರಧಾನ ಅವಿಭಕ್ತ ಕುಟುಂಬಗಳಲ್ಲಿ ಆಸ್ತಿಯ ಮೇಲಿನ ಹಕ್ಕು ತಂದೆಯಿಂದ ಮಗನಿಗೆ ತಲೆಮಾರುಗಳಾದಿಯಾಗಿ ವರ್ಗಾವಣೆ ಹೊಂದುತ್ತಿತ್ತು. ಇಂಥ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಆಸ್ತಿಹಕ್ಕು ಇರುವುದು ಊಹಿಸಿಕೊಳ್ಳಲೂ ಆಗದ ಸಂಗತಿ. ಹೆಣ್ಣು

ತವರು ಮನೆಯಲ್ಲಿ ತಂದೆ ತಾಯಿಯರ ಆಸ್ತಿಯಿಂದಲೂ ನಂತರ ಗಂಡನ ಮನೆಯ ಆಸ್ತಿಯಿಂದಲೂ ವಂಚಿತಳಾಗುತ್ತಿದ್ದಳು. ಅವಿಭಕ್ತ ಕುಟುಂಬ ಪದ್ಧತಿಯಲ್ಲಿ ದುಡಿಮೆಯ/ಶ್ರಮದ ಪ್ರತಿಫಲ ಕುಟುಂಬದ ಆದಾಯಕ್ಕೆ ಸೇರುವುದರಿಂದ ಮಹಿಳೆಗೆ ತನ್ನ ದುಡಿಮೆಯ ಪ್ರತಿಫಲ ದೊರೆಯುತ್ತಿರಲಿಲ್ಲ. ಹಾಗೂ ಕುಟುಂಬದ ಆಸ್ತಿಯಲ್ಲಿ ಪಾಲು ಪಡೆಯುವ ಅವಕಾಶವೂ ಇರಲಿಲ್ಲ. ಹಾಗಾಗಿ ಸ್ತ್ರಿ ಆರ್ಥಿಕವಾಗಿ ಪರಾವಲಂಬಿಯಾಗಿಯೇ ಬದುಕುವ ಅನಿವಾರ್ಯತೆಯಿತ್ತು. ಇಂತಹ ಅನಿವಾರ್ಯ ಸ್ಥಿತಿಯಲ್ಲದೆ ಬದುಕಿನ ಹಲವು ಹಂತಗಳಲ್ಲಿ ಮಹಿಳೆಗೆ ಬಂದೊದಗುತ್ತಿದ್ದ ವೈಧವ್ಯದ ಸ್ಥಿತಿ, ಮಕ್ಕಳಿಲ್ಲದಿರುವ ಸ್ಥಿತಿ ಮುಂತಾದ ಸಂದರ್ಭಗಳಲ್ಲಿ ಮಹಿಳೆಯು ಸಂಕಷ್ಟಕ್ಕೀಡಾಗಬೇಕಿತ್ತು. ನಿತ್ಯ ಜೀವನ ನಿರ್ವಹಣೆಯ ಹೊರೆಯನ್ನು ಹೊರಲಾಗದ ದಯನೀಯ ಸ್ಥಿತಿ ಮಹಿಳೆಯರದ್ದಾಗಿತ್ತು. ಹಾಗಾಗಿ ಸತೀ ನಿಷೇಧದ ಕಾನೂನಿನ ಜೊತೆ ಜೊತೆಗೆ ಮಹಿಳೆಯರಿಗೆ ಆರ್ಥಿಕ ಭದ್ರತೆಯನ್ನು ಒದಗಿಸುವ ಉದ್ದೇಶದಿಂದ ಆಸ್ತಿಹಕ್ಕಿನ ಪ್ರಸ್ತಾಪವನ್ನು ಸುಧಾರಣಾವಾದಿಗಳು ಎತ್ತಿದರು. ವಿಧವೆಯರಿಗೆ ಆರ್ಥಿಕ ನೆರವನ್ನು ನೀಡಬೇಕೆಂಬುದು ಇಲ್ಲಿನ ಮುಖ್ಯ ಉದ್ದೇಶವಾಗಿತ್ತು. ಈ ಸಂದರ್ಭದಿಂದ ಮಹಿಳೆಯರ ಆರ್ಥಿಕ ನೆರವಿನ ಮೊದಲ ಅಲೆ ಪ್ರಾರಂಭವಾಯಿತು. ಅದಕ್ಕೆ ದಾಖಲೆಯೆಂಬಂತೆ “ ೧೮೮೯ರ ಸುಮಾರಿಗೆ ಪೂನಾದ ಕಮಿಷನರ್ ವಿಲಿಯಂ ಚಾಪ್ಲಿನ್ ಬಾಂಬೆ ಸಂಸ್ಥಾನದಲ್ಲಿ ವಿಧವಾ ಮಾಶಾಸನ ನೀಡಿದ ದಾಖಲೆ ದೊರೆಯುತ್ತದೆ”[೩]. ನಂತರ ಇಪ್ಪತ್ತನೆಯ ಶತಮಾನದ ಆರಂಭದ ಕಾಲದಲ್ಲಿ ಸಮಾಜದಲ್ಲಿ ಇದ್ದಂತಹ ಲಿಂಗ ತಾರತಮ್ಯವನ್ನು ಹೋಗಲಾಡಿಸುವ ಸಲುವಾಗಿ ಹಲವಾರು ಸಂಘಟನೆಗಳು ಹುಟ್ಟಿಕೊಂಡವು. ೧೯೧೭ರಲ್ಲಿ ಸ್ಥಾಪನೆಗೊಂಡ ವಿಮೆನ್ಸ್ ಇಂಡಿಯನ್ ಅಸೋಷಿಯೇಶನ್ (W.I.A), ೧೯೨೭ರ ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್ (AIWC), ೧೯೨೫ರಲ್ಲಿ ಅಸ್ತಿತ್ವಕ್ಕೆ ಬಂದ ನ್ಯಾಷನಲ್ ಕೌನ್ಸಿಲ್ ಆಫ್ ವಿಮೆನ್ ಇನ್ ಇಂಡಿಯಾ (AIWC) ಮುಖ್ಯವಾದವುಗಳಾಗಿವೆ. ಈ ಸಂಘಟನೆಗಳು ಸಮಾಜ ಸುಧಾರಣೆಯ ಕಾರ್ಯಗಳಲ್ಲಿ ತೊಡಗಿಕೊಂಡವು. ಅದರಲ್ಲೂ ಮುಖ್ಯವಾಗಿ ಮಹಿಳೆಯರ ವಿಚ್ಛೇದನೆಯ ಹಕ್ಕು, ಆಸ್ತಿಯ ವಾರಸುದಾರಿಕೆ ಮತ್ತು ನಿಯಂತ್ರಣ ಹಕ್ಕುಗಳಿಗಾಗಿ ಹೋರಾಟ ನಡೆಸಿದವು. ಹೀಗೆ ಆರಂಭವಾದ ಮಹಿಳೆಯರ ಆರ್ಥಿಕ ಭದ್ರತೆಯ ಕುರಿತ ಚಿಂತನೆಗಳು (ಮಹಿಳೆಯರ ಆಸ್ತಿ ಹಕ್ಕಿನ) ವಿವಾಹಿತ ಸ್ತ್ರೀಗೆ ಯಾವುದೇ ಹಕ್ಕುಗಳು ದೊರೆಯದ್ದನ್ನು ಗಮನಿಸಿ ೧೯೨೩ರಲ್ಲಿ ವಿಶೇಷ ವಿವಾಹ ಕಾಯ್ದೆಯ ತಿದ್ದುಪಡಿಯಲ್ಲಿ ಮಹಿಳೆಯರಿಗೆ ಸ್ವಲ್ಪ ಪ್ರಮಾಣದಲ್ಲಿ ಅನುಕೂಲ ಕಲ್ಪಿಸಿ ಕೊಡುವ ಪ್ರಯತ್ನವನ್ನು ಮಾಡಲಾಯಿತು. ನಂತರ ೧೯೨೫ರಲ್ಲಿ ಭಾರತೀಯ ಉತ್ತರಾಧಿಕಾರ ಕಾಯ್ದೆ ಜಾರಿಯಾಯಿತು.

**ಭಾರತೀಯ ಉತ್ತರಾಧಿಕಾರ ಕಾಯ್ದೆ ೧೯೨೫**

ಈ ಕಾಯಿದೆಯು ಮುಖ್ಯವಾಗಿ ವಿಧವೆಯರ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಹೆಚ್ಚಿನ ಒತ್ತನ್ನು ಕೊಟ್ಟಿದೆ. ಈ ಕಾಯಿದೆಯಲ್ಲಿ ಒಬ್ಬ ಮೃತನ ಸ್ಥಿರ ಹಾಗೂ ಚರ ಸ್ವತ್ತುಗಳ ವಾರಸುದಾರರಾಗಲು ಈ ಕೆಳಗಿನ ಕಲಂಗಳಲ್ಲಿನ ನಿಯಮಗಳು ಅನ್ವಯಿಸುತ್ತವೆ. ಇಲ್ಲಿ

ಮುಖ್ಯವಾಗಿ ಆಸ್ತಿಯ ವಾರಸುದಾರರಾಗಲು ಸ್ತ್ರೀ ಮತ್ತು ಪುರುಷರಿಗೆ ಸಂಬಂಧಿಸಿದಂತೆ ಹಲವು ಕಲಂಗಳು ರೂಪಿತಗೊಂಡಿವೆ. ಆದರೆ ಇಲ್ಲಿ ಮಹಿಳಾ ವಾರಸುದಾರರಿಗೆ ಸಂಬಂಧಿಸಿದಂತೆ ಮಾತ್ರ ವಿವರಿಸಿಕೊಳ್ಳಲಾಗಿದೆ.

"ಕಲಂ ೧೫ರ ಪ್ರಕಾರ ಮಹಿಳೆಯು ಮದುವೆಯ ಮೂಲಕ ತನ್ನ ಗಂಡನ ಅಧಿವಾಸವನ್ನು ಪಡೆದುಕೊಳ್ಳುತ್ತಾಳೆ. ಅಂದರೆ ಮೊದಲು ಅವಳು ಅದೇ ಅಧಿವಾಸವನ್ನು ಹೊಂದಿರದಿದ್ದರೆ ಮತ್ತು ತನ್ನ ಗಂಡನ ಅಧಿವಾಸವನ್ನು ಹಿಂಬಾಲಿಸುತ್ತಾಳೆ. ಇನ್ನು ವಿಧವೆಯ ಅಧಿವಾಸವು ಮಹಿಳೆಯು ತನ್ನ ಗಂಡನ ಮರಣದ ನಂತರ ಅವಳ ಅಧಿವಾಸವು ಅವಳು ತನ್ನಷ್ಟಕ್ಕೆ ಹೊಸ ಅಧಿವಾಸವನ್ನು ಪಡೆಯುವವರೆಗೆ ಗಂಡನ ಅಧಿವಾಸವು ಮುಂದುವರೆಯುತ್ತದೆ.

ಕಲಂ ೧೬ರ ಪ್ರಕಾರ ಹೆಂಡತಿಯ ಅಧಿವಾಸವು ಮದುವೆಯ ಕಾಲದಲ್ಲಿ ಆಕೆಯ ಗಂಡನ ಅಧಿವಾಸವನ್ನು ಹಿಂಬಾಲಿಸುತ್ತದೆ. ಒಂದುವೇಳೆ ಗಂಡ, ಹೆಂಡತಿ ಸಕ್ಷಮ ನ್ಯಾಯಾಲಯದ ಆದೇಶದಿಂದ ಬೇರೆ ಬೇರೆಯಾಗಿದ್ದರೆ ಇಲ್ಲವೇ ವಿವಾಹ ವಿಚ್ಛೇದನೆಯನ್ನು ಪಡೆದಿದ್ದರೆ, ಇಲ್ಲವೆ ಗಂಡನು ಗಡಿಪಾರು ಶಿಕ್ಷೆಗೆ ಒಳಪಟ್ಟಿದ್ದರೆ, ಆಗ ಹೆಂಡತಿಯ ಅಧಿವಾಸವು ತನ್ನ ಗಂಡನ ಅಧಿವಾಸವನ್ನು ಹಿಂಬಾಲಿಸುವುದಿಲ್ಲ"[೪]. ಈ ಕಲಂಗಳಲ್ಲಿ 'ಅಧಿವಾಸ' ಎಂಬುದನ್ನು ಪದೇ ಪದೇ ಬಳಸಲಾಗಿದೆ. ಆದರೆ ಅಧಿವಾಸ ಪದದ ವ್ಯಾಖ್ಯೆಯನ್ನು ಈ ಅಧಿನಿಯಮದಲ್ಲಿ ಕೊಟ್ಟಿಲ್ಲ. ಆದರೆ ಈ ಪದದ ಅರ್ಥವನ್ನು ತಿಳಿದುಕೊಳ್ಳುವುದು ಮುಖ್ಯವಾಗಿದೆ. ಏಕೆಂದರೆ ಅಧಿವಾಸ ಎಂಬುದರ ಮೂಲಕವೇ ಆಸ್ತಿಯ ವಾರಸಾ ಹೋಗುತ್ತದೆ. "ಹಾಲ್ಸಬರಿಯವರ 'Law of England' ಇದರ XII ನೆಯ ಸಂಪುಟದ ೩೧ನೆಯ ಆವೃತ್ತಿಯ ಪುಟ ೧೪ರಲ್ಲಿ ಕೆಳಗಿನಂತೆ ಹೇಳಲಾಗಿದೆ.

ಒಬ್ಬ ಮನುಷ್ಯನ ಅಧಿವಾಸದ ದೇಶವೆಂದರೆ ಯಾವನಿಗೆ ಕಾನೂನು ಬದ್ಧವಾಗಿ ಆತನ ತಂದೆ ತಾಯಿಗಳು ವಾಸವಾಗಿರುವರೋ ಅದು ಅವನ ಅಧಿವಾಸವಾಗಿರುತ್ತದೆ. ಅಧಿವಾಸವು ಸಾಮಾನ್ಯವಾಗಿ ಅವನ ವಾಸದ ಮನೆಯ ಮೇಲೆ ಅವಲಂಬಿಸಿರುತ್ತದೆ. ಆದರೆ ಒಬ್ಬನಿಗೆ ಮನೆಯು ಇರಲಿಕ್ಕಿಲ್ಲ. ಇಲ್ಲವೆ ಒಬ್ಬನಿಗೆ ಒಂದಕ್ಕಿಂತ ಹೆಚ್ಚು ಮನೆಗಳು ಒಂದಕ್ಕಿಂತ ಹೆಚ್ಚು ದೇಶಗಳಲ್ಲಿ ಇರಬಹುದು. ಇಲ್ಲಿ ಕಾನೂನಿಗೆ ಅವಶ್ಯಕವಾಗಿರುವ ಅಂಶಗಳಲ್ಲಿ ಅವನಿಗೆ ಒಂದೇ ಅಧಿವಾಸ ಇರಬೇಕು ಎಂಬುದಾಗಿದೆ. ಒಬ್ಬನಿಗೆ ಒಂದೇ ಕಾಲದಲ್ಲಿ ಹೆಚ್ಚು ಅಧಿವಾಸಗಳು ಹೊಂದಿರಲಿಕ್ಕೆ ಬರುವುದಿಲ್ಲ. ಒಂದೇ ಕಾಲಕ್ಕೆ ೨, ೩ ದೇಶಗಳಲ್ಲಿ ವಾಸದ ಮನೆಗಳು ಇದ್ದರೆ ಸಾಕ್ಷಿ ಆಧಾರಗಳ ಮೂಲಕ ಯಾವ ದೇಶದಲ್ಲಿ ಅವನು ಹೆಚ್ಚು ಕಾಲ ವಾಸ ಮಾಡಿದ್ದಾನೋ ಅನ್ನುವುದನ್ನು ಸಾಕ್ಷಾಧಾರಗಳಿಂದ ಸಿದ್ಧ ಮಾಡಬೇಕಾಗುತ್ತದೆ. ಅಧಿವಾಸವು ವಾರಸಕ್ಕೆ ಅತೀ ಮಹತ್ವದ ವಿಷಯವಾಗಿದ್ದು ಒಬ್ಬನ ಅಧಿವಾಸದ ದೇಶವನ್ನು ಸ್ಪಷ್ಟ ಮಾಡಬೇಕಾಗುತ್ತದೆ." ಹಾಗೆಯೇ ಅಧಿವಾಸವೆಂದರೆ ವಾಸಸ್ಥಾನವೆಂದು ಲಾರ್ಡ್ ಕ್ರಾನ್‌ವರ್ಥ್ ಅವರು ಹೇಳಿದ್ದಾರೆ."[೫]

ಹೀಗೆ ಅಧಿವಾಸದ ಮೂಲಕ ವಾರಸಾವು ಹಸ್ತಾಂತರವಾಗುವುದರಿಂದ ಇದಕ್ಕೆ ಹೆಚ್ಚಿನ ಒತ್ತನ್ನು ನೀಡಲಾಗಿದೆ.

ಈ ಅಧಿನಿಯಮವು ವಿಧವೆಯರ ಆಸ್ತಿಹಕ್ಕಿನ ಕುರಿತಂತೆ ಹೆಚ್ಚಿನ ಅಂಶಗಳನ್ನು ಒಳಗೊಂಡಿದೆಯಾದ್ದರಿಂದ, ವಿಧವೆಯರಿಗೆ ಸಂಬಂಧಿಸಿದ ಆಸ್ತಿಹಕ್ಕಿನ ಕುರಿತ ಕೆಲವು ಕಲಂಗಳ ಕುರಿತು ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ.

ಈ ಕಾಯಿದೆಯ ಕಲಂ ೩೩ರ ಪ್ರಕಾರ ಮೃತ್ಯುಪತ್ರ ಮಾಡದೇ ತೀರಿಕೊಂಡ ವ್ಯಕ್ತಿಯು ತನ್ನ ಹೆಂಡತಿ ಮತ್ತು ಪಿತೃ ವಂಶಜರನ್ನು, ನೇರ ಸಂಬಂಧಿಗಳನ್ನು ಬಿಟ್ಟು ತೀರಿಕೊಂಡಿದ್ದರೆ ಅಂತಹ ಸಂದರ್ಭದಲ್ಲಿ ಆಸ್ತಿಯ ವಾರಸುದಾರರು ಈ ಕೆಳಗಿನಂತೆ ಇರುತ್ತಾರೆ.

ಎ) ಒಂದುವೇಳೆ ಅವನು ಯಾವುದೇ ಪಿತೃವಂಶೀಯ ಸಂತತಿಯನ್ನು ಬಿಟ್ಟಿದ್ದರೆ ಮುಂದೆ ಹೇಳಿದ ನಿಯಮಗಳಿಗೆ ಒಳಪಟ್ಟು ಅವನ ೧/೩ ಭಾಗ ಅವನ ವಿಧವೆಯಾದ ಹೆಂಡತಿಗೆ ಸೇರತಕ್ಕದ್ದು, ಮತ್ತು ಉಳಿದ ೨/೩ ಭಾಗ ಅವನ ಪಿತೃವಂಶೀಯ ಸಂತತಿಗೆ ಹೋಗತಕ್ಕದ್ದು.

ಬಿ) ಕಲಂ ೩೩ಎ ದಲ್ಲಿ ಹೇಳಿದುದನ್ನು ಹೊರತುಪಡಿಸಿ ಒಂದುವೇಳೆ ಅವನು ಪಿತೃವಂಶೀಯ ಸಂತತಿಯನ್ನು ಬಿಟ್ಟಿರದಿದ್ದರೆ, ಅವನಿಗೆ ಯಾರು ರಕ್ತ ಸಂಬಂಧಿಗಳು ಆಗುತ್ತಾರೋ ಅವರನ್ನು ಬಿಟ್ಟಿದ್ದರೆ ಮುಂದೆ ಹೇಳಿದ ನಿಯಮಗಳ ಪ್ರಕಾರ ಅವನ ಆಸ್ತಿಯಲ್ಲಿ ಳ ಭಾಗ ಆತನ ವಿಧವೆಗೆ ಸೇರತಕ್ಕದ್ದು ಉಳಿದ ಅರ್ಧ ಭಾಗ ಅವನಿಗೆ ಯಾರು ರಕ್ತ ಸಂಬಂಧಿಗಳು ಇರುತ್ತಾರೋ ಅವರಿಗೆ ಹೋಗತಕ್ಕದ್ದು.

ಸಿ) ಒಂದುವೇಳೆ ಅವನು ಯಾವುದೇ ರೀತಿಯಲ್ಲಿ ರಕ್ತ ಸಂಬಂಧಿಗಳನ್ನು ಬಿಟ್ಟಿರದಿದ್ದರೆ ಎಲ್ಲ ಆಸ್ತಿಯು ಅವನ ವಿಧವೆಗೆ ಸೇರತಕ್ಕದ್ದು[೬].

ಇನ್ನು ಹಲವಾರು ಕಲಂಗಳು ಮಹಿಳೆಯರಿಗೆ ತನ್ನ ಗಂಡನ ಆಸ್ತಿಯಲ್ಲಿನ ಪಾಲನ್ನು ಕುರಿತಂತೆ ವಿವರಿಸುತ್ತಾ ಹೋಗುತ್ತವೆ. ಹೀಗೆ ವಿಧವೆಯರಿಗೆ ಸಂಬಂಧಿಸಿದಂತೆ ಹಲವು ನಿಯಮಗಳು ಅನುಕೂಲವನ್ನು ಒದಗಿಸಿಕೊಟ್ಟಿರುವುದು ಅಂದಿನ ಸಂದರ್ಭದ ಹೆಗ್ಗಳಿಕೆಯಾಗಿದೆ. ಆದರೆ ವಾಸ್ತವದಲ್ಲಿ ಈ ಕಾಯಿದೆ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲನ್ನು ಪಡೆಯುವ ಸಂಪೂರ್ಣವಾದ ಅಧಿಕಾರವನ್ನು ಕೊಡಲಿಲ್ಲ. ಬದಲಾಗಿ ಈ ಕಾಯಿದೆ ಮಹಿಳೆಗೆ ಆಸ್ತಿ ಹಕ್ಕನ್ನು ನೀಡುವ ಉದ್ದೇಶವನ್ನು ಹೊಂದಿದೆ ಎಂಬ ಅಂಶಕ್ಕಿಂತ ಈಗಾಗಲೇ ಇರುವಂತಹ ಪಿತೃಪ್ರಧಾನ ಕುಟುಂಬಕ್ಕೆ ಮತ್ತು ಅಲ್ಲಿನ ಆಸ್ತಿಗೆ ವಾರಸುದಾರರನ್ನು ನೇಮಿಸುವುದಾಗಿತ್ತು. ಅಂದರೆ ಕೇವಲ ಉತ್ತರಾಧಿಕಾರದ ಸ್ಥಾನವನ್ನು ಮಾತ್ರ ನೀಡುವ ಹುನ್ನಾರವಾಗಿ ಈ ಕಾಯಿದೆ ರೂಪುಗೊಂಡಿತು. ಮುಂದುವರೆದು ವಿಧವೆಯರಿಗೆ ಆಸ್ತಿಹಕ್ಕನ್ನು ಕಾನೂನು ಬದ್ಧಗೊಳಿಸುವ ಪ್ರಯತ್ನ ೧೯೩೦ರ ಹೊತ್ತಿಗೆ ನಡೆಯಿತಾದರೂ ಸಂಪ್ರದಾಯವಾದಿಗಳಿಂದ ತೀವ್ರ ವಿರೋಧಕ್ಕೆ ತುತ್ತಾಗಬೇಕಾಯಿತು.

ಪ್ರತಿರೋಧದ ನಡುವೆಯೂ ಸುಧಾರಣಾವಾದಿಗಳ ಪ್ರಯತ್ನದಿಂದ ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಅಧಿನಿಯಮ ೧೯೩೭ರಲ್ಲಿ ರೂಪಿತವಾಯಿತು. ಈ ಕಾಯಿದೆಯ ಕುರಿತಂತೆ ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ.

**ಹಿಂದೂ ಮಹಿಳೆಯರ ಸ್ವತ್ತಿನ ಹಕ್ಕುಗಳ ಅಧಿನಿಯಮ ೧೯೩೭**

೧೯೩೭ರಲ್ಲಿ ಜಾರಿಗೆ ಬಂದಂತಹ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಅಧಿನಿಯಮದ ಪ್ರಕಾರ ಮಿತಾಕ್ಷರ ಉತ್ತರಾಧಿಕಾರ ಪದ್ಧತಿಯಲ್ಲಿ, ಪ್ರತ್ಯೇಕವಾದ ಮರಣಶಾಸನ ರಹಿತ ಆಸ್ತಿಯಲ್ಲಿ ಮಗನ ಪಾಲಿಗೆ ಸಮನಾದ ಪಾಲನ್ನು ಪಡೆಯಲು ಹಿಂದೂ ವಿಧವೆಗೆ ಹಕ್ಕು ನೀಡಲಾಯಿತು. ಮತ್ತು ದಾಯಭಾಗ ಪದ್ಧತಿಯಲ್ಲಿ ಎಲ್ಲ ಬಗೆಯ ಆಸ್ತಿಯಲ್ಲಿಯೂ ಹಕ್ಕು ನೀಡಲಾಯಿತು. ಅಲ್ಲದೆ ಮಿತಾಕ್ಷರ ಪದ್ಧತಿಯ ಅವಿಭಕ್ತ ಕುಟುಂಬದಲ್ಲಿ ಮೃತ ಗಂಡನಿಗಿರುವ ಪಾಲನ್ನು ಅವನ ವಿಧವೆ ಹೊಂದಲು ಹಾಗೂ ಗಂಡನಿಗಿದ್ದಂತೆ ಪಾಲು ಮಾಡುವಂತೆ ಕೇಳುವ ಹಕ್ಕನ್ನೂ ನೀಡಲಾಯಿತು. ಆದರೆ ಆಸ್ತಿಯ ಈ ಹಕ್ಕು ಸೀಮಿತವಾದುದಾಗಿತ್ತು. ಈ ಅಧಿನಿಯಮದ "ಕಲಂ ೩(೨)ರ ಪ್ರಕಾರ ಗಂಡನ ಮರಣಾ ನಂತರವೂ ಅವನು ತನ್ನ ಹೆಂಡತಿಯ ವ್ಯಕ್ತಿಯೊಂದಿಗೆ ಮುಂದುವರೆಯುತ್ತಿದ್ದು, ತನ್ನ ವಿಧವೆ ಹೆಂಡತಿಯು ಜೀವಂತವಿರುವವರೆವಿಗೂ ವ್ಯಕ್ತಿಯಾಗಿ ಮುಂದುವರೆಯುತ್ತಾನೆ. ಈ ಕಲ್ಪನೆಯ ಆಧಾರದ ಮೇಲೆ ಹಿಂದೂ ಕಾನೂನು ಮಾನ್ಯತೆ ಪಡೆದಿದ್ದು ೧೯೩೭ರ ಅಧಿನಿಯಮದಲ್ಲಿ ಇದಕ್ಕೆ ಪರಿಣಾಮ ನೀಡಲಾಗಿದೆ. ಈ ಸಂದರ್ಭಗಳಲ್ಲಿ ಶಾಸನ ಸಭೆಯು ಬಳಸಿರುವ ಪದ "ಸಮ ಹಿತಾಸಕ್ತಿ ಅವನಿಗೇ ಇದ್ದಂತೆ" ಎಂಬ ಪದಗಳು. ಅವನು ಹೊಂದಿರುವ ಹಲವಾರು ಹಕ್ಕುಗಳು ಅವನ ಹೆಂಡತಿಗೆ ಪ್ರಾಪ್ತವಾಗುತ್ತದೆ. ಕಲಮು ೩ರ ಉಪಕಲಮು (೨)ರ ಪ್ರಕಾರ ವಿಧವೆಯು ಭಾಗ ಕೋರಬಹುದು. ವಿಭಾಗದಲ್ಲಿ ಅವಳ ಗಂಡನಿಗೆ ಇದ್ದಷ್ಟೇ ಪಾಲಿಗೆ ಅವಳು ಹಕ್ಕುದಾರಳಾಗುತ್ತಾಳೆ. ಆದ್ದರಿಂದ ಅವಳ ಸ್ಥಾನಮಾನ ವನ್ನು ಮೊದಲ ಬಾರಿಗೆ ಕುಟುಂಬದ ದಾಯಾದಿ ಸಮಕ್ಕೆ ಏರಿಸಿದ್ದು ದಾಯಾದಿಯಂತೆಯೇ ಸಮಾನ ಹಕ್ಕುಗಳನ್ನು ಹೊಂದಿದ್ದು ಮೊದಲ ಸಲ ಇದನ್ನು ಪರಿಚಯಿಸಿದ್ದು ಎಂದು ಅರ್ಹತೆ ಗಳಂತೆ ಅವಳು ಹಿಂದೂ ದಾಯಾದಿ ಕುಟುಂಬದಲ್ಲಿ ಗಂಡನಷ್ಟೇ ಹಕ್ಕುಗಳನ್ನು ಹೊಂದಿರುತ್ತಾಳೆ. ೧) ಅವಳಿಗೆ ನಿಯಮಿತ ಹಿತಾಸ್ಕಿ ಇದ್ದು, ೨) ಅವಳು ದಾಯಾದಿ ಅಲ್ಲ. ಏಕೆಂದರೆ ಕುಟುಂಬಕ್ಕೆ ಅವಳ ಪ್ರವೇಶದ ಸ್ವಬಾವ ಹೇಗಿದೆ ಎಂದರೆ ತನ್ನ ಗಂಡನೊಂದಿಗೆ ವಿವಾಹ ವಾದ್ದರಿಂದ ಅವಳು ಮನೆಗೆ ಪ್ರವೇಶಿಸಿದ್ದು ಅವಳ ಜನನದಿಂದಲೇ ದಾಯಾದಿತ್ವದಲ್ಲಿ ಹಿತಾಸಕ್ತಿ ಹುಟ್ಟುವ ಪ್ರಶ್ನೆಯೇ ಇಲ್ಲ. ಇದು ಹಿಂದೂ ದಾಯಾದಿತ್ವದ ಪ್ರಮುಖ ಅಂಶವಾಗಿರುತ್ತದೆ.

ಕಲಂ ೩ ಉಪಕಲಂ (೩) ಪುರುಷ ಒಡೆಯನು ಕೇಳುವಂತಹ ವಿಭಾಗವನ್ನು ಹಿಂದೂ ವಿಧವೆಯೂ ಕೇಳಬಹುದಾದ ಹಕ್ಕು ನೀಡಲಾಗಿದೆ. ವಿಭಾಗ ಕೇಳುವ ಪರಿಯಲ್ಲಿ ವಿಧವೆಯ ಹಿತಾಸಕ್ತಿಯನ್ನು ವ್ಯಾಖ್ಯೆ ಮಾಡಲಾಗಿದೆ. ವಿಧವೆಯು ಕೇಳುವ ಹಕ್ಕು ತನ್ನ ಗಂಡನು ಜೀವಂತ ಇರುವಾಗ ಕೇಳುವ ಹಕ್ಕಿಗಿಂತಲೂ ವಿಭಿನ್ನವಾಗೇನೂ ಇರುವುದಿಲ್ಲ. ಆದ್ದರಿಂದ ಜಂಟಿ

ಕುಟುಂಬದ ದಾಯಾದಿ ಸ್ವತ್ತಿನಲ್ಲಿ ವಿಧವೆಯು ವಿಭಾಗದಲ್ಲಿ ಕೇಳುವಂತಿದ್ದು ದಾಯಾದಿಯು ಜೀವಂತವಿದ್ದಷ್ಟು ಹಕ್ಕು ಮುಂದುವರೆಯುತ್ತದೆ".[೭] ಹೀಗೆ ೧೯೩೭ರ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಕಾನೂನು ಕೇವಲ ವಿಧವೆಯರನ್ನು ಕೇಂದ್ರೀಕರಿಸಿತು. ಈ ಕಾಯಿದೆ ವಿಧವೆಯರಿಗೆ ತಮ್ಮ ಜೀವನ ಪರ್ಯಂತ ಆಸ್ತಿಯನ್ನು ಅನುಭವಿಸುವ ಹಕ್ಕನ್ನು ನೀಡಿತು. ಆದರೆ ಈ ಮಹಿಳೆಯರು ಆ ಆಸ್ತಿಯನ್ನು ಮಾರುವ, ದಾನಕೊಡುವ ಮತ್ತಿತರ ಹಕ್ಕನ್ನು ಹೊಂದಿರುವುದಿಲ್ಲ. ಅವರ ಮರಣಾ ನಂತರ ಇವು ಪುನಃ ಅವರ ಗಂಡನ ಮುಂದಿನ ವಾರಸುದಾರರಿಗೆ ಹೋಗುತ್ತದೆ. ಮುಖ್ಯವಾಗಿ "ಕುಟುಂಬದಲ್ಲಿ ಬೇರೆ ಪುರುಷರಿದ್ದಾಗಲೂ ಸತ್ತವನ ವಿಧವೆ ಹೆಂಡತಿ, ಮೊದಲೇ ಮೃತನಾಗಿದ್ದ ಮಗನ– ಮೊಮ್ಮಗನ ವಿಧವೆಯರಿಗೆ ಮೊದಲ ಬಾರಿಗೆ ಆಸ್ತಿಹಕ್ಕು ಕೊಟ್ಟಿರುವುದು ಈ ಕಾನೂನಿನ ವಿಶೇಷತೆ. ಆ ಮಟ್ಟಿಗೆ ಈ ಕಾನೂನು ದಾಯಭಾಗ ಮತ್ತು ಮಿತಾಕ್ಷರ ಹಿಂದೂ ಕಾನೂನನ್ನು ತಿದ್ದುಪಡಿ ಮಾಡಿ ಕೆಲವೊಂದು ಸ್ತ್ರೀಯರಿಗೆ, ಸಮಾನವಲ್ಲದಿದ್ದರೂ ಸ್ವಲ್ಪ ಮಟ್ಟಿನ ಆಸ್ತಿ ಹಕ್ಕನ್ನು ಪುರುಷನ ಸ್ವಯಾರ್ಜಿತ ಹಾಗೂ ಪಿತ್ರಾರ್ಜಿತ ಸ್ವತ್ತಿನಲ್ಲಿ ಕೊಟ್ಟಿದೆ"[೮]. ಆದರೆ ೧೯೩೭ರ ಈ ಕಾಯಿದೆ ಪ್ರಕಾರ ವಿಧವೆಯಾದವಳು ಪುನರ್ ವಿವಾಹವಾದರೆ ತನಗೆ ಸೇರಿರುವ ಆಸ್ತಿಯನ್ನೂ ಸಹ ಕಳೆದುಕೊಳ್ಳುತ್ತಿದ್ದಳು. ಜೊತೆಗೆ ಕೃಷಿ ಭೂಮಿಯನ್ನು ಸ್ಪಷ್ಟವಾಗಿ ಹೊರತುಪಡಿಸಿತು. ಆ ಕಾರಣಕ್ಕಾಗಿ ಮಹಿಳೆಯರ ಆಸ್ತಿ ಹಕ್ಕು ತುಂಬಾ ಸೀಮಿತವಾಗಿದ್ದಿತು. ಇದಕ್ಕೆ ಕಾರಣವೂ ಇದ್ದಿತು. ಭಾರತ ಸರ್ಕಾರದ ಅಧಿನಿಯಮವು ೧೯೩೫ರಲ್ಲಿ ಜಾರಿಗೆ ಬಂದ ನಂತರ ಕೃಷಿ ಆಸ್ತಿಯು ಪ್ರಾಂತೀಯ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿತು. ಹಾಗೆಯೇ ಹೆಣ್ಣು ಮಕ್ಕಳನ್ನು ಈ ಅಧಿನಿಯಮ ಹೊರತುಪಡಿಸಿತು. ಆ ಕಾರಣ ಕ್ಕಾಗಿ ೧೯೩೭ರ ಈ ಕಾಯಿದೆ ಮಹಿಳೆಯರನ್ನು ಕೃಷಿಭೂಮಿಯಿಂದ ದೂರವಿಟ್ಟಿತು. ಆದರೂ ಈ ಕಾಯಿದೆ ಮಹಿಳೆಯರ ಆರ್ಥಿಕ ಭದ್ರತೆಗೆ ಪೂರ್ಣ ಪ್ರಮಾಣದಲ್ಲದಿದ್ದರೂ ಸ್ವಲ್ಪ ಪ್ರಮಾಣದ ಮುನ್ನುಡಿಯನ್ನು ಹಾಕಿತು ಎಂದು ಹೇಳಬಹುದು.

ವಸಾಹತು ಕಾಲಘಟ್ಟದ ಸಂದರ್ಭದಲ್ಲಿ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮದವರಿಗೆ ಸಂಬಂಧಿಸಿದಂತೆ ಆಸ್ತಿ ಹಕ್ಕಿನ ಕಾನೂನುಗಳು ರೂಪಿಸಲ್ಪಟ್ಟವು. ಇಲ್ಲಿ ಮುಖ್ಯವಾಗಿ ಮುಸ್ಲಿಂ ಮರಿಗಾಗಿ ವೈಯಕ್ತಿಕ ಕಾನೂನುಗಳು ರೂಪಿತವಾದವು. ಹಾಗೆಯೇ ಕ್ರಿಶ್ಚಿಯನ್ನರಿಗೆ ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫ ಅನ್ವಯವಾಯಿತು. ಹಾಗಾಗಿ ವಸಾಹತು ಕಾಲಘಟ್ಟದಲ್ಲಿ ರೂಪಿಸಲ್ಪಟ್ಟಂತಹ ಈ ಕಾನೂನುಗಳ ಕುರಿತಂತೆ ವಿವರಿಸಿಕೊಳ್ಳುವುದು ಮತ್ತು ಈ ಧರ್ಮಗಳು ಮಹಿಳೆಯರ ಆಸ್ತಿ ಹಕ್ಕಿನ ಕುರಿತಂತೆ ಯಾವ ಧೋರಣೆಯನ್ನು ಹೊಂದಿವೆ ಎಂಬುದನ್ನು ತಿಳಿಯುವುದು ಮುಖ್ಯವಾಗಿದೆ.

**ಮುಸ್ಲಿಂ ಮಹಿಳೆಯರ ಆಸ್ತಿಹಕ್ಕು**

ಮುಸ್ಲಿಂ ಮಹಿಳೆಯರ ಆಸ್ತಿಹಕ್ಕು ಇತರೆ ಧರ್ಮದ ಮಹಿಳೆಯರ ಆಸ್ತಿಹಕ್ಕಿಗಿಂತ ಭಿನ್ನವಾಗಿದೆ. ಮುಸ್ಲಿಂ ವಾರಸಾ ಕಾನೂನು ಕುರಾನಿನ ತತ್ವಗಳನ್ನು ಅವಲಂಬಿಸಿ ರೂಪಿತವಾಗಿವೆ.

ಮುಸ್ಲಿಂಮರಲ್ಲಿ ಪ್ರಮುಖವಾಗಿ ಶಿಯಾ ಹಾಗೂ ಸುನ್ನಿ ಎಂಬ ಎರಡು ಪಂಥಗಳಿವೆ. ಸುನ್ನಿ ಪಂಥದಲ್ಲಿ ಪುನಃ ನಾಲ್ಕು ಉಪಪಂಥಗಳು ಕಂಡುಬರುತ್ತವೆ. ಅವುಗಳೆಂದರೆ ಹನಾಫಿ, ಶಫಿ, ಮಾಲಿಕಿ ಮತ್ತು ಹನ್‌ಬಲಿ. ಭಾರತದ ಬಹುಪಾಲು ಮುಸ್ಲಿಂಮರು ಸುನ್ನಿ ಪಂಥಕ್ಕೆ ಸೇರಿದವರಾಗಿದ್ದು, ಹನಾಫಿ ಪಂಥದ ಕಾನೂನು ಅವರಿಗೆ ಅನ್ವಯವಾಗುತ್ತದೆ. ಭಾರತದಲ್ಲಿ ಶರಿಯತ್ ಕಾಯಿದೆ ೧೯೩೭ರಲ್ಲಿ ಜಾರಿಯಾದ ನಂತರ (ಮುಸ್ಲಿಂಮರು ಅವರದೇ ಆದ ವೈಯಕ್ತಿಕ ಕಾನೂನಿನಡಿಯಲ್ಲಿ) ಉತ್ತರಾಧಿಕಾರತ್ವ ಹಾಗೂ ವಾರಸುದಾರಿಕೆ ವಿಷಯಗಳಿಗೆ ಸಂಬಂಧಿಸಿದಂತೆ ಭಾರತೀಯ ಮುಸ್ಲಿಂರಿಗೆ ಮುಸ್ಲಿಂ ವೈಯಕ್ತಿಕ ಕಾನೂನುಗಳು ನೇರವಾಗಿ ಅನ್ವಯಿಸುತ್ತವೆ. (ಭಾರತದಲ್ಲಿ ಹೆಚ್ಚಾಗಿ ಸುನ್ನಿ ಮುಸ್ಲಿಂ ಪಂಥದವರಿದ್ದು ಇವರಿಗೆ ಅನ್ವಯವಾಗುವ ಕಾನೂನು ಹೆಚ್ಚು ಚಲಾವಣೆಯಲ್ಲಿದೆ) ಮುಸ್ಲಿಂ ಕಾನೂನಿನನ್ವಯ ಮುಸ್ಲಿಂ ಎಂದರೆ "ದೇವರು ಒಬ್ಬನೇ ಹಾಗೂ ಮಹಮ್ಮದನು ಆತನ ಪ್ರವಾದಿ" ಎನ್ನುವುದರಲ್ಲಿ ನಂಬಿಕೆಯುಳ್ಳವರು. ಒಬ್ಬ ವ್ಯಕ್ತಿ ಹುಟ್ಟಿನಿಂದ ಅಥವಾ ಮತಾಂತರದಿಂದ ಮುಸ್ಲಿಮನಿರಬಹುದು. ಮೃತ ಮುಸ್ಲಿಂ ಪುರುಷನಾಗಿರಲೀ ಅಥವಾ ಮಹಿಳೆಯಾಗಿರಲಿ ಅವರವರ ಸ್ಥಿರ ಮತ್ತು ಚರ ಆಸ್ತಿಗೆ ಸಂಬಂಧಪಟ್ಟಂಥ ಉತ್ತರಾಧಿಕಾರತ್ವ, ಆಡಳಿತ ಹಾಗೂ ವಾರಸುದಾರಿಕೆಯ ಕಾನೂನು ಒಂದೇ ತೆರನಾಗಿದೆ ಅದೇ ರೀತಿಯಲ್ಲಿ ಅನ್ವಯವಾಗುವುದು ಕಂಡುಬರುತ್ತದೆ. ಇಲ್ಲಿ "ಮುಸಲ್ಮಾನರೆಂದರೆ ಯಾವೊಬ್ಬನು ಹುಟ್ಟಿನಿಂದಾಗಲೀ ಇಲ್ಲವೇ ಮತಾಂತರದಿಂದಾಗಲೀ ಮುಸಲ್ಮಾನನಾಗಿರಬಹುದು, ಯಾವನು ಒಬ್ಬನೇ ದೇವನೆಂದು ಮಹಮ್ಮದ ಪೈಗಂಬರನೇ ಕೊನೆಯ ಪೈಗಂಬರನೆಂದು ನಂಬುತ್ತಾನೋ ಅಂತಹವನು ಯಾವುದೇ ಪಂಗಡದವನಿರಲಿ(ಶಿಯಾ, ಸುನ್ನಿ) ಅಂತಹವನನ್ನು ಮುಸಲ್ಮಾನನು ಎಂದು ಗ್ರಹಿಸಲಾಗುತ್ತದೆ".

ಭಾರತದಲ್ಲಿ ಮುಸ್ಲಿಂಮರಿಗೆ ತಮ್ಮದೇ ಆದ ವೈಯಕ್ತಿಕ ಕಾನೂನುಗಳು ಅನ್ವಯವಾಗುತ್ತವೆ. ಮುಖ್ಯವಾಗಿ ಮುಸ್ಲಿಂ ವೈಯಕ್ತಿಕ ಕಾನೂನು (ಶರಿಯತ್ ಅಧಿನಿಯಮ) ೧೯೩೭, ಮುಸ್ಲಿಂ ವಿವಾಹ ವಿಚ್ಛೇದನ ಅಧಿನಿಯಮ ೧೯೩೯, ಮುಸ್ಲಿಂ ಮಹಿಳೆಯರ (ವಿಚ್ಛೇದನಾ ನಂತರದ ಹಕ್ಕುಗಳ ರಕ್ಷಣೆ) ಅಧಿನಿಯಮ ೧೯೮೬, ಇತರೆ ಆಚರಣೆಗಳು ಮತ್ತು ರೂಢಿಗಳು ಮುಸ್ಲಿಂಮರಿಗೆ ಸಂಬಂಧಿಸಿದ ವೈಯಕ್ತಿಕ ಕಾನೂನುಗಳಾಗಿವೆ.

ಶಿಯಾ ಮತ್ತು ಹನಾಫಿ ಪಂಥಗಳ ವಾರಸುದಾರಿಕೆಯ ಕ್ರಮದಲ್ಲಿ ಕೆಲವು ಮೂಲಭೂತ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. "ಹನಾಫಿ ಪಂಥದಲ್ಲಿ ಮೂರು ಬಗೆಯ ವಾರಸುದಾರರನ್ನು ಗುರುತಿಸಲಾಗುತ್ತದೆ. ಸಗೋತ್ರದ ವಾರಸುದಾರರು, ಕುರಾನ್ ಪ್ರಕಾರ ವಾರಸುದಾರರು ಮತ್ತು ದೂರದ ಹಾಗೂ ವಿವಾಹದಿಂದ ಬಂಧುವಾದ ವ್ಯಕ್ತಿ (ಪತಿ ಅಥವಾ ಪತ್ನಿ). ಇಲ್ಲಿ ಪುರುಷ ಸಂತಾನದ ಮೂಲಕ ವಾರಸುದಾರಿಕೆಯು ಮುಂದುವರೆಯುತ್ತದೆ. ಸಗೋತ್ರಜರು ಎಲ್ಲರೂ ಪುರುಷರು, ಕುರಾನ್ ಪ್ರಕಾರ ವಾರಸುದಾರರು. ಬಹುಪಾಲು ಎಲ್ಲರೂ ಸ್ತ್ರೀಯರು, ದೂರದ ಬಂಧುಗಳು, ರಕ್ತ ಸಂಬಂಧಿಗಳು ಸಗೋತ್ರಜರೂ ಅಲ್ಲ ಕುರಾನಿನ ಪ್ರಕಾರ ವಾರಸು

ದಾರರೂ ಅಲ್ಲ. ಆದರೆ ಶಿಯಾ ಪಂಥದಲ್ಲಿ ಲಿಂಗಾಧಾರದ ಮೇಲೆ ವಾರಸುದಾರಿಕೆ ಪಡೆಯುವ ಪಾಲು ವ್ಯತ್ಯಾಸಗೊಳ್ಳುವುದಿಲ್ಲ. ಮೃತ ಪುರುಷನ ಯಾರೇ ಬಂಧುಗಳು ಆತ/ಅವಳು ಅವನಿಗೆ ಸ್ತ್ರೀಯ ಮೂಲಕ ಬಂಧುವಾಗಿದ್ದಾನೆ/ದ್ದಾಳೆ ಎಂಬ ಕಾರಣಕ್ಕಾಗಿ ವಾರಸುದಾರಿಕೆಯನ್ನು ಕಳೆದು ಕೊಳ್ಳುವುದಿಲ್ಲ. ಮೃತನೊಂದಿಗೆ ಒಂದೇ ರಕ್ತ ಸಂಬಂಧವನ್ನು ಹೊಂದಿರುವ ಸ್ತ್ರೀ ಪುರುಷರಿಬ್ಬರೂ ವಾರಸುದಾರಿಕೆಗೆ ಅರ್ಹರಾಗಿರುತ್ತಾರೆ. ಆದರೂ ಸ್ತ್ರೀಯರು ಪುರುಷರು ಪಡೆಯುವುದರ ಅರ್ದದಷ್ಟನ್ನೇ ಪಡೆಯುವುದು."[೧೦] ಮುಖ್ಯವಾಗಿ ಮುಸ್ಲಿಂ ಸಮುದಾಯವು ಹೊಂದಿದ್ದ ಅತ್ಯಂತ ಪ್ರಮುಖ ಆಸ್ತಿಯಾದ ಕೃಷಿ ಭೂಮಿಯನ್ನು ಈ ಅಧಿನಿಯಮದ ವ್ಯಾಪ್ತಿಯಿಂದ ಹೊರಗಿಡಲಾಗಿತ್ತು. ಆದ್ದರಿಂದ ಮಹಿಳೆಯರು ಇದರಿಂದ ವಂಚಿತರಾದರು.

ಉತ್ತರಾಧಿಕಾರದ ನಿಯಮಗಳು

೧. ಮೃತಳ ಆಸ್ತಿಯಲ್ಲಿ

- ಮೊದಲನೆಯದಾಗಿ ಅವಳ(ನ) ಅಂತ್ಯಕ್ರಿಯೆ ಹಾಗೂ ಮರಣಶಯ್ಯಾ ಕ್ರಿಯೆಗಳಿಗೆ ತಗಲುವ ಎಲ್ಲಾ ಖರ್ಚುಗಳನ್ನು ತೆಗೆಯತಕ್ಕದ್ದು.
- ಎರಡನೆಯದಾಗಿ ಮೃತ್ಯುಪತ್ರ ಬರೆದಿಟ್ಟಿದ್ದರೆ ಅದರ ಅಧಿಕೃತ ಪ್ರತಿ ಪಡೆಯಲು ಹಾಗೂ ವಾರಸಾ ಪ್ರಮಾಣ ಪತ್ರ ಪಡೆಯಲು ತಗಲುವ ಖರ್ಚನ್ನು ತೆಗೆದಿರಿಸುವುದು.
- ಮೃತ ವ್ಯಕ್ತಿಯ ಸಾವು ಸಂಭವಿಸುವ ಮುನ್ನ ಮೂರು ತಿಂಗಳ ಅವಧಿಯಲ್ಲಿ ಅವಳಿಗಾಗಿ/ಅವನಿಗಾಗಿ ಸೇವೆ ಸಲ್ಲಿಸಿದ, ದುಡಿದ, ಸೇವಕರ, ನೌಕರರ ವೇತನವನ್ನು ತೆಗೆಯತಕ್ಕದ್ದು.
- ಮೃತ ವ್ಯಕ್ತಿಯು ಸಾಲ ಮಾಡಿದ್ದರೆ ಅವುಗಳನ್ನು ಪ್ರಾಶಸ್ತ್ಯಕನುಗುಣವಾಗಿ ತೀರಿಸತಕ್ಕದ್ದು.

ಮೇಲಿನ ಎಲ್ಲಾ ಖರ್ಚುಗಳನ್ನು ತೆಗೆದು ಉಳಿದಂತಹದ್ದರಲ್ಲಿ ಮೃತಳು(ನು) ಉಯಿಲು ಬರೆದಿಟ್ಟಿದ್ದರೆ ೧:೩ಕ್ಕೆ ಮಿಕ್ಕದಂತೆ ಬಳುವಳಿ ಸಲುವಾಗಿ ಹಂಚಿಕೊಟ್ಟು ಆ ನಂತರ ಉಳಿಯುವ ಆಸ್ತಿಯಲ್ಲಿ ವಾರಸುದಾರರಿಗೆ ಅವರವರಿಗೆ ಕಾನೂನು ಪ್ರಕಾರ ಬರತಕ್ಕ ಹಿಸ್ಸಾ ಪ್ರಕಾರ ಹಂಚಬೇಕಾಗುತ್ತದೆ. ಮೃತಳ(ನ) ಆಸ್ತಿಯ ಮೂರನೆಯ ಒಂದು ಭಾಗಕ್ಕಿಂತ ಹೆಚ್ಚಿನ ಆಸ್ತಿಗೆ ಸಂಬಂಧಿಸಿದಂತೆ ಉಯಿಲು ಮಾಡಿದ್ದಲ್ಲಿ ೧:೩ಕ್ಕಿಂತ ಹೆಚ್ಚಿನ ಆಸ್ತಿಗೆ ಸಂಬಂಧಿಸಿದಂತೆ ಮಾತ್ರ ಉಯಿಲು ಊರ್ಜಿತವಾಗುವುದಿಲ್ಲ. ಉಯಿಲಿನ ಉಳಿದ ಭಾಗ ಊರ್ಜಿತವಾಗುತ್ತದೆ.

ಮುಸ್ಲಿಂ ಮಹಿಳೆ ಅಥವಾ ಪುರುಷ ನಿಧನವಾಗುತ್ತಲೇ ಅವರ ಆಸ್ತಿಯ ಮೇಲಿನ ಹಕ್ಕು ಷರತ್ತುಗಳಿಗೊಳಪಟ್ಟು ವಾರಸುದಾರರಿಗೆ ಯಾವ ವಿಳಂಬವೂ ಇಲ್ಲದೆ ಕೂಡಲೆ ಪ್ರಾಪ್ತಿ ಯಾಗುತ್ತದೆ. ವಾರಸಾ ಹಕ್ಕಿನ ವರ್ಗಾವಣೆ ಯಾವ ಕಾರಣಕ್ಕೂ ಮುಂದೂಡಲ್ಪಡುವುದಿಲ್ಲ. ಆಸ್ತಿಯ ಹಂಚಿಕೆ ಆಗುವವರೆಗೆ ಎಲ್ಲಾ ವಾರಸುದಾರರೂ ಒಬ್ಬ ಗೇಣಿದಾರನಾಚೆಯಿಂದ ಆಸ್ತಿ ಯನ್ನು ಪಡೆಯುತ್ತಾರೆ. ಹಾಗೂ ಪ್ರತಿಯೊಬ್ಬ ವಾರಸುದಾರನಿಗೆ ಎಷ್ಟು ಪಾಲು ಸಿಗುವುದು ಎನ್ನುವುದು ನಿಶ್ಚಿತವಾಗಿರುತ್ತದೆ. ಆಸ್ತಿಯನ್ನು ಹಂಚುವ ಪೂರ್ವದಲ್ಲಿಯೂ ಯಾವುದೇ ವಾರಸು ದಾರನು ಆಸ್ತಿಯಲ್ಲಿನ ತನ್ನ ಪಾಲನ್ನು ಬೇರೆಯವರಿಗೆ ಹಸ್ತಾಂತರ ಮಾಡಬಹುದು.

ಮುಸ್ಲಿಂ ವಾರಸಾ ಕಾನೂನಿನಲ್ಲಿ ಮೃತಳ(ನ) ಸಾಲದ ಹೊಣೆಯನ್ನು ಎಲ್ಲಾ ವಾರಸುದಾರರು ತಮ್ಮ ತಮ್ಮ ಪಾಲಿಗೆ ಬರುವ ಆಸ್ತಿಯ ಪ್ರಮಾಣದ ಮೇಲೆ ಹೊರ ಬೇಕಾಗುತ್ತದೆ. ಸಾಲದ ಹೊರೆಯು ವಾರಸುದಾರನು ಪಡೆಯುವ ಆಸ್ತಿಯ ಮೌಲ್ಯಕ್ಕಿಂತಲೂ ಹೆಚ್ಚಿನದಾಗಿದ್ದಲ್ಲಿ ಆ ಹೆಚ್ಚಿನ ಅಂಶವನ್ನು ತೀರಿಸಲು ವಾರಸುದಾರರು ಹೊಣೆಗಾರರಾಗುವುದಿಲ್ಲ. ಈ ಕಾನೂನಿನಲ್ಲಿ ಮೃತರ ಆಸ್ತಿ ಸ್ವಸಂಪಾದಿತ ಇರಬಹುದು, ಪಿತ್ರಾರ್ಜಿತ ಆಗಿರಬಹುದು, ಉಯಿಲು ಅಥವಾ ಭಕ್ಷೀಸು ಅಥವಾ ದಾನದ ಮುಖಾಂತರ ಇತರ ಯಾವುದೇ ಮೂಲದಿಂದ ಪಡೆದಿದ್ದರೂ ಅದೆಲ್ಲವೂ ಸ್ವಯಾರ್ಜಿತ ಆಸ್ತಿಯೆಂದೇ ಪರಿಗಣಿಸಲ್ಪಡುತ್ತದೆ. ಜೊತೆಗೆ ಮುಸ್ಲಿಂ ಕಾನೂನು ಜನ್ಮಸಿದ್ಧ ಹಕ್ಕಿಗೆ ಮನ್ನಣೆಯನ್ನು ಕೊಡುವುದಿಲ್ಲ. ಮುಸ್ಲಿಂ ಮೃತ ವ್ಯಕ್ತಿಯ ಆಸ್ತಿಗೆ ವಾರಸುದಾರರು ಆರ್‍ಯಾರು ಎಂಬುದನ್ನು ಮೃತರ ನಿಧನದ ಕ್ಷಣದಲ್ಲಿ/ ಸಂದರ್ಭದಲ್ಲಿ ಜೀವಂತವಿರುವ ಸಂಬಂಧಿಗಳ ಮೇಲೆ ನಿರ್ಧಾರವಾಗಿರುತ್ತದೆ. ಮತ್ತು ಅದನ್ನು ಆಧರಿಸಿ ಪಾಲು ವಿಭಾಗವನ್ನು ನಿರ್ಧರಿಸಲಾಗುತ್ತದೆ. ಮತ್ತೊಂದು ಪ್ರಮುಖ ಅಂಶವೆಂದರೆ ಮುಸ್ಲಿಂ ಕಾಯಿದೆಗೆ ಪ್ರತಿನಿಧಿ ಸಿದ್ಧಾಂತವು ಅಪರಿಚಿತವಾಗಿದೆ. ಮೃತರ ಜೀವಿತದಲ್ಲಿ ಅವಳ(ನ) ಒಬ್ಬ ಮಗನು ತೀರಿ ಹೋಗಿದ್ದರೆ ಅಂತಹ ಸಂದರ್ಭದಲ್ಲಿ ಮುಂಚಿತವಾಗಿಯೇ ತೀರಿಕೊಂಡ ಮಗನ ಹೆಂಡತಿ, ಮಕ್ಕಳು ಮೃತ ಮುಸ್ಲಿಂನ(ಳ) ಆಸ್ತಿಯಲ್ಲಿ ವಾರಸುದಾರಿಕೆಯಿಂದ ಯಾವುದೇ ಪಾಲು ಸಿಗುವುದಿಲ್ಲ. ಹಿಂದೂಗಳಲ್ಲಿರುವಂತೆ ಮುಸ್ಲಿಂರಲ್ಲಿ ಅವಿಭಕ್ತ ಕುಟುಂಬ ಇರುವುದಿಲ್ಲ. ಅಣ್ಣ ತಮ್ಮಂದಿರು, ಅಕ್ಕತಂಗಿಯರು, ತಂದೆ–ತಾಯಿಗಳು ಎಲ್ಲರೂ ಕೂಡಿ ಒಂದೇ ಮನೆಯಲ್ಲಿ (ಕುಟುಂಬ) ವಾಸವಾಗಿದ್ದರೂ ಅಲ್ಲಿ ಅವಿಭಕ್ತ ಕುಟುಂಬದ ಸಿದ್ಧಾಂತ ಅನ್ವಯವಾಗದೇ ಪ್ರತಿಯೊಬ್ಬ ವ್ಯಕ್ತಿಗೆ ಮುಸ್ಲಿಂ ಕಾನೂನಿನಡಿ ಲಭ್ಯವಿರುವ ಹಕ್ಕುಗಳು ಮಾತ್ರ ಪ್ರಪ್ತವಾಗುತ್ತವೆ.

ಮುಸ್ಲಿಂ ಕಾಯಿದೆಯಲ್ಲಿ ಎಲ್ಲಿಯವರೆಗೆ ವ್ಯಕ್ತಿ ಜೀವಂತವಿರುತ್ತಾರೋ ಅಲ್ಲಿಯವರೆಗೆ ಅವರ ಆಸ್ತಿಯಲ್ಲಿ ಹೆಂಡತಿ ಮಕ್ಕಳಿಗೆ ಅಥವಾ ಬೇರೆ ಯಾರಿಗೂ ಯಾವ ಹಕ್ಕೂ ಇರುವುದಿಲ್ಲ. ಆಸ್ತಿಯನ್ನು ಹೊಂದಿರುವ ವ್ಯಕ್ತಿ ಮರಣಿಸಿದ ಕ್ಷಣದಿಂದ ಮಾತ್ರ ವಾರಸುದಾರರಿಗೆ ಹಕ್ಕು ದೊರೆಯುತ್ತದೆ. ಆದ್ದರಿಂದ ಯಾವ ಆಸ್ತಿಗೂ ಉತ್ತರಾಧಿಕಾರಿಯಾಗುವ ಸಾಧ್ಯತೆಯಿದ್ದ ಮಾತ್ರಕ್ಕೆ

ಯಾವುದೇ ಮಹತ್ವ ಅಥವಾ ಮಾನ್ಯತೆಯಿರುವುದಿಲ್ಲ. ಇಂತಹ ಉತ್ತರಾಧಿಕಾರದ ಸಾಧ್ಯತೆಯ ಹಕ್ಕನ್ನು ಹಸ್ತಾಂತರಗೊಳಿಸಲು ಬರುವುದಿಲ್ಲ.

ವಾರಸುದಾರರಿಗೆ ದೈಹಿಕ ಅಥವಾ ಮಾನಸಿಕ ನ್ಯೂನ್ಯತೆಗಳಿಂದಾಗಲೀ ಅಥವಾ ಅವರು ಶೀಲಗೆಟ್ಟರಿಂದಾಗಲೀ ಅವರ ವಾರಸಾ ಹಕ್ಕಿಗೆ ಯಾವುದೇ ತೊಡಕು ಉಂಟಾಗುವುದಿಲ್ಲ.

**ವಾರಸುದಾರಿಕೆಯ ಕ್ರಮ**

ಮುಸ್ಲಿಂ ಕಾಯಿದೆಯನ್ವಯ (ಅ) ಪಾಲುದಾರರು (ಬ) ಮಿಕ್ಕುಳಿದ ಸಂಬಂಧಿಗಳು (ಕ) ದೂರದ ಸಂಬಂಧಿಗಳು ಎಂದು ಮೂರು ವರ್ಗದ ವಾರಸುದಾರರು ಇರುತ್ತಾರೆ.

**ಅ) ಪಾಲುದಾರರು**

ಮೃತಳ(ನ) ತಂದೆ, ಅಜ್ಜ ( ತಂದೆಯ ತಂದೆ), ಗಂಡ, ಹೆಂಡತಿ, ತಾಯಿ, ಅಜ್ಜಿ(ತಂದೆಯ ತಾಯಿ), ಮಗಳು, ಮಗನ ಮಗಳು, ಮಗನ ಮಗನ ಮಗಳು, ಒಂದೇ ತಾಯಿಯಿಂದ ಅಂದರೆ ಬೇರೆ ಬೇರೆ ತಂದೆಯಿಂದ ಜನಿಸಿದ ಸಹೋದರರು ಅಥವಾ ಸಹೋದರಿಯರು ಒಡಹುಟ್ಟಿದ ಸಹೋದರಿಯರು, ಸಪಿಂಡ ಸಹೋದರಿಯರು ಪಾಲುದಾರರಿದ್ದು ಅವರು ವಿವಿಧ ಸಂದರ್ಭಗಳಿಗೆ ಅನುಸಾರವಾಗಿ ನಿರ್ಧಿಷ್ಟ ಪಾಲನ್ನು ಪಡೆಯುತ್ತಾರೆ.

**ಬ) ಮಿಕ್ಕುಳಿದ ಸಂಬಂಧಿಗಳು**

ಪಾಲುದಾರ ವರ್ಗದ ವಾರಸುದಾರರು ಇರದಿರುವ ಸಂದರ್ಭದಲ್ಲಿ ಅಥವಾ ಅವರಿಗೆ ಪಾಲು ವಿಭಾಗದ ಮೂಲಕ ಆಸ್ತಿಯು ದೊರೆತು ಶೇಷ ಆಸ್ತಿಯು ಉಳಿದ ಪ್ರಸಂಗದಲ್ಲಿ ಅದನ್ನು ಮಿಕ್ಕುಳಿದ ಸಂಬಂಧಿಗಳಿಗೆ ಹಂಚಿಕೊಡಬೇಕಾಗುತ್ತದೆ. ಈ ವರ್ಗದ ವಾರಸುದಾರರಲ್ಲಿ ಸೇರುವ ವರೆಂದರೆ ಮೃತನ ಮಗ, ಮಗಳು, ಮಗನ ಮಗಳು, ತಂದೆ, ತಂದೆಯ ತಂದೆ, ಸಹೋದರರು, ಸಹೋದರಿಯರು, ಸಹೋದರನ ಮಗ, ಸಪಿಂಡ ಸಹೋದರನ ಮಗ, ಚಿಕ್ಕಪ್ಪಂದಿರು ಇತ್ಯಾದಿ.

ಎಲ್ಲಾ ಮಿಕ್ಕುಳಿದ ಸಂಬಂಧಿಗಳು ಮೃತನಿಗೆ ಪುರುಷನ ಮುಖಾಂತರ ಸಂಬಂಧ ಹೊಂದಿರುತ್ತಾರೆ. ಇದರಲ್ಲಿ ಗಮನೀಯ ಅಂಶವೆಂದರೆ ಕೆಳಗೆ ನಮೂದಿಸಿರುವ ಐದು ಪ್ರಕಾರದ ವಾರಸುದಾರರು ಎಂತಹ ಪರಿಸ್ಥಿತಿಯಲ್ಲಿಯೂ ಪಾಲುದಾರಿಕೆಯಿಂದಾಗಲೀ ಅಥವಾ ಮಿಕ್ಕುಳಿದ ಸಂಬಂಧಿಗಳಾಚೆಯಿಂದಾಗಲೀ ನಿಶ್ಚಿತವಾದ ಪಾಲನ್ನು ಪಡೆಯುತ್ತಾರೆ. ಅವರುಗಳು

ಮೃತಳ(ನ)

೧. ಮಗ ಅಥವಾ ಮಗಳು

೨. ತಂದೆ

೩. ತಾಯಿ

೪. ಗಂಡ

೫. ಹೆಂಡತಿ

ಇಲ್ಲಿ ಗಮನಿಸಬಹುದಾದ ಮತ್ತೊಂದು ವಿಷಯವೇನೆಂದರೆ ಮಹಿಳೆಗೆ ಮುಸ್ಲಿಂ ಕಾನೂನಿ ನಡಿಯಲ್ಲಿ ವಾರಸುದಾರತೆಯಿಂದ ಆಸ್ತಿಹಕ್ಕನ್ನು ಪಡೆಯುವಲ್ಲಿ ವಿಶೇಷ ಸ್ಥಾನವನ್ನು ಕಲ್ಪಿಸಿ ಕೊಡಲಾಗಿದೆ. ಅಂದರೆ ಮಹಿಳೆಗೆ ತಂದೆಯ ಆಸ್ತಿಯಲ್ಲಿ, ತಾಯಿಯ ಆಸ್ತಿಯಲ್ಲಿ, ಸಹೋದರನ ಆಸ್ತಿಯಲ್ಲಿ, ಮಕ್ಕಳ ಆಸ್ತಿಯಲ್ಲಿ ಹಾಗೂ ಗಂಡನ ಆಸ್ತಿಯಲ್ಲಿ ಕೂಡ ವಾರಸಾ ಹಕ್ಕನ್ನು ಕೊಡಲಾಗಿದೆ.

**ಕ) ದೂರದ ಸಂಬಂಧಿಗಳು**

ಪಾಲುದಾರರು ಹಾಗೂ ಮಿಕ್ಕುಳಿದ ಸಂಬಂಧಿ ವರ್ಗಗಳಲ್ಲಿ ಬರುವ ವಾರಸುದಾರರು ಯಾರೂ ಇರದಿದ್ದಲ್ಲಿ ಮೃತನ ಆಸ್ತಿಯು ಮೂರನೆಯ ವರ್ಗದ ವಾರಸುದಾರರ ದೂರದ ಸಂಬಂಧಿಗಳಿಗೆ ದೊರೆಯುತ್ತದೆ. ಇವರು ಮೃತ ವ್ಯಕ್ತಿಯ ದೂರದ ರಕ್ತ ಸಂಬಂಧಿಗಳಾಗುತ್ತಿದ್ದು ಪಾಲುದಾರರ ಅಥವಾ ಮಿಕ್ಕುಳಿದ ಸಂಬಂಧಿಗಳ ಪಟ್ಟಿಯಲ್ಲಿ ಇರಲಾರರು. ಇವರಲ್ಲದೆ ಕೆಲವರು ಮೃತ ವ್ಯಕ್ತಿಯೊಡನೆ ನೇರ ರಕ್ತ ಸಂಬಂಧವಿಲ್ಲದಿದ್ದರೂ ಮೃತನು ಇನ್ನೊಬ್ಬರ ಮುಖಾಂತರ ಇವರನ್ನು ತನ್ನ ಸಂಬಂಧಿಗಳೆಂದು ಒಪ್ಪಿಕೊಂಡ ಕಾರಣ ಅಂಥವರು ಕೂಡ ಕೆಲವೊಮ್ಮೆ ವಾರಸು ದಾರರಾಗುತ್ತಾರೆ. ಒಟ್ಟಾರೆಯಾಗಿ ಈ ಕಾಯಿದೆ ಮುಸ್ಲಿಂ ಮಹಿಳೆಯರಿಗೆ ಅಷ್ಟೇನೂ ಸಮಾನ ವಾದ ಹಕ್ಕುಗಳನ್ನು ನೀಡಲಿಲ್ಲ. ಹಾಗೆಯೇ ಆಸ್ತಿ ಹಕ್ಕಿನ ವಿಚಾರದಲ್ಲಿಯಂತೂ ಪುರುಷರಿಗೆ ಸಮನಾದ ಹಕ್ಕು ನೀಡಲಿಲ್ಲ ಎಂಬುದು ಗಮನಾರ್ಹ.

**ಕ್ರಿಶ್ಚಿಯನ್ ವಾರಸಾ ಮತ್ತು ಉತ್ತರಾಧಿಕಾರ**

ವಾರಸಾ ಹಾಗೂ ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಹಿಂದೂ, ಜೈನ, ಬೌದ್ಧ, ಸಿಖ್ ಧರ್ಮೀಯರಿಗೆ ಹಿಂದೂ ವಾರಸಾ ಅಧಿನಿಯಮ ಅನ್ವಯವಾದರೆ, ಕ್ರಿಶ್ಚಿಯನ್ನರಿಗೆ ಭಾರತೀಯ ವಾರಸಾ ಅಧಿನಿಯಮ ೧೯೨೫( Indian Succession Act 1925) ಅನ್ವಯವಾಗುತ್ತದೆ.

ಕ್ರಿಶ್ಚಿಯನ್ ಎಂದರೆ ಕ್ರೈಸ್ತ ಧರ್ಮವನ್ನು ಪಾಲಿಸುವ ವ್ಯಕ್ತಿ ಅಥವಾ ಅದೇ ಧರ್ಮವನ್ನು ಪಾಲಿಸುವ ಆತನ ವಂಶಜರು. ಹಿಂದೂಗಳಲ್ಲಿರುವಂತೆ ಕ್ರಿಶ್ಚಿಯನ್ನರಲ್ಲಿ ಅವಿಭಕ್ತ ಕುಟುಂಬ, ಪಿತ್ರಾರ್ಜಿತ ಆಸ್ತಿ ಇವುಗಳ ಪರಿಕಲ್ಪನೆ ಇರುವುದಿಲ್ಲ. ಒಬ್ಬ ಕ್ರಿಶ್ಚಿಯನ್ನನಿಗೆ ಆಸ್ತಿ ಯಾವ ಮೂಲದಿಂದ  ಅಂದರೆ ತನ್ನ ತಂದೆಯಿಂದ, ತಾಯಿಯಿಂದ, ಬೇರೆ ರಕ್ತ ಸಂಬಂಧಿ ಗಳಿಂದ ಅಥವಾ ಉಯಿಲು ಮೂಲಕ ಅಥವಾ ದಾನವಾಗಿ, ಸಂಬಂಧಿಕರಲ್ಲದವರಿಂದ, ಒಟ್ಟಾರೆ ಯಾಗಿ ಯಾವುದೇ ರೂಪದಲ್ಲಾದರೂ ಬಂದಿರಲಿ ಅದೆಲ್ಲವೂ ಆತನ ಸ್ವಯಾರ್ಜಿತ ಆಸ್ತಿಯೇ ಆಗಿರುತ್ತದೆ. ಹೀಗಾಗಿ ಒಬ್ಬ ಕ್ರಿಶ್ಚಿಯನ್ ತನ್ನ ಜೀವಿತಾವಧಿಯಲ್ಲಿ ತನ್ನ ಎಲ್ಲಾ ಆಸ್ತಿಯ ಮೇಲೆ

ಸಂಪೂರ್ಣವಾದ ಮಾಲಿಕತ್ವವನ್ನು ಹೊಂದಿ ಅದನ್ನು ತನ್ನಿಚ್ಛೆಯಂತೆ ವಿಲೇವಾರಿ ಮಾಡುವ ಹಕ್ಕನ್ನು ಹೊಂದಿರುತ್ತಾನೆ. ಹೀಗಿರುವುದರಿಂದ ಆತನ ಜೀವಿತಾವಧಿಯಲ್ಲಿ ಆತನ ಆಸ್ತಿಯ ಮೇಲೆ ಆತನ ಹೆಂಡತಿ, ಮಕ್ಕಳಿಗೆ ಅಥವಾ ಇತರೆ ಸಂಬಂಧಿಗಳಿಗೆ ಯಾವುದೇ ವಿಧದ ಹಕ್ಕು ಇರುವುದಿಲ್ಲ. ಆತನ ವಾರಸುದಾರರು ಆತನ ಆಸ್ತಿಯನ್ನು ಆತನ ಮರಣಾ ನಂತರವೇ ಪಡೆಯುತ್ತಾರೆ. ಒಂದು ವೇಳೆ ಮೃತನು ಉಯಿಲು ಬರೆದಿಟ್ಟು ಮೃತನಾಗಿದ್ದರೆ ಆತನ ಆಸ್ತಿಯ ವಿಲೇವಾರಿಯು ಮೃತ್ಯುಪತ್ರದಲ್ಲಿ ವಿವರಿಸಿರುವ ಪ್ರಕಾರವೇ ಆಗುತ್ತದೆ. ಬರೆದಿಟ್ಟ ಉಯಿಲು ಸಮರ್ಥವಾಗಿಲ್ಲದಿದ್ದರೆ ಆತ/ಆಕೆಯ ಆಸ್ತಿಯ ವಿಲೇವಾರಿಯು ಈ ಅಧಿನಿಯಮದ ವಿಧಿಗಳಿಗನುಸಾರವಾಗಿ ಜರುಗುತ್ತದೆ. ವಿಧಿಗಳನ್ವಯ ಮೃತ ಕ್ರಿಶ್ಚಿಯನ್ ಪುರುಷನ ಆಸ್ತಿಯು ಆತನ ಪತ್ನಿ ಮತ್ತು ರಕ್ತ ಸಂಬಂಧಿಗಳಿಗೆ ಹಾಗೂ ಮೃತ ಕ್ರಿಶ್ಚಿಯನ್ ಮಹಿಳೆಯ ಆಸ್ತಿಯು ಆಕೆಯ ಪತಿ ಮತ್ತು ರಕ್ತ ಸಂಬಂಧಿಗಳಿಗೆ ಪ್ರಾಪ್ತವಾಗುತ್ತದೆ.

ಭಾರತೀಯ ಉತ್ತರಾಧಿಕಾರ ಅಧಿನಿಯಮ ಹೆಚ್ಚು ಕ್ರಿಶ್ಚಿಯನ್ನರಿಗೆ ಅನ್ವಯವಾದರೂ ಅವರ ವಾಸಸ್ಥಳವನ್ನು ಆಧರಿಸಿ ಅವರ ಚರಸ್ತಿಗೆ ಅನ್ವಯಿಸುವ ಕಾನೂನುಗಳು ಮತ್ತು ಸ್ಥಿರಾಸ್ತಿಗಿರುವ ಸ್ಥಳವನ್ನಾಧರಿಸಿ ಸ್ಥಿರಾಸ್ತಿಗೆ ಅನ್ವಯಿಸುವ ಕಾನೂನುಗಳು ಸ್ವಲ್ಪ ವ್ಯತ್ಯಾಸಗೊಳ್ಳುತ್ತವೆ. ಉದಾಹರಣೆಗೆ ಗೋವಾ ಕ್ರಿಶ್ಚಿಯನ್ನರಿಗೆ ಪೋರ್ಚಗೀಸ್ ಸಿವಿಲ್ ಕೋಡ್ ಅನ್ವಯಿಸುತ್ತದೆ. ಕೋಚಿನ್ ಮತ್ತು ತಿರುವಾಂಕೂರಿನಲ್ಲಿರುವ ಕ್ರಿಶ್ಚಿಯನ್ನರಿಗೆ ತೀರಾ ಇತ್ತೀಚಿನವರೆಗೆ ಕೋಚಿನ್ ಕ್ರಿಶ್ಚಿಯನ್ ಉತ್ತರಾಧಿಕಾರ ಅಧಿನಿಯಮ ೧೯೨೧ ಮತ್ತು ತಿರುವಾಂಕೂರು ಕ್ರಿಶ್ಚಿಯನ್ ಉತ್ತರಾಧಿಕಾರ ಅಧಿನಿಯಮ ೧೯೧೬ ಕ್ರಮವಾಗಿ ಅನ್ವಯಿಸುತ್ತಿದ್ದವು. ಪಂಜಾಬ್, ಹರಿಯಾಣ, ಹಿಮಾಚಲ ಪ್ರದೇಶದಲ್ಲಿರುವವರಿಗೆ ಪಂಜಾಬಿನ ಸಾಂಪ್ರದಾಯಿಕ ಕಾನೂನುಗಳು ಮತ್ತು ಬುಡಕಟ್ಟು ಕ್ರಿಶ್ಚಯನ್ ಸಮುದಾಯಕ್ಕೆ ಅವರ ಸಾಂಪ್ರದಾಯಿಕ ಕಾನೂನುಗಳು ಅನ್ವಯಿಸುತ್ತವೆ. ಇನ್ನುಳಿದ ಕ್ರಿಶ್ಚಿಯನ್ನರಿಗೆ ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫ ಅನ್ವಯಿಸುತ್ತದೆ".[೧೧] ಇನ್ನು ವಾರಸುದಾರಿಕೆಯ ಕ್ರಮವನ್ನು ನೋಡುವುದಾದರೆ

**ಕ್ರಿಶ್ಚಿಯನ್ ಪುರುಷರ ಆಸ್ತಿಯ ವಾರಸುದಾರಿಕೆಯ ಕ್ರಮ**

ಕಲಂ ೩೩(ಎ) ಪ್ರಕಾರ ಮೃತನ ವಿಧವೆ ಪತ್ನಿಯನ್ನು ಹಾಗೂ ನೇರ ವಂಶಜರನ್ನು ಹೊಂದಿದ್ದರೆ ಆತನ ಒಟ್ಟು ಆಸ್ತಿಯ ಮೂರನೆಯ ಒಂದು ಬಾಗವನ್ನು ಆತನ ವಿಧವೆ ಪತ್ನಿ ಹಾಗೂ ಮೂರನೆಯ ಎರಡು ಬಾಗವನ್ನು ಎಲ್ಲಾ ನೇರ ವಂಶಜರು ಒಟ್ಟಾಗಿ ಪಡೆದುಕೊಳ್ಳುತ್ತಾರೆ

ಕಲಂ ೩೩ (ಬಿ) ಪ್ರಕಾರ ಮೃತನು ನೇರ ವಂಶಜರನ್ನು ಹೊಂದಿರದೆ ವಿಧವೆ ಪತ್ನಿಯನ್ನು ಮತ್ತು ರಕ್ತ ಸಂಬಂಧಿಗಳನ್ನು ಹೊಂದಿದ್ದಲ್ಲಿ ಆತನ ಒಟ್ಟು ಆಸ್ತಿಯಲ್ಲಿ ಅರ್ಧದಷ್ಟನ್ನು ಆತನ ವಿಧವೆ ಪತ್ನಿ ಮತ್ತು ಉಳಿದರ್ಧವನ್ನು ರಕ್ತ ಸಂಬಂಧಿಗಳು ಒಟ್ಟಾಗಿ ಪಡೆಯುತ್ತಾರೆ.

ಕಲಂ ೩೩(ಸಿ) ಪ್ರಕಾರ ಮೃತನು ಯಾವುದೇ ನೇರ ವಂಶಜರನ್ನು ಮತ್ತು ರಕ್ತ ಸಂಬಂಧಿಗಳನ್ನು ಹೊಂದಿರದೇ ಕೇವಲ ತನ್ನ ವಿಧವೆ ಪತ್ನಿಯನ್ನು ಹೊಂದಿದ್ದಲ್ಲಿ ಆತನ ಸಂಪೂರ್ಣ ಆಸ್ತಿಯನ್ನು ಆಕೆಯೇ ಪಡೆಯುತ್ತಾಳೆ.

ಕಲಂ ೩೪ರ ಪ್ರಕಾರ ಮೃತನ ವಿಧವೆ ಹೆಂಡತಿ ಇರದೆ ಆತನ ನೇರ ವಂಶಜರಿದ್ದರೆ ಅವರಿಗೆ ಮತ್ತು ನೇರ ವಂಶಜರಿಲ್ಲದಿದ್ದರೆ ಆತನ ಆಸ್ತಿಯು ಇತರ ರಕ್ತ ಸಂಬಂಧಿಗಳಿಗೆ ಪ್ರಾಪ್ತವಾಗುತ್ತದೆ. ಹಾಗೆಯೇ ಇದೇ ಕಲಂನಂತೆ ಮೃತನ ವಿಧವೆ ಹೆಂಡತಿ, ನೇರ ವಂಶಜರು ಹಾಗೂ ಇತರ ರಕ್ತ ಸಂಬಂಧಿಗಳು ಯಾರೂ ಇಲ್ಲದಿದ್ದಲ್ಲಿ ಆತನ ಎಲ್ಲಾ ಆಸ್ತಿಯು ಸರಕಾರಕ್ಕೆ ಸೇರುತ್ತದೆ.

**ಕ್ರಿಶ್ಚಿಯನ್ ಮಹಿಳೆಯ ವಾರಸುದಾರಿಕೆಯ ಕ್ರಮ**

ಕಲಂ ೩೫ರ ಪ್ರಕಾರ ಮೃತ ಕ್ರಿಶ್ಚಿಯನ್ ಪುರುಷನ ಆಸ್ತಿಯನ್ನು ಆತನ ವಿಧವೆ ಹೆಂಡತಿ ಎಷ್ಟು ಪ್ರಮಾಣದಲ್ಲಿ ಮತ್ತು ಯಾವ ವಿಧದಲ್ಲಿ ಪಡೆಯುತ್ತಾಳೆಯೋ ಅದೇ ಪ್ರಮಾಣದಲ್ಲಿ ಮತ್ತು ಅದೇ ವಿಧದಲ್ಲಿ ಮೃತ ಕ್ರಿಶ್ಚಿಯನ್ ಮಹಿಳೆಯ ಆಸ್ತಿಯನ್ನು ಆಕೆಯ ಪತಿ ಪಡೆಯುತ್ತಾನೆ.

**ಮೃತ ಕ್ರಿಶ್ಚಿಯನ್ ನೇರ ವಂಶಜರ ವಾರಸುದಾರಿಕೆಯ ಕ್ರಮ**

ಮೃತನ ಮರಣದ ಸಮಯದಲ್ಲಿ ಆತನ ಪತ್ನಿ ಜೀವಂತವಿರದೆ ಆತನ ನೇರ ವಂಶಜರು ಜೀವಂತ ಇದ್ದಲ್ಲಿ ಆತನ ಆಸ್ತಿಯನ್ನು ಕೆಳಗಿನ ನಿಯಮಗಳಿಗನುಸಾರವಾಗಿ ಅವರು ಪಡೆಯುತ್ತಾರೆ.

ಕಲಂ ೩೭ರ ಪ್ರಕಾರ ಮೃತನ ಯಾವುದೇ ದೂರದ ನೇರ ವಂಶಜರಿಲ್ಲದೆ ಆತನ ಒಂದೇ ಮಗು (ಅಂದರೆ ಮಗ ಅಥವಾ ಮಗಳು) ಇದ್ದಲ್ಲಿ ಆತನ ಎಲ್ಲಾ ಆಸ್ತಿಯನ್ನು ಆ ಮಗು ಪಡೆಯುತ್ತದೆ. ಇಂಥ ಸಂದರ್ಭದಲ್ಲಿ ಮೃತನಿಗೆ ಒಂದಕ್ಕಿಂತ ಹೆಚ್ಚು ಮಕ್ಕಳಿದ್ದಲ್ಲಿ ಆತನ ಆಸ್ತಿಯಲ್ಲಿ ಮಕ್ಕಳೆಲ್ಲರೂ ಸಮನಾದ ಪಾಲನ್ನು ಪಡೆಯುತ್ತಾರೆ. ಮೃತನ ದೂರದ ನೇರ ವಂಶಜರೆಂದರೆ ಆತನಿಗಿಂತ ಮೊದಲೇ ಮೃತಪಟ್ಟಿದ್ದ ಆತನ ಮಗ ಅಥವಾ ಮಗಳ ಮಗ ಅಥವಾ ಮಕ್ಕಳು ( ಮೊಮ್ಮಗ/ಳು ಅಥವಾ ಮೊಮ್ಮಕ್ಕಳು).

ಕಲಂ ೩೮ರ ಪ್ರಕಾರ ಮೃತನ ಮಕ್ಕಳು ಮೃತಪಟ್ಟಿದ್ದು ಅವರ ಮುಖಾಂತರ ಮೊಮ್ಮಕ್ಕಳು ಮಾತ್ರ ಇದ್ದು ಅವರ ಮೂಲಕ ಬೇರಾವುದೇ ನೇರ ವಂಶಜರಿಲ್ಲದಿದ್ದಲ್ಲಿ (ಅಂದರೆ ಮರಿಮಕ್ಕಳಿಲ್ಲದಿದ್ದಲ್ಲಿ) ಮೃತನ ಆಸ್ತಿಯನ್ನು ಜೀವಂತವಿರುವ ಆತನ ಮೊಮ್ಮಗ ಅಥವಾ ಮೊಮ್ಮಗಳು ಅಥವಾ ಅಂಥವರು ಒಬ್ಬರಿಗಿಂತ ಹೆಚ್ಚು ಇದ್ದಲ್ಲಿ ಅವರೆಲ್ಲಾ ಸಮನಾಗಿ ಆಸ್ತಿಯನ್ನು ಪಡೆಯುತ್ತಾರೆ.

ಕಲಂ ೩೯ರ ಪ್ರಕಾರ ಮೃತನ ಮರಣದ ಸಮಯದಲ್ಲಿ ಆತನ ಮಕ್ಕಳು , ಮೊಮ್ಮಕ್ಕಳು ಯಾರೂ ಜೀವಂತವಿರದೆ ಮರಿಮಕ್ಕಳು (ಮೊಮ್ಮಕ್ಕಳ ಮಕ್ಕಳು) ಅಥವಾ ಇನ್ನೂ ದೂರದ

ನೇರ ವಂಶಜರು ಮಾತ್ರ ಜೀವಂತ ಇದ್ದಲ್ಲಿ ಮೃತನ ಆಸ್ತಿಯನ್ನು ಆತನಿಗೆ ಹೆಚ್ಚು ಸಮೀಪದ (ಅಂದರೆ ಸಮೀಪದ ತಲೆಮಾರು) ನೇರ ವಂಶಜರು ಪಡೆಯುತ್ತಾರೆ.

ಕಲಂ ೪೦ರ ಪ್ರಕಾರ ಮೃತನ ಮರಣದ ಸಮಯದಲ್ಲಿ ಜೀವಂತವಿರುವ ನೇರ ವಂಶಜರೆಲ್ಲಾ ಒಂದೇ ತಲೆಮಾರಿನವರಾಗಿರದೇ ಬೇರೆ ಬೇರೆ ತಲೆಮಾರಿನವರಾಗಿದ್ದಲ್ಲಿ ಮೃತನ ಮರಣದ ಸಮಯದಲ್ಲಿ ಜೀವಂತ ಇದ್ದ ಆತನಿಗೆ ಸಮೀಪದ ಒಂದೇ ತಲೆಮಾರಿನ ನೇರ ವಂಶಜರು ಮತ್ತು ಮೃತನಿಗಿಂತ ಮೊದಲೇ ಮೃತಪಟ್ಟಿದ್ದ ಆತನಿಗೆ ಸಮೀಪದ ಅದೇ ತಲೆಮಾರಿನ ನೇರ ವಂಶಜರು ಒಟ್ಟು ಜನರಾಗುತ್ತಾರೋ ಅಷ್ಟು ಸಂಖ್ಯೆಯ ಸಮನಾದ ಪಾಲುಗಳನ್ನು ಮೃತನ ಆಸ್ತಿಯಲ್ಲಿ ಮಾಡಲಾಗಿ ಜೀವಂತವಿರುವ ಒಂದೇ ತಲೆಮಾರಿನ ಅಂಥ ನೇರ ವಂಶಜರು ತಲಾ ಒಂದು ಪಾಲನ್ನು ಮತ್ತು ಮೃತನ ಜೀವಿತಾವಧಿಯಲ್ಲಿ ಮೃತಪಟ್ಟಿದ್ದ ಅಂಥ ಪ್ರತಿ ನೇರ ವಂಶಜನ ಮಕ್ಕಳು ಒಟ್ಟಾಗಿ ಒಂದೊಂದು ಪಾಲನ್ನು ಪಡೆಯುತ್ತಾರೆ.

**ನೇರ ವಂಶಜರಿಲ್ಲದಿದ್ದಾಗ ರಕ್ತ ಸಂಬಂಧಿಗಳಲ್ಲಿ ವಾರಸುದಾರಿಕೆಯ ಕ್ರಮ**

ಮೃತನ ಆಸ್ತಿಗೆ ವಾರಸುದಾರರಲ್ಲಿ ಆತನ ಹೆಂಡತಿ ಮತ್ತು ಇತರ ಯಾವುದೇ ನೇರ ವಂಶಜರು ಜೀವಂತ ಇಲ್ಲದಿದ್ದಲ್ಲಿ ಆತನ ಆಸ್ತಿಯನ್ನು ಆತನ ಇತರೆ ರಕ್ತ ಸಂಬಂಧಿಗಳು (ಅಂದರೆ ತಂದೆ, ತಾಯಿ, ಸಹೋದರ-ಸಹೋದರಿಯರು ಹಾಗೂ ಅವರ ಮಕ್ಕಳು ಮುಂತಾದವರು) ಈ ಕೆಳಗಿನಂತೆ ಆಸ್ತಿಯಲ್ಲಿ ಪಾಲನ್ನು ಪಡೆಯುತ್ತಾರೆ.

ಕಲಂ ೪೨ರ ಪ್ರಕಾರ ಮೃತನ ತಂದೆಯು ಜೀವಂತವಿದ್ದಲ್ಲಿ ಮೃತನ ಎಲ್ಲಾ ಆಸ್ತಿಯನ್ನು ಆತನೇ ಪಡೆಯುತ್ತಾನೆ.

ಕಲಂ ೪೬ರ ಪ್ರಕಾರ ಮೃತನ ಸಹೋದರ ಅಥವಾ ಸಹೋದರಿ ಅಥವಾ ಮೃತನ ಜೀವಿ ತಾವಧಿಯಲ್ಲಿ ತೀರಿಹೋಗಿದ್ದ ಆತನ ಸಹೋದರನ ಅಥವಾ ಸಹೋದರಿಯ ಮಕ್ಕಳು ಯಾರೂ ಇಲ್ಲದೇ ಮೃತನ ತಾಯಿ ಮಾತ್ರ ಇದ್ದಲ್ಲಿ ಆಕೆಯು ಮೃತನ ಎಲ್ಲಾ ಆಸ್ತಿಯನ್ನು ಪಡೆಯುತ್ತಾಳೆ.

ಕಲಂ ೪೩ರ ಪ್ರಕಾರ ಮೃತನ ತಾಯಿ ಹಾಗೂ ಆತನ ಸಹೋದರ , ಸಹೋದರಿ ಮಾತ್ರ ಜೀವಂತ ಇದ್ದು ಆತನ ಮೊದಲೇ ಮೃತ ಪಟ್ಟಿದ್ದ ಸಹೋದರ ಅಥವಾ ಸಹೋದರಿಯ ಮಕ್ಕಳಾರೂ ಇಲ್ಲದಿದ್ದಲ್ಲಿ ಮೃತನ ಆಸ್ತಿಯನ್ನು ಆತನ ತಾಯಿ ಮತ್ತು ಸಹೋದರ- ಸಹೋದರಿ ಯರು ಸಮನಾಗಿ ಪಡೆಯುತ್ತಾರೆ.

ಕಲಂ ೪೪ರ ಪ್ರಕಾರ ಮೃತನ ತಾಯಿ, ಸಹೋದರ, ಸಹೋದರಿ ಅಲ್ಲದೇ ಮೃತನ ಜೀವಿ ತಾವಧಿಯಲ್ಲಿ ಮೃತ ಪಟ್ಟಿದ್ದ ಆತನ ಸಹೋದರನ ಅಥವಾ ಸಹೋದರಿಯ ಮಕ್ಕಳೂ ಮೃತನ ಮರಣ ಸಮಯದಲ್ಲಿ ಜೀವಿಸಿದ್ದರೆ ಮೃತನ ಆಸ್ತಿಯಲ್ಲಿ ಮೃತನ ತಾಯಿ, ಜೀವಂತವಿರುವ ಪ್ರತೀ ಸಹೋದರ, ಸಹೋದರಿ ಹಾಗೂ ಮೃತನ ಜೀವಿತಾವಧಿಯಲ್ಲಿ ತೀರಿಹೋಗಿದ್ದ ಆತನ ಪ್ರತೀ ಸಹೋದರ- ಸಹೋದರಿಯ ಮಕ್ಕಳು ಒಟ್ಟಾಗಿ ಸಮಪಾಲನ್ನು ಪಡೆಯುತ್ತಾರೆ.

ಕಲಂ ೪೭ರ ಪ್ರಕಾರ ಮೃತನ ಮರಣದ ಸಮಯದಲ್ಲಿ ಆತನ ನೇರ ವಂಶಜರು, ತಂದೆ, ತಾಯಿ ಯಾರೂ ಜೀವಿಸಿರದಿದ್ದಲ್ಲಿ ಆತನ ಆಸ್ತಿಯನ್ನು ಆತನ ಸಹೋದರ–ಸಹೋದರಿಯರು ಸಮನಾಗಿ ಪಡೆಯುತ್ತಾರೆ. ಅಂಥವರಲ್ಲಿ ಯಾರಾದರೂ ಮೃತನಿಗಿಂತ ಮೊದಲೇ ಮೃತಪಟ್ಟಿದ್ದು ಅವರ ಮಕ್ಕಳು ಜೀವಿಸಿದ್ದಲ್ಲಿ ಅವರವರ ಮಕ್ಕಳು ಒಟ್ಟಾಗಿ ತಮ್ಮ ತಂದೆ/ ತಾಯಿ ಪಾಲಿಗೆ ಬರಹುದಾಗಿದ್ದಷ್ಟು ಆಸ್ತಿಯನ್ನು ಪಡೆದುಕೊಳ್ಳುತ್ತಾರೆ.

ಕಲಂ ೪೮ರ ಪ್ರಕಾರ ಮೃತನ ಮರಣದ ಸಮಯದಲ್ಲಿ ಆತನ ತಂದೆ, ತಾಯಿ, ಸಹೋದರ, ಸಹೋದರಿ ಇವರ್ಯಾರೂ ಜೀವಿಸಿರದಿದ್ದಲ್ಲಿ ಆತನ ಆಸ್ತಿಯನ್ನು ಆತನ ಇತರ ಸಮೀಪದ ತಲೆಮಾರಿನ ರಕ್ತ ಸಂಬಂಧಿಗಳು ಸಮನಾಗಿ ಪಡೆಯುತ್ತಾರೆ.

ಈ ಅಧಿನಿಯಮದ ಪ್ರಕಾರ ಮರಣಶಾಸನ ಬರೆಯದ ಮೃತನ ತಾಯಿ ಪ್ರಾಥಮಿಕ ವಾರಸುದಾರಳಲ್ಲವಾದ್ದರಿಂದ, ಮೃತನ ನೇರ ವಂಶಜರು ಮತ್ತು ಮೃತನ ವಿಧವೆಯಿದ್ದ ಸಂದರ್ಭದಲ್ಲಿ ತಾಯಿಗೆ ಯಾವುದೇ ಭಾಗ ದೊರೆಯುವುದಿಲ್ಲ. ಮೃತನ ವಿಧವೆ ಪತ್ನಿಯಿದ್ದಲ್ಲಿ, ಪತ್ನಿ ಅರ್ಧ ಆಸ್ತಿಯನ್ನು ಪಡೆಯುತ್ತಾಳೆ. ಉಳಿದರ್ಧ ಆಸ್ತಿಯಲ್ಲಿ ಮೃತನ ತಾಯಿ, ಸಹೋದರರು, ಸಹೋದರಿಯರು ಹಾಗೂ ಅವರ ಮಕ್ಕಳು ಪಾಲು ಪಡೆಯುತ್ತಾರೆ. ಹಾಗಾಗಿ ತಾಯಿ ಪಡೆಯುವ ಆಸ್ತಿಯ ಪ್ರಮಾಣ ಯಾವಾಗಲೂ ಮೃತನು ಹೊಂದಿರುವ ಸಹೋದರ ಸಹೋದರಿಯರ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಹಾಗೆಯೇ ಮರಣಶಾಸನ ಬರೆಯದೆ ಮೃತನಾದ ವ್ಯಕ್ತಿಯ ವಿಧವೆ ಪತ್ನಿ ಮೂರನೆಯ ಒಂದು ಭಾಗದಷ್ಟು ನಿಗದಿತ ಪಾಲನ್ನು ಪಡೆದು ಅವರ ಮಕ್ಕಳು ಮತ್ತು ನೇರ ವಂಶಜರೊಡನೆ ಪತಿಯ ಆಸ್ತಿಗೆ ಉತ್ತರಾಧಿಕಾರಿಯಾಗುತ್ತಾಳೆ. ಒಂದು ವೇಳೆ ವಾರಸುದಾರರೇ ಇಲ್ಲದಿದ್ದಲ್ಲಿ ಪೂರ್ಣ ಆಸ್ತಿಯನ್ನು ಪಡೆಯುತ್ತಾಳೆ. ಇನ್ನು ಮಕ್ಕಳ ವಿಷಯದಲ್ಲಿ ಮಗಳ ಆಸ್ತಿಯ ಹಕ್ಕು ಮಗನ ಆಸ್ತಿಯ ಹಕ್ಕಿಗೆ ಸಮನಾಗಿರುತ್ತದೆ. ಅಂದರೆ ಇಲ್ಲಿ ಹೆಣ್ಣು ಮತ್ತು ಗಂಡಿನ ನಡುವೆ ಯಾವುದೇ ತಾರತಮ್ಯ ಇಲ್ಲವೆಂದು ತೋರುತ್ತದೆ.

ಹೀಗೆ ವಸಾಹತು ಸಂದರ್ಭದಲ್ಲಿ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳಲ್ಲಿ ಆಸ್ತಿ ಹಕ್ಕಿನ ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಭಿನ್ನವಾದ ನಿಲುವುಗಳಿರುವುದನ್ನು ಕಾಣಬಹುದಾಗಿದೆ. ಮುಖ್ಯವಾಗಿ ಮಹಿಳೆಗೆ ಎಷ್ಟೇ ಆರ್ಥಿಕ ಭದ್ರತೆಯನ್ನು ಒದಗಿಸಲಾಗಿದೆ ಎಂದು ಹೇಳಲಾಗುತ್ತಿದೆ ಯಾದರೂ ಮಹಿಳೆಗೆ ಆಸ್ತಿಯ ಮೇಲೆ ಸಂಪೂರ್ಣವಾದ ಒಡೆತನವನ್ನು ನೀಡಿಲ್ಲ. ಹಾಗೆಯೇ ಹಿಂದೂ ಮತ್ತು ಮುಸ್ಲಿಂ ಧರ್ಮಗಳಲ್ಲಿ ಕಾನೂನುಗಳು ಕೃಷಿ ಭೂಮಿಯನ್ನು ಉತ್ತರಾಧಿಕಾರದ ವ್ಯಾಪ್ತಿಯಿಂದ ದೂರವಿಟ್ಟ ಪರಿಣಾಮವಾಗಿ ಮಹಿಳೆಯರು ಈ ಹಕ್ಕಿನಿಂದ ವಂಚಿತರಾದರು. ಈ ಅಧಿನಿಯಮಗಳೆಲ್ಲವೂ ಸ್ವಾತಂತ್ರ್ಯ ಪೂರ್ವದಲ್ಲಿ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಅಗತ್ಯವನ್ನು ಬೆಂಬಲಿಸುವ ಮೊದಲ ಕೂಗುಗಳಾದವು.

### ೪.೨. ವಸಾಹತು ನಂತರದ ಸಂದರ್ಭದಲ್ಲಿ ಆಸ್ತಿ ಹಕ್ಕಿನ ಪರಿಕಲ್ಪನೆಗಳು ಮತ್ತು ಕಾಯಿದೆಗಳು

ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ೧೯೩೭ರಲ್ಲಿ ಜಾರಿಯಾದ ಹಿಂದೂ ಸ್ತ್ರೀಯರ ಆಸ್ತಿಹಕ್ಕಿನ ಕಾನೂನು ಸ್ವಾತಂತ್ರ್ಯಾ ನಂತರ ಹಲವಾರು ವರ್ಷಗಳವರೆಗೂ ಅಂದರೆ ೧೯೫೬ರ ವರೆಗೂ ಜಾರಿಯಲ್ಲಿತ್ತು. ನಂತರ ಅದುವರೆಗೂ ಸೀಮಿತವಾಗಿದ್ದ ಭಾರತೀಯ ಮಹಿಳೆಯರ ಉತ್ತರಾಧಿಕಾರದ ಹಕ್ಕು ಸುಧಾರಣೆಗೊಂಡಿತು. ೧೯೫೬ರಲ್ಲಿ ಜಾರಿಯಾದ ಹಿಂದೂ ಉತ್ತರಾಧಿಕಾರ ಅಧಿನಿಯಮ, ಆಸ್ತಿಯ ಕುರಿತು ಜಾರಿಯಲ್ಲಿದ್ದ ಹಿಂದೂಗಳ ವೈಯಕ್ತಿಕ ಕಾನೂನಿನಲ್ಲಿ ಸಾಕಷ್ಟು ಬದಲಾವಣೆಗೆ ದಾರಿಯಾಯಿತು. ಆ ಮೂಲಕ ಮಹಿಳೆಯರಿಗೆ ಹೆಚ್ಚಿನ ಆಸ್ತಿಹಕ್ಕು ದೊರೆಯುವಂತಾಯಿತು. ಮಹಿಳೆಯರ ಆಸ್ತಿ ಹಕ್ಕು ಜಾರಿಯಾಗುವ ಪೂರ್ವದಲ್ಲಿ ವಿಧವೆ ಹೆಂಡತಿಯು ತನ್ನ ಗಂಡನ ಆಸ್ತಿಗೆ ಜೀವಿತಾವಧಿಯವರೆಗೆ ಮಾತ್ರವೇ ಹಕ್ಕುದಾರ ಳಾಗಿರುತ್ತಿದ್ದಳು. ಅಂದರೆ ಅವಳು ಜೀವಂತವಿರುವವರೆಗೆ ಮಾತ್ರ ಅದನ್ನು ಅನುಭೋಗಿ ಸಬಹುದಾಗಿತ್ತು. ಆದರೆ ಆ ಆಸ್ತಿಯನ್ನು ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ, ದಾನ, ಉಯಿಲು ಮುಂತಾದವುಗಳನ್ನು ಮಾಡುವ ಹಕ್ಕನ್ನು ಅವಳಿಗೆ ನೀಡಲಾಗಿರಲಿಲ್ಲ. ಕೇವಲ ಅನುಭೋಗಿಯಾಗಿ ಮಾತ್ರ ಜೀವಂತವಿರುವವರೆಗೆ ಆಸ್ತಿಯನ್ನು ಅನುಭವಿಸಬಹುದಿತ್ತು. ಅವಳ ಮರಣದ ನಂತರ ಪೂರ್ಣ ಪ್ರಮಾಣದ ಮಾಲೀಕನ ವಾರಸುದಾರಿಕೆಗೆ ಅದು ಹಿಂದಿರುಗುತ್ತಿತ್ತು. ಆದರೆ ಈ ಅಧಿನಿಯಮ ಉತ್ತರಾಧಿಕಾರದ ಹಕ್ಕುಗಳಲ್ಲಿ ಬದಲಾವಣೆಯನ್ನುಂಟುಮಾಡಿತು. ಮಹಿಳೆಯರಿಗೆ ಪತಿಯಿಂದ ಪಡೆದ ಆಸ್ತಿಯ ಮೇಲೆ ಸಂಪೂರ್ಣ ಒಡೆತನದ ಹಕ್ಕನ್ನು ದೊರಕಿಸಿಕೊಟ್ಟರೆ, ಹೆಣ್ಣು ಮಗಳಿಗೆ ತನ್ನ ತಂದೆಯ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲನ್ನು ಪಡೆಯುವ ಹಕ್ಕನ್ನು ನೀಡಿತು. ಹೀಗೆ ೧೯೫೬ರ ಹಿಂದೂ ವಾರಸಾ ಕಾನೂನು ಮಹಿಳೆಯರಿಗೆ ಆಸ್ತಿಯಲ್ಲಿ ಸಮಪಾಲು ಪಡೆಯುವ ಹಕ್ಕನ್ನು ದೊರಕಿಸಿಕೊಟ್ಟಿದೆ. ಈ ನಿಟ್ಟಿನಲ್ಲಿ ೧೯೫೬ರ ಕಾಯಿದೆಯ ಕುರಿತಾಗಿ ಸಂಪೂರ್ಣವಾದ ವಿವರವನ್ನು ನೀಡುವುದು ಇಲ್ಲಿ ಮುಖ್ಯವಾಗಿದೆ.

**ಹಿಂದೂ ಉತ್ತರಾಧಿಕಾರ ಕಾಯಿದೆ ೧೯೫೬**

ಹಿಂದೂ ಉತ್ತರಾಧಿಕಾರ ಕಾಯಿದೆಯ ಪ್ರಕಾರ ಆಸ್ತಿಯಲ್ಲಿ ಎರಡು ವಿಧ. ಒಂದು ಸ್ವಯಾರ್ಜಿತ ಆಸ್ತಿ ಮತ್ತೊಂದು ಪಿತ್ರಾರ್ಜಿತ ಆಸ್ತಿ. ಈ ಎರಡೂ ಬಗೆಯ ಆಸ್ತಿಯ ವಾರಸುದಾರಿಕೆ ಕ್ರಮಗಳು ಕಾನೂನು ರೀತ್ಯ ಭಿನ್ನವಾಗಿವೆ. ಇವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಅ) ಸ್ವಯಾರ್ಜಿತ ಆಸ್ತಿ ಮತ್ತು ವಾರಸುದಾರಿಕೆ**

ಒಬ್ಬ ವ್ಯಕ್ತಿ (ಸ್ತ್ರೀ ಅಥವಾ ಪುರುಷ) ತನ್ನ ಸ್ವಂತ ಶ್ರಮದ ಪ್ರತಿಫಲದಿಂದ ಹೊಂದಿರುವಂತಹ ಆಸ್ತಿಯು ಸ್ವಯಾರ್ಜಿತ ಆಸ್ತಿಯಾಗುತ್ತದೆ. ಹಾಗಾಗಿ ಗಳಿಸಿದ ವ್ಯಕ್ತಿಗೆ ಆ ಆಸ್ತಿಯ ಬಳಕೆಯ ಸಂಪೂರ್ಣ ಅಧಿಕಾರವಿರುತ್ತದೆ. ತಾನು ಬದುಕಿರುವವರೆಗೂ ಆ ಆಸ್ತಿಯನ್ನು ತನಗೆ ಹೇಗೆ

ಬೇಕೋ ಹಾಗೆ ವಿನಿಯೋಗ ಮಾಡಿಕೊಳ್ಳಬಹುದು. ಹಾಗೆಯೇ ಆ ವ್ಯಕ್ತಿಯ ಮರಣಾ ನಂತರವೂ ಆ ಆಸ್ತಿಯು ಒಡೆಯಳ/ನ ಇಚ್ಚೆಯಂತೆಯೇ ವಿನಿಯೋಗವಾಗಬೇಕು. ಹಾಗೆ ತನ್ನ ಇಚ್ಚೆಯನುಸಾರ ಆಸ್ತಿಯು ವಿನಿಯೋಗವಾಗಲು ಉಯಿಲಿನ ಮೂಲಕ ಅದರ ನಿರ್ದೇಶನವನ್ನು ಮರಣಾನಂತರವೂ ನಿರ್ವಹಿಸಿಕೊಂಡು ಹೋಗುವ ಅವಕಾಶ ಸ್ವಯಾರ್ಜಿತ ಆಸ್ತಿಯ ವಾರಸು ದಾರಿಕೆಯಲ್ಲಿ ಕಂಡುಬರುತ್ತದೆ. ಒಂದು ವೇಳೆ ಉಯಿಲನ್ನು ಮಾಡದೆ ಮರಣ ಹೊಂದಿದ್ದರೆ, ಆಗ ಆಸ್ತಿಯು ವಾರಸುದಾರಿಕೆಯ ಕ್ರಮದಲ್ಲಿ ಹಂಚಿಕೆಯಾಗುತ್ತದೆ. ಈ ಹಂತದಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮ ಸ್ವಯಾರ್ಜಿತ ಆಸ್ತಿಯಲ್ಲಿ ಸ್ತ್ರೀ ಪುರುಷ ರಿಬ್ಬರಿಗೂ ಸಮಾನ ಉತ್ತರಾಧಿಕಾರದ ಹಕ್ಕುಗಳನ್ನು ನೀಡುತ್ತದೆ. ಅಲ್ಲದೆ ಮಹಿಳೆಗೆ ಆಸ್ತಿಯನ್ನು ನಿರುಪಾಧಿಕವಾಗಿ ಹೊಂದುವ ಹಕ್ಕನ್ನು ನೀಡುತ್ತದೆ. ಹಾಗಾಗಿ ಈ ಅಧಿನಿಯಮ ಪ್ರಗತಿಪರ ದೃಷ್ಟಿಯುಳ್ಳ ಕಾನೂನು ಎಂದು ಪರಿಗಣಿಸಲ್ಪಟ್ಟಿದೆ. ಹೀಗೆ ಮೃತನು ಯಾವುದೇ ಉಯಿಲನ್ನು ಬರೆಯದೆ ಮೃತನಾದರೆ ಅಂತಹ ಸಂದರ್ಭದಲ್ಲಿ ೧೯೫೬ರ ಹಿಂದೂ ಉತ್ತರಾಧಿಕಾರ ಕಾಯ್ದೆಯ ಪ್ರಕಾರ ಆಸ್ತಿಯು ಹಂಚಲ್ಪಡುತ್ತದೆಯಾದ್ದರಿಂದ ಇಲ್ಲಿ ಆಸ್ತಿಯ ವಾರಸುದಾರಿಕೆಗೆ ಸಂಬಂಧಿಸಿದಂತೆ ಹಲವಾರು ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಈ ಕೆಳಗಿನ ಪ್ರಕಾರವಾಗಿ ಆಸ್ತಿಯು ಹಂತಹಂತವಾಗಿ ಹಂಚಲ್ಪಡುತ್ತದೆ.

೧. ಪ್ರಥಮ ವರ್ಗದ ವಾರಸುದಾರರು

೨. ದ್ವಿತೀಯ ವರ್ಗದ ವಾರಸುದಾರರು

೩. ಗೋತ್ರಜರು( ಪುರುಷ ಮೂಲದ ಸಂಬಂಧಿಗಳು)

೪. ಬಂಧುಗಳು ( ಸ್ತ್ರೀ ಮೂಲದ ಸಂಬಂಧಿಗಳು)"[೧೨]

೧. **ಪ್ರಥಮ ವರ್ಗದ ವಾರಸುದಾರರು** : ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಮಹತ್ವದ ಬದಲಾವಣೆಯಾದದ್ದು ಎಂದರೆ ಮಗ ಮತ್ತು ಮಗಳು, ಸಹೋದರ ಮತ್ತು ಸಹೋದರಿ ಇತ್ಯಾದಿಯಾಗಿ ಒಂದೇ ವಿಭಾಗದಲ್ಲಿ ಬರುವ ಪುರುಷ ಮತ್ತು ಮಹಿಳಾ ವಾರಸುದಾರಲ್ಲಿ ಸಮಾನ ಹಕ್ಕುಗಳನ್ನು ನೀಡಲಾಗಿದೆ. ಮೊದಲ ಬಾರಿಗೆ ಮಹಿಳೆಗೆ ಮೃತ್ಯು ಪತ್ರ ಬರೆಯದೆ ಮರಣ ಹೊಂದಿದ ಹಿಂದೂ ಪುರುಷನ ಆಸ್ತಿಯಲ್ಲಿ ಪುರುಷ ವಾರಸುದಾರರಂತೆ ಮಹಿಳೆಗೂ ವಾರಸಾ ಹಕ್ಕನ್ನು ನೀಡಲಾಯಿತು. ಈ ಅಧಿನಿಯಮ ಪ್ರಥಮ ದರ್ಜೆ ವಾರಸುದಾರರಲ್ಲಿ ೧೨ ಮಂದಿಯನ್ನು, ಪ್ರಥಮ ವರ್ಗದ ವಾರಸುದಾರರೆಂದು ಉಲ್ಲೇಖಿಸಲಾಗಿದೆ. ೧೨ ಮಂದಿಯಲ್ಲಿ ೮ ಜನ ಸ್ತ್ರೀಯರು ಮತ್ತು ೪ ಮಂದಿ ಪುರುಷರು ಏಕ ಕಾಲದಲ್ಲಿ ಮೃತ ವ್ಯಕ್ತಿಯ ಆಸ್ತಿಯನ್ನು ಪಡೆಯುವ ಹಕ್ಕನ್ನು ಉಳ್ಳವರಾಗಿರುತ್ತಾರೆ. ಇದರ

ಪ್ರಕಾರ ಸ್ತ್ರೀ ಉತ್ತರಾಧಿಕಾರಿಗಳೆಂದರೆ :- ತಾಯಿ, ಪತ್ನಿ, ಪುತ್ರಿ, ಪೌತ್ರಿ(ಮಗನ ಮಗಳು), ಪ್ರಪೌತ್ರಿ(ಮಗನ ಮಗನ ಮಗಳು), ಪುತ್ರಿಯ ಪುತ್ರ, ಪುತ್ರನ ವಿಧವೆ, ಪೌತ್ರನ ವಿಧವೆ (ಮಗನ ಮಗ). ಮತ್ತು ಪುರುಷ ಉತ್ತರಾಧಿಕಾರಿಗಳೆಂದರೆ :- ಪುತ್ರ, ಪೌತ್ರ, ಪ್ರಪೌತ್ರ, ಪುತ್ರಕಾ ಪುತ್ರ (ಮಗಳ ಮಗ). ಇವರುಗಳು ಮೃತ ವ್ಯಕ್ತಿಯ ಆಸ್ತಿಯ ಒಡೆತನವನ್ನು ಪಡೆಯುವವರಾಗಿದ್ದಾರೆ.

೨. **ದ್ವಿತೀಯ ವರ್ಗದ ವಾರಸುದಾರರು** : ಪ್ರಥಮ ವರ್ಗದ ವಾರಸುದಾರರು ಯಾರೂ ಇಲ್ಲದಿರುವ ಸಂದರ್ಭದಲ್ಲಿ ಮಾತ್ರ ದ್ವಿತೀಯ ವರ್ಗದ ವಾರಸುದಾರರಿಗೆ ಆಸ್ತಿಯಲ್ಲಿ ಪಾಲು ಪಡೆಯುವ ಅಧಿಕಾರ ದೊರೆಯುತ್ತದೆ. ಉತ್ತರಾಧಿಕಾರ ಅಧಿನಿಯಮ ಈ ವರ್ಗದ ವಾರಸುದಾರರನ್ನು ಒಂಭತ್ತು ಉಪ ವರ್ಗಗಳನ್ನಾಗಿ ವಿಂಗಡಿಸುತ್ತದೆ. ಒಂದು ವರ್ಗದವರಾದ ನಂತರ ಮತ್ತೊಂದು ಉಪ ವರ್ಗದವರು ಹಕ್ಕುದಾರರಾಗುತ್ತಾರೆ. ಅವರೆಂದರೆ,

೧. ಮೃತ ವ್ಯಕ್ತಿಯ ತಂದೆ.

೨. ಮಗನ ಮಗಳ ಮಗ, ಮಗನ ಮಗಳ ಮಗಳು, ಸಹೋದರಿ, ಸಹೋದರರು.

೩. ಮಗಳ ಮಗನ ಮಗ ಮತ್ತು ಮಗಳು, ಮಗಳ ಮಗಳ ಮಗ ಮತ್ತು ಮಗಳು.

೪. ಸಹೋದರನ ಮಗ ಮತ್ತು ಮಗಳು, ಸಹೋದರಿಯ ಮಗ ಮತ್ತು ಮಗಳು

೫. ತಂದೆಯ ತಂದೆ, ತಂದೆಯ ತಾಯಿ

೬. ತಂದೆಯ ವಿಧವೆ, ಸಹೋದರನ ವಿದವೆ

೭. ತಂದೆಯ ಸಹೋದರ, ತಂದೆಯ ಸಹೋದರಿ.

೮. ತಾಯಿಯ ತಂದೆ, ತಾಯಿಯ ತಾಯಿ.

೯. ತಾಯಿಯ ಸಹೋದರ, ತಾಯಿಯ ಸಹೋದರಿ.

೩. **ಗೋತ್ರಜರು ( ಪುರುಷ ಮೂಲದ ಸಂಬಂಧಿಗಳು) :** ಪ್ರಥಮ ಹಾಗೂ ದ್ವಿತೀಯ ವರ್ಗದ ವಾರಸುದಾರರು ಇಲ್ಲದಿದ್ದಲ್ಲಿ ಮೃತ ವ್ಯಕ್ತಿಯ ಮೂಲಕ ಸಂಬಂಧಿಸಿದವರು ಆಸ್ತಿಯ ವಾರಸುದಾರರಾಗುತ್ತಾರೆ.

೪. **ಬಂಧುಗಳು ( ಸ್ತ್ರೀ ಮೂಲದ ಸಂಬಂಧಿಗಳು) :** ಮೃತ ವ್ಯಕ್ತಿಯ ಮೊದಲನೆಯ ಮತ್ತು ಎರಡನೆಯ ವರ್ಗದ ವಾರಸುದಾರರು ಹಾಗೂ ಗೋತ್ರಜರು ಇಲ್ಲದಿರುವಾಗ ಬಂಧುಗಳು ಆಸ್ತಿಯ ವಾರಸುದಾರರಾಗುತ್ತಾರೆ. ಅವರುಗಳು ಸ್ತ್ರೀಯರ ಮೂಲಕ ಸಂಬಂಧಿಗಳಾಗಿರುವವರಾಗಿರುತ್ತಾರೆ.

**ಆ) ಹಿಂದೂ ಮಹಿಳೆಯರ ಆಸ್ತಿಯ ಉತ್ತಾಧಿಕಾರದ ಕ್ರಮ**

ಹಿಂದೂ ಉತ್ತರಾಧಿಕಾರ ಅಧಿನಿಯಮದ ೧೫ನೆಯ ಮತ್ತು ೧೬ನೆಯ ಪ್ರಕರಣಗಳಲ್ಲಿ ಹಿಂದೂ ಮಹಿಳೆಯ ಮರಣದ ನಂತರ ಅವಳ ಆಸ್ತಿಯ ಉತ್ತರಾಧಿಕಾರದ ಸಾಮಾನ್ಯ ನಿಯಮಗಳು ಈ ರೀತಿಯಾಗಿವೆ.

೧. ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳು

೨. ಪತಿಯ ವಾರಸುದಾರರು

೩. ತಾಯಿ ಮತ್ತು ತಂದೆ

೪. ತಂದೆಯ ವಾರಸುದಾರರು

೫. ತಾಯಿಯ ವಾರಸುದಾರರು[೧೩]

ಈ ವಾರಸುದಾರಿಕೆ ಕ್ರಮವು ಮಹಿಳೆಯ ಮರಣದ ನಂತರ ಅವಳ ಆಸ್ತಿಗೆ ವಾರಸುದಾರಿಕೆಯ ಹಕ್ಕನ್ನು ಪಡೆಯುವ ಅರ್ಹತೆಯುಳ್ಳವರನ್ನು ಅನುಕ್ರಮವಾಗಿ ಗುರುತಿಸಿದೆ. ಇಲ್ಲಿ ಮರಣ ಶಾಸನ ಬರೆಯದೆ ಮೃತಳಾಗುವ ಮಹಿಳೆಯ ಆಸ್ತಿಯ ವಾರಸುದಾರಿಕೆಯ ಅನುಕ್ರಮ ಮತ್ತು ಮರಣ ಶಾಸನ ಬರೆಯದೆ ಮೃತನಾಗುವ ಪುರುಷನ ಆಸ್ತಿಯ ವಾರಸುದಾರಿಕೆಯ ಕ್ರಮ ಇವೆರಡೂ ಬೇರೆ ಬೇರೆಯಾಗಿವೆ. ಆದರೆ ಅಂತಿಮವಾಗಿ ಆಸ್ತಿ ಪುನಃ ಸೇರುವುದು ಪುರುಷ ಮೂಲದ ವಾರಸುದಾರಿಕೆಗೆ. ಮಹಿಳೆಯ ಅಂದರೆ ತಂದೆಯ ಕುಟುಂಬದೊಳಗೆ ಅಥವಾ ಪತಿಯ ಕುಟುಂಬದೊಳಗೆ. ಮಹಿಳೆಯ ಆಸ್ತಿಯ ವಾರಸುದಾರರಲ್ಲಿ ಮೊದಲು ಅವಳ ಮಕ್ಕಳು, ಎರಡನೆಯ ವಾರಸುದಾರರು ಗಂಡ ಮತ್ತು ಅವನ ನಂತರ ಅವನ ವಾರಸುದಾರರು. ಇನ್ನು ಮೂರನೆಯ ವಾರಸುದಾರರು ಅವಳ ತಂದೆಯ ವಾರಸುದಾರರು, ನಾಲ್ಕನೆಯವರು ಮತ್ತು ಕೊನೆಯ ವಾರಸುದಾರರು ಅವಳ ತಾಯಿಯ ಕಡೆಯವರಿಗೆ ಸೇರುತ್ತದೆ. ಮೊದಲಾದ್ಯತೆ ಗಂಡನಿಗೆ ಇರುವುದರ ಮೂಲಕ ಆಸ್ತಿ ಪುನಃ ಗಂಡನ ಕುಟುಂಬಕ್ಕೆ ಸೇರುತ್ತದೆ. ಹಿಂದೂ ಮಹಿಳೆಯು ತನ್ನ ತಾಯಿಯಿಂದ ವಾರಸವಾಗಿ ಪಡೆದ ಆಸ್ತಿ ಅವಳಿಗೆ

ಮಗ/ಮಗಳು ಇಲ್ಲದಿದ್ದ ಸಂದರ್ಭದಲ್ಲಿ ಅವಳ ಮರಣದ ನಂತರ ತಂದೆಯ ವಾರಸುದಾರರಿಗೆ ಸೇರುತ್ತದೆ ಮತ್ತು ಪತಿಯ ಮನೆಯಿಂದ ಪಡೆದ ಆಸ್ತಿ ಅವಳ ಪತಿಯ ವಾರಸುದಾರರಿಗೆ ಸೇರುತ್ತದೆ. ಇದು ಅನ್ವಯಿಸುವುದು ವಾರಸುದಾರಿಕೆಯ ಮೂಲಕ ಪಡೆದ ಆಸ್ತಿಯ ವಾರಸುದಾರಿಕೆಗೆ. ಹಾಗಾಗಿ ಮಹಿಳೆಯ ಆಸ್ತಿ ಪುರುಷ ಮೂಲದ ವಾರಸುದಾರಿಕೆಗೆ ಹಿಂದಿರುಗುತ್ತದೆ.

**೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮ ತಂದ ಬದಲಾವಣೆಗಳು**

೧೯೫೬ರ ಅಧಿನಿಯಮ ಜಾರಿಯಾಗುವುದಕ್ಕಿಂತ ಮೊದಲು ಮಹಿಳೆಗೆ ಆಸ್ತಿಯ ಹಕ್ಕನ್ನು ನೀಡಲಾಗಿತ್ತು. ಆದರೆ ಆ ಹಕ್ಕು ಸಂಪೂರ್ಣ ಒಡೆತನವನ್ನು ನೀಡಿರಲಿಲ್ಲ ಬದಲಾಗಿ ಜೀವಿತಾವಧಿಯವರೆಗೆ ಮಾತ್ರ ಆ ಆಸ್ತಿಯನ್ನು ಉಪಭೋಗಿಸಬಹುದಾದ ಹಕ್ಕನ್ನು ಮಹಿಳೆಯರಿಗೆ ಕೊಡಲಾಗಿತ್ತು. ಮಹಿಳೆಯ ಮರಣದ ನಂತರ ಆಸ್ತಿಯು ಹಿಂದಿನ ಒಡೆಯನ ವಾರಸುದಾರಿಕೆಗೆ ಸೇರ್ಪಡೆಯಾಗುತ್ತಿತ್ತು. ಆದರೆ ೧೯೫೬ರ ಹಿಂದೂ ವಾರಸಾ ಅಧಿನಿಯಮ ಜಾರಿಯಾದ ನಂತರ ಅದುವರೆಗೂ ಜಾರಿಯಲ್ಲಿದ್ದ ಮಹಿಳೆಯರ ಸೀಮಿತ ಆಸ್ತಿಯ ಹಕ್ಕನ್ನು ಬದಲಾಯಿಸಿ ಸಂಪೂರ್ಣ ಒಡತನವನ್ನು ಈ ಅಧಿನಿಯಮ ತಂದು ಕೊಟ್ಟಿತು.

- ಈ ಅಧಿನಿಯಮ ಜಾರಿಯಾಗುವುದಕ್ಕೆ ಮೊದಲೇ ಹಲವು ಮಹಿಳೆಯರು ಸೀಮಿತ ಹಕ್ಕಿನ ಆಸ್ತಿಯನ್ನು ಉಪಭೋಗಿಸುತ್ತಿದ್ದರು. ಅಂತಹ ಆಸ್ತಿ ವಾರಸುದಾರರು ಅದುವರೆಗೂ ಹೊಂದಿದ್ದ ಸೀಮಿತ ಹಕ್ಕಿಗೆ ಬದಲಾಗಿ ಸಂಪೂರ್ಣ ಒಡೆತನದ ಹಕ್ಕು ಅನ್ವಯವಾಗುವಂತೆ ಸಹಕಾರಿಯಾಯಿತು.

- ಜೀವನಾಂಶಕ್ಕೆ ಬದಲಾಗಿ ಮಹಿಳೆಗೆ ಆಸ್ತಿಯನ್ನು ಕೊಟ್ಟಿದ್ದರೂ ಅದು ನಿರ್ಬಂದಿತ ಆಸ್ತಿಯಾಗಿರುತ್ತಿತ್ತು. ಆದರೆ ಅಧಿನಿಯಮದ ಪ್ರಾರಂಭಕ್ಕೆ ಮುನ್ನ ಈ ರೀತಿಯ ನಿರ್ಬಂಧಗಳಿದ್ದು ಅಧಿನಿಯಮ ಜಾರಿಯಾದ ನಂತರ ೧೪(೧)ನೆಯ ಪ್ರಕರಣದ ಮೇರೆಗೆ ಅದು ಆ ಮಹಿಳೆಯ ನಿರುಪಾಧಿಕ ಆಸ್ತಿಯಾಗುತ್ತದೆ.

- ಮರಣ ಶಾಸನ ಬರೆಯದೆ ಮೃತನಾದ ಹಿಂದೂ ಪುರುಷನ ಆಸ್ತಿಯ ವಾರಸುದಾರರಲ್ಲಿ ಹೆಚ್ಚಿನ ಪ್ರಾಧ್ಯಾನ್ಯತೆ ಮಹಿಳೆಯರಿಗೆ ಕೊಡಲಾಗಿದೆ.

- ಅಧಿನಿಯಮದ ೧೫ನೆಯ ಪ್ರಕರಣ ಹಿಂದೂ ಮಹಿಳೆಯ ಆಸ್ತಿ ಉತ್ತರಾಧಿಕಾರದ ಬಗ್ಗೆ ಉಪಬಂಧ ಕಲ್ಪಿಸುತ್ತದೆ. ಹಿಂದೂ ಮಹಿಳೆಯ ಆಸ್ತಿಯ ಉತ್ತರಾಧಿಕಾರದ ಬಗ್ಗೆ ರಚಿತವಾಗಿರುವ ಪ್ರಥಮ ಉಪಬಂಧ ಇದು ಎನ್ನಬಹುದು. ಈ ಹಿಂದೆ ಬಂದ ಹಿಂದೂ ವಾರಸುದಾರಿಕೆ ಅಧಿನಿಯಮ ೧೯೨೯ ಮತ್ತು ಹಿಂದೂ ಮಹಿಳೆಯ ಆಸ್ತಿ

ಹಕ್ಕು ೧೯೩೭ ಈ ಕಾನೂನುಗಳು ಪುರುಷನ ಆಸ್ತಿ ಉತ್ತರಾಧಿಕಾರದ ಬಗ್ಗೆ ಉಪಬಂಧ ಕಲ್ಪಿಸಿದವು."[೧೪]

- ಅವಿಭಕ್ತ ಕುಟುಂಬದ ವಾಸದ ಮನೆಯಲ್ಲಿ ಭಾಗದ ಕುರಿತು ವಿಶೇಷ ಉಪಬಂಧವನ್ನು ಈ ಅಧಿನಿಯಮ ರಚಿಸಿದೆ. ಹಿಂದೂ ಪುರುಷನೊಬ್ಬನು ಮರಣ ಶಾಸನ ಮಾಡದೆ ಮೃತನಾದಲ್ಲಿ ಆತನ ಮರಣ ಶಾಸನ ರಹಿತ ಆಸ್ತಿಯಲ್ಲಿ ವಾಸದ ಮನೆಯೂ ಸೇರಿದ್ದರೆ ಆ ಮನೆಯಲ್ಲಿ ಅವನ ಮರಣದ ನಂತರ ವಾಸಿಸುವ ಗಂಡು ಮಕ್ಕಳು ಆ ಮನೆಯನ್ನು ಭಾಗಮಾಡಿಕೊಳ್ಳುವ ನಿರ್ಧಾರವನ್ನು ತೆಗೆದುಕೊಳ್ಳುವವರೆಗೆ ಸ್ತ್ರೀವಾರಸು ದಾರಳು ಅದರಲ್ಲಿ ತನ್ನ ಹಕ್ಕನ್ನು ಚಲಾಯಿಸುವ ಅಥವಾ ಭಾಗವನ್ನು ಕೇಳುವಂತಿಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಅಂದರೆ ಗಂಡನಿಂದ ಬೇರ್ಪಟ್ಟ, ವಿಚ್ಛೇದಿತರಾದ, ಪರಿತ್ಯಕ್ತರಾದಂಥ ಸಂದರ್ಭದಲ್ಲಿ ವಾಸಿಸಲು ಬೇರೆ ಮನೆಯಿಲ್ಲದಂಥ ಸಂದರ್ಭದಲ್ಲಿ ಕುಟುಂಬದ ವಾಸದ ಮನೆಯಲ್ಲಿ ವಾಸಿಸುವ ಹಕ್ಕನ್ನು ಈ ಉಪಬಂಧ ಒದಗಿಸಿಕೊಡುತ್ತದೆ.

- ಈ ಅಧಿನಿಯಮದ ೨೪ನೆಯ ಪ್ರಕರಣದ ಪ್ರಕಾರ ಕೆಲವು ಸ್ತ್ರೀವಾರಸುದಾರರು, ಅವರು ವಿಧವೆಯರಾಗಿದ್ದು ಮರುವಿವಾಹವಾದರೆ ಉತ್ತರಾಧಿಕಾರದ ಹಕ್ಕುಗಳನ್ನು ಕಳೆದುಕೊಳ್ಳಬೇಕಾಗಿರುತ್ತಿತ್ತು. ಈ ನಿಯಮ ಜಾರಿಯಲ್ಲಿದ್ದುದು ಉತ್ತರಾಧಿಕಾರ ಅಧಿನಿಯಮ ಜಾರಿಯಾಗುವುದಕ್ಕೂ ಮುನ್ನ. ಆದರೆ ೧೯೫೬ರ ಉತ್ತರಾಧಿಕಾರ ಅಧಿನಿಯಮ ಜಾರಿಯಾದ ನಂತರ ಮರುವಿವಾಹದ ನೆಪವನ್ನು ಮುಂದೊಡ್ಡಿ ವಿಧವಾ ಮಹಿಳೆಯರ ಆಸ್ತಿಯ ಹಕ್ಕನ್ನು ಮೊಟಕುಗೊಳಿಸುವುದನ್ನು ಸಂಪೂರ್ಣವಾಗಿ ನಿಷೇಧಿ ಸಲಾಗಿದೆ.

- ಮಿತಾಕ್ಷರ ಪದ್ಧತಿಯನ್ನು ಹಿಂದೂ ಉತ್ತರಾಧಿಕಾರ ಪದ್ಧತಿಯ ಮೂಲವನ್ನಾಗಿಸಿ ಕೊಂಡಿರುವುದರಿಂದ, ಪುರುಷರು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯಲು ಅವರ ಹುಟ್ಟೇ ದಾಯಾದಿ ಹಕ್ಕನ್ನು ತಂದುಕೊಡುತ್ತದೆ. ಆದರೆ ಸ್ತ್ರೀಯರು ಈ ಪದ್ಧತಿಯಲ್ಲಿ ದಾಯಾದಿಗಳೆನಿಸುವುದಿಲ್ಲ. ಹಾಗಾಗಿ ಮಹಿಳೆಯರು ಹುಟ್ಟಿನ ಕಾರಣ ದಿಂದ ಆಸ್ತಿಯಲ್ಲಿ ದಾಯಾದಿಯೆನಿಸಿಕೊಳ್ಳುವುದಿಲ್ಲ ಮತ್ತು ಆಸ್ತಿಯಲ್ಲಿ ಹಕ್ಕು ಪ್ರಾಪ್ತಿ ಯಾಗುವುದಿಲ್ಲ. ಅವಳಿಗೆ ದೊರೆಯುವ ಹಕ್ಕು ಕೇವಲ ಜೀವನಾಂಶಕ್ಕೆ ಮಾತ್ರವೇ ಸೀಮಿತವಾದು ದಾಗಿರುತ್ತದೆ. "೧೯೩೭ರ ಹಿಂದೂ ಮಹಿಳೆಯ ಆಸ್ತಿ ಹಕ್ಕು ಅಧಿನಿಯಮದ ಮೂಲಕ ಮಿತಾಕ್ಷರ ಕುಟುಂಬದಲ್ಲಿ ಪುರುಷ ದಾಯಾದಿಯ ಮರಣಾ ನಂತರ ಅವನ ಪತ್ನಿಯನ್ನು ಅವನ ಹಿತಾಸಕ್ತಿಗೆ ಹಕ್ಕುಳ್ಳವಳನ್ನಾಗಿ ಮಾಡುವ ಮೂಲಕ ಉತ್ತರ

ಜೀವಿತಾಧಿಕಾರದ ನಿಯಮದಲ್ಲಿ ಮಹತ್ತರ ಬದಲಾವಣೆಯನ್ನು ಮಾಡ ಲಾಯಿತು. ೧೯೫೬ರ ಅಧಿನಿಯಮದಲ್ಲಿಯೂ ಇದನ್ನೇ ಉಳಿಸಿಕೊಳ್ಳಲಾಗಿದೆ."[೧೫]

ಇವುಗಳ ಜೊತೆಗೆ ಅಳಿಯ ಸಂತಾನ ಮತ್ತು ಮರುಮಕಟ್ಟಾಯಂ ಕಾನೂನನ್ನು ಇದರಲ್ಲಿ ಕ್ರೋಢೀಕರಿಸಲಾಗಿದೆ. ದಕ್ಷಿಣ ಭಾರತದ ಪಶ್ಚಿಮ ಕರಾವಳಿಯ ಟ್ರಾವಂಕೂರ್-ಕೊಚ್ಚನ್, ಮಲಬಾರ್ ಮತ್ತು ದಕ್ಷಿಣಕನ್ನಡ ಪ್ರದೇಶಗಳಲ್ಲಿ ವಾಸಿಸುವ ಬಹುತೇಕ ಜನರಿಗೆ ಇದು ಅನ್ವಯಿಸುತ್ತದೆ. ಈ ಪ್ರದೇಶಗಳಲ್ಲಿನ ನಾಯರ್, ಥಿಯ್ಯ ಮತ್ತಿತರ ಬ್ರಾಹ್ಮಣರಲ್ಲದ ಜಾತಿಯ ಜನರು, ಕೆಲವು ವಿಷಯಗಳಲ್ಲಿ ಮಾಪಿಳ್ಳೆಗಳು, ನಂಬೂದರಿ ಬ್ರಾಹ್ಮಣರಲ್ಲಿನ ಪಯ್ಯನೂರ್ ಗ್ರಾಮಂ ಪಂಗಡ, ಬಂಟರು, ಬಿಲ್ಲವರು, ಜೈನರಲ್ಲಿನ ಪುರೋಹಿತ ಪಂಗಡದವರಲ್ಲದವರು ಈ ಕಾನೂನಿಗೆ ಒಳಪಡುತ್ತಾರೆ. ಇದು ಹಿಂದೂ ಕಾನೂನಿನ ಒಂದು ಭಾಗವೇ ಆಗಿದೆ. ಆದರೆ ಹಿಂದೂ ಕಾನೂನಿನ ಉಳಿದ ಶಾಖೆಗಳಿಗೂ ಈ ಶಾಖೆಗೂ ವ್ಯತ್ಯಾಸಗಳಿವೆ. ಅದೇನೆಂದರೆ ಮರುಮ ಕಟ್ಟಾಯಂ ಮತ್ತು ಅಳಿಯ ಸಂತಾನ ಕಾನೂನು ಇವು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಆಧರಿಸಿದ್ದರೆ, ಉಳಿದ ಹಿಂದೂ ಕಾನೂನು ಪಿತೃ/ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಆಧರಿಸಿವೆ.

ಹೀಗೆ ಹಿಂದೂ ಉತ್ತರಾಧಿಕಾರ ಅಧಿನಿಯಮ ಈ ಹಿಂದೆ ಜಾರಿಯಲ್ಲಿದ್ದ ಹಿಂದೂ ವಾರಸಾ ಅಧಿನಿಯಮ ೧೯೨೯ ಮತ್ತು ಹಿಂದೂ ಮಹಿಳೆಯ ಆಸ್ತಿ ಹಕ್ಕುಗಳು ೧೯೩೭ರಲ್ಲಿದ್ದ ತೊಡಕುಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಅವುಗಳನ್ನು ಸರಿಪಡಿಸುವ ಮೂಲಕ ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮವನ್ನು ಕ್ರೋಢೀಕರಿಸಿ ಈ ಎಲ್ಲಾ ಬದಲಾವಣೆಗಳನ್ನು ಜಾರಿ ಮಾಡಲಾಯಿತು. ಆ ಮೂಲಕ ಮಹಿಳೆಯರ ಪರವಾಗಿ ಕಾನೂನನ್ನು ಮರುಪರಿಶೀಲಿಸಿ ಲಿಂಗಸೂಕ್ಷ್ಮತೆಯ ದೃಷ್ಟಿಕೋನದಿಂದ ಕಾನೂನನ್ನು ಮಹಿಳಾ ಪರವಾಗಿ ಪುನರ್ ರೂಪಿಸಲಾಯಿತು. ಈ ರೀತಿಯಾಗಿ ಕಾನೂನನ್ನು ಪರಿಶೀಲನೆಗೊಳಪಡಿಸಲು ಪ್ರಮುಖವಾಗಿ ಎರಡು ತಿದ್ದುಪಡಿಗಳನ್ನು ಮಾಡಲಾಯಿತು. ಈ ಎರಡೂ ತಿದ್ದುಪಡಿಗಳು ೧೯೫೬ರ ಅಧಿನಿಯಮವನ್ನು ಪರಿಷ್ಕೃತಗೊಳಿಸಲು ಸಹಾಯಕವಾಗಿವೆ.

**ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೧೯೯೦**

ಮಹಿಳಾ ದಶಕದ ಸಂದರ್ಭದಲ್ಲಿ ಭಾರತದಲ್ಲಿ ಮಹಿಳಾ ಚಳುವಳಿ ಬಲವಾಗಿ ಬೆಳೆದು ಮಹಿಳೆಯರಲ್ಲಿ ಜಾಗೃತಿಯನ್ನುಂಟುಮಾಡಿತ್ತು. ಜೊತೆಗೆ ಮಹಿಳೆಯರ ಸ್ಥಾನಮಾನದ ಸುಧಾರಣೆಗೆ ಸರ್ಕಾರದ ಮೇಲೆ ಒತ್ತಡಗಳು ಆರಂಭವಾಗಿದ್ದವು. ಅದಾಗಲೇ ಸ್ತ್ರೀಪರವಾದ ಅನೇಕ ತೀರ್ಪುಗಳು ಸರ್ವೋಚ್ಚ ನ್ಯಾಯಾಲಯದಿಂದ ಹೊರಬಿದ್ದಿದ್ದವು ಮತ್ತು ಆ ಮೂಲಕ ಸರ್ಕಾರಗಳಿಗೆ ಸ್ತ್ರೀಯರ ಸ್ಥಿತಿಗತಿಯ ಸುಧಾರಣೆಯ ನಿರ್ದೇಶನ ದೊರೆಯತೊಡಗಿತ್ತು. ದೇಶದ

ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ರಾಜಕೀಯದಲ್ಲಿ ತಮ್ಮ ಮತದಾನದ ಹಕ್ಕಿನ ಮಹತ್ವವನ್ನು ಸರ್ಕಾರಕ್ಕೆ ಮನಗಾಣಿಸಿದ್ದರು. ಹೀಗಾಗಿ ಮತದಾರ ಮಹಿಳೆಯರ ರಾಜಕೀಯ ಶಕ್ತಿಯನ್ನು ಅರಿತ ರಾಜಕೀಯ ಪಕ್ಷಗಳು ಮಹಿಳಾ ಮತದಾರರನ್ನು ಒಲಿಸಿಕೊಳ್ಳುವ ಸಲುವಾಗಿ ಹಲವಾರು ಕ್ರಮಗಳನ್ನು ಕೈಗೊಳ್ಳಲು ಆರಂಭಿಸಿದ್ದರು. ಅವುಗಳ ಪ್ರತಿಫಲವೇ ಈ ತಿದ್ದುಪಡಿಗಳು. ಅದು ಆಸ್ತಿಹಕ್ಕಿನ ಕಾಯಿದೆಗೂ ವಿಸ್ತರಿಸಿತು. ಈ ತಿದ್ದುಪಡಿ ಕೆಲವು ಉದ್ದೇಶಗಳನ್ನು ಕೇಂದ್ರೀಕರಿಸಿಕೊಂಡು ಜಾರಿಯಾಯಿತು.

- ಆಸ್ತಿ ಹಕ್ಕಿನಲ್ಲಿರುವ ಲಿಂಗತಾರತಮ್ಯವನ್ನು ಹೋಗಲಾಡಿಸುವುದು.
- ಹೆಣ್ಣುಮಕ್ಕಳಿಗೆ ಆರ್ಥಿಕ ಬೆಂಬಲ ಒದಗಿಸುವುದರ ಮೂಲಕ ಅವರ ಸ್ಥಾನಮಾನವನ್ನು ಸುಧಾರಿಸುವುದು.
- ವರದಕ್ಷಿಣೆಯ ವಿನಾಶಕಾರಿ ಪದ್ಧತಿಯನ್ನು ತೊಡೆದು ಹಾಕುವುದು.

ಈ ಮೂರು ಮೂಲ ಉದ್ದೇಶಗಳನ್ನು ೧೯೯೦ರ ತಿದ್ದುಪಡಿಯಲ್ಲಿ ಜಾರಿಗೊಳಿಸಲಾಯಿತು. ಇವುಗಳನ್ನು ಕೇಂದ್ರ ಅಧಿನಿಯಮ ೧೯೫೬ರ ೩೦ಕ್ಕೆ ಹೊಸ ಕಲಮುಗಳ ಸೇರ್ಪಡೆ, ಅಂದರೆ ಹಿಂದೂ ಉತ್ತರಾಧಿಕಾರ ಕೇಂದ್ರ ಕಾಯಿದೆ ೧೯೫೬ರ ೩೦ನೇ ಅಧಿನಿಯಮದ ಕಲಮು ೬ರ ನಂತರ ೬–ಎ, ೬–ಬಿ, ೬–ಸಿ ಕಲಮುಗಳ ಸೇರ್ಪಡೆಯಾಗಿವೆ"[೧೬] ಎಂದು ಸೇರಿಸಲಾಗಿದೆ. ಈ ಉಪಕಲಮುಗಳ ವಿವರ ಕೆಳಗಿನಂತಿದೆ.

**ಕಲಂ: ೬–ಎ ದಾಯಾದಿಯ ಸ್ವತ್ತಿನಲ್ಲಿ ಮಗಳಿಗೆ ಸಮಾನ ಹಕ್ಕು.** ಈ ಅಧಿನಿಯಮದ ಕಲಮು ೬ರಲ್ಲಿ ಏನೇ ಇದ್ದಾಗಲೂ ಸಹ ಅಂದರೆ

(ಎ) ಮಿತಾಕ್ಷರ ಕಾನೂನು ಅನ್ವಯಿಸುವ ಹಿಂದೂ ಅವಿಭಾಜ್ಯ ಕುಟುಂಬದಲ್ಲಿ ಜನಿಸಿದ ಮಗಳು ತನ್ನ ಜನನದಿಂದಲೇ ದಾಯಾದಿ ಸ್ವತ್ತಿನಲ್ಲಿ ಸ್ವಂತ ಹಕ್ಕನ್ನು ಪಡೆಯುವುದಲ್ಲದೆ, ಈ ಹಕ್ಕು ಕುಟುಂಬದಲ್ಲಿ ಜನಿಸಿದ ಮಗನ ಹಕ್ಕಿಗೆ ಸಮನಾಗಿದ್ದು, ದಾಯಾದಿ ಸ್ವತ್ತಿನಲ್ಲಿ ಮಗನಾಗಿ ಜನಿಸಿದ್ದರೆ ಸಿಗುವಂತಹದ್ದೇ ಎಲ್ಲ ಹಕ್ಕುಗಳು ಲಭ್ಯವಿದ್ದು ತನ್ನ ಜೀವಿತಾವಧಿಯಲ್ಲಿ ದಾಯಾದಿ ಸ್ವತ್ತಿಗಾಗಿ ಕ್ಲೇಮು ಮಾಡುವ ಹಕ್ಕು, ಹೊಣೆಗಾರಿಕೆ ಹಾಗೂ ಅಸಮರ್ಥತೆಯು ಮಗನಿಗಿರುವಂತೆಯೇ ಇರುತ್ತದೆ.

(ಬಿ) ಇಂತಹ ಹಿಂದೂ ಅವಿಭಕ್ತ ಕುಟುಂಬದಲ್ಲಿನ ದಾಯಾದಿ ಸ್ವತ್ತಿನ ವಿಭಜನೆಯಲ್ಲಿ ಮಗನಿಗೆ ಕೊಡಮಾಡುವ ರೀತಿಯಲ್ಲಿಯೇ ಮಗಳಿಗೂ ಸಹ ಸಮಪಾಲನ್ನು ಕೊಡತಕ್ಕದ್ದು ಆದರೆ ತಮ್ಮ ಜೀವಿತ ಕಾಲದಲ್ಲಿ ಸ್ವತ್ತು ವಿಭಜನೆಯಲ್ಲಿ ಪಾಲು ಪಡೆದು ನಂತರ ಮರಣಿಸಿದ ಮಗನಾಗಲೀ ಅಥವಾ ಮಗಳಾಗಲೀ ಪಡೆದ ಸ್ವತ್ತಿನ ಪಾಲು ಜೀವಂತವಿರುವ ಮಕ್ಕಳಿಗೆ ಪೂರ್ವ ಮೃತರಾದ ಮಗಳ ಅಥವಾ ಮಗಳ ಪಾಲು ಪ್ರಾಪ್ತವಾಗುವುದು. ಮುಂದೆ

ವಿವರಿಸುವಂತೆ ಪೂರ್ವ ಮೃತನಾದ ಮಗನ ಮಕ್ಕಳಿಗಾಗಲೀ ಅಥವಾ ಪೂರ್ವ ಮೃತಳಾದ ಮಗಳ ಮಕ್ಕಳಿಗಾಗಲೀ ಲಭಿಸುವ ಪಾಲು, ಅಂತಹ ಮಕ್ಕಳು ವಿಭಜನೆಯ ಸಮಯದಲ್ಲಿ ಸಿಗುವುದಕ್ಕೆ ಸಮನಾಗಿದ್ದು, ಪೂರ್ವ ಮೃತನಾದಂತಹ ಮಗನ ಮಕ್ಕಳಿಗೆ ಅಥವಾ ಪೂರ್ವ ಮೃತಳಾದ ಮಗಳ ಮಕ್ಕಳಿಗೆ ದೊರೆಯುವುದು.

(ಸಿ) : ಈ ಕಲಮಿನ ಉಪಕಲಮು (ಎ) ಅಡಿಯಲ್ಲಿ ಹಿಂದೂ ಮಹಿಳೆಗೆ ಲಭಿಸುವಂತಹ ಹಕ್ಕು ದಾಯಾದಿ ಸ್ವತ್ತಿನ ಒಡೆತನದ್ದಾಗಿದ್ದು, ಈ ಅಧಿನಿಯಮದಲ್ಲಿ ಏನೇ ಇದ್ದರೂ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇನ್ನಾವುದೇ ಕಾನೂನು ಇದ್ದರೂ ತನ್ನ ಹಕ್ಕಿನ ಸ್ವತ್ತನ್ನು ಮರಣ ಶಾಸನದ ಮೂಲಕವಾಗಲೀ ಅಥವಾ ಇನ್ನಾವುದೇ ರೀತಿಯಲ್ಲಿ ವಿಲೆ ಮಾಡಬಹುದಾದ ಸಂಪೂರ್ಣ ಹಕ್ಕು ಸದರಿ ಹಿಂದೂ ಮಹಿಳೆಯದ್ದಾಗಿರುತ್ತದೆ.

ಹಿಂದೂ ಉತ್ತರಾಧಿಕಾರ ಕಾಯ್ದೆ (ಕರ್ನಾಟಕ ತಿದ್ದುಪಡಿ) ೧೯೯೦ರ ಅಧಿನಿಯಮವು ಜಾರಿಗೆ ಬರುವ ಮುನ್ನ ಮಗಳಿಗೆ ವಿವಾಹವಾಗಿದ್ದಲ್ಲಿ ಮತ್ತು ಸ್ವತ್ತು ವಿಭಜನೆಯಾಗಿದ್ದಲ್ಲಿ ಈ ಕಲಮಿನ ಉಪಕಲಮು (ಬಿ) ಅನ್ವಯಿಸುವುದಿಲ್ಲ.

**ಕಲಂ ೬–ಬಿ : ಮರಣಾ ನಂತರ ಜೀವಂತ ಇರುವವರಿಗೆ ಹಿತಾಸಕ್ತಿಯ ಪ್ರಾಪ್ತಿ.**

ಹಿಂದೂ ಮಹಿಳೆಯು ಹಿಂದೂ ಉತ್ತರಾಧಿಕಾರ (ಕರ್ನಾಟಕ ತಿದ್ದುಪಡಿ) ಅಧಿನಿಯಮ ೧೯೯೦ ಜಾರಿಗೆ ಬಂದ ನಂತರ ಮೃತಳಾದಲ್ಲಿ ಸದರಿ ಸ್ವತ್ತಿನಲ್ಲಿ ಅವಳಿಗಿದ್ದ ಹಿತಾಸಕ್ತಿಯು ಕುಟುಂಬದಲ್ಲಿನ ದಾಯಾದಿ ಸದಸ್ಯರುಗಳಲ್ಲಿ ಹಂಚಿಕೆಯಾಗಬಹುದೇ ವಿನಃ ಈ ಅಧಿನಿಯಮದಂತೆ ಪ್ರಾಪ್ತವಾಗುವುದಿಲ್ಲ. ಆದರೆ ಮೃತಳು ಯಾವುದೇ ಮಗು ಅಥವಾ ಪೂರ್ವ ಮೃತಮಕ್ಕಳ ಮಕ್ಕಳು ಇದ್ದಲ್ಲಿ ಮಿತಾಕ್ಷರ ದಾಯಾದಿ ಸ್ವತ್ತಿನಲ್ಲಿಯ ಮೃತಳ ಹಿತಾಸಕ್ತಿಯು ವಿಲೇ ಮಾಡುವ ಮೂಲಕವೂ ಅಥವಾ ಉತ್ತರಾಧಿಕಾರವು ವಿಲೆ ಮಾಡಿಲ್ಲದ ಮೂಲಕವೂ ಈ ಅಧಿನಿಯಮದ ಪ್ರಕಾರವೂ ಪ್ರಾಪ್ತವಾಗಲಿದ್ದು ಜೀವಿತಾವಧಿಯಂತೆ ಅಲ್ಲ.

- ಈ ಕಲಮಿನ ಉದ್ದೇಶಗಳಿಗಾಗಿ ಮಿತಾಕ್ಷರ ದಾಯಭಾಗದಲ್ಲಿನ ಹಿಂದೂ ಮಹಿಳೆಯ ಹಿತಾಸಕ್ತಿ ಎಂದರೆ ಅವಳ ಮರಣಾನಂತರ ಸ್ವತ್ತಿನ ವಿಭಜನೆಯಾದಲ್ಲಿ ಅವಳಿಗೆ ಸಿಗುವ ಪಾಲು ಎಂದು ಭಾವಿಸತಕ್ಕದ್ದು. ಅಲ್ಲದೆ ಅವಳಿಗೆ ಇಂತಹ ವಿಭಜನೆಗೆ ಸದರಿ ಹಿಂದೂ ಮಹಿಳೆಯು ಹಕ್ಕುದಾರಳೋ ಅಥವಾ ಅಲ್ಲವೋ ಎನ್ನುವ ಪ್ರಶ್ನೆ ಉದ್ಭವಿಸುವುದಿಲ್ಲ.

- ಅವನು ಅಥವಾ ಅವಳು ಮೃತಳಾಗುವ ಮುನ್ನ ದಾಯಭಾಗದಿಂದ ಪ್ರತ್ಯೇಕವಾಗಿದ್ದಲ್ಲಿ ಅವಳ ಅಥವಾ ಅವನ ವಾರಸುದಾರರು ವಿಲೆಯಾಗದ ಭಾಗದಲ್ಲಿ ಪಾಲು ಕೇಳಲು ಈ ಉಪಕಲಮಿನ ಉಪಬಂಧವು ಅನ್ವಯಿಸುತ್ತದೆ ಎಂದು ಅರ್ಥೈಸುವಂತಿಲ್ಲ.

**ಕಲಂ ೬– ಸಿ: ಕೆಲವು ನಿರ್ದಿಷ್ಟ ಪ್ರಕರಣಗಳಲ್ಲಿ ಆದ್ಯತೆಯ ಮೇರೆಗೆ ಸ್ವತ್ತು ಪಡೆದುಕೊಳ್ಳುವ ಹಕ್ಕು.**

೧. ಹಿಂದೂ ಉತ್ತರಾಧಿಕಾರ (ಕರ್ನಾಟಕ ತಿದ್ದುಪಡಿ) ಅಧಿನಿಯಮ ೧೯೯೦ ಪ್ರಾರಂಭವಾದ ನಂತರ ಯಾವುದೇ ಸ್ಥಿರ ಸ್ವತ್ತಿನ ಹಿತಾಸಕ್ತಿಯು ಅಥವಾ ಯಾವುದೇ ವ್ಯವಹಾರವು ಅವನಿಂದ ಅಥವಾ ಅವಳಿಂದ ನಿರ್ವಹಿಸುತ್ತಿದ್ದಲ್ಲಿ ಒಬ್ಬರಿಂದಲೇ ಅಥವಾ ಇನ್ನೊಬ್ಬರ ಸಹಯೋಗದಿಂದಾಗಲೀ ಕಲಮು ೬ (ಎ) ಅಥವಾ ೬(ಬಿ) ಎರಡು ಅಥವಾ ಹೆಚ್ಚು ವಾರಸುದಾರರು ಅಥವಾ ಯಾವುದೇ ಒಬ್ಬ ವಾರಸುದಾರರು ಅವನ ಅಥವಾ ಅವಳ ಸ್ವತ್ತಿನ ಹಿತಾಸಕ್ತಿಯಲ್ಲಾಗಲೀ ಅಥವಾ ವ್ಯವಹರಣೆ ಮಾಡುವ ಸಾಧ್ಯತೆ ಇದೆಯೊ ಅಂತಹದರಲ್ಲಿ ಆದ್ಯತೆಯ ಹಕ್ಕನ್ನು ಹೊಂದಿರುತ್ತಾರೆ.

೨. ಮೇಲಿನ ಉಪಕಲಮು(೧)ರಲ್ಲಿ ತಿಳಿಸಿರುವ ಸ್ವತ್ತಿನ ಹಿತಾಸಕ್ತಿಯು ವರ್ಗಾವಣೆಗೆ ಪ್ರತಿಫಲವಾಗಿ ಕೊಡಬೇಕಾದ್ದರ ಬಗೆಗೆ ಪಕ್ಷಕಾರರ ನಡುವೆ ಯಾವುದೇ ಒಡಂಬಡಿಕೆ ಇಲ್ಲದಿದ್ದಲ್ಲಿ ಸಂಬಂದಿಸಿದ ಪಕ್ಷಕಾರರ ಅರ್ಜಿಯ ಮೇಲೆ ನ್ಯಾಯಾಲಯವು ನಿರ್ಣಯಿಸಲಿದ್ದು ಯಾವುದೇ ವ್ಯಕ್ತಿಯು ಹಿತಾಸಕ್ತಿಯನ್ನು ಪಡೆಯಲು ಮುಂದೆ ಬಂದಿದ್ದು ತದನಂತರ ಈಗಾಗಲೇ ನ್ಯಾಯಾಲಯದಿಂದ ನಿರ್ಣಯಿಸಲಾದ ಪ್ರತಿಫಲದಿಂದಾಗಿ ( ಇಚ್ಚೆಯಿಲ್ಲದೆ) ಹಿತಾಸಕ್ತಿ ಪಡೆಯಲು ನಿರಾಕರಿಸಿದಾಗ ಅಂತಹ ವ್ಯಕ್ತಿಯು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಗೆ ಸಂಬಂಧಪಟ್ಟಂತೆ ಎಲ್ಲಾ ಖರ್ಚು ವೆಚ್ಚಗಳನ್ನು ಭರಿಸಲು ಹೊಣೆಗಾರನಾಗಿರುತ್ತಾನೆ.

೩. ಈ ಕಲಮಿನಲ್ಲಿರುವ ಹಿತಾಸಕ್ತಿಯನ್ನು ಪಡೆಯಲು ಇಬ್ಬರು ಅಥವಾ ಹೆಚ್ಚು ವಾರಸುದಾರರು ಮುಂದೆ ಬಂದಲ್ಲಿ ಯಾವ ವಾರಸುದಾರನು ವರ್ಗಾವಣೆಗಾಗಿ ಹೆಚ್ಚು ಪ್ರತಿಫಲ ನೀಡುತ್ತಾನೊ ಅವರಿಗೆ ಆದ್ಯತೆ ನೀಡಲಾಗುವುದು. ಹೀಗೆ ಮಗಳು ಹೆಣ್ಣು ಎಂಬ ಕಾರಣಕ್ಕೆ ದಾಯಾದಿತ್ವದ ಹಕ್ಕಿನಿಂದ ವಂಚಿತಳಾಗುವುದನ್ನು ತಡೆಯಲು ಹಾಗೂ ಲಿಂಗ ತಾರತಮ್ಯವು ಮಹಿಳೆಯ ಆರ್ಥಿಕ ಅವಲಂಬನೆಗೆ ಕಾರಣವಾಗುವುದನ್ನು ಪರಿಹರಿಸಲು ಈ ತಿದ್ದುಪಡಿಯನ್ನು ಜಾರಿಗೊಳಿಸಲಾಗಿದೆ. ಮಹಿಳೆಯ ಸ್ಥಾನಮಾನದಲ್ಲಿರುವ ಅಧೀನ ನೆಲೆಯು ತೊಲಗಬೇಕಾದರೆ ಅವಳ ಆರ್ಥಿಕ ಅವಲಂಬನೆಯಿಂದ ಮುಕ್ತಿ ದೊರೆಯಬೇಕು. ಹಾಗೆಯೇ ಆರ್ಥಿಕವಾಗಿ ಸ್ವಾವಲಂಬಿಯಾಗಬೇಕಾದರೆ ಗಂಡು ಮಕ್ಕಳಂತೆ ಹುಟ್ಟಿನಿಂದಲೇ ದಾಯಾದಿತ್ವದ ಹಕ್ಕನ್ನು ಪಡೆದರೆ ಪುರುಷರಂತೆ ಆರ್ಥಿಕ ಭದ್ರತೆಯ ಮನೋಭಾವ ಮಹಿಳೆಯರಲ್ಲಿ ಸ್ವಾಭಾವಿಕವಾಗಿ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ. ಈ ಮೂಲಕ ಸ್ವಾವಲಂಬಿ ಬದುಕಿನೆಡೆಗೆ ಸಾಗಲು ಧೃಢ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತದೆ. ಈ ಮೂಲಕ ಸಮಾಜದಲ್ಲಿ ಮಹಿಳೆಯ ಸ್ಥಿತಿಗತಿ ತಾನಾಗಿಯೇ ಸುಧಾರಣೆಯಾಗುತ್ತದೆ. ಈ

ಮೊದಲು ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ಇರದಿದ್ದುದರಿಂದ ಅವರ ವಿವಾಹದ ಸಂದರ್ಭದಲ್ಲಿ ಉಡುಗೊರೆಗಳನ್ನು, ಆಭರಣಗಳನ್ನು ನೀಡಲಾಗುತ್ತಿತ್ತು ಇದರ ಮುಂದುವರೆದ ರೂಪವಾಗಿ ವರದಕ್ಷಿಣೆ ಬೇರುಬಿಟ್ಟಿದೆ. ವರದಕ್ಷಿಣೆ ಹೆಣ್ಣಿನ ಬದುಕಿನ ಮೇಲೆ ಋಣಾತ್ಮಕ ಪರಿಣಾಮವನ್ನು ಉಂಟುಮಾಡುತ್ತದೆ. ಹಲವು ಅವಕಾಶಗಳಿಂದ ಮಹಿಳೆಯರು ವಂಚಿತರಾಗುವಂತೆ ಮಾಡಲು ವರದಕ್ಷಿಣೆಯು ಪ್ರಮುಖವಾದ ಕಾರಣವಾಗಿದೆ. ಹೆಣ್ಣುಮಕ್ಕಳಿಗೆ ಓದಿಸುವ ಖರ್ಚನ್ನು ಜಮಾ ಮಾಡಿದರೆ ಅವಳ ಮದುವೆಗೆ ವರದಕ್ಷಿಣೆಯಾಗುತ್ತದೆ ಎಂಬ ಮನೋಭಾವ ತಂದೆ ತಾಯಿಯರಲ್ಲಿ ಬೆಳೆಯಲು ವರದಕ್ಷಿಣೆ ಕಾರಣವಾಗಿದೆ. ಹೆಚ್ಚು ಓದಿಸುವುದು ಅಪಾಯಕಾರಿ. ಆದ್ದರಿಂದ ವರನ ಗುಣಮಟ್ಟ ಉತ್ತಮವಾಗಿರಬೇಕೆಂಬ ಬೇಡಿಕೆಯು ಹೆಣ್ಣುಮಕ್ಕಳದ್ದಾಗುತ್ತದೆ, ಆಗ ವರದಕ್ಷಿಣೆಯ ಪ್ರಮಾಣವೂ ಹೆಚ್ಚಾಗುತ್ತದೆ. ಇದರಿಂದ ಹೆಚ್ಚಿನ ಹೊರೆ ತಮ್ಮ ಮೇಲೆ ಬೀಳುತ್ತದೆ ಹಾಗಾಗಿ ಅಕ್ಷರಜ್ಞಾನ ತಿಳಿಯುವಷ್ಟು ಓದಿದರೆ ಸಾಕು ಎಂದು ಹೆಣ್ಣುಮಕ್ಕಳ ಓದನ್ನು ಮೊಟಕುಗೊಳಿಸಲಾಗುತ್ತದೆ. ಹೀಗೆ ಹಲವು ವಿಚಾರಗಳಲ್ಲಿ ಹೆಣ್ಣು ಮಕ್ಕಳ ಹಕ್ಕನ್ನು ಈ ವರದಕ್ಷಿಣೆ ಕಿತ್ತುಕೊಳ್ಳುತ್ತದೆ. ಹಾಗಾಗಿ ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ದಾಯಾದಿತ್ವದ ಹಕ್ಕನ್ನು ನೀಡಿದರೆ ವರದಕ್ಷಿಣೆಯಂತಹ ಸಮಸ್ಯೆಗೆ ಉತ್ತರ/ ಪರಿಹಾರವಾಗುವುದು ( ವರದಕ್ಷಿಣೆ ಅಥವಾ ಆಸ್ತಿಯಲ್ಲಿ ಸಮಪಾಲು ಆಯ್ಕೆ ಅವರ ಮುಂದಿದ್ದಾಗ) ಈ ತಿದ್ದುಪಡಿಯಲ್ಲಿ ಮಹಿಳೆಯರಿಗೆ ಆರ್ಥಿಕ ಬೆಂಬಲವನ್ನು ಒದಗಿಸುವ ಚಿಂತನೆಗಳು ಕಂಡುಬರುತ್ತವೆ.

ಈ ತಿದ್ದುಪಡಿ ಮಹಿಳೆಯರಿಗೆ ಆರ್ಥಿಕ ಭದ್ರತೆಯನ್ನೊದಗಿಸುವುದು ಎಂಬ ಆಶಯವನ್ನು ಅನೇಕ ಸಂಘ ಸಂಸ್ಥೆಗಳು ತಳ್ಳಿಹಾಕಿದ್ದವು. ಕಾರಣ ಈ ತಿದ್ದುಪಡಿಯು ಕೇವಲ ಅವಿವಾಹಿತ ಮಹಿಳೆಯರಿಗೆ ಮತ್ತು ವಿಧವೆಯರಿಗೆ ಸಹಾಯಕವಾಗಬಹುದು ಆದರೆ ವಿವಾಹಿತ ಮಹಿಳೆಯರಿಗಲ್ಲ ಎಂಬುದು ಅವರ ನಿಲುವು. ವಿವಾಹಿತ ಮಹಿಳೆಯರು ತವರು ಮನೆಯ ಆಸ್ತಿಯಲ್ಲಿ ಪಾಲು ಕೇಳುವುದು ನೈತಿಕವಲ್ಲ ಎಂಬ ಸಾಮಾಜಿಕರಣಕ್ಕೊಳಗಾದ ಮಹಿಳೆಯರು ಗಂಡನ ಮನೆಯವರ ಆಸ್ತಿಯಲ್ಲಿ ಕೇಳಬೇಕೆಂಬ ಒತ್ತಡಕ್ಕೆ ಬಲಿಯಾಗಬಹುದು. ತವರು ಮನೆಯ ಏಳಿಗೆಯನ್ನು ಬಯಸಬೇಕಾದುದು ಹೆಣ್ಣಿನ ಮೂಲ ಗುಣವೆಂದು ನಂಬಿಸಿ, ಹೆಣ್ಣಿನ ಸಂಕಷ್ಟದ ಸಂದರ್ಭದಲ್ಲಿ ಸಹಾಕ್ಕಾಗುವುದು ಸಹೋದರರು. ಹಾಗಾಗಿ ಆಸ್ತಿಯಲ್ಲಿ ಪಾಲು ಕೇಳಿದರೆ ತವರು ಮನೆಯ ಸಂಬಂಧ ಕಡಿದುಕೊಳ್ಳಬೇಕಾಗುವುದು ಎಂಬ ಸಂಕಷ್ಟದ ಪರಿಸ್ಥಿತಿ ಯಲ್ಲಿ ಹೆಣ್ಣು ಮಕ್ಕಳು ಡೋಲಾಯಮಾನ ಸ್ಥಿತಿಯನ್ನು ಎದುರಿಸಬೇಕಾಗಬಹುದು. ಹಾಗಾಗಿ ಈ ತಿದ್ದುಪಡಿಯಿಂದ ಹೆಣ್ಣುಮಕ್ಕಳ ಸ್ಥಿತಿ ಹೀಗಿರುವುದಕ್ಕಿಂತಲೂ ದುರ್ಭರವಾಗಬಹುದಾದ ಸಾಧ್ಯತೆಗಳಿವೆ ಎಂಬ ಶಂಕೆಯನ್ನು ವ್ಯಕಪ್ತಡಿಸುವ ಮೂಲಕ ಈ ಕಾಯಿದೆಯ ತಿದ್ದುಪಡಿಯನ್ನು ತೀವ್ರವಾಗಿ ವಿರೋಧಿಸಲಾಗಿತ್ತು. ಆದರೆ ಈ ತಿದ್ದುಪಡಿಯು ದಾಯಾದಿತ್ವದ ಹಕ್ಕನ್ನು ಮಾತ್ರ

ಕೊಡಮಾಡದೆ ಆ ಹಕ್ಕನ್ನು ಪಡೆಯಬೇಕಾದರೆ ಜೊತೆಗೆ "ಆಸ್ತಿಹಕ್ಕಿನ ಸಹಭಾಗಿತ್ವದ ಎಲ್ಲಾ ಸಂಭವನೀಯ ಅಂಶಗಳು ಇದರಲ್ಲಿ ಒಳಗೊಳ್ಳುತ್ತವೆ ಎಂದು ಹೇಳುತ್ತದೆ."[೧೭] ಇದು ಮಹಿಳೆಯರು ಇಲ್ಲಿಯವರೆಗೂ ಗಂಡು ಮಗ ಹೊರುತ್ತಿದ್ದ ಎಲ್ಲ ಹೊಣೆಗಾರಿಕೆ ಜವಾಬ್ದಾರಿಗಳನ್ನು ಹೊರಬೇಕು ಎಂದು ತಿಳಿಸುವುದು ಎಂದು ಗ್ರಹಿಸಬಹುದಾಗಿದೆ. ಅಂದರೆ ತಂದೆಯ ವೈಯಕ್ತಿಕ ಸಾಲವನ್ನು ತೀರಿಸುವ ಹೊಣೆಗಾರಿಕೆಯನ್ನು ಗಂಡುಮಕ್ಕಳಂತೆ ಹೆಣ್ಣು ಮಕ್ಕಳೂ ಸಮನಾಗಿ ಹೊರಬೇಕಾಗಿರುತ್ತದೆ. ಹಾಗಾದಾಗ ಎಲ್ಲ ಜವಾಬ್ದಾರಿಗಳನ್ನು ಸಹೋದರರೊಟ್ಟಿಗೆ ಸಮನಾಗಿ ಹಂಚಿಕೊಂಡಾಗ ತವರಿನ ಸಂಬಂಧವನ್ನು ಕಳೆದುಕೊಳ್ಳಬೇಕಾದ ಅನಿರ್ವಾಯತೆ ಹೆಣ್ಣು ಮಕ್ಕಳಿಗೆ ಬರುವುದಿಲ್ಲವೆಂದು ಭಾವಿಸಬಹುದು. ಸಹೋದರರರೊಂದಿಗಿನ ಸೌಹಾರ್ದಯುತ ಸಂಬಂಧ ಯಾವ ಬದಲಾವಣೆಗಳೂ ಇಲ್ಲದಂತೆ ಮುಂದುವರೆಯಬಹುದು. ಆದರೆ ಸಹೋದರರೂ ಸಮಾನ ಮನಸ್ಕರಾಗಿ ಆಸ್ತಿಯಲ್ಲಿ ಪಾಲು ನೀಡಲು ನಿರಾಕರಿಸದೆ, ಯಾವುದೇ ಕುತಂತ್ರಗಳನ್ನು ಮಾಡದೆ ಕಾನೂನನ್ನು ಸಹಮತದಿಂದ ಒಪ್ಪಿಕೊಳ್ಳಬೇಕು. ಮಹಿಳೆಯು ಪರರ ಮನೆಯ ಸ್ವತ್ತು ಎಂಬ ಪಟ್ಟದಿಂದ ಬೇರ್ಪಡಲು ಒಂದು ಅವಕಾಶವನ್ನು ಈ ಕಾಯಿದೆಯು ತಂದುಕೊಡುತ್ತದೆ. ಹಾಗೆಯೇ ಗಂಡನ ಮನೆಯಲ್ಲಿಯೂ ಮಹಿಳೆಯ ಅಸ್ತಿತ್ವದ ಉಳಿವಿಗೆ ಅವಕಾಶಗಳು ದೊರೆಯಬಹುದಾಗಿದೆ. ಆದರೆ ಈ ತಿದ್ದುಪಡಿಯು ಮಹಿಳೆಯರಿಗೆ ಸಂಪೂರ್ಣ/ ಪರಿಪೂರ್ಣವಾದ ಆಸ್ತಿ ಹಕ್ಕನ್ನು ದೊರಕಿಸಿಕೊಡುವಲ್ಲಿ ಕೆಲವು ಗೊಂದಲಗಳನ್ನು ಹಾಗೆಯೇ ಉಳಿಸಿಕೊಂಡಿತ್ತು. ಅವುಗಳೆಂದರೆ, ಆಸ್ತಿ ಹಕ್ಕಿನ ಸಹಭಾಗಿತ್ವದ ಎಲ್ಲ ಸಂಭವನೀಯ ಅಂಶಗಳಿಗೆ ಒಳಗಾಗುತ್ತದೆ ಎಂದು ತಿದ್ದುಪಡಿಯು ಹೇಳುತ್ತದೆ. ಆದರೆ ಸ್ಪಷ್ಟವಾದ ವಿವರಣೆಯಿಲ್ಲ. ಅಂದರೆ ತಿದ್ದುಪಡಿಯ ಪ್ರಕಾರ ಮಹಿಳೆಯ ಮಕ್ಕಳೂ ಹುಟ್ಟಿನಿಂದ ಸಮಪಾಲು ಪಡೆಯುತ್ತಾರೆಯೇ?, ತನ್ನ ಪಾಲಿನ ಆಸ್ತಿಯನ್ನು ಮಾರಲಿಚ್ಚಿಸುವ ಮಹಿಳೆಯು ಕಾಯಿದೆಯ ಪ್ರಕಾರ ಬೆಲೆಯ ವಿಷಯದಲ್ಲಿ ವಿವಾದಗಳಾಗಿ ಹೊರಗಿನವರಿಂದ ಹೆಚ್ಚಿನ ಬೆಲೆ ಸಿಗಬಹುದೆಂದು ಬೆಲೆ ನಿರ್ಧರಿಸಲು ನ್ಯಾಯಾಲಯಕ್ಕೆ ಅರ್ಜಿ ಹಾಕಬಹುದು. ನ್ಯಾಯಾಲಯ ನಿರ್ಧರಿಸಿದ ಬೆಲೆಗೆ ಆಸ್ತಿಯನ್ನು ತೆಗೆದುಕೊಳ್ಳಲು ಪಾಲುದಾರರು ನಿರಾಕರಿಸಿದರೆ ನ್ಯಾಯಾಲಯಕ್ಕೆ ತಗುಲಿದ ವೆಚ್ಚಗಳನ್ನು ಪಾಲುದಾರರೆ ಭರಿಸಬೇಕು. ನ್ಯಾಯಾಲಯ ತೀರ್ಮಾನಿಸಿದ ಬೆಲೆಗೆ ಆಸ್ತಿಯನ್ನು ಮಾರಲು ಮಹಿಳೆಯ ಒಪ್ಪಿಗೆಯಿರದಿದ್ದರೆ ಅವಳಿಗೆ ಅಪೀಲು ಹೋಗುವ ಅವಕಾಶವಿದೆಯೇ ಎಂಬುದು ಸ್ಪಷ್ಟವಾಗಿಲ್ಲ. ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ನಡುವಿನ ತಾರತಮ್ಯವನ್ನು ಹೋಗಲಾಡಿಸುವ ಉದ್ದೇಶವನ್ನು ಹೊಂದಿರುವ ಈ ಕಾಯಿದೆಯು ಹೆಣ್ಣು ಮಕ್ಕಳು ಮತ್ತು ಸ್ತ್ರೀ ವಾರಸುದಾರರ ನಡುವೆ ಅಸಮಾನತೆಯನ್ನು ಹೆಚ್ಚಿಸುತ್ತದೆ. ಹೀಗೆ ೧೯೯೪ರ ತಿದ್ದುಪಡಿಯು ಮಹಿಳೆಯರಿಗೆ ಆಸ್ತಿ ಹಕ್ಕಿನಲ್ಲಿ ಈಗಾಗಲೇ ಇದ್ದ ಹಲವು ತೊಡಕುಗಳನ್ನು ನಿವಾರಿಸುವ ಉದ್ದೇಶವನ್ನು ಹೊಂದಿದ್ದರೂ ಸಹ ಇನ್ನೂ ಕೆಲವು ಲೋಪದೋಷಗಳು ಹಾಗೆಯೇ ಉಳಿದುಕೊಂಡು ಗೊಂದಲವನ್ನುಂಟು ಮಾಡುತ್ತಿದ್ದವು. ಆ ಗೊಂದಲಗಳನ್ನು ನಿವಾರಿಸಲು ಪುನಃ ೨೦೦೫ರ ತಿದ್ದುಪಡಿಯನ್ನು ಜಾರಿಗೊಳಿಸಲಾಗಿದೆ.

**೨.೩. ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೨೦೦೫**

ಹಿಂದೂ ಉತ್ತರಾಧಿಕಾರ ಅಧಿನಿಯಮವನ್ನು ಇನ್ನಷ್ಟು ಸ್ಪಷ್ಟಪಡಿಸುವ ಉದ್ದೇಶದಿಂದ ಈ ತಿದ್ದುಪಡಿಯನ್ನು ಜಾರಿಗೆ ತರಲಾಯಿತು. ಈ ಅಧಿನಿಯಮದಲ್ಲಿ ತಿದ್ದಪಡಿಯಾದ ಪ್ರಮುಖ ಬದಲಾವಣೆಗಳು. ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ರ ೪ನೆಯ ಪ್ರಕರಣದಲ್ಲಿ (೨)ನೆಯ ಪ್ರಕರಣವನ್ನು ಬಿಡತಕ್ಕದ್ದು/ ಬಿಡಲಾಗಿದೆ (ಬಿಟ್ಟಿರುವ ಅಂಶದ ವಿವರವನ್ನು ಸೇರಿಸಬೇಕು ಮತ್ತು ಸೇರಿಸಿರುವುದನ್ನು ಸ್ಪಷ್ಟಪಡಿಸಬೇಕು). ಹಾಗೆಯೇ ೬ನೆಯ ಪ್ರಕರಣದ ಬದಲಾಗಿ ಹೊಸ ಪ್ರಕರಣ ಹಾಕಲಾಗಿದೆ. ಆ ಪ್ರಕಾರವಾಗಿ ಬದಲಾದ ಪ್ರಕರಣದ ವಿವರಗಳು ಈ ಕೆಳಗಿನಂತಿವೆ.

*** ದಾಯಾದಿ ಆಸ್ತಿಯಲ್ಲಿ ಹಿತಾಸಕ್ತಿಯ ಪ್ರಾಪ್ತಿ:**

೧. ಹಿಂದೂ ಉತ್ತರಾಧಿಕಾರ ( ತಿದ್ದುಪಡಿ) ಅಧಿನಿಯಮ ೨೦೦೫ ಪ್ರಾರಂಭವಾದಂದಿನಿಂದ ಮಿತಾಕ್ಷರ ಕಾನೂನು ಅನ್ವಯಿಸುವ ಹಿಂದೂ ಅವಿಭಕ್ತ ಕುಟುಂಬದಲ್ಲಿ ಒಬ್ಬ ದಾಯಾದಿಯ ಮಗಳು ಪಡೆಯಬಹುದಾದ ಹಕ್ಕುಗಳೆಂದರೆ,

ಎ. ಮಗನ ರೀತಿಯಲ್ಲಿಯೇ ಹುಟ್ಟಿನಿಂದಲೇ ತನ್ನ ಸ್ವಂತ ಹಕ್ಕಿನಿಂದಲೇ ಒಬ್ಬ ದಾಯಾದಿ ಆಗಬಹುದು.

ಬಿ. ಆಕೆ ಒಬ್ಬ ಮಗನಾಗಿದ್ದರೆ ದಾಯಾದಿ ಆಸ್ತಿಯಲ್ಲಿ ಯಾವ ಹಕ್ಕುಗಳನ್ನು ಹೊಂದಿರುತ್ತಿದ್ದಳೊ ಅದೇ ಹಕ್ಕುಗಳನ್ನು ಹೊಂದಿರತಕ್ಕದ್ದು.

ಸಿ. ಒಬ್ಬ ಮಗನ ರೀತಿಯಲ್ಲಿಯೇ ಸದರಿ ದಾಯಾದಿ ಆಸ್ತಿಯ ಸಂಬಂಧದಲ್ಲಿ ಅದೇ ರೀತಿಯ ಹೊಣೆಗಾರಿಕೆಗಳಿಗೆ ಒಳಪಟ್ಟಿರತಕ್ಕದ್ದು. ಮತ್ತು ಹಿಂದೂ ಮಿತಾಕ್ಷರ ದಾಯಾದಿಗೆ ಸಂಬಂಧಿಸಿದಂತೆ ಮಾಡಿದ ಯಾವುದೇ ಉಲ್ಲೇಖವು ಒಬ್ಬ ದಾಯಾದಿ ಮಗಳಿಗೆ ಮಾಡಿದ ಉಲ್ಲೇಖವನ್ನು ಒಳಗೊಂಡಿರುತ್ತದೆ ಎಂದು ಭಾವಿಸತಕ್ಕದ್ದು.

ಆದರೆ ಈ ಉಪ ಪ್ರಕರಣದಲ್ಲಿ ಇರುವುದು ಯಾವುದೂ ೨೦೦೪ರ ಡಿಸೆಂಬರ್ ೨೦ನೆಯ ದಿನಾಂಕಕ್ಕೆ ಮುಂಚೆ ನಡೆದಿರುವ ಯಾವುದೇ ಪ್ರಾಪ್ತ ಅಥವಾ ಯಾವುದೇ ಆಸ್ತಿ ವಿಭಜನೆ ಅಥವಾ ಮರಣ ಶಾಸನದ ಮೂಲಕ ಆಸ್ತಿ ವಿಲೆಯು ಸೇರಿದಂತೆ ಆಸ್ತಿ ಪರಭಾರೆಗೆ ಭಾದೆ ಉಂಟುಮಾಡತಕ್ಕದ್ದಲ್ಲ. ಅಥವಾ ಅಸಿಂಧುಗೊಳಿಸತಕ್ಕದ್ದಲ್ಲ.

೨. (೧)ನೇ ಉಪ ಪ್ರಕರಣದ ಕಾರಣದಿಂದ ಯಾವುದೇ ಆಸ್ತಿಗೆ ಒಬ್ಬ ಮಹಿಳೆಯು ಹಕ್ಕುದಾರಳಾದಾಗ ಅದನ್ನು ಆಕೆ ದಾಯಾದಿ ಮಾಲಿಕತ್ವದ ಎಲ್ಲಾ ಹೊರೆಗಳೊಂದಿಗೆ ಹೊಂದಿರತಕ್ಕದ್ದು. ಮತ್ತು ಈ ಅಧಿನಿಯಮ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರತಕ್ಕ ಯಾವುದೇ

ಇತರ ಕಾನೂನಿನಲ್ಲಿ ಏನೇ ಇದ್ದರೂ ಅದು ಆಕೆ ಮರಣಶಾಸನ ಬರೆದು ವಿಲೆ ಮಾಡಬಹುದಾದ ಆಸ್ತಿಯೆಂದು ಪರಿಗಣಿಸತಕ್ಕದ್ದು.

೩. ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೨೦೦೫ ಪ್ರಾರಂಭವಾದ ತರುವಾಯ ಒಬ್ಬ ಹಿಂದೂ ಮೃತನಾದರೆ, ಮಿತಾಕ್ಷರ ಕಾನೂನು ಅನ್ವಯಿಸುವಂಥ ಒಂದು ಹಿಂದೂ ಅವಿಭಕ್ತ ಕುಟುಂಬದಲ್ಲಿ ಆಸ್ತಿಯಲ್ಲಿನ ಅವನ ಹಿತಾಸಕ್ತಿಯು ಈ ಅಧಿನಿಯಮದ ಅಡಿಯಲ್ಲಿನ ಸಂದರ್ಭಾನುಸಾರ ಮರಣ ಶಾಸನ ಸಹಿತ/ ರಹಿತ ವಿಲೆಯ ಮೂಲಕ ಪ್ರಾಪ್ತವಾಗಬೇಕೆ ಹೊರತು ಉತ್ತರ ಜೀವಿತಾಧಿಕಾರದ ಮೂಲಕ ಅಲ್ಲ. ಮತ್ತು ದಾಯಾದಿ ಆಸ್ತಿಯನ್ನು ಒಂದು ಆಸ್ತಿ ವಿಭಜನೆ ನಡೆದಿದೆ ಎಂಬ ರೀತಿಯಲ್ಲಿ ಪಾಲು ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

ಎ. ಮಗನಿಗೆ ಹಂಚಿದಷ್ಟೆ ಪಾಲನ್ನು ಮಗಳಿಗೂ ಹಂಚತಕ್ಕದ್ದು.

ಬಿ ಮುಂಚೆಯೆ ತೀರಿಹೋಗಿದ್ದ ಮಗ/ ಮಗಳು ಆಸ್ತಿ ವಿಭಜನೆಯ ಕಾಲದಲ್ಲಿ ಅವರು ಬದುಕಿದ್ದರೆ ಪಡೆಯುತ್ತಿದ್ದ ಭಾಗವನ್ನು ಹಾಗೆಯೇ ಮುಂಚೆಯೆ ತೀರಿ ಹೋಗಿದ್ದ ಮಗ / ಮಗಳ ಉತ್ತರ ಜೀವಿ ಮಗುವಿಗೆ ಹಂಚತಕ್ಕದ್ದು.

ಸಿ. ಮುಂಚೆಯೆ ತೀರಿ ಹೋಗಿದ್ದ ಮಗ/ಮಗಳು ಆಸ್ತಿ ವಿಭಜನೆಯ ಕಾಲದಲ್ಲಿ ಆತ ಅಥವಾ ಆಕೆ ಪಡೆಯುತ್ತಿದ್ದ ಭಾಗವನ್ನು ಹಾಗೆಯೇ ಮುಂಚೆಯೆ ತೀರಿ ಹೋಗಿದ್ದ ಮಗನ / ಮಗಳ ಅಂಥ ಮುಂಚೆಯೇ ತೀರಿಹೋಗಿದ್ದ ಮಗನ ಅಥವಾ ಮಗಳ ಮಗುವಿಗೆ ಹಂಚತಕ್ಕದ್ದು.

ಈ ಉಪ ಪ್ರಕರಣದ ಉದ್ದೇಶಗಳಿಗಾಗಿ ಒಬ್ಬ ಹಿಂದೂ ಮಿತಾಕ್ಷರ ದಾಯಾದಿಯ ಹಿತಾಸಕ್ತಿ ಎಂಬುದನ್ನು ಆತ ಆಸ್ತಿ ವಿಭಜನೆಯನ್ನು ಕೇಳಲು ಹಕ್ಕುದಾರನಾಗಿರಲಿ ಅಥವಾ ಇಲ್ಲದಿರಲಿ, ಆತ ಮರಣ ಹೊಂದುವುದಕ್ಕೆ ನಿಕಟ ಪೂರ್ವದಲ್ಲಿ ಆಸ್ತಿ ವಿಭಜನೆಯೇನಾದರೂ ಆಗಿದ್ದರೆ ಆ ವಿಭಜನೆಯಲ್ಲಿ ಆತನಿಗೆ ಹಂಚಬಹುದಾಗಿದ್ದ ಆಸ್ತಿಯ ಪಾಲು ಎಂದು ಭಾವಿಸತಕ್ಕದ್ದು.

೪. ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೨೦೦೫ ಪ್ರಾರಂಭವಾದ ತರುವಾಯ ಯಾವನೇ ಮಗ ಮೊಮ್ಮಗ ಅಥವಾ ಮೊಮ್ಮಗನು ಅಂಥ ಯಾವುದೇ ಋಣವನ್ನು ಹಿಂದೂ ಕಾನೂನಿನ ಅಡಿಯಲ್ಲಿ ತೀರಿಸಬೇಕಾದ ಹೊಣೆಗಾರಿಕೆ ಇದೆ ಎಂಬ ಕಾರಣದ ಮೇಲೆ ತಂದೆಯು, ತಾತನು ಅಥವಾ ಮುತ್ತಾತನು ಕೊಡಬೇಕಾದ ಯಾವುದೇ ಸಾಲಕ್ಕಾಗಿ ಆತನ ಮಗ, ಮೊಮ್ಮಗ, ಮೊಮ್ಮಗನ ವಿರುದ್ಧ ದಾವೆ ಹೂಡುವ ಯಾವುದೇ ಹಕ್ಕನ್ನು ಯಾವ ನ್ಯಾಯಾಲಯವೂ ಮಾನ್ಯ ಮಾಡತಕ್ಕದ್ದಲ್ಲ. ಆದರೆ ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೨೦೦೫ರ ಪ್ರಾರಂಭಕ್ಕೆ ಮುಂಚೆ ಮಾಡಿಕೊಂಡ ಯಾವುದೇ ಋಣದ ಸಂದರ್ಭದಲ್ಲಿ ಈ ಉಪ ಪ್ರಕರಣದಲ್ಲಿ ಇರುವುದು ಯಾವುದೂ–

(ಎ) ಸಂದರ್ಭಾನುಸಾರ ಮಗ, ಮೊಮ್ಮಗ ಅಥವಾ ಮೊಮ್ಮಗನ ವಿರುದ್ಧ ದಾವೆ ಹೂಡಲು ಯಾವನೇ ಸಾಲಿಗನ ಹಕ್ಕನ್ನು; ಅಥವಾ

(ಬಿ) ಅಂಥ ಋಣದ ಸಂಬಂಧದಲ್ಲಿ ಅಥವಾ ಅದರ ತೀರಿಕೆಗಾಗಿ ಮಾಡಲಾದ ಯಾವುದೆ ಪರಭಾರೆಯನ್ನು ಬಾಧಿಸತಕ್ಕದ್ದಲ್ಲ ಮತ್ತು ಪವಿತ್ರ ಹೊಣೆಗಾರಿಕೆಯ ನಿಯಮದ ಅಡಿಯಲ್ಲಿ ಅಂಥ ಯಾವುದೇ ಹಕ್ಕು ಅಥವಾ ಪರಭಾರೆಯು ಒಂದು ವೇಳೆ ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಅಧಿನಿಯಮ ೨೦೦೫ ಅನುಮೋದಿತವಾಗಿ ಜಾರಿಗೆ ಬಾರದೆ ಇದ್ದಿದ್ದರೆ ಅದನ್ನು ಯಾವ ರೀತಿಯಲ್ಲಿ ಮತ್ತು ಎಷ್ಟರಮಟ್ಟಿಗೆ ಜಾರಿಮಾಡಬಹುದಾಗಿತ್ತೋ ಅದೇ ರೀತಿಯಲ್ಲಿ ಅಷ್ಟರಮಟ್ಟಿಗೆ ಜಾರಿಮಾಡಬಲ್ಲದ್ದಾಗಿರತಕ್ಕದ್ದು.

೫. ಈ ಪ್ರಕರಣದಲ್ಲಿ ಇರುವುದು ಯಾವುದೂ ೨೦೦೪ರ ಡಿಸೆಂಬರ್ ೨೦ನೇ ದಿನಾಂಕಕ್ಕೆ ಮುಂಚೆ ಮಾಡಿಕೊಳ್ಳಲಾದ ಆಸ್ತಿ ವಿಭಜನೆಗೆ ಅನ್ವಯಿಸುವುದಿಲ್ಲ. ಈ ಪ್ರಕರಣದ ಉದ್ದೇಶಕ್ಕಾಗಿ ಆಸ್ತಿ ವಿಭಜನೆ ಎಂದರೆ ಒಂದು ಆಸ್ತಿ ವಿಭಜನೆ ಪತ್ರವನ್ನು ( ಪಾಲಿ ಪಾರಿಖಾತ್ತು ಪತ್ರವನ್ನು) ಬರೆದು ಅದನ್ನು ಕ್ರಮಬದ್ಧವಾಗಿ ನೋಂದಣಿ ಮಾಡಿಸಿ ಮಾಡಿಕೊಂಡಿರುವ ಆಸ್ತಿ ವಿಭಜನೆ ಅಥವಾ ನ್ಯಾಯಾಲಯದ ಡಿಕ್ರಿ ಮೂಲಕವಾಗಿ ಮಾಡಿಕೊಳ್ಳಲಾದ ಆಸ್ತಿ ವಿಭಜನೆ.

೬. ೨೩ನೆಯ ಪ್ರಕರಣವನ್ನು ಬಿಟ್ಟುಬಿಡುವುದು– ಮೂಲ ಅಧಿನಿಯಮದ ೨೩ನೆಯ ಪ್ರಕರಣವನ್ನು ಬಿಡುವುದು

೭. ೨೪ನೆಯ ಪ್ರಕರಣ: ಮೂಲ ಅಧಿನಿಯಮದ ೨೪ನೇ ಪ್ರಕರಣವನ್ನು ಬಿಡುವುದು.

೮. ೩೦ನೆಯ ಪ್ರಕರಣದ ತಿದ್ದುಪಡಿ : ಮೂಲ ಅಧಿನಿಯಮ ಪ್ರಕರಣ ೩೦ರಲ್ಲಿ ಯಾವನೆ ಎಂಬ ಪದಕ್ಕೆ ಬದಲಾಗಿ 'ಯಾವನೇ ಅಥವಾ ಯಾವಳೇ' ಎಂಬ ಪದಗಳನ್ನು 'ಅವನಿಂದ' ಎಂಬ ಪದವನ್ನು ಬದಲಾಗಿ ಹಾಕತಕ್ಕದ್ದು.

೯. ಅನುಸೂಚಿಯ ತಿದ್ದುಪಡಿ: ಮೂಲ ಅಧಿನಿಯಮದ ಅನುಸೂಚಿಯಲ್ಲಿ ವರ್ಗ ೧ ಎಂಬ ಉಪಶೀರ್ಷಿಕೆ ಅಡಿಯಲ್ಲಿ ಮುಂಚೆಯೆ ತೀರಿಹೋಗಿದ್ದ ಮಗನ, ಮುಂಚೆಯೆ ತೀರಿಹೋಗಿದ್ದ ಮಗನ ವಿಧವೆ ಹೆಂಡತಿ ಎಂಬ ಪದಗಳ ತರುವಾಯ ಮುಂಚೆಯೆ ತೀರಿಹೋಗಿದ್ದ ಮಗಳ, ಮುಂಚೆಯ ತೀರಿಹೋಗಿದ್ದ ಮಗಳ ಮಗಳು, ಮುಂಚೆಯೆ ತೀರಿಹೋಗಿದ್ದ ಮಗನ, ಮುಂಚೆಯೆ ತೀರಿಹೋಗಿದ್ದ ಮಗಳು ಎಂಬುವನ್ನು ಸೇರಿಸತಕ್ಕದ್ದು.

ಹೀಗೆ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಕಾಯ್ದೆ ೨೦೦೫ರಲ್ಲಿ ಮೂಲ ಶಾಸನದ ಅನುಚ್ಛೇದ ೬ ಮತ್ತು ೨೩ಕ್ಕೆ ಮುಖ್ಯವಾದ ತಿದ್ದುಪಡಿಯನ್ನು ಮಾಡುವುದರ ಮೂಲಕ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯನ್ನು ಪುರುಷರಿಗೆ ಸಮನಾದ ಪಾಲುದಾರಳನ್ನಾಗಿ

ಮಾಡಲಾಗಿದೆ. ಜೊತೆಗೆ ದಾಯಾದಿ ಮಾಲಿಕತ್ವದ ಎಲ್ಲ ಹೊರೆಗಳನ್ನು ವಹಿಸಿಕೊಳ್ಳಬೇಕೆಂದು ಹಿಂದಿನ ತಿದ್ದುಪಡಿಯಲ್ಲಿದ್ದ ಗೊಂದಲಗಳನ್ನು ಸ್ಪಷ್ಟಪಡಿಸಲಾಗಿದೆ. ಕೃಷಿ ಭೂಮಿ, ಪಿತ್ರಾರ್ಜಿತ ವಾಸದ ಮನೆ, ಹೀಗೆ ಎಲ್ಲ ತರಹದ ಪಿತ್ರಾರ್ಜಿತ ಆಸ್ತಿಯಲ್ಲಿ ಯಾವುದೇ ಬೇಧವಿಲ್ಲದೆ ಸಮಾನ ಹಕ್ಕು ನೀಡಲಾಗಿದೆ. ತಾಯಿ, ಹೆಂಡತಿ, ಮಗಳು, ಸಹೋದರಿ, ಮೊಮ್ಮಗಳು, ಮರಿಮಗಳು ಸಹ ಪಿತ್ರಾರ್ಜಿತ ಆಸ್ತಿಗೆ ಕಾನೂನು ಬದ್ಧ ಉತ್ತರಾಧಿಕಾರಿಗಳಾಗುತ್ತಾರೆ. ಆಸ್ತಿಯಲ್ಲಿ ಪಾಲು ಪಡೆದ ಮಹಿಳೆಯು ಸಂಪೂರ್ಣ ಒಡೆತನವನ್ನು ಹೊಂದುವಳು. ಈ ತಿದ್ದುಪಡಿಯ ಮುಖ್ಯವಾದ ಅಂಶವೆಂದರೆ ಲಿಂಗ ತಾರತಮ್ಯಕ್ಕೆ ಕಾರಣವಾಗಿದ್ದ ಸೆಕ್ಷನ್೪(೨)ನ್ನು ಕೈಬಿಟ್ಟಿರುವುದು. ಕೃಷಿ ಭೂಮಿಯಲ್ಲಿನ ಉತ್ತರಾಧಿಕಾರ ಕಾಯ್ದೆಯ ಸೆಕ್ಷನ್ ೨೩ನ್ನು ಕೈಬಿಡಲಾಗಿದೆ. ಈ ಮೂಲ ಎಲ್ಲಾ ಪುತ್ರಿಯರಿಗೂ ಪುತ್ರರಂತೆಯೇ ಕುಟುಂಬದ ವಾಸದ ಮನೆಯಲ್ಲಿ ವಾಸಿಸುವ ಹಕ್ಕನ್ನು ಅಥವಾ ಪಾಲು ಪಡೆದುಕೊಳ್ಳುವ ಹಕ್ಕನ್ನು ನೀಡಲಾಗಿದೆ. ವಿಚ್ಛೇದಿತ, ಪರಿತ್ಯಕ್ತ ಅಥವಾ ವಿಧವಾ ಮಹಿಳೆಯರ ಹೊರತಾಗಿ ಉಳಿದವರಿಗೆ ಸೆಕ್ಷನ್ ೨೩ ತಮ್ಮ ತವರಿನಲ್ಲಿ ವಾಸಿಸುವ ಹಕ್ಕನ್ನು ನೀಡಿರಲಿಲ್ಲ. ಅವಿವಾಹಿತ ಪುತ್ರಿಯರಿಗೆ ವಾಸದ ಹಕ್ಕಿತ್ತು. ಪಾಲು ಪಡೆಯುವ ಹಾಗಿರಲಿಲ್ಲ. ಈ ತಿದ್ದುಪಡಿಯಲ್ಲಿ ಸೆಕ್ಷನ್ ೨೪ನ್ನು ಕೈಬಿಡಲಾಗಿದೆ. ಆ ಪ್ರಕಾರ ವಿಧವೆಯರು ತಂದೆಗಿಂತಲೂ ಮೊದಲು ತೀರಿಹೋದ (ಪತಿ) ಗಂಡುಮಕ್ಕಳ ವಿಧವಾ ಪತ್ನಿಯರು ಪುನರ್ ವಿವಾಹವಾಗಿದ್ದಲ್ಲಿ ಮಾವನ ಆಸ್ತಿಯಲ್ಲಿ ಪಾಲು ಪಡೆಯುವಂತಿರಲಿಲ್ಲ. ಆದರೆ ಈಗ ಅವರೂ ಪಾಲು ಪಡೆಯುವ ಅವಕಾಶವನ್ನು ಈ ಕಾಯ್ದೆಯ ತಿದ್ದುಪಡಿಯು ಒದಗಿಸಿದೆ. ಹೀಗೆ ಕಾಲಕಾಲಕ್ಕೆ ತಕ್ಕಂತೆ ಆಸ್ತಿಹಕ್ಕಿನ ಕಾನೂನಿನಲ್ಲಿ ತಿದ್ದುಪಡಿಗಳನ್ನು ತರುವುದರ ಮೂಲಕ ಮಹಿಳೆಯರಿಗೆ ಆಸ್ತಿಯಲ್ಲಿ ಪುರುಷನಷ್ಟೇ ಸಮಪಾಲನ್ನು ಹೊಂದುವ ಹಕ್ಕನ್ನು ಕೊಡಲಾಗಿದೆ. ಹೀಗೆ ಆಸ್ತಿಹಕ್ಕಿನ ಕಾನೂನಿಗೆ ತಿದ್ದುಪಡಿಗಳನ್ನು ತರುವುದರ ಮೂಲಕ ಸ್ತ್ರೀ ಪುರುಷರಿಬ್ಬರಿಗೂ ಸಮನಾದ ಅವಕಾಶ ಮತ್ತು ಹಕ್ಕುಗಳನ್ನು ಕೊಡುವುದರಲ್ಲಿ ಕಾಯಿದೆ ಯಶಸ್ವಿಯಾಗಿದೆ.

ಒಟ್ಟಾರೆಯಾಗಿ ಆಸ್ತಿಹಕ್ಕಿನ ಕಾನೂನಿನಲ್ಲಿ ಲಿಂಗ ಸಮಾನತೆಯ ಅಂಶಗಳು ಬರಬೇಕಾದರೆ ಹಲವಾರು ವರ್ಷಗಳೇ ಕಾಯಬೇಕಾದ ಸ್ಥಿತಿ ಒದಗಿಬಂದಿದ್ದು ಸಹಜವೇ. ಏಕೆಂದರೆ ವ್ಯವಸ್ಥೆಯಲ್ಲಿ ಬಲಿಷ್ಠವಾಗಿ ಜಾರಿಗೊಂಡಿರುವ ಪುರುಷಶಾಹಿ ಚಿಂತನೆಗಳು ಮಹಿಳೆಯರನ್ನು ಹಿಂಸಿಸುವುದರಲ್ಲಿಯೇ ತನ್ನ ಯಾಜಮಾನ್ಯವನ್ನು ವ್ಯಕ್ತಪಡಿಸುತ್ತಲೇ ಬಂದಿವೆ. ಇಂತಹ ಸಂದರ್ಭದಲ್ಲಿ ಮಹಿಳೆಯರು ಪುರುಷರಷ್ಟೇ ಸಮಾನರು ಎಂಬ ಅಂಶವನ್ನು ಒಪ್ಪಲೂ ಅದು ಮುಂದಾಗುವುದಿಲ್ಲ. ಆ ಕಾರಣಕ್ಕಾಗಿಯೇ ಸ್ಮೃತಿಗಳ ಕಾಲದಿಂದಲೂ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರು ಆರ್ಥಿಕವಾಗಿ ಸದೃಢರಾಗಲು ಅವಕಾಶಗಳನ್ನೇ ಕೊಡಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರು ಆಸ್ತಿಯಲ್ಲಿ ಪಾಲನ್ನು ಕೇಳುವುದು ತುಂಬಾ ಕಷ್ಟಕರವಾಗಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ದೊರೆಯಬೇಕೆಂಬ ಕೂಗುಗಳು ಕೇಳಿಬಂದವಾದರೂ ಈ ಕೂಗುಗಳನ್ನು ಹತ್ತಿಕ್ಕಲು ಸಂಪ್ರದಾಯ ಮನಸುಗಳು

ಹಲವಾರು ಬಗೆಯಲ್ಲಿ ಪ್ರಯತ್ನಿಸಿದವು. ಆ ಕಾರಣಕ್ಕಾಗಿ ಅಂದಿನ ಸಂದರ್ಭದಲ್ಲಿ ಈ ನಿಯಮ ಜಾರಿಗೆ ಬರಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯ ನಂತರದ ದಿನಗಳಲ್ಲಿಯೂ ಸಂವಿದಾನದಡಿ ಈ ಕಾನೂನು ಜಾರಿಗೆ ಬರಲು ಹಲವಾರು ತೊಡಕುಗಳನ್ನು ಎದುರಿಸಬೇಕಾಯಿತು. ಕೊನೆಗೆ ೧೯೫೬ರಲ್ಲಿ ಪುರುಷರಿಗೆ ಸಮನಾಗಿ ಆಸ್ತಿಯಲ್ಲಿ ಹಕ್ಕನ್ನು ಪಡೆಯಬಹುದು ಎಂಬ ಕಾನೂನು ಜಾರಿಗೆ ಬಂದಿತು. ನಂತರ ಹಲವಾರು ತಿದ್ದುಪಡಿಗಳನ್ನು ಜಾರಿಗೆ ತರುವುದರ ಮೂಲಕ ಇಂದು ಮಹಿಳೆ ಹುಟ್ಟಿನಿಂದಲೇ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಬಹುದಾಗಿದೆ. ಈ ಕಾನೂನು ಜಾರಿಗೆ ಬರಲು ಹಲವಾರು ವರ್ಷಗಳೇ ಕಾಯಬೇಕಾಯಿತು. ವ್ಯವಸ್ಥೆಯಲ್ಲಿ ಯಾವುದೇ ವಿಷಯವಾಗಲೀ ಕಾನೂನಾಗಿ ಜಾರಿಗೆ ಬಂದಾಗಲೇ ಅದಕ್ಕೊಂದು ಮಾನ್ಯತೆ ದೊರೆಯುತ್ತದೆ. ಈ ಇಟ್ಟಿನಲ್ಲಿ ಮಹಿಳಾ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಪುರುಷರಿಗೆ ಸಮಾನವಾಗಿ ಆಸ್ತಿಯಲ್ಲಿ ಪಾಲನ್ನು ಪಡೆಯುವಂಥ ಕಾನೂನು ಜಾರಿಯಾದುದು ಪ್ರಮುಖ ಸಂಗತಿಯಾಗಿದೆ.

**ಉಲ್ಲೇಖಗಳು**


೧. ಹಿರೇಮಠ ಎಸ್.ಸಿ, ೨೦೦೨, ಭಾರತೀಯ ಉತ್ತರಾಧಿಕಾರ ಅಧಿನಿಯಮ, ೧೯೨೫, ವಿಧ್ಯಾನಿಧಿ ಪ್ರಕಾಶನ, ಗದಗ, ಪು–೫

೨. ಶಿವನಗೌಡ ಜಿ ದೊಡ್ಡಮನಿ, ೨೦೧೧, ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬, ಶ್ರೀ ಬಾಲಾಜಿ ಬುಕ್ ಕಂಪನಿ, ಬೆಂಗಳೂರು, ಪು–೫, ೬

೩. ಉಷಾ ಎಂ; ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ; ಪು. ೧೦೬.

೪. ಹಿರೇಮಠ ಎಸ್.ಸಿ, ೨೦೦೨, ಭಾರತೀಯ ಉತ್ತರಾಧಿಕಾರ ಅಧಿನಿಯಮ, ೧೯೨೫, ವಿಧ್ಯಾನಿಧಿ ಪ್ರಕಾಶನ, ಗದಗ, ಪು–೧೦

೫. ಹಿರೇಮಠ ಎಸ್.ಸಿ, ೨೦೦೨, ಭಾರತೀಯ ಉತ್ತರಾಧಿಕಾರ ಅಧಿನಿಯಮ, ೧೯೨೫, ವಿಧ್ಯಾನಿಧಿ ಪ್ರಕಾಶನ, ಗದಗ, ಪು–೬

೬. ಅದೇ ಪು–೧೮,೧೯)

೭. ಶಿವನಗೌಡ ಜಿ. ದೊಡ್ಡಮನಿ, ೨೦೧೧, ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬, ಶ್ರೀ ಬಾಲಾಜಿ ಬುಕ್ ಕಂಪನಿ, ಬೆಂಗಳೂರು, ಪು–೭೮,೭೯

೮. ರಾಗೌ, ೨೦೦೮, ಮಹಿಳಾ ಅಧ್ಯಯನದ ಆಯಾಮಗಳು, ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು, ಪು–೨೧

೯. ಹಿರೇಮಠ ಎಸ್.ಸಿ, ೨೦೦೨, ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫. ವಿದ್ಯೆನಿಧಿ ಪ್ರಕಾಶನ, ಗದಗ, ಪು-೫

೧೦. ಗೀತಾ ಕೆ.ಎಸ್, ೨೦೦೮, ಮಹಿಳೆ ಕಾನೂನು ಮತ್ತು ನ್ಯಾಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು-೧೪೮, ೧೪೯

೧೧. ಗೀತಾ ಕೆ.ಎಸ್, ೨೦೦೮, ಮಹಿಳೆ ಕಾನೂನು ಮತ್ತು ನ್ಯಾಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು-೧೫೦

೧೨. ಮೂರ್ತೀಶ್ವರಯ್ಯ ಬೇ.ಕಾ ; ೨೦೦೮; ಮಹಿಳೆ ಸಮಾಜ ಮತ್ತು ಕಾನೂನು; ಸ್ವಪ್ನ ಬುಕ್ ಹೌಸ್, ಬೆಂಗಳೂರು; ಪು.೨೧೯

೧೩. ಮಹಿಳೆ ಮತ್ತು ಕಾನೂನು ಪು.೧೫೪

೧೪. ಗೀತಾ ಕೆ.ಎಸ್; ೨೦೦೮; ಮಹಿಳೆ ಕಾನೂನು, ನ್ಯಾಯ; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು; ಪು-೧೪೪

೧೫. ಅದೇ, ಪು ೧೪೫

೧೬. ಶಿವನಗೌಡ ಜಿ.ದೊಡ್ಡಮನಿ; ೨೦೧೧; ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬; ಪು ೮೦

೧೭. ಹೇಮಲತಾ ಮಹಿಷಿ; ೧೯೯೯; ಮಹಿಳೆ ಮತ್ತು ಆಸ್ತಿಹಕ್ಕು; ಶ್ರೀಮತಿ ಯಶೋದಾ ರಾಗೌ ಟ್ರಸ್ಟ್,ಮೈಸೂರು, ಪು ૩೯.

# ಅಧ್ಯಾಯ ಐದು
# ಆಸ್ತಿ ಹಕ್ಕು ಕಾಯಿದೆ : ಅರಿವು-ಜಾಗೃತಿ

೫.೧. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಶಿಕ್ಷಣದ ಪಾತ್ರ

೫.೨. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಮಾಧ್ಯಮಗಳ ಪಾತ್ರ

೫.೩. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ನ್ಯಾಯಾಂಗ ವ್ಯವಸ್ಥೆಯ ಪಾತ್ರ

೫.೪. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳ ಪಾತ್ರ

## ಅಧ್ಯಾಯ ಐದು

# ಆಸ್ತಿ ಹಕ್ಕು ಕಾಯಿದೆ : ಅರಿವು-ಜಾಗೃತಿ

ಸಾಮಾಜಿಕ ವ್ಯವಸ್ಥೆಯಲ್ಲಿ ಮಾನವರ ಎಲ್ಲಾ ಆಗುಹೋಗುಗಳಿಗೆ ಕುಟುಂಬ ವ್ಯವಸ್ಥೆಯೇ ಮೂಲ ಕಾರಣವಾಗಿರುವಂತೆ, ಮಹಿಳೆಯರು ಹಿಂದಿನಿಂದಲೂ ಅನುಭವಿಸುತ್ತಿರುವ ಎಲ್ಲಾ ಸಮಸ್ಯೆಗಳಿಗೆ ಕುಟುಂಬವೇ ಕಾರಣವಾಗಿದೆ. ಹಾಗಾಗಿಯೇ ಮಹಿಳೆಗೆ ಸಂಬಂದಿಸಿದಂತೆ ಯಾವುದೇ ವಿಷಯವನ್ನು ಮಾತನಾಡಿದರೂ ಅದು ಕುಟುಂಬದಿಂದಲೇ ಆರಂಭವಾಗುತ್ತದೆ. ಈ ಹಿನ್ನಲೆಯಲ್ಲಿ ಮಹಿಳೆಯರ ಪರವಾದ ಹಲವಾರು ಕಾನೂನುಗಳು ಮತ್ತು ಈ ಕಾನೂನುಗಳ ಕುರಿತಂತೆ ಮಹಿಳೆಯರ ಅರಿವು ಈ ವಿಷಯವೂ ಸಹ ಕುಟುಂಬದಿಂದೇನೂ ಹೊರತಾಗಿಲ್ಲ. ಆ ಕಾರಣಕ್ಕಾಗಿಯೇ ಮಹಿಳೆಯರ ಅರಿವಿಗೆ ಸಂಬಂಧಿಸಿದಂತೆ ಮಾತನಾಡುವಾಗ ಅದು ಕುಟುಂಬ ದಿಂದಲೇ ಆರಂಭಿಸಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ಮಗು ಹುಟ್ಟಿನಿಂದಲೇ ಸಾಮಾಜೀಕರಣದ ಪ್ರಕ್ರಿಯೆಗೆ ಒಳಗಾಗಿ ಲಿಂಗ ಅಸಮಾನತೆಯ ಅಂಶಗಳನ್ನು ಮೈಗೂಡಿಸಿ ಕೊಳ್ಳುತ್ತಿರುತ್ತದೆ. ಈ ಹಂತದಿಂದಲೇ ಆರಂಭವಾಗುವ ಈ ಪ್ರಕ್ರಿಯೆ ಮುಂದೆ ಆ ಮಗು ಸಾಯುವವರೆಗೂ ಈ ಅಸಮಾನತೆಯ ನೆಲೆಯಲ್ಲಿಯೇ ಬದುಕಬೇಕಾದ ಅನಿವಾರ್ಯತೆಯನ್ನು ವ್ಯವಸ್ಥೆ ಒದಗುಮಾಡಿಕೊಡುತ್ತದೆ. ಅಂದರೆ ಲಿಂಗಾಧಾರಿತ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಕುಟುಂಬದಲ್ಲಿನ ಹಿರಿಯರು ಚಿಕ್ಕ ಮಕ್ಕಳಿಗೆ ತಮ್ಮ ಪಾತ್ರ ಮಾದರಿಗಳನ್ನು ಸಿದ್ಧಗೊಳಿಸುತ್ತಾರೆ. ಹಾಗಾಗಿ ಚಿಕ್ಕವರು ಹಿರಿಯರನ್ನು ಅನುಕರಣೆ ಮಾಡುತ್ತಲೇ ಬೆಳೆಯುತ್ತವೆ. ಮುಖ್ಯವಾಗಿ ಗಂಡು ಮಗುವನ್ನು ತಂದೆಯ ಪಾತ್ರದಲ್ಲಿ ಮತ್ತು ಹೆಣ್ಣು ಮಗುವನ್ನು ತಾಯಿಯ ಪಾತ್ರದಲ್ಲಿ ಬೆಳೆಸುವುದು ಕುಟುಂಬದ ಮೊದಲ ಪಾತ್ರ ಹಂಚಿಕೆಯಾಗಿರುತ್ತದೆ. ಇದೆಲ್ಲಾ ನಡೆಯುವುದು ಸಾಮಾಜೀಕರಣದ ಮೂಲಕ. ಕುಟುಂಬದ ಸಂಪನ್ಮೂಲಗಳಾದ ಆಸ್ತಿ (ಸ್ಥಿರ ಮತ್ತು ಚರ), ಶಿಕ್ಷಣಾವಕಾಶ, ಉತ್ಪಾದನೆ, ಅಧಿಕಾರ ಮತ್ತು ಜವಾಬ್ದಾರಿಗಳು ಇವುಗಳೆಲ್ಲವೂ ಸಮಾನವಾಗಿ ಹಂಚಿಕೆಯಾಗಿಲ್ಲದೇ ಇರುವುದರಿಂದಾಗಿ ಮಹಿಳೆಯರು ಕುಟುಂಬದಲ್ಲಿ ಹಿಂಸೆಗೆ ಒಳಗಾಗುತ್ತಿದ್ದಾರೆ. ಹಾಗೆಯೇ ವಿವಾಹ ಎಂಬ ಸಂಸ್ಥೆಯೂ ಲಿಂಗ ಅಸಮಾನತೆ ಗಟ್ಟಿಯಾಗಿ

ನೆಲೆಯೂರಲು ಒಂದು ರೀತಿಯ ವಾಹಕದಂತೆ ಕೆಲಸ ಮಾಡುತ್ತಿದೆ. ವಿವಾಹದ ಮೂಲಕ ಮಹಿಳೆಯರನ್ನು ಸಾಮಾಜಿಕ ಬಂಧನಕ್ಕೆ ಸಿಲುಕಿಸಲಾಗಿದೆ. ಈ ವಿವಾಹ ಸಂಸ್ಥೆಯಿಂದ ವರದಕ್ಷಿಣೆ ಸಮಸ್ಯೆ, ಬಾಲ್ಯವಿವಾಹ, ಸತಿಪದ್ದತಿ, ವೈಧವ್ಯಗಳಂಥ ಸಮಸ್ಯೆಗಳು ಮಹಿಳೆಯರನ್ನು ಕಾಡತೊಡಗಿದವು. ಇವುಗಳು ಮಹಿಳೆಯರನ್ನು ಇನ್ನಿಲ್ಲದ ಅಧೀನಕ್ಕೆ ಒಳಗುಮಾಡಿದವು. ಮಹಿಳೆಗೆ ಸ್ಥಿರಮಾದರಿ ಪಾತ್ರಗಳನ್ನು ಸೃಷ್ಟಿಸುವುದರ ಮೂಲಕ ಕುಟುಂಬಕ್ಕೆ ಮಾತ್ರ ಸೀಮಿತಳನ್ನಾಗಿ ಮಾಡಲಾಯಿತು. ಈ ಎಲ್ಲಾ ಅಂಶಗಳು ಮಹಿಳೆಯರ ಜ್ಞಾನ ವಿಸ್ತರಣೆಗೆ ಅಡ್ಡಿಯಾದವು. ಹಾಗಾಗಿ ಮಹಿಳೆಯರು ಇಂದಿಗೂ ಸಹ ವ್ಯವಸ್ಥೆಯಲ್ಲಿ ನಡೆಯಬಹುದಾದ ಎಲ್ಲಾ ವಿಧ್ಯಮಾನಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದು ಗ್ರಾಮೀಣ ಮಹಿಳೆಯರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ನಗರ ಪ್ರದೇಶದಲ್ಲಿ ವಾಸಿಸುವ ವಿದ್ಯಾವಂತ ಮಹಿಳೆಯರು ಇದಕ್ಕೆ ಸ್ವಲ್ಪ ಹೊರತಾಗಿ ಇದ್ದಾರೆ ಎಂದು ಕಂಡುಬಂದರೂ ಕುಟುಂಬದ ಮುಖಂಡನಾದ ಪುರುಷನ ಅಪ್ಪಣೆಯಿಲ್ಲದೇ ಏನನ್ನೂ ಮಾಡುವಂತಿಲ್ಲ. ಈ ಬಗೆಯ ಅನಿವಾರ್ಯತೆಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ. ಹಾಗಾಗಿ ಮಹಿಳೆಯರ ಪರವಾದ ಹಲವಾರು ಕಾನೂನುಗಳು ವ್ಯವಸ್ಥೆಯಲ್ಲಿ ಜಾರಿಯಲ್ಲಿದ್ದರೂ ಮಹಿಳೆಯರು ಅವುಗಳ ಸಂಪೂರ್ಣವಾದ ಜ್ಞಾನವನ್ನು ಪಡೆಯುವಲ್ಲಿ ಮತ್ತು ಅವುಗಳನ್ನು ಹಕ್ಕಿನ ರೂಪದಲ್ಲಿ ಕೇಳುವಲ್ಲಿ ಹಿಂದುಳಿದಿದ್ದಾರೆ. ಕೆಲವು ವಿದ್ಯಾವಂತ ಮಹಿಳೆಯರಿಗೆ ಈ ಬಗೆಯ ಮಹಿಳಾ ಪರವಾದ ಕಾನೂನುಗಳ ಅರಿವಿದೆ ಯಾದರೂ ಅವುಗಳನ್ನು ತಮ್ಮ ಅನುಕೂಲಕ್ಕೆ ಸರಿಯಾಗಿ ಪಡೆಯುವಲ್ಲಿ ವಿಫಲರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಮಹಿಳಾ ಪರವಾದ ಕಾನೂನುಗಳಲ್ಲಿ ಒಂದಾದ ಆಸ್ತಿ ಹಕ್ಕಿನ ಕಾನೂನು ಮಹಿಳೆಯರಿಗೆ ಒಂದು ಬಗೆಯ ಸ್ವಾವಲಂಬಿ ಬದುಕನ್ನು ನಿರ್ಮಿಸಿಕೊಡುತ್ತದೆ. ಆದರೆ ಇದರ ಅರಿವು ಬಹಳಷ್ಟು ಮಹಿಳೆಯರಿಗೆ ಇಲ್ಲವಾಗಿದೆ. ಇದಕ್ಕೆ ಕಾರಣ ಮಹಿಳೆಯರಲ್ಲ. ಬದಲಾಗಿ ಅವರು ಬದುಕುತ್ತಿರುವ ಸಾಮಾಜಿಕ ವ್ಯವಸ್ಥೆ ಮತ್ತು ಅವರನ್ನು ಆಳುತ್ತಿರುವ ಪುರುಷ ಪ್ರಧಾನ ಮೌಲ್ಯಗಳು. ಆ ಕಾರಣಕ್ಕಾಗಿ ಮಹಿಳೆಯರು ಈ ಬಗೆಯ ಕಾನೂನುಗಳಿಂದ ದೂರವೇ ಉಳಿದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮಹಿಳೆ ಯರಿಗಂತೂ ಈ ಕಾನೂನು ಕೈಗೆ ಎಟುಕಲಾರದ ಸ್ಥಿತಿಯನ್ನು ವ್ಯವಸ್ಥೆ ನಿರ್ಮಿಸಿ ಬಿಟ್ಟಿದೆ. ಕುಟುಂಬದಲ್ಲಿನ ಭಾವನಾತ್ಮಕ ನೆಲೆಗಳು ಮತ್ತು ಸಾಮಾಜಿಕ ಕಟ್ಟಳೆಗಳು ಮಹಿಳೆಯರನ್ನು ಇನ್ನಿಲ್ಲದಂತೆ ಹಿಂಸಿಸತೊಡಗಿವೆ. ಹಾಗಾಗಿಯೇ ಮಹಿಳೆಯರು ಇಂದಿಗೂ ಮನೆಯಿಂದ ಆಚೆ ಬರಲೂ ಸಹ ಕುಟುಂಬದ ಪುರುಷನ ಅಪ್ಪಣೆಯನ್ನು ಪಡೆಯಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ಆದರೂ ಕೆಲವು ಮಹಿಳೆಯರು ಈ ಬಗೆಯ ಸಾಮಾಜಿಕ ಕಟ್ಟಳೆಗಳನ್ನು ಮೀರಿ ಸ್ವಾವಲಂಬಿ ಜೀವನವನ್ನು ನಡೆಸುತ್ತಿದ್ದಾರೆ. ಆದರೆ ಇವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ಬಹುಪಾಲು ಮಹಿಳೆಯರು ಪರಾವಲಂಬಿಗಳೇ ಆಗಿದ್ದಾರೆ. ಇಲ್ಲಿ ಆಸ್ತಿಹಕ್ಕಿನ ಕಾನೂನಿನ ಅರಿವಿಗೆ ಸಂಬಂಧಿಸಿದಂತೆ ಮಹಿಳೆಯರು ಪುರುಷರಷ್ಟೇ ಸಮಾನ ಹಕ್ಕುಗಳನ್ನುಳ್ಳವರು, ಸ್ವಾವಲಂಬಿಗಳಾಗಿ ಬದುಕಬೇಕಾದವರು. ಹಾಗಾಗಿ ಮಹಿಳೆಯರನ್ನು ಪರಾವಲಂಬಿಗಳೆಂದು

ಗ್ರಹಿಸಿಕೊಂಡು ಆ ನೆಲೆಯಲ್ಲಿಯೇ ಮಹಿಳೆಯರನ್ನು ನಡೆಸಿಕೊಳ್ಳುವ ವ್ಯವಸ್ಥೆಯ ನಿಲುವುಗಳಲ್ಲಿ ತೀವ್ರ ಬದಲಾವಣೆಗಳಾಗಬೇಕಾಗಿದೆ. ಈ ನೆಲೆಯಲ್ಲಿ ಸ್ತ್ರೀ ಪುರುಷರಿಬ್ಬರೂ ಹೆಚ್ಚಿನ ರೀತಿಯಲ್ಲಿ ಇದರ ಅರಿವನ್ನು ಪಡೆಯುವಂತಾಗಬೇಕು ಮತ್ತು ಆ ಕಾನೂನನ್ನು ಸಮರ್ಥವಾಗಿ ಬಳಸಿ ಕೊಳ್ಳುವಂತಾಗಬೇಕು. ಈ ನಿಟ್ಟಿನಲ್ಲಿ ವ್ಯವಸ್ಥೆಯಲ್ಲಿ ಹಲವಾರು ಕಾರ್ಯಚಟುವಟಿಕೆಗಳು ನಡೆಯ ಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಸಮಾನತೆಯ ಅರಿವನ್ನು ಮೂಡಿಸುವಲ್ಲಿ ಶಿಕ್ಷಣ, ಮಾಧ್ಯಮ, ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು, ನ್ಯಾಯಾಂಗ ವ್ಯವಸ್ಥೆ ಇವುಗಳ ಪಾತ್ರ ಬಹು ದೊಡ್ಡದಿದೆ. ಇವುಗಳು ಯಾವ ಬಗೆಯಲ್ಲಿ ಕಾರ್ಯ ನಿರ್ವಹಿಸಿದರೆ ಮಹಿಳೆಯರಿಗೆ ಕಾನೂನುಗಳ ಅರಿವು ಸಾಧ್ಯವಾಗುತ್ತದೆ ಮತ್ತು ಆ ಮೂಲಕ ಅವರು ಸ್ವಾವಲಂಬಿಗಳಾಗಿ ಅಭಿವೃದ್ಧಿಯೆಡೆಗೆ ಮುಖಮಾಡುತ್ತಾರೆ ಎಂಬುದನ್ನು ಮುಂದಿನ ಹಂತದಲ್ಲಿ ಒಂದೊಂದಾಗಿ ವಿವರಿಸಲಾಗಿದೆ.

### ೫.೧. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಶಿಕ್ಷಣದ ಪಾತ್ರ

ಶಿಕ್ಷಣವು ಸಮಾಜದ ಜನರಿಗೆ ಜ್ಞಾನ ಮತ್ತು ತಿಳುವಳಿಕೆಯನ್ನು ನೀಡುತ್ತದೆ. ಹಾಗೆಯೇ ಸಮಾಜದಲ್ಲಿ ಆದರ್ಶಪ್ರಾಯವಾಗಿ ಬದುಕಲು ಅಗತ್ಯವಾದ ಕೌಶಲ್ಯಗಳನ್ನು ಒದಗಿಸಿಕೊಡುತ್ತದೆ. ಶಿಕ್ಷಣದ ಮುಖ್ಯ ಉದ್ದೇಶ ತಿಳಿಯುವುದು, ಗಳಿಸುವುದು ಮತ್ತು ಬೆಳೆಯುವುದು. ಅಂದರೆ ವ್ಯಕ್ತಿತ್ವ ವಿಕಾಸ. ಇಂತಹ ಒಂದು ಮುಖ್ಯ ಸಂಸ್ಥೆಯಿಂದ ಮಹಿಳೆಯರನ್ನು ಸಂಪೂರ್ಣವಾಗಿ ಹೊರಗಿಟ್ಟಂಥದ್ದು ಪುರುಷಶಾಹಿ ವ್ಯವಸ್ಥೆ. ಶಿಕ್ಷಣದಿಂದ ವಂಚಿತರಾದ ಮಹಿಳೆಯರು ವ್ಯವಸ್ಥೆಯಲ್ಲಿನ ಎಲ್ಲ ಬಗೆಯ ಅವಕಾಶಗಳಿಂದ ವಂಚಿತರಾಗಿದ್ದಾರೆ. ಮುಖ್ಯವಾಗಿ ಯಾವ ಮಹಿಳೆಯರು ಶಿಕ್ಷಣದಿಂದ ವಂಚಿಸಲ್ಪಟ್ಟಿದ್ದಾರೋ ಅಂತಹವರು ಸಂವಿದಾನ ಬದ್ಧವಾಗಿ ರೂಪಿಸಲ್ಪಟ್ಟ ಕಾನೂನುಗಳ ಬಗೆಗಿನ ಅರಿವನ್ನು ಪಡೆಯದಾಗಿದ್ದಾರೆ. ಮತ್ತು ಆ ಕಾರಣ ಕ್ಕಾಗಿಯೇ ಹಲವಾರು ಬಗೆಯ ಸೌಲಭ್ಯಗಳಿಂದ ವಂಚಿಸಲ್ಪಟ್ಟಿದ್ದಾರೆ. ಮಹಿಳಾ ಶಿಕ್ಷಣಕ್ಕೆ ಪ್ರಥಮ ಸ್ಥಾನವನ್ನು ಒದಗಿಸಿಕೊಟ್ಟವರಲ್ಲಿ ಜ್ಯೋತಿ ಬಾ ಪುಲೆ ಮತ್ತು ಸಾವಿತ್ರಿಬಾಯಿ ಪುಲೆಯವರು ಮೊದಲಿಗರು. ಇವರು ಹಾಕಿಕೊಟ್ಟ ಶಿಕ್ಷಣದ ಬುನಾದಿಯ ಮೇಲೆ ಮಹಿಳೆಯರು ಇಂದು ಶಿಕ್ಷಣದಲ್ಲಿ ಸಾಕಷ್ಟು ಮುಂದುವರೆದಿದ್ದಾರೆ. ಆದರೆ ಮಹಿಳೆಯರು ಎಷ್ಟೇ ಶಿಕ್ಷಣವನ್ನು ಪಡೆದು ಕೊಂಡಿದ್ದರೂ ಸಾಮಾಜಿಕ ಮೌಲ್ಯಗಳಿಂದ ಮಾತ್ರ ಹೊರ ಬಂದಿಲ್ಲದಿರುವುದೂ ಕಂಡು ಬರುತ್ತಿದೆ. ಅಧ್ಯಯನದ ವ್ಯಾಪ್ತಿ ಪ್ರದೇಶವಾದಂತಹ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಮಹಿಳಾ ಶಿಕ್ಷಣದ ಪ್ರಮಾಣ ಹಿಂದಿಗಿಂತಲೂ ಅಧಿಕವಾಗಿದೆಯಾದರೂ ಕಾನೂನುಗಳ ಕುರಿತ ಅರಿವು ಮಾತ್ರ ತುಂಬಾ ನಿಧಾನಗತಿಯದ್ದಾಗಿದೆ.

ಉತ್ತರ ಕರ್ನಾಟಕ ಪ್ರದೇಶವು ಶೈಕ್ಷಣಿಕವಾಗಿ ಹಿಂದುಳಿದಿರುವ ಪ್ರದೇಶವಾಗಿದೆ. ವಸಾಹತು ಕಾಲದ ಸಂದರ್ಭದಲ್ಲಿ ಜಾರಿಯಾದ ಪಾಶ್ಚಾತ್ಯ ಶಿಕ್ಷಣದ ಕಾರಣವಾಗಿ ರಾಜ್ಯದ ಹಲವಾರು ಪ್ರದೇಶಗಳು ಗಣನೀಯವಾಗಿ ಪ್ರಗತಿಯಲ್ಲಿರುವುದನ್ನು ಕಾಣಬಹುದು. ಆದರೆ

ಉತ್ತರ ಕರ್ನಾಟಕ ಪ್ರದೇಶ ಇದಕ್ಕೆ ವಿರುದ್ಧವಾಗಿದೆ. ಮುಖ್ಯವಾಗಿ ರಾಜ್ಯದ ಒಟ್ಟು ಜಿಲ್ಲೆಗಳಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಒಳಪಡುವ ಜಿಲ್ಲೆಗಳಲ್ಲಿನ ಶಿಕ್ಷಣವು ತೀರ ಹಿಂದುಳಿದಿರುವುದನ್ನು ಕಾಣಬಹುದಾಗಿದೆ. ಗ್ರಾಮೀಣ ಪ್ರದೇಶಗಳು ಅಧಿಕವಾಗಿರುವುದರಿಂದ ಇಲ್ಲಿನ ಜನರು ಬಡತನ, ಅಪೌಷ್ಟಿಕತೆ, ಮೂಲಭೂತ ಸೌಕರ್ಯಗಳ ಕೊರತೆ, ನಿರುದ್ಯೋಗಗಳಂಥ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇವು ಶಿಕ್ಷಣದ ಮೇಲೆ ನೇರ ಪರಿಣಾಮ ಬೀರುತ್ತವೆ. ಹಾಗಾಗಿ ಇಲ್ಲಿನ ಜನರು ಮೊದಲು ಈ ಸಮಸ್ಯೆಗಳಿಂದ ಹೊರಬರಲು ಮುಂದಾಗುತ್ತಾರೆಯೇ ಹೊರತು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದರ ಕಡೆಗೆ ಗಮನ ಹರಿಸುವುದು ತುಂಬಾ ವಿರಳ ಎಂದೇ ಹೇಳಬಹುದು. ಬಡತನದಿಂದ ಬಳಲುತ್ತಿರುವ ಕುಟುಂಬಗಳಲ್ಲಿನ ಮಕ್ಕಳ ಶಿಕ್ಷಣಕ್ಕಾಗಿ ಸರಕಾರಗಳು ಹಲವಾರು ಕಾರ್ಯ ಯೋಜನೆಗಳನ್ನು ರೂಪಿಸುತ್ತಲೇ ಬಂದಿವೆ. ಆದರೆ ಇದರ ಉಪಯೋಗವನ್ನು ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ಜನರು ವಿಫಲರಾಗುತ್ತಿದ್ದಾರೆ. ಇದು ಒಂದು ಕಡೆಯಾದರೆ ಇನ್ನೊಂದೆಡೆ ಖಾಸಗೀ ಶಿಕ್ಷಣ ಸಂಸ್ಥೆಗಳು ಉನ್ನತ ಮತ್ತು ಮೇಲ್ ಮಧ್ಯಮ ವರ್ಗದ ಜನರನ್ನು ಸೆಳೆಯುತ್ತಿವೆ. ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳು ಉತ್ತರ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ ಭಾಗಕ್ಕೆ ಸೇರುವುದರಿಂದ ಈ ಭಾಗದಲ್ಲಿ ಸ್ತ್ರೀ ಪುರುಷರ ಸಾಕ್ಷರತೆಯ ಪ್ರಮಾಣವೂ ಸಹ ತುಂಬಾ ಅಸಮತೋಲನದಿಂದ ಕೂಡಿದೆ. ಮುಖ್ಯವಾಗಿ ೨೦೦೨ರಲ್ಲಿ ಪ್ರಾದೇಶಿಕ ಅಸಮತೋಲನ ನಿವಾರಣಾ ಸಮಿತಿಯು ಒಂದು ವರದಿಯನ್ನು ಸರಕಾರಕ್ಕೆ ಸಲ್ಲಿಸಿತ್ತು. ಇದರ ಪ್ರಕಾರ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಸ್ತ್ರೀ ಪುರುಷರ ಸಾಕ್ಷರತೆಯಲ್ಲಿನ ಅಸಮತೋಲನವನ್ನು ಈ ಕೆಳಗಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ –೫.೧**

**ಸ್ತ್ರೀ–ಪುರುಷರ ಶಿಕ್ಷಣದ ಅಂತರ**

| ಕ್ರ.ಸಂ | ಹೆಸರು | ಸಾಕ್ಷರತಾ ಮಟ್ಟ | | ಸ್ತ್ರೀ–ಪುರುಷರ ಅಂತರ ಬಿಂದುಗಳಲ್ಲಿ |
|---|---|---|---|---|
| | | ಗಂಡು | ಹೆಣ್ಣು | |
| ೧ | ಬಳ್ಳಾರಿ | ೬೯.೫೯ | ೪೬.೧೬ | ೨೩.೪೩ |
| ೨. | ಕೊಪ್ಪಳ | ೬೯.೧೫ | ೪೦.೭೬ | ೨೮.೩೯ |

ಮೂಲ: ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರ ಸಮಿತಿ ವರದಿ (ಡಾ.ಡಿ.ಎಂ.ನಂಜುಂಡಪ್ಪ ವರದಿ). ಪುಟ. ಸಂಖ್ಯೆ–೧೬೮

೨೦೦೧ರಲ್ಲಿನ ಅಂಕಿ ಅಂಶಗಳ ಪ್ರಕಾರ ಪುರುಷ ಸಾಕ್ಷರರಿಗಿಂತ ಮಹಿಳಾ ಸಾಕ್ಷರರ ಪ್ರಮಾಣ ತುಂಬಾ ಕಡಿಮೆ ಇರುವುದನ್ನು ಎರಡೂ ಜಿಲ್ಲೆಗಳಲ್ಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಇನ್ನು ೨೦೧೧ರ ಜನಗಣತಿಯ ಪ್ರಕಾರ ಈ ಎರಡೂ ಜಿಲ್ಲೆಗಳನ್ನು ಒಳಗೊಂಡಂತೆ ಸ್ತ್ರೀ ಪುರುಷರ ಸಾಕ್ಷರತೆಯ ಪ್ರಮಾಣವನ್ನು ಗಮನಿಸುವುದಾದರೆ

**ಕೋಷ್ಟಕ –೫.೨**

**ಸ್ತ್ರೀಪುರುಷರ ಶಿಕ್ಷಣದ ಅಂತರ**

| ಜಿಲ್ಲೆ | ಗ್ರಾಮೀಣ | | | ನಗರ | | | ಒಟ್ಟು |
|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | |
| ಬಳ್ಳಾರಿ | ೪೭೮೧೦೦ | ೩೩೧೨೧೨ | ೮೦೯೩೧೨ (ಶೇ.೬೧.೮೧) | ೩೩೫೩೪೦ | ೨೭೬೯೬೯ | ೬೧೨೩೦೯ (ಶೇ.೭೬.೬೩) | ೧೪೨೧೬೨೧ (ಶೇ.೬೭.೪೩) |
| ಕೊಪ್ಪಳ | ೩೮೨೨೭೦ | ೨೬೮೭೩೧ | ೬೫೧೦೦೧ (ಶೇ.೬೬.೦೫) | ೮೬೫೧೫ | ೭೧೫೬೯ | ೧೫೮೦೮೪ (ಶೇ.೭೮.೦೩) | ೮೦೯೦೮೫ (ಶೇ.೬೮.೦೯) |

ಮೂಲ:ಕರ್ನಾಟಕ ಅಂಕಿ ಅಂಶಗಳ ನೋಟ ೨೦೧೨–೧೩; ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

ಎರಡು ಜಿಲ್ಲೆಗಳಲ್ಲಿ ಮುಖ್ಯವಾಗಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲೂ ಪುರುಷರಿಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ತುಂಬಾ ಕಡಿಮೆ ಇರುವುದನ್ನು ಕಾಣಬಹುದಾಗಿದೆ. ಹಿಂದಿನ ಕೋಷ್ಟಕದಲ್ಲಿ ಸೂಚಿಸಿರುವಂತೆ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಕಡಿಮೆಯಿದ್ದು ೨೦೧೧ರ ಜನಗಣತಿಯ ಸಂದರ್ಭದಲ್ಲಿಯೂ ಇದರ ಪ್ರಮಾಣದಲ್ಲಿಯೇನೂ ಅಷ್ಟೊಂದು ವ್ಯತ್ಯಾಸಗಳೇನೂ ಕಂಡುಬರದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಅಸಮತೋಲನವು ಮಹಿಳೆಯರ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಮುಖ್ಯವಾಗಿ ಮಹಿಳೆಯರ ಶಿಕ್ಷಣಕ್ಕೆ ಸರಕಾರಗಳು ಹೆಚ್ಚು ಒತ್ತು ನೀಡಿದ್ದರೂ ಮಹಿಳಾ ಸಾಕ್ಷರರ ಸಂಖ್ಯೆ ನಿಧಾನ ಗತಿಯಲ್ಲಿ ಬದಲಾವಣೆಗಳು ಆಗುತ್ತಿದೆ.

ಭಾರತದಲ್ಲಿ ಪಾರಂಪರಿಕವಾಗಿ ಮಹಿಳೆಯರನ್ನು ಸಾಕ್ಷರತೆಯಿಂದ ವಂಚಿತರನ್ನಾಗಿ ಮಾಡಲಾಗಿದೆ. ನಮ್ಮ ಪರಂಪರೆಯಲ್ಲಿ ಮಹಿಳೆಯರು ಶಿಕ್ಷಣವನ್ನು ಪಡೆಯುವುದು ಸಾಮಾಜಿಕ ಭದ್ರತೆಯ ದೃಷ್ಟಿಯಿಂದ ಅಪಾಯಕಾರಿ ಎಂದು ಭಾವಿಸಲಾಗಿತ್ತು. ಆ ಕಾರಣಕ್ಕಾಗಿ ಮಹಿಳೆಯರಿಗೆ ಶಿಕ್ಷಣವನ್ನು ಕೊಡುತ್ತಿರಲಿಲ್ಲ. ಈ ಹಿಂದೆಯೇ ಹೇಳಿದಂತೆ ಜ್ಯೋತಿ ಬಾ ಫುಲೆಯವರು ಮಹಿಳಾ ಶಿಕ್ಷಣಕ್ಕೆ ಮೊಟ್ಟ ಮೊದಲ ಬಾರಿಗೆ ಆದ್ಯತೆಯನ್ನು ನೀಡಿದರು. ನಂತರದ ಕಾಲಾವಧಿಯಲ್ಲಿ ಅಂದರೆ ೨೦ನೆಯ ಶತಮಾನದ ಕಾಲಾವಧಿಯಲ್ಲಿ ಮಹಿಳೆಯರನ್ನು

ಸಾಕ್ಷರರನ್ನಾಗಿಸುವ ಕೆಲಸ ವೇಗವನ್ನು ಪಡೆಯಿತು. ಆದರೂ ಸ್ವಾತಂತ್ರ್ಯ ನಂತರವೂ ಜನಸಂಖ್ಯೆಯ ಏರಿಕೆಗೆ ತಕ್ಕಂತೆ ಮಹಿಳೆಯರ ಶಿಕ್ಷಣದಲ್ಲಿ ಯಾವುದೇ ರೀತಿಯ ಏರಿಕೆ ಕಂಡುಬರಲಿಲ್ಲ. ಗ್ರಾಮೀಣ ಭಾಗಗಳಲ್ಲಿನ ಮಹಿಳೆಯರು ಮತ್ತು ಪರಿಶಿಷ್ಟ ಮಹಿಳೆಯರು ಇಂದಿಗೂ ಶಿಕ್ಷಣದಿಂದ ವಂಚಿತರಾಗಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಪುರುಷಶಾಹಿ ಮೌಲ್ಯಗಳು. ಆ ಕಾರಣಕ್ಕಾಗಿ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದನ್ನು ಕಾಣಬಹುದಾಗಿದೆ. ಶಿಕ್ಷಣಕ್ಕೂ ಸಂವಿಧಾನ ಬದ್ಧವಾಗಿ ರಚಿಸಲ್ಪಟ್ಟ ಕಾನೂನುಗಳಿಗೂ ನೇರವಾದ ಸಂಬಂಧವಿದೆ. ಯಾರು ಶಿಕ್ಷಣವನ್ನು ಪಡೆದಿದ್ದಾರೋ ಅವರು ಕಾನೂನುಗಳನ್ನು ಅರಿಯುವಲ್ಲಿ ಸಫಲರಾಗುತ್ತಾರೆ ಎಂದು ಹೇಳಬಹುದು. ಆದರೆ ವಾಸ್ತವದಲ್ಲಿ ಸ್ತ್ರೀಯರು ಶಿಕ್ಷಣವನ್ನು ಪಡೆದಿದ್ದಾರೆ ಅಥವಾ ಅವರ ಶೈಕ್ಷಣಿಕ ಮಟ್ಟ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ ಎಂದು ಹೇಳಲಾಗುತ್ತಿದೆಯಾದರೂ, ಮಹಿಳಾ ಪರವಾದ ಹಲವಾರು ಕಾನೂನುಗಳನ್ನು ಬಳಸಿಕೊಳ್ಳುವಲ್ಲಿ ಅವರ ಪಾತ್ರ ಎಷ್ಟಿದೆ ಎಂಬುದನ್ನು ನೋಡಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ವ್ಯವಸ್ಥೆಯಲ್ಲಿನ ಲಿಂಗ ಅಸಮಾನತೆಯ ಮೌಲ್ಯಗಳು ಜೀವನ ಕ್ರಮದ ರೂಢಿಯಲ್ಲಿ ಹಾಸುಹೊಕ್ಕಾಗಿದ್ದರೂ ಶೈಕ್ಷಣಿಕ ವಾತಾವರಣದ ಸಂದರ್ಭದಲ್ಲಿಯೂ ಇವುಗಳು ಕೆಲಸ ಮಾಡುತ್ತಿರುವುದು ಕಂಡುಬರುತ್ತಿವೆ. ಹಾಗಾಗಿ ಮಹಿಳಾ ಪರವಾದ ಕಾನೂನುಗಳಿಗೆ ಸಂಬಂದಿಸಿದಂತೆ ಸ್ತ್ರೀ ಪುರುಷರಿಬ್ಬರಿಗೂ ಅರಿವನ್ನು ಮೂಡಿಸುವಲ್ಲಿ ಶಿಕ್ಷಣ ವ್ಯವಸ್ಥೆಯಲ್ಲಿ ಅಮೂಲಾಗ್ರವಾದ ಬದಲಾವಣೆ ಮಾಡಬೇಕಾದ ಅನಿವಾರ್ಯತೆಯಿದೆ. ಮುಖ್ಯವಾಗಿ ಶಿಕ್ಷಣದ ಪ್ರಾಥಮಿಕ ಹಂತದಿಂದಲೇ ಮಹಿಳಾ ಕಾನೂನುಗಳ ಕುರಿತಂತೆ ಪಠ್ಯಕ್ರಮಗಳನ್ನು ರಚಿಸಬೇಕು. ಹಾಗೆಯೇ ಪ್ರೌಢಶಿಕ್ಷಣದ ಹಂತದಿಂದ ಪ್ರತೀ ತರಗತಿಯಲ್ಲೂ ಒಂದೊಂದು ಕಾನೂನನ್ನು ಪಠ್ಯಕ್ರಮದಲ್ಲಿ ಪರಿಚಯಿಸಬೇಕು. ಮುಖ್ಯವಾಗಿ ಮಹಿಳೆಯರ ಆರ್ಥಿಕ ಜೀವನ ಮಟ್ಟ ಸುಧಾರಿಸುವ ಸಲುವಾಗಿಯೇ ರೂಪಿಸಲ್ಪಟ್ಟಿರುವ ಕಾನೂನಾದ ಆಸ್ತಿಹಕ್ಕಿನ ಕಾನೂನಿಗೆ ಹೆಚ್ಚಿನ ರೀತಿಯಲ್ಲಿ ಒತ್ತು ಕೊಡುವುದರ ಮೂಲಕ ಸ್ತ್ರೀ ಪುರುಷರಿಬ್ಬರಿಗೂ ಅರಿವನ್ನು ಮೂಡಿಸುವ ಹಾಗಾಗಬೇಕು. ಈ ಸಂದರ್ಭದಲ್ಲಿ ಎರಡು ಬಗೆಯ ಸಮಸ್ಯೆಗಳು ಎದುರಾಗುತ್ತವೆ. ಒಂದು ಪಠ್ಯಕ್ರಮಗಳ ರಚನೆ ಮತ್ತು ರಚಿಸಲ್ಪಟ್ಟಂತಹ ಪಠ್ಯಕ್ರಮವನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸುವುದು. ಇವುಗಳಿಗೆ ಸಂಬಂಧಸಿದಂತೆ ತುಂಬಾ ಎಚ್ಚರಿಕೆಯ ಹೆಜ್ಜೆಗಳನ್ನಿಡಬೇಕಾಗುತ್ತದೆ. ಏಕೆಂದರೆ ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಕಾನೂನನ್ನು ಯಥಾವತ್ತಾಗಿ ಪಠ್ಯಕ್ರಮದಲ್ಲಿ ಜಾರಿಗೆ ತರುವ ಕೆಲಸ ಮೊದಲಾಗಬೇಕು. ಆ ಸಂದರ್ಭದಲ್ಲಿ ಸ್ತ್ರೀ ಪುರುಷರು ಸಮಾನರು ಎಂದು ತಿಳಿದುಕೊಂಡಿರುವ ಸಮಾನ ಮನಸ್ಕರರನ್ನು ಪಠ್ಯಕ್ರಮ ರಚನೆಯಲ್ಲಿ ತೊಡಗಿಸಬೇಕು. ಆಗ ಮಾತ್ರ ಪುರುಷ ಮೌಲ್ಯಗಳು ಒಳಗೆ ತೂರಿಕೊಳ್ಳಲು ಅವಕಾಶವಿಲ್ಲದಂತಾಗುತ್ತದೆ. ನಂತರ ರಚನೆಗೊಂಡ ಪಠ್ಯಕ್ರಮ ಸರಿಯಾದ ದಿಕ್ಕಿನಲ್ಲಿ ಚಲಿಸುವಂತೆ ಪಾಠ ಬೋಧನೆಯಾಗಬೇಕು. ಇಲ್ಲಿಯೂ ಯಾವುದೇ ಬಗೆಯ ಪುರುಷಶಾಹಿ ಮೌಲ್ಯಗಳು ಓದುಗರ ಮೇಲೆ ಪ್ರಭಾವ ಬೀರದಂತೆ ಜಾಗೃತಿ ವಹಿಸಬೇಕು. ಅಂದರೆ ಪಾಠ

ಭೋದಕರಿಗೂ ಸ್ತ್ರೀ ಪುರುಷರ ಸಮಾನತೆಯ ಕುರಿತಂತೆ ತರಬೇತಿಯನ್ನು ನೀಡಬೇಕು ಅಂದಾಗ ಮಾತ್ರ ಸ್ತ್ರೀ ಪುರುಷರ ನಡುವಿನ ಅಂತರ ಸಡಿಲಗೊಳ್ಳಲು ಸಹಕಾರಿಯಾಗುತ್ತದೆ. ಹಾಗಾಗಿ ಈ ಬಗೆಯ ಶಿಕ್ಷಣದ ಅನಿವಾರ್ಯತೆ ಇದೆ. ಆಸ್ತಿಹಕ್ಕಿನ ಕಾನೂನಿನ ಕುರಿತು ಸಂಪೂರ್ಣ ವಾದ ಜ್ಞಾನ ಪ್ರಾಥಮಿಕ ಮತ್ತು ಪ್ರೌಢ ಹಂತದಲ್ಲಿಯೇ ದೊರೆಯುತ್ತದೆ. ಆದರೆ ಪ್ರಸ್ತುತ ಈ ಬಗೆಯ ಯಾವುದೇ ಕ್ರಮಗಳು ಜರುಗುತ್ತಿಲ್ಲ. ಹಾಗಾಗಿಯೇ ಮಹಿಳೆಯರು ಶಿಕ್ಷಣ ಕ್ಷೇತ್ರದಲ್ಲಿ ಪುರುಷರಿಗಿಂತ ಮುಂದೆ ಬರುತ್ತಿದ್ದಾರೆ ಎಂದು ಹೇಳಿಕೊಂಡರೂ ಅವರೆಲ್ಲರೂ ಮುಂದಿನ ದಿನಮಾನಗಳಲ್ಲಿ ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಕಾನೂನುಗಳ ಲಾಭವನ್ನು ಪಡೆಯುತ್ತಾರೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಇಂದಿನ ಶಿಕ್ಷಣ ಪದ್ದತಿ ಪುರುಷಶಾಹಿ ಮೌಲ್ಯಗಳನ್ನು ಎತ್ತಿ ಹಿಡಿಯುವ ಅಂಶಗಳನ್ನೇ ಹೆಚ್ಚಿನ ರೀತಿಯಲ್ಲಿ ಹೊಂದಿರುವುದರಿಂದ ಅಸಮಾನತೆ ಮೇಲು ಕೀಳು ಮನೋಭಾವನೆ ಹೆಚ್ಚಿನ ರೀತಿಯಲ್ಲಿ ಕಾಣಲು ಸಾಧ್ಯವಾಗುತ್ತದೆ. ಪಠ್ಯಕ್ರಮದಲ್ಲಿ ಭೋಧಿಸುವ ಅಂಶಗಳು ಮತ್ತು ವಾಸ್ತವ ಬದುಕಿನಲ್ಲಿ ಏರ್ಪಡುವ ಸಂಘರ್ಷಗಳು ಸಂಧಿಸುವುದಿಲ್ಲ. ಹಾಗಾಗಿ ಈ ವೈರುಧ್ಯಗಳು ಪುರುಷ ಪ್ರಧಾನ ಮೌಲ್ಯಗಳನ್ನು ಒಪ್ಪಿಕೊಳ್ಳುವ ಅನಿವಾರ್ಯತೆಯನ್ನು ತಂದೊಡ್ಡುತ್ತವೆ. ಆ ಕಾರಣಕ್ಕಾಗಿ ಕೇವಲ ನೈತಿಕ ಶಿಕ್ಷಣ ಮಾತ್ರ ಕೊಡದೆ ಅದರ ಜೊತೆಗೆ ಸ್ವಾವಲಂಬಿ ಬದುಕನ್ನು ನಡೆಸುವ ಹಾಗೆ ಮತ್ತು ಆ ಬದುಕಿಗೆ ಪೂರಕವಾಗುವ ಕಾನೂನಾದ ಆಸ್ತಿಹಕ್ಕಿನ ಕಾನೂನಿನ ಕುರಿತಂತೆ ಶಿಕ್ಷಣವನ್ನು ಕೊಡಬೇಕಾದ ಅನಿವಾರ್ಯತೆ ಇದೆ. ಕೇವಲ ಇದು ಆಸ್ತಿಹಕ್ಕಿನ ಕಾನೂನಿಗೆ ಮಾತ್ರ ಅನ್ವಯವಾಗುವುದಿಲ್ಲ ಬದಲಾಗಿ ಮಹಿಳಾ ಪರವಾಗಿ ರೂಪಿಸಲ್ಪಟ್ಟ ಕಾನೂನುಗಳಿಗೆಲ್ಲ ಅನ್ವಯವಾಗುತ್ತದೆ.

ವ್ಯವಸ್ಥೆಯಲ್ಲಿ ಶಿಕ್ಷಣವು ಎರಡು ಬಗೆಯಲ್ಲಿ ನಡೆಯುತ್ತದೆ. ಒಂದು ಔಪಚಾರಿಕ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣ. ಈ ಎರಡೂ ಬಗೆಯಲ್ಲಿಯೂ ಆಸ್ತಿ ಹಕ್ಕಿನ ಕಾನೂನಿಗೆ ಸಂಬಂಧಿಸಿದಂತೆ ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ಶಿಕ್ಷಣ ಸಿಗಬೇಕಾಗಿದೆ. ಮಗು ಹುಟ್ಟಿನಿಂದಲೇ ಅನೌಪಚಾರಿಕ ಶಿಕ್ಷಣಕ್ಕೆ ಒಳಗಾಗುತ್ತದೆ. ಆ ಸಂದರ್ಭದಲ್ಲಿಯೇ ಲಿಂಗ ಸಮಾನತೆಯನ್ನು ಒಳಗೊಂಡಿರುವ ಶಿಕ್ಷಣದ ಅವಶ್ಯಕತೆ ಇದೆ. ಹಾಗಾದಾಗ ಮಾತ್ರ ವ್ಯವಸ್ಥೆಯಲ್ಲಿ ಮಹಿಳೆಯರು ಸ್ವಾವಲಂಬಿಗಳಾಗಿ ಜೀವಿಸಲು ಸಹಕಾರಿಯಾಗುತ್ತದೆ. ಹೀಗೆ ಆಸ್ತಿಹಕ್ಕಿನ ಕಾನೂನಿನ ಅರಿವನ್ನು ಪಡೆಯಲು ಶಿಕ್ಷಣದ ಪಾತ್ರ ದೊಡ್ಡದಾಗಿದೆ. ಅಲ್ಪಸ್ವಲ್ಪ ಶಿಕ್ಷಣವನ್ನು ಪಡೆದ ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದ ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಮುಖ್ಯವಾಗಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಬೆಜಕಲ್ ಗ್ರಾಮದ ಚೆನ್ನಬಸಮ್ಮ ಎಂಬುವವರು ಯಾರ ಹಂಗೂ ಇಲ್ಲದೆ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ. ಇವರು ಬಿ.ಎ. ಓದಿದ್ದು. ಈ ಓದೇ ಅವರ ಕೈ ಹಿಡಿದಿದೆ. ಮತ್ತು ಸ್ವಾವಲಂಬಿ ಜೀವನ ನಡೆಸಲು ಸಹಕಾರಿಯಾಗಿದೆ. ಇವರು ತಮ್ಮ ಗಂಡನನ್ನು ಕಳೆದುಕೊಂಡ ನಂತರ ತನ್ನ ತವರು ಮನೆಯವರ ವಿರುದ್ಧ ಏಕಾಂಗಿಯಾಗಿ ಹೋರಾಡಿ ತಮ್ಮ

ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ. ಮತ್ತು ಆ ಆಸ್ತಿಯನ್ನು ಅವರೇ ಅನುಭವಿಸುತ್ತಿದ್ದಾರೆ. ಅವರೇ ಹೇಳುವ ಹಾಗೆ "ನಾನು ಓದೀನಿ. ಹಂಗಾಗಿ ಈ ವಿಚಾರದಾಗ ಏನೇನು ನಡೀತದ ಅಂತ ಗೊತ್ತಾಗ್ತದ. ನಾನು ಓದಿದ್ದು ಇಲ್ಲಿ ಉಪಯೋಗಕ್ಕ ಬಂತು. ನಾನೇನರಾ ಓದಿಲ್ಲ ಅಂತ ಅಂದಿದ್ರೆ ಬಾಳ ಕಷ್ಟ ಆಗೋದು. ನಮ್ ಅಣ್ಣಾನ ಕಡಿಯವ್ರ ಲಾಯರ್ ಸಾಹೇಬ್ರು ನನಿಗೆ ಏನೇನೆಲ್ಲಾ ಆಸಿ ಹಚ್ಚಿದ್ರು, ಮತ್ತ ಸಂಧಾನ ಮಾಡಕಾ ನೋಡಿದ್ರು. ಆದ್ರೂ ನಾನು ಅವಕ್ಕೆಲ್ಲಾ ಬಗ್ಗಲಿಲ್ಲ. ಕಾನೂನು ನನಗೂ ಗೊತ್ತೈತಿ ಅದರ ಪ್ರಕಾರ ನನಗ ನನ್ನ ಆಸ್ತಿ ಸಿಗಬೇಕು ಅಷ್ಟೇ ಅಂತೇಳಿ ಹಠ ಹಿಡಿದಿದ್ದೆ. ನಾನು ಒಬ್ಬೇ ಲಾಯರ್ ಸಾಹೇಬ್ರನ್ನ ಕಾಣಾಕ ಹೋಗಿದ್ದೆ. ನಾನು ಓದಿದ್ಕ ಸಾರ್ಥಕ ಆತು, ಅದೇ ನನ್ನ ಕೈ ಹಿಡೀತು. ಈಗ ನಮ್ ತಂದಿ ಆಸ್ತಿನಾಗ ಅರ್ಧಪಾಲು ಸಿಕ್ಕೈತಿ ಅದೇ ನನ್ನ ಜೀವ್ನಕ್ಕ ಆಧಾರ ಆಗೇತಿ" ಎಂದರು. ಚೆನ್ನ ಬಸಮ್ಮನವರು ಯಾರ ಸಹಾಯವೂ ಇಲ್ಲದೇ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದ ಮಹಿಳೆಯಾಗಿದ್ದಾಳೆ. ಇವರು ಓದಿನ ಕಾರಣಕ್ಕೆ ಹೀಗೆ ಮಾಡಲು ಸಾಧ್ಯವಾಯಿತು. ಇವರು ಆಸ್ತಿಯನ್ನು ಪಡೆದಿದ್ದಷ್ಟೇ ಅಲ್ಲದೇ ಆ ಆಸ್ತಿಯನ್ನು ಅವರೇ ಅನುಭವಿಸುತ್ತಿದ್ದಾರೆ. ತಮಗೆ ಸಿಕ್ಕಂಥ ಎರಡು ಎಕರೆ ಜಮೀನಿನಲ್ಲಿ ಬೆಳೆಯನ್ನು ಬೆಳೆಯುವುದರ ಮೂಲಕ ಸ್ವಾವಲಂಬಿ ಜೀವನವನ್ನು ಸಾಗಿಸುತ್ತಿದ್ದಾರೆ. ಇವರು ಇತರ ಮಹಿಳೆಯರಿಗೆ ಮಾದರಿಯಾಗಿದ್ದಾರೆ. ಹೀಗೆ ಶಿಕ್ಷಣವು ಮಹಿಳೆಯರನ್ನು ಸ್ವಾವಲಂಬಿಗಳಾಗಲು ಸಹಕಾರಿಯಾಗುತ್ತದೆ. ಈ ಪ್ರಕರಣದಲ್ಲಿ ಚೆನ್ನಬಸಮ್ಮನವರು ಶಿಕ್ಷಣವನ್ನು ಪಡೆದಿದ್ದಕ್ಕಾಗಿ ಯಾರ ಸಹಾಯವೂ ಇಲ್ಲದೇ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದಿರುವುದು ಕಂಡುಬಂದರೆ, ಮಹಿಳೆಯರು ಶಿಕ್ಷಣವನ್ನು ಪಡೆದಿದ್ದರೂ ಅವರು ತಮ್ಮ ಗಂಡನ ಮನೆಯವರ ಮತ್ತು ತವರು ಮನೆಯವರ ಸಹಾಯದಿಂದ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದ ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಇದಕ್ಕೆ ಉದಾಹರಣೆಯೆಂದರೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ತಾವರಗೇರ ಗ್ರಾಮದ ಲಕ್ಷ್ಮವ್ವ ಮತ್ತು ಬಳ್ಳಾರಿ ಜಿಲ್ಲೆಯ ಬೆಣಕಲ್ ಗ್ರಾಮದ ಚಂದ್ರಮ್ಮ ಮತ್ತು ಶಕುಂತಲ ತಮ್ಮ ತಂದೆಯ ಆಸ್ತಿಗಾಗಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಆಸ್ತಿಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ.

ತಾವರಗೆರೆ ಗ್ರಾಮದ ಲಕ್ಷ್ಮವ್ವ ಓದಿದ್ದು ಹತ್ತನೆಯ ತರಗತಿ. ಆ ಮೂಲಕ ದೊರೆತ ತಿಳುವಳಿಕೆ ಇವರಿಗೆ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ದೊರಕಿಸಿಕೊಟ್ಟಿತು. ಮುಖ್ಯವಾಗಿ ಇವರು ಹೇಳುವಂತೆ " ನಾನು ಓದಿದ್ದು ಹತ್ನೇ ಕ್ಲಾಸು ಮಾತ್ರ, ಇದೇ ನನಿಗೆ ಸಹಾಯಕ್ಕ ಬಂತು. ಆದ್ರ ಈ ಓದು ಏನೂ ಸಾಕಾಗಂಗಿಲ್ಲ. ಯಾಕಂದ್ರ ಹೆಣ್ಮಕ್ಕಳು ಎಷ್ಟೇ ಓದಿದ್ರೂ ಸತೆ ಆಸ್ತಿ ಕೇಳೋ ವಿಚಾರದಾಗ ಧೈರ್ಯ ಬರಂಗಿಲ್ಲ. ಯಾಕಂದ್ರ ಗಂಡ್ಮಕ್ಕಳು ಏನ್ ಮಾಡಿ ಬಿಡ್ತಾರೋ ಅಂತ ಭಯ. ನನಗೂ ಸತೆ ಹಿಂಗ ಆಗಿದ್ದು. ಅದಕ್ಕಂತ ನಾನು ನನ ಗಂಡನ್ನ ಜೊತಿಗೆ ಕರ್ಕಂಡಿದ್ದೆ. ಹಂಗಾಗಿ ನನಗ ಯಾರೂ ಏನೂ ಅನ್ನಲಿಲ್ಲ. ಮತ್ತ ನನ ಗಂಡ ಓದಿಲ್ಲ.

ಹಂಗಾಗಿ ಏನೇನು ಮಾಡ್ಬೇಕು ಅಂತೇಳಿ ನಾನೇ ಎಲ್ಲಾನೂ ಹೇಳಿಕೊಡ್ತಿದ್ದೆ. ಲಾಯರ್ತಾಗ ಎಲ್ಲಾನೂ ನಾನೇ ಮಾತಾಡ್ತಿದ್ದೆ. ರೊಕ್ಕದ ವಿಚಾರ ಬಂದಾಗ ಮಾತ್ರ ಸಹಾಯ ಮಾಡ್ತಿದ್ರು. ಹಂಗಾಗಿ ನಾನು ನಮ್ ತಂದಿ ಆಸ್ತಿನಾಗ ಪಾಲು ಪಡಿಯುವಂಗ ಆತು" ಎಂದರು. ಹಾಗೆಯೇ ಬಳ್ಳಾರಿ ಜಿಲ್ಲೆಯ ಬೆಣೆಕಲ್ ಗ್ರಾಮದಲ್ಲಿ ಚಂದ್ರಮ್ಮ ಮತ್ತು ಶಕುಂತಲ ತಮ್ಮ ತಂದೆಯ ಮತ್ತು ತಮ್ಮ ತಾತನ ಭಾಗದ ಆಸ್ತಿಯನ್ನು ಪಡೆದುಕೊಂಡಿದ್ದಾರೆ. ಚಂದ್ರಮ್ಮ ಓದಿದ್ದು ಪಿ.ಯು.ಸಿ ಮತ್ತು ಶಕುಂತಲ ಓದಿದ್ದು ಹತ್ತನೆಯ ತರಗತಿ. ಇವರಿಬ್ಬರೂ ತಮ್ಮ ತಂದೆಯ ಮತ್ತು ತಾತನ ಆಸ್ತಿಯಲ್ಲಿ ಪಾಲನ್ನು ಪಡೆದಿದ್ದಾರೆ. ಮುಖ್ಯವಾಗಿ ಇವರಿಬ್ಬರೂ ತಮ್ಮ ಚಿಕ್ಕಪ್ಪನ ವಿರುದ್ಧ ಕೇಸ್ ಮಾಡಿ ಗೆದ್ದಿದ್ದಾರೆ. ಇದಕ್ಕೆಲ್ಲಾ ಸಹಾಯಕರಾಗಿ ನಿಂತವರು ತಮ್ಮ ತಾಯಿ ಮತ್ತು ಸೋದರ ಮಾವ. ಮುಖ್ಯವಾಗಿ ಇವರ ತಂದೆ ಮರಣ ಹೊಂದಿದ ನಂತರ ಇವರ ಚಿಕ್ಕಪ್ಪ ಇವರನ್ನು ಮನೆಯಿಂದ ಹೊರದೂಡಿದ್ದಾರೆ. ಆಗ ಇವರಿಗೆ ಇದ್ದಂತಹ ಆಸ್ತಿಯನ್ನೂ ಸಹ ಇವರಿಂದ ಕಿತ್ತುಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಅದು ಕೈಗೂಡಲಿಲ್ಲ. ಏಕೆಂದರೆ ಚಂದ್ರಮ್ಮಳಿಗೆ ಆಸ್ತಿ ಕುರಿತ ಕಾನೂನಿನ ಬಗ್ಗೆ ಸ್ವಲ್ಪ ಅರಿವು ಇತ್ತು. ಆದರೆ ತಮ್ಮ ತಂದೆಯ ಆಸ್ತಿಯನ್ನು ಪಡೆಯಲು ಬೆಂಬಲಕ್ಕಾಗಿ ಕಾಯುತ್ತಿದ್ದರು. ಆಗ ತಮ್ಮ ತಾಯಿಯ ತಮ್ಮನಾದ ನಾಗರಾಜ ಇವರ ಸಹಾಯಕ್ಕೆ ಬಂದಿದ್ದಾನೆ. ಆಗ ಚಂದ್ರಮ್ಮಳೇ ತನ್ನ ತಾಯಿಗೆ ಆಸ್ತಿಹಕ್ಕಿನ ಕಾನೂನಿನ ಕುರಿತಂತೆ ಸ್ವಲ್ಪ ಮಟ್ಟಿಗೆ ಹೇಳಿದ್ದಾಳೆ. ಆಗ ತಾಯಿ ನಿಂಗಮ್ಮ ಮತ್ತು ಸೋದರ ಮಾವ ನಾಗರಾಜನ ಸಹಾಯ ಮತ್ತು ಬೆಂಬಲದಿಂದ ಚಿಕ್ಕಪ್ಪನ ವಿರುದ್ಧ ಕೇಸ್ ದಾಖಲಿಸಿದ್ದಾರೆ. ಮತ್ತು ಆ ಕೇಸ್‌ನಲ್ಲಿ ಜಯಶಾಲಿ ಯಾಗಿದ್ದಾರೆ. ಈ ಕುರಿತು ಚಂದ್ರಮ್ಮಳಲ್ಲಿ ಮಾತನಾಡಿಸಿದಾಗ ಅವರು ಹೀಗೆ ಹೇಳಿದರು. "ನಮ್ಮ ತಂದೆ ತೀರಿಕೊಂಡ ಮ್ಯಾಲೆ ನಮ್ಗೆ ಏನ್ ಮಾಡ್ಬೇಕು ಅಂತಾನೇ ಗೊತ್ತಾಗಲಿಲ್ಲ. ಹಂಗಾಗಿ ನಮ್ಮ ತಾಯಿ ತಮ್ಮ ನಾಗರಾಜನ ಮನಿಗೆ ಬಂದು ಇದ್ವಿ. ನಾನು ಪಿಯುಸಿ ಓದ್ಬೇಕಾದ್ರೆ ತಂದಿ ಆಸ್ತಿನಾಗ ಮಕ್ಳಿಗೆ ಪಾಲು ಸಿಗತೈತಿ ಅಂತ ತಿಳಿದಿತ್ತು. ಅದು ನಮಗ ಸಹಾಯಕ್ಕ ಬಂತು. ಆದ್ರ ಆಸ್ತಿ ಸಿಗತೈತಿ ಅಂತೇನೋ ಗೊತ್ತಿತ್ತು. ಆದ್ರೆ ನಮಿಗೆ ಕೇಳಾಕ ಧೈರ್ಯ ಇರ್ಲಿಲ್ಲ. ಯಾಕಂದ್ರ ನಮಿಗೆ ಕೇಸ್ ಮಾಡಾಕ ರೊಕ್ಕ ಇರ್ಲಿಲ್ಲ. ಅದಕ್ಕ ನಮಗ ಯಾರಾದ್ರೂ ಸಹಾಯಕ್ಕ ಬರ್ತಾರೇನೋ ಅಂತ ಕಾಯ್ತಿದ್ವಿ. ಆ ಟೈಮಿನಾಗ ನಮ್ ಸೋದರ ಮಾವ ನಮ್ ಸಹಾಯಕ್ಕ ಬಂದ. ಆಮ್ಯಾಲ ಕೋರ್ಟಿಗಿ ಕೇಸ್ ಫೈಲ್ ಮಾಡಿದ್ವಿ. ಕೇಸ್ ಬಾಳ ದಿನ ನಡೀತು. ಒಂದಿನ ಕೇಸ್ ನಮ್ ಕಡಿಗೇ ಆತು. ಇಷ್ಟೆಲ್ಲಾ ಆಗಿದ್ದು ನಾನು ಓದಿದ್ಕ. ನಾನೇನರ ಓದಿಲ್ಲ ಅಂದಿದ್ರ ಇಷ್ಟೊತ್ತಿಗೆ ನಾವೆಲ್ಲಿರ್ತಿದ್ವೋ ಗೊತ್ತಿಲ್ಲ. ಆ ಟೈಮಿನಾಗ ತಂಗಿ ಶಕುಂತ್ಲ ಸತೆ ಹತ್ನೇ ಕ್ಲಾಸು ಒದ್‌ತಿದ್ಲು. ಇದೂ ಸತೆ ಸಹಾಯಕ್ಕ ಬಂತು. ಇಬ್ರೂ ಓದಿದ್ಕ ನಮ್ ಅಮ್ಮಗ ಮತ್ತ ನಮ್ ಮಾವಗ ಇಬ್ರಿಗೂ ಬಾಳ

ಧೈರ್ಯ ಬಂದಿತ್ತು. ನಾವು ಸತೆ ಯಾವದನ್ನ ಕೇರ್ ಮಾಡ್ಲಾರ್ದಂಗ ಮಾತಾಡ್ತಿದ್ವಿ. ಈಗ ನಾವು ಬಾಳ ಚೆನ್ನಾಗೈದೀವಿ" ಎಂದು ಹೇಳಿದರು. ಇಲ್ಲಿ ಮುಖ್ಯವಾಗಿ ಗಮನಿಸಬೇಕಿರುವುದೇನೆಂದರೆ ಚಂದ್ರಮ್ಮ ವಿದ್ಯಾವಂತೆಯಾಗಿದ್ದು ತನ್ನ ತಂದೆಯ ಮತ್ತು ತಾತನ ಆಸ್ತಿಯಲ್ಲಿ ತಮಗೆ ಪಾಲು ದೊರೆಯುತ್ತದೆ ಎಂಬ ಅರಿವು ಇದೆ. ಆದರೆ ಮಹಿಳೆ ಎಂಬ ಕಾರಣಕ್ಕೆ ಅದನ್ನು ಪಡೆಯಲು ಇನ್ನೊಬ್ಬರ ಆಶ್ರಯವನ್ನು ಬಯಸಿರುವುದು ಕಂಡುಬರುತ್ತದೆ. ಇದು ಅನಿವಾರ್ಯ ಏಕೆಂದರೆ ಪುರುಷಶಾಹಿ ವ್ಯವಸ್ಥೆಯಲ್ಲಿ ಮಹಿಳೆಗೆ ಆಪತ್ತು ಯಾವತ್ತೂ ಇದ್ದದ್ದೆ. ಹಾಗಾಗಿ ಇನ್ನೊಬ್ಬರ ಬೆಂಬಲವನ್ನು ಬಯಸಿರುವುದು ತಪ್ಪಲ್ಲ. ಮುಖ್ಯವಾಗಿ ಮಹಿಳೆ ಕುಟುಂಬದ ಒಳಗೆಯೇ ಇರಬೇಕು ಎಂದು ನಿರೀಕ್ಷಿಸುವ ಸಮಾಜದಲ್ಲಿ ಕುಟುಂಬದ ಆಚೆ ಬಂದು ಬದುಕನ್ನು ಕಟ್ಟಿಕೊಳ್ಳುವುದು ಕಷ್ಟಸಾಧ್ಯವಾದುದು. ಹಾಗಿದ್ದರೂ ಸಹ ತಮ್ಮ ಓದಿನ ಸಹಾಯದಿಂದ ಚಂದ್ರಮ್ಮ ಮತ್ತು ಶಕುಂತಲ ಇಬ್ಬರೂ ತಮ್ಮ ತಂದೆಯ ಆಸ್ತಿಗಾಗಿ ಕೋರ್ಟ್ ಮೆಟ್ಟಿಲೇರಿ ಜಯಿಸಿದ್ದು ಒಂದು ಸಾಹಸವೇ ಸರಿ. ಇದಕ್ಕೆ ಹಲವು ಜನರ ಸಹಕಾರವಿದೆ ನಿಜ. ಮುಖ್ಯವಾಗಿ ಇಲ್ಲಿ ಮಹಿಳೆಯರು ಶಿಕ್ಷಣಕ್ಕೆ ತಮ್ಮನ್ನು ತಾವು ತೆರೆದುಕೊಂಡರೆ ಅದರಿಂದ ಅವರ ಆತ್ಮಬಲ ಹೆಚ್ಚಾಗುತ್ತದೆ. ಮತ್ತು ಅವರ ಅಭಿವೃದ್ಧಿಗೆ ನಾಂದಿ ಹಾಡಿದಂತಾಗುತ್ತದೆ. ಒಂದುವೇಳೆ ಇವರೇನಾದರೂ ಓದಿಲ್ಲದೇ ಇದ್ದಿದ್ದರೆ ತಮ್ಮ ತಂದೆಯ ಆಸ್ತಿಯಲ್ಲಿ ಯಾವುದೇ ಪಾಲು ದೊರೆಯುತ್ತಿರಲಿಲ್ಲ. ಹಾಗಾಗಿ ಮಹಿಳೆಯರು ತಾವು ವಿದ್ಯಾಭ್ಯಾಸ ಪಡೆದ ಕಾರಣಕ್ಕಾಗಿ ಈ ಕಾರ್ಯ ಸಾಧಿತವಾಯಿತು. ಒಟ್ಟಾರೆಯಾಗಿ ಈ ಮೂರೂ ಪ್ರಕರಣಗಳನ್ನು ಕ್ರೂಢೀಕರಿಸಿ ಹೇಳುವುದಾದರೆ ಶಿಕ್ಷಣದ ಮೂಲಕ ಆತ್ಮವಿಶ್ವಾಸ ಪಡೆದ ಕಾರಣಕ್ಕಾಗಿ ಯಾರ ಸಹಾಯವೂ ಇಲ್ಲದೇ ವ್ಯವಸ್ಥೆಯೊಂದಿಗೆ ಹೋರಾಡಿ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡು ಸ್ವಾವಲಂಬಿ ಬದುಕನ್ನು ಸಾಗಿಸುತ್ತಿರುವ ಚೆನ್ನಬಸಮ್ಮನಂತಹ ಪ್ರಕರಣಗಳು ಬೆರಳೆಣಿಕೆಯಷ್ಟು ದೊರೆಯುತ್ತವೆಯಾದರೂ ಇಂತಹ ಪ್ರಕರಣಗಳೇ ಇನ್ನುಳಿದ ಮಹಿಳೆಯರಿಗೆ ಮಾದರಿಗಳಾಗುತ್ತವೆ. ಅದೇ ರೀತಿಯಲ್ಲಿ ಓದಿನ ಕಾರಣಕ್ಕಾಗಿ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಲು ಧ್ವನಿ ಎತ್ತಿ ಪಾಲನ್ನು ಪಡೆದಂತಹ ಪ್ರಕರಣಗಳೂ ಸಹ ಕಂಡುಬರುತ್ತಿವೆ. ಹಾಗಾಗಿ ಶಿಕ್ಷಣ ಎನ್ನುವುದು ಮಹಿಳೆಯರ ಧ್ವನಿಯಾಗುತ್ತದೆ. ಒಟ್ಟಾರೆಯಾಗಿ ಅಧ್ಯಯನ ಕ್ಷೇತ್ರದ ವ್ಯಾಪ್ತಿಯಾದ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳ ಪ್ರದೇಶದಲ್ಲಿನ ಕ್ಷೇತ್ರ ಮಾಹಿತಿಯನ್ನಾಧರಿಸಿ ಆಸ್ತಿ ಹಕ್ಕಿನ ಕಾಯಿದೆಯ ಬಗೆಗೆ ಅರಿವನ್ನು ಹೊಂದಿದವರು ಕಂಡು ಬರುತ್ತಾರೆ. ಇವರು ಹಲವು ಮೂಲಗಳಿಂದ ಆಸ್ತಿ ಹಕ್ಕು ಕಾನೂನಿನ ಬಗೆಗೆ ತಿಳಿದುಕೊಂಡವರಾಗಿದ್ದಾರೆ. ಅದನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ

ಕೋಷ್ಟಕ -೫.೩

ಆಸ್ತಿ ಹಕ್ಕು ಕಾನೂನಿನ ಬಗ್ಗೆ ಅರಿವಿನ ಮೂಲ

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಸ್ತ್ರೀಶಕ್ತಿ ಸಂಘಗಳಿಂದ | ೧೧೮ | ೩೯.೩೩ |
| ಪತ್ರಿಕೆಗಳಿಂದ | ೪೬ | ೧೫.೩೩ |
| ಸರ್ಕಾರಿ/ಸರ್ಕಾರೇತರ ಸಂಸ್ಥೆಗಳ ಜಾಗೃತಿ ಕಾರ್ಯಕ್ರಮಗಳಿಂದ | ೭೨ | ೨೪ |
| ಗಂಡನ ಮನೆಯವರಿಂದ | ೪೮ | ೧೬ |
| ತವರು ಮನೆಯವರಿಂದ | ೧೬ | ೫.೩೩ |




ರೇಖಾ ಚಿತ್ರ ೫.೩ ಆಸ್ತಿ ಹಕ್ಕು ಕಾನೂನಿನ ಬಗ್ಗೆ ಅರಿವಿನ ಮೂಲ

ಒಟ್ಟಾರೆಯಾಗಿ ಈ ಪ್ರಕರಣಗಳು ಕೇವಲ ಕೆಲವು ಉದಾಹರಣೆಗಳಷ್ಟೇ. ಮಹಿಳೆಯರಿಗೆ ಶಿಕ್ಷಣ ಅನ್ನೋದು ದೊರೆತರೆ ಅವರ ಸ್ವಾವಲಂಬಿ ಜೀವನಕ್ಕೆ ಯಾವುದೇ ತೊಂದರೆ ಯಾಗುವುದಿಲ್ಲ. ಕಾನೂನಾತ್ಮಕವಾಗಿ ಜಾರಿಯಲ್ಲಿರುವ ಎಲ್ಲಾ ಕಾಯಿದೆಗಳನ್ನು ಬಳಸಿಕೊಳ್ಳಲು ಅವರು ಹಿಂದೇಟಾಕುವುದಿಲ್ಲ. ಇಲ್ಲಿ ಶಿಕ್ಷಣದ ಪಾತ್ರ ದೊಡ್ಡದಿದೆ. ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಮಹಿಳೆಯರು ಸ್ತ್ರೀಶಕ್ತಿ ಸಂಘಗಳ ಶೇಕಡಾ ೩೯.೩೩ರಷ್ಟು ಪ್ರಮಾಣದಲ್ಲಿ ತಿಳಿದುಕೊಂಡಿದ್ದಾರೆ. ಹಾಗೆಯೇ ನಂತರದಲ್ಲಿ ಗಂಡನ ಮನೆಯವರಿಂದ ಶೇಕಡಾ ೧೬ರಷ್ಟು

ಮಹಿಳೆಯರು ಆಸ್ತಿ ಹಕ್ಕಿನ ಕುರಿತು ಅರಿವನ್ನು ಹೊಂದಿದ್ದಾರೆ. ಇದನ್ನು ಗಮನಿಸಿದರೆ ಗಂಡನ ಮನೆಯವರ ಒತ್ತಡದ ಕಾರಣವಾಗಿ ಮಹಿಳೆಯರು ಈ ಕಾನೂನಿನ ಬಗೆಗೆ ತಿಳಿದುಕೊಂಡಿದ್ದಾರೆ ಎಂಬುದು ತಿಳಿದು ಬರುತ್ತದೆ. ಈ ಹಿಂದೆಯೇ ಹೇಳಿದಂತೆ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಕ್ರಮಗಳೆರಡರಲ್ಲೂ ಲಿಂಗ ಸಮಾನತೆ ಹಾಸುಹೊಕ್ಕಾಗಬೇಕು. ಕೇವಲ ಸ್ತ್ರೀಯರಿಗೆ ಮಾತ್ರವಲ್ಲದೆ ಪುರುಷರಿಗೂ ಈ ಬಗೆಯ ಶಿಕ್ಷಣವನ್ನು ನೀಡಬೇಕಾದ ಅನಿವಾರ್ಯತೆ ಇದೆ. ಪುರುಷರೂ ಸಹ ಸಮಾಣ ಮನಸ್ಥಿತಿಯಿಂದ ಒಳಗೊಳ್ಳುವಂತಾಗಬೇಕು. ಅವರಿಗೂ ಮಹಿಳಾ ಪರವಾದ ಕಾನೂನುಗಳ ಅರಿವನ್ನು ಮೂಡಿಸಬೇಕಿದೆ. ಅದರಲ್ಲೂ ಮುಖ್ಯವಾಗಿ ಆಸ್ತಿ ಹಕ್ಕು ಕಾನೂನಿನ ಕುರಿತಂತೆ ಪುರುಷರಲ್ಲಿ ಅರಿವು ಮೂಡಿಸಬೇಕಿದೆ. ಇದು ತುಂಬಾ ಕಷ್ಟದ ಕೆಲಸ. ಏಕೆಂದರೆ ಪುರುಷ ವ್ಯವಸ್ಥೆಯ ಮೌಲ್ಯಗಳು, ಚಿಂತನೆಗಳು ತುಂಬಾ ಬಲಿಷ್ಟವಾಗಿದ್ದು ಮಹಿಳೆಯರಿಗೆ ಆರ್ಥಿಕ ಭದ್ರತೆ ದೊರೆಯುವುದನ್ನು ಈ ವ್ಯವಸ್ಥೆ ಸಹಿಸುವುದಿಲ್ಲ. ಹಾಗಾಗಿ ಮೊದಲು ಈ ಪುರುಷ ವ್ಯವಸ್ಥೆಯ ಮನೋಧರ್ಮಗಳು ಬದಲಾಗಬೇಕು. ಈ ವಾತಾವರಣ ಸೃಷ್ಟಿಯಾಗಲು ಶಿಕ್ಷಣ ಕ್ರಮದಲ್ಲಿ ಬದಲಾವಣೆಗೆ ತರಬೇಕು ಮತ್ತು ಮಹಿಳೆಯರ ಆರ್ಥಿಕ ಭದ್ರತೆಯನ್ನು ಹೆಚ್ಚಿಸುವ ಕಾನೂನಾದ ಆಸ್ತಿ ಹಕ್ಕಿನ ಕಾನೂನಿನ ಕುರಿತು ಅರಿವನ್ನು ಮೂಡಿಸುವಂತಾಗಬೇಕು. ಇದರಿಂದ ಪುರುಷ ಮನೋಧರ್ಮಗಳು, ಚಿಂತನೆಗಳು ಸ್ವಲ್ಪ ಪ್ರಮಾಣದಲ್ಲಿ ಬದಲಾಗುವುದರಲ್ಲಿ ಸಂದೇಹವಿಲ್ಲ. ಮತ್ತು ಮಹಿಳೆಯರು ಆಸ್ತಿ ಹಕ್ಕನ್ನು ತಮ್ಮ ಹಕ್ಕಾಗಿ ಪಡೆಯಲು ಯಾವುದೇ ಅಡ್ಡಿ ಆತಂಕಗಳು ಇರುವುದಿಲ್ಲ. ಹಾಗಾಗಿ ಸಮಾನತೆಯ, ಲಿಂಗ ತಾರತಮ್ಯ ರಹಿತ ಶಿಕ್ಷಣದ ಮೂಲಕ ಸ್ತ್ರೀಪುರುಷರ ನಡುವಿನ ತಾರತಮ್ಯ ತೊಲಗಿ ತಾರತಮ್ಯರಹಿತ ಸಮಾಜ ನಿರ್ಮಾಣಕ್ಕೆ ನಾಂದಿ ಹಾಡಬಹುದು.

**೫.೨. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಮಾಧ್ಯಮಗಳ ಪಾತ್ರ**

ಇಂದು ಮಾಧ್ಯಮಗಳು ಇಡೀ ಸಮಾಜ ವ್ಯವಸ್ಥೆಗೆ ಮಾರ್ಗದರ್ಶಕರಂತೆ ರೂಪು ಗೊಳ್ಳುತ್ತಿವೆ. ವ್ಯವಸ್ಥೆಯಲ್ಲಿ ನಡೆಯುವ ಪ್ರತಿಯೊಂದು ಘಟನೆಯನ್ನು ಪ್ರತಿಯೊಬ್ಬ ಪ್ರಜೆಗೂ ತಲುಪಿಸುವ ಜವಾಬ್ದಾರಿ ಈ ಮಾಧ್ಯಮಗಳಿಗಿದೆ. ಹಾಗಾಗಿ ಸಮಾಜವನ್ನು ತಿದ್ದುವ ಕೆಲಸದಲ್ಲಿ ಮಾಧ್ಯಮಗಳ ಪಾತ್ರ ದೊಡ್ಡದಿದೆ ಎಂದೇ ಹೇಳಬೇಕಾಗುತ್ತದೆ. ಮಾಧ್ಯಮಗಳಲ್ಲಿ ಎರಡು ವಿಧ. ಒಂದು ಪತ್ರಿಕಾ ಮಾಧ್ಯಮಗಳು ಮತ್ತು ಎರಡನೆಯದು ಎಲೆಕ್ಟ್ರಾನಿಕ್ಸ್ ಮಾಧ್ಯಮಗಳು. ಈ ಎರಡೂ ಮಾಧ್ಯಮ ಪ್ರಕಾರಗಳು ಜನರ ಮೇಲೆ ತುಂಬಾ ಪರಿಣಾಮ ಗಳನ್ನು ಬೀರುತ್ತವೆ. ಆದರೆ ಇವುಗಳು ಬಿತ್ತರಿಸುತ್ತಿರುವ ಕಾರ್ಯಕ್ರಮಗಳು ಜನರ ಮೇಲೆ ಯಾವ ಪರಿಣಾಮವನ್ನು ಬೀರುತ್ತಿವೆ ಎಂಬುದು ಇಲ್ಲಿನ ಮುಖ್ಯ ಪ್ರಶ್ನೆ. ಹಾಗೆಯೇ ಮಹಿಳಾ ಸಂಬಂಧಿ ಕಾನೂನುಗಳ ಬಗೆಗೆ ಈ ಮಾಧ್ಯಮಗಳು ಯಾವ ಬಗೆಯ ಧೋರಣೆಯನ್ನು ಹೊಂದಿವೆ? ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ಮಾಧ್ಯಮಗಳು ಬಿತ್ತರಿಸುತ್ತಿರುವ ಕಾರ್ಯಕ್ರಮಗಳು ಪಿತೃಪ್ರಧಾನ ಮೌಲ್ಯಗಳನ್ನು ಸ್ಥಿರೀಕರಿಸುವ ಮತ್ತು ಜನರನ್ನು ಸಾಂಪ್ರದಾಯಿಕ

ನೆಲೆಯಲ್ಲಿಯೇ ಜೀವಿಸುವ ಹಾಗೆ ಮಾಡುತ್ತಿವೆ. ಲಿಂಗ ಸಮಾನತೆಯ ಅಂಶಗಳನ್ನೊಳಗೊಂಡ ಯಾವ ಕಾರ್ಯಕ್ರಮಗಳೂ ಬಿತ್ತರಗೊಳ್ಳುತ್ತಿಲ್ಲ. ಇವುಗಳ ಕಡೆಗೆ ಗಮನಹರಿಸಬೇಕಾದ ಅವಶ್ಯಕತೆ ಇದೆ. ಮುಖ್ಯವಾಗಿ ಜನರನ್ನು ತಲುಪುತ್ತಿರುವ ಈ ಮಾಧ್ಯಮ ಕಾರ್ಯಕ್ರಮಗಳ ರೂಪುರೇಷೆ ಬದಲಾಗಬೇಕಿದೆ. ಮಾಧ್ಯಗಳಲ್ಲಿ ಪ್ರಕಟವಾಗುವ ಮಹಿಳಾ ಕಾರ್ಯಕ್ರಮಗಳನ್ನು ಪಟ್ಟಿ ಮಾಡುತ್ತಾ ಹೋದರೆ ಅವುಗಳಲ್ಲಿ ಯಾವೊಂದು ಕಾರ್ಯಕ್ರಮಗಳೂ ಸಹ ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿಲ್ಲದಿರುವುದು ಕಂಡುಬರುತ್ತಿದೆ. ಎಲೆಕ್ಟ್ರಾನಿಕ್ಸ್ ಮಾಧ್ಯಮ ಗಳಾಗಲೀ, ಪತ್ರಿಕಾ ಮಾಧ್ಯಮಗಳಾಗಲೀ ಮಹಿಳೆಯರ ಪರವಾದ, ಅವರ ಅಭಿವೃದ್ಧಿಗೆ ಪೂರಕ ವಾದಂತಹ ವಿಷಯಗಳು ಬಿತ್ತರಗೊಳಿಸಬೇಕಾಗಿದೆ.

ಪತ್ರಿಕಾ ಮಾಧ್ಯಮಗಳ ವ್ಯಾಪ್ತಿಗೆ ದಿನಪತ್ರಿಕೆಗಳು, ವಾರ ಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ತ್ರೈಮಾಸಿಕ, ಅರ್ದವಾರ್ಷಿಕ ಮತ್ತು ವಾರ್ಷಿಕ ಪತ್ರಿಕೆಗಳು ಬರುತ್ತವೆ. ಮುಖ್ಯವಾಗಿ ದಿನ ಪತ್ರಿಕೆಗಳು ಪ್ರತಿಯೊಂದು ಹಳ್ಳಿಗೂ ತಲುಪುತ್ತವೆಯಾದ್ದರಿಂದ ಈ ಪತ್ರಿಕೆಗಳಲ್ಲಿ ಇಂದು ಹೆಚ್ಚಾಗಿ ಮಹಿಳೆಯರ ಮೇಲೆ ನಡೆಯುವ ಹಿಂಸೆ, ಅತ್ಯಾಚಾರ, ಆಸಿಡ್ ಎರಚಿದ ಸಂಗತಿಗಳು ರೋಚಕವಾಗಿ ವರದಿಯಾಗುವಷ್ಟು ಮಹಿಳೆಯರಿಗೆ ಸಂಬಂಧಿಸಿದ ಪ್ರಗತಿಯ ವರದಿಗಳು ಸುದ್ದಿ ಯಾಗುವುದಿಲ್ಲ. ಮುಖ್ಯವಾಗಿ ಮಹಿಳಾ ಪರವಾದಂತಹ ಕಾನೂನುಗಳ ಕುರಿತು ಧೀರ್ಘವಾದಂತಹ ಚರ್ಚೆಗಳು ನಡೆದ ಉದಾಹರಣೆಗಳು ಕಂಡುಬಂದಿಲ್ಲ. ಪ್ರತಿಯೊಂದು ದಿನ ಪತ್ರಿಕೆಯೂ ಸಹ ಮಹಿಳೆಯರಿಗಾಗಿಯೇ ಪ್ರತ್ಯೇಕವಾದ ಪುಟಗಳನ್ನು ಹೊಂದಿವೆ. ಆದರೆ ಇದುವರೆಗೂ ಆ ಪುಟಗಳಲ್ಲಿ ಮಹಿಳೆಯರ ಆಸ್ತಿಹಕ್ಕಿಗೆ ಸಂಬಂಧಿಸಿದ ಮಾಹಿತಿ ಬಂದಿರುವುದು ತುಂಬಾ ವಿರಳವೆಂದೇ ಹೇಳಬಹುದು (ಕೆಲವು ಪತ್ರಿಕೆಗಳನ್ನು ಹೊರತುಪಡಿಸಿ). ಆದರೆ ಪ್ರಜಾವಾಣಿ ಪತ್ರಿಕೆಯು ಇದಕ್ಕಿಂತ ಭಿನ್ನವಾಗಿ ಕಂಡುಬಂದಿದೆ. ಏಕೆಂದರೆ ಮಹಿಳೆಯರ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಅರಿವನ್ನು ಮೂಡಿಸುವ ಮತ್ತು ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಜನರಲ್ಲಿರುವ ಗೊಂದಲಗಳಿಗೆ ನೇರವಾಗಿ ನ್ಯಾಯವಾದಿಗಳಿಂದಲೇ ಸೂಕ್ತ ಪರಿಹಾರಗಳನ್ನು ಸೂಚಿಸುವ ಮೂಲಕ ಮಹಿಳೆಯರ ಆಸ್ತಿಹಕ್ಕಿನ ಕಾನೂನಿನ ಕುರಿತ ಅರಿವನ್ನು ಮೂಡಿಸುವ ಉದ್ದೇಶದಿಂದ ಪ್ರತೀ ಹದಿನೈದು ದಿನಗಳಿಗೊಮ್ಮೆ ಭೂಮಿಕಾ ಎಂಬ ಪ್ರತ್ಯೇಕ ಪತ್ರಿಕೆಯಲ್ಲಿ ಒಂದು ಕಾಲಂನ್ನು ಮೀಸಲಾಗಿಟ್ಟಿದೆ. ಈ ಕಾಲಂನ ಹೆಸರು 'ಸಬಲೆ' ಎಂದು. ಇದರಲ್ಲಿ ಮಹಿಳೆಯರ ಬದುಕಿಗೆ ಉಂಟಾಗುವ ಅಡೆತಡೆಗಳನ್ನು ನಿವಾರಿಸಲು ಕಾನೂನು ಅರಿವನ್ನು ನೀಡುತ್ತಲೇ ಬಂದಿದೆ. ಮುಖ್ಯವಾಗಿ ಈ ಭಾಗದಲ್ಲಿ ಮಹಿಳೆಯರು ಆಸ್ತಿಹಕ್ಕಿಗೆ ಸಂಬಂಧಿಸಿದ ವಿಲೇವಾರಿಯ ಕುರಿತಂತೆ ಪ್ರತಿಯೊಬ್ಬರೂ ಪ್ರಶ್ನೆ ಕೇಳಲು ಅವಕಾಶವಿದೆ. ಈ ಎಲ್ಲಾ ಪ್ರಶ್ನೆಗಳಿಗೆ 'ಪ್ರಭಾ ಮೂರ್ತಿ'ಯವರು ಉತ್ತರಿಸುತ್ತಿದ್ದರು, ಹಾಗೆಯೇ ಕಾನೂನಾತ್ಮಕ ಸಲಹೆಗಳನ್ನು ನೀಡು ತ್ತಿದ್ದರು. ಈ ಬಗೆಯ ಕಾರ್ಯಗಳು ಜನರಲ್ಲಿ ಆಸ್ತಿ ಹಕ್ಕಿನ ಕಾನೂನಿನ ಬಗೆಗೆ ಅರಿವು ಮೂಡಿಸಲು ಒಂದು ಮಾದರಿಯನ್ನು ಹಾಕಿಕೊಟ್ಟಿದೆ. ಇದರ ಕುರಿತು ಕೆಲವು ಉದಾಹರಣೆ

ಗಳನ್ನು ನೋಡುವುದಾದರೆ ತುಮಕೂರಿನ ಶೈಲಜ ಎಂಬುವವರು ಒಂದು ಪ್ರಶ್ನೆಯನ್ನು ಕೇಳಿದ್ದರು. " ಗಂಡನ ಸ್ವಯಾರ್ಜಿತ ಆಸ್ತಿಯಲ್ಲಿ ಹೆಂಡತಿ ಮಕ್ಕಳಿಗೆ ಪಾಲು ಇಲ್ಲವೇ?" ಎಂದು. ಇದಕ್ಕೆ ಉತ್ತರವಾಗಿ ಪ್ರಭಾ ಮೂರ್ತಿಯವರು ಸಲಹೆ ಕೊಟ್ಟಿರುವುದು ಹೀಗೆ "ಯಾರದ್ದೇ ಸ್ವಯಾರ್ಜಿತ ಆಸ್ತಿಯಲ್ಲಿ ಅವರು ಕಾಲವಾಗುವವರೆಗೂ ಬೇರಾರಿಗೂ ಹಕ್ಕು ಬರುವುದಿಲ್ಲ. ಸ್ವಯಾರ್ಜಿತ ಆಸ್ತಿಯನ್ನು ತಮ್ಮ ಜೀವಿತಾವಧಿಯಲ್ಲಿಯೇ ತಮ್ಮ ಇಚ್ಛಾನುಸಾರ ವಿನಿಯೋಗಿಸುವ ಹಕ್ಕು ಆಸ್ತಿಯ ಮಾಲೀಕರದ್ದಾಗಿರರುತ್ತದೆ. ಒಂದು ವೇಳೆ ಅವರು ಹಾಗೆ ಮಾಡದೇ ಮರಣ ಪತ್ರ ಬರೆಯದೇ ತೀರಿಕೊಂಡಲ್ಲಿ ಅವರ ಪತ್ನಿ, ಮಕ್ಕಳು, ತಾಯಿ ಮೊದಲಾದವರಿಗೆ ಪಾಲು ಇರುತ್ತದೆ."[1]

ಮೈಸೂರಿನ ಎಸ್.ಲಕ್ಷ್ಮಿ ಎಂಬುವವರು, " ನನ್ನ ವಯಸ್ಸು ೬೦ ವರ್ಷ. ನಮ್ಮ ತಂದೆಗೆ ಇಬ್ಬರು ಮಕ್ಕಳು. ನಾನು ಮದುವೆಯಾಗಿದ್ದು, ಮೈಸೂರಿನಲ್ಲಿ ವಾಸವಾಗಿದ್ದೇನೆ. ನನ್ನ ತಮ್ಮನಿಗೆ ೪೬ ವರ್ಷ. ಇನ್ನು ಅವಿವಾಹಿತ. ನಮ್ಮ ತಾತನಿಂದ ಬಂದ ಪಿತ್ರಾರ್ಜಿತ ಆಸ್ತಿಯನ್ನು ನೋಡಿಕೊಳ್ಳುತ್ತಿದ್ದಾನೆ. ಆಸ್ತಿ ವಿಭಾಗವಾಗಿಲ್ಲ. ನಮ್ಮ ತಂದೆ ತಾಯಿ ಈಗ ಬದುಕಿಲ್ಲ. ಆಸ್ತಿ ಮಾರಿರುವ ವಿಚಾರವನ್ನು ನನ್ನ ತಮ್ಮ ಮುಚ್ಚಿಡುತ್ತಿದ್ದಾನೆ. ಅವನು ಆಸ್ತಿ ಮಾರಿರುವ ವಿಷಯ ನಮಗೆ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ವಿಚಾರಿಸಿದರೆ ತಿಳಿಯಬಹುದೇ? ಯಾರಿಗೆ ಯಾವಾಗ ಎಷ್ಟು ಬೆಲೆಗೆ ಆಸ್ತಿ ಮಾರಿದ್ದಾನೆ ಎಂಬ ಮಾಹಿತಿ ಅಲ್ಲಿ ಕೊಡುತ್ತಾರೆಯೇ? ನಾನು ಆಸ್ತಿಯಲ್ಲಿ ಪಾಲು ಕೇಳಬೇಕೆಂದಿದ್ದೇನೆ ಆದರೆ ೧೯೫೫ರಲ್ಲಿ ಹುಟ್ಟಿರುವುದರಿಂದ ನನಗೆ ಆಸ್ತಿಯಲ್ಲಿ ಪಾಲು ಕೇಳಲು ಹಕ್ಕು ಇದೆಯೇ ತಿಳಿಸಿ. ತಾನು ಮದುವೆಯಾಗದ ಕಾರಣ ಆಸ್ತಿಯನ್ನು ಯಾರಿಗಾದರೂ ಮಾರುವ ಮತ್ತು ಯಾರಿಗಾದರೂ ಬರೆದುಕೊಡುವ ಹಕ್ಕು ಇದೆ ಎಂದು ಹೇಳುತ್ತಿದ್ದಾನೆ. ದಯವಿಟ್ಟು ಈ ಬಗ್ಗೆ ಸಲಹೆ ನೀಡಿ". ಎಂದು ಕೇಳಿಕೊಂಡಿದ್ದಾರೆ. ಇದಕ್ಕೆ ಉತ್ತರವಾಗಿ ಪ್ರಭಾ ಮೂರ್ತಿಯವರು " ಆಸ್ತಿ ಮಾರಿದ ಬಗ್ಗೆ ಮಾಹಿತಿಯನ್ನು ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ವಿಚಾರಿಸಬಹುದು, ನಿರ್ದಿಷ್ಟ ಆಸ್ತಿಯ ವರ್ಗಾವಣೆಯ ದಾಖಲೆಗಳ ಪ್ರಮಾಣಿತ ನಕಲುಗಳನ್ನೂ ಪಡೆಯಬಹುದು. ಹಾಗೂ ಆಸ್ತಿಯ ಸಂಬಂಧದಲ್ಲಿ ಋಣಭಾರ ರಾಹಿತ್ಯ ಪ್ರಮಾಣ ಪತ್ರವನ್ನು ತೆಗೆದುಕೊಂಡರೆ ತಿಳಿಯಬಹುದು. ಈಗ ಪುರುಷರೊಂದಿಗೆ ಸಮಾನವಾದ ಹುಟ್ಟಿನಿಂದ ವಾರಸಾ ಹಕ್ಕು ಮಹಿಳೆಯರಿಗೆ ಬಂದಿದೆಯಾದರೂ ೧೯೫೬ರ ನಂತರ ಜನಿಸಿದ ಮಹಿಳೆಯರಿಗೆ ಮಾತ್ರ ಅನ್ವಯಿಸುತ್ತದೆ. ಪಿತ್ರಾರ್ಜಿತ ಆಸ್ತಿ ಅಲ್ಲದಿದ್ದರೂ ನಿಮ್ಮ ತಂದೆಯ ಸ್ವಂತ ಆಸ್ತಿ ಇದ್ದರೂ ಅದರಲ್ಲಿ ನಿಮಗೆ ಸಮಭಾಗ ಪಡೆಯಲು ಅವಕಾಶವಿದೆ. ಅದರಲ್ಲಿ ನಿಮ್ಮ ಪಾಲನ್ನು ನೀವು ಕೇಳಬಹುದು. ಮುಂದಿನ ಕ್ರಮಕ್ಕೆ ಕೂಡಲೇ ವಕೀಲರನ್ನು ಸಂಪರ್ಕಿಸಿ"[2] ಎಂಬ ಸಲಹೆಯನ್ನು ನೀಡಿದ್ದಾರೆ. ಈ ರೀತಿಯಲ್ಲಿ ಹಲವಾರು ಮಹಿಳೆಯರು ಆಸ್ತಿಹಕ್ಕನ್ನು ಪಡೆದುಕೊಳ್ಳುವಲ್ಲಿ ತಮಗೆ ಇರುವಂತಹ ಗೊಂದಲಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇದು ಹಲವು ವರ್ಷಗಳವರೆಗೆ ಸರಣಿಯೋಪಾದಿಯಲ್ಲಿ ಸಾಗುತ್ತಾ ಬಂದಿತು. ನಂತರದಲ್ಲಿ

ಮಹಿಳಾ ಪರ ಕಾನೂನುಗಳ ಮಾಹಿತಿ ಮತ್ತು ಪರಿಚಯದ ಕುರಿತಂತೆ ಪ್ರತೀ ವಾರವೂ ಪ್ರತ್ಯೇಕ ಅಂಕಣ ಆರಂಭವಾಯಿತು. ಇದರಲ್ಲಿ ಡಾ.ಗೀತಾ ಕೃಷ್ಣಮೂರ್ತಿಯವರು ಮಹಿಳಾ ಪರವಾದ ಕಾನೂನುಗಳ ಬಗೆಗೆ ಮಾಹಿತಿಯನ್ನು ನೀಡುತ್ತಾ ಬರುತ್ತಿದ್ದಾರೆ. ಮುಖ್ಯವಾಗಿ ಇವರು ಮಹಿಳಾ ಆಸ್ತಿ ಹಕ್ಕಿನ ಕುರಿತಂತೆ ಹಾಗೆಯೇ ಜೀವನಾಂಶಕ್ಕೆ ಸಂಬಂಧಿಸಿದಂತೆ ಕಾನೂನು ಮಾಹಿತಿಯನ್ನು ನೀಡುತ್ತಿದ್ದಾರೆ. ಈ ಅಂಕಣ ಇಂದಿಗೂ ಪ್ರಕಟವಾಗುತ್ತಿದೆ. ಈ ಎರಡೂ ಕಾರ್ಯಗಳು ಮಹಿಳೆಯರ ಬದುಕಿಗೆ ಹೊಸ ಮೆರುಗನ್ನು ನೀಡುತ್ತಾ ಬಂದಿವೆ. ಮುಖ್ಯವಾಗಿ ಇಲ್ಲಿ ಗಮನಿಸ ಬೇಕಿರುವುದೇನೆಂದರೆ ಇಲ್ಲಿ ಕೇಳಲಾಗುತ್ತಿರುವ ಪ್ರಶ್ನೆಗಳನ್ನು ಸ್ವತಃ ಮಹಿಳೆಯರೇ ಕೇಳುತ್ತಿದ್ದಾರೆ. ಇವರು ಶಿಕ್ಷಣವನ್ನು ಪಡೆದವರೇ ಆಗಿದ್ದಾರೆ. ಹಾಗಾಗಿ ಈ ಪತ್ರಿಕೆಯು ಮಹಿಳೆಯರು ಮಾತನಾಡಲು ಒಂದು ವೇದಿಕೆಯನ್ನು ಮತ್ತು ಅವಕಾಶವನ್ನು ನೀಡಿ, ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸಿದೆ ಎಂದರೆ ತಪ್ಪಾಗಲಾರದು. ಈ ಬಗೆಯಲ್ಲಿ ಪ್ರಜಾವಾಣಿ ದಿನ ಪತ್ರಿಕೆಯು ಮಹಿಳೆಯರಲ್ಲಿ ಕಾನೂನು ಅರಿವನ್ನು ಮೂಡಿಸುವ ಕಾರ್ಯ ಮಾಡುತ್ತಾ ಬರುತ್ತಿದೆ. ಈ ತರಹದ ಕೆಲಸಗಳನ್ನು ಬೇರೆ ಬೇರೆ ದಿನ ಪತ್ರಿಕೆಗಳೂ ಸಹ ಮಾಡಬೇಕಾದ ಅನಿವಾರ್ಯತೆ ಇದೆ. ಪ್ರತಿಯೊಂದು ಪತ್ರಿಕೆಯು ಮಹಿಳೆಯರಿಗಾಗಿಯೇ ಪ್ರತ್ಯೇಕ ಪುಟಗಳನ್ನು ಮೀಸಲಿಟ್ಟಿವೆ ನಿಜ. ಆದರೆ ಆ ಪುಟಗಳಲ್ಲಿ ಮಹಿಳಾ ಆರೋಗ್ಯಕ್ಕೆ ಸಂಬಂಧಿಸಿದಂತೆ, ಮಹಿಳಾ ಸೌಂದರ್ಯಕ್ಕೆ ಸಂಬಂಧಿಸಿದಂತೆ ಅತ್ಯಾಕರ್ಷಕ ಶಿಕ್ಷಣದ ಕುರಿತಂತೆ ಹೆಚ್ಚಿನ ಮಾಹಿತಿಗಳಿರುವುದು ಕಂಡು ಬರುತ್ತದೆ. ಇಂದಿನ ಪತ್ರಿಕೆಗಳು ತುಂಬಾ ವಾಣಿಜ್ಯೀಕರಣಗೊಂಡಿವೆ. ಹಾಗಾಗಿಯೇ ಮಹಿಳಾ ಪರವಾದ ಕಾನೂನುಗಳ ಕುರಿತಂತೆ ಯಾವೊಂದು ಚರ್ಚೆಗಳು ಕಂಡುಬರುತ್ತಿಲ್ಲ. ಹಾಗೆಯೇ ವಾರಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ಅರ್ದವಾರ್ಷಿಕ ಪತ್ರಿಕೆಗಳೂ ತಮ್ಮದೇ ನೆಲೆಯಲ್ಲಿ ಕಾರ್ಯಗಳನ್ನು ಮಾಡುತ್ತಿವೆ. ಆದರೆ ಇಲ್ಲಿ ಕೊರತೆ ಇರುವುದು ಏನೆಂದರೆ ಇವುಗಳಾವುವೂ ಮಹಿಳೆಯರ ಕಾನೂನಾತ್ಮಕ ಹೋರಾಟಗಳಿಗೆ ಸಂಬಂಧಿಸಿದಂತೆ ಯಾವೊಂದು ಮಾಹಿತಿ ಯನ್ನೂ ಬಿತ್ತರಿಸುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಪತ್ರಿಕೆಗಳೂ ಆರಂಭಗೊಂಡಿವೆ. ಇವುಗಳು ತಮ್ಮದೇ ಆದ ವ್ಯಾಪ್ತಿಯಲ್ಲಿ ಮಹಿಳೆಯರ ಅಭಿವೃದ್ಧಿಗೆ ದುಡಿಯುತ್ತಿವೆ. ಇವು ಇನ್ನೂ ಹೆಚ್ಚಿನ ರೀತಿಯಲ್ಲಿ ತಮ್ಮ ಕಾರ್ಯಗಳನ್ನು ಚುರುಕು ಗೊಳಿಸಬೇಕಾಗಿದೆ. ಮುಖ್ಯವಾಗಿ ಆಸ್ತಿಹಕ್ಕಿನ ಕಾನೂನಿಗೆ ಸಂಬಂಧಿಸಿದಂತೆ ಪತ್ರಿಕೆಗಳು ಪ್ರತ್ಯೇಕ ವಾದಂತಹ ಅಂಕಣಗಳನ್ನೇ ಮೀಸಲಿಡಬೇಕಾಗುತ್ತದೆ. ಇದರ ಅವಶ್ಯಕತೆ ತುಂಬಾ ಇದೆ. ಏಕೆಂದರೆ ಆಸ್ತಿ ಹಕ್ಕಿನ ಕಾನೂನಿನ ಕುರಿತಂತೆ ಗ್ರಾಮೀಣ ಮತ್ತು ನಗರ ಪ್ರದೇಶದ ಮಹಿಳೆಯರಲ್ಲಿ ಅರಿವು ಇರುವುದು ತುಂಬಾ ಕಡಿಮೆ. ಹಾಗಾಗಿ ಇದರ ಕುರಿತಂತೆ ಪ್ರತಿ ದಿನ ಅಥವಾ ವಾರಕ್ಕೆ ಒಂದು ಬಾರಿಯಾದರೂ ಆಸ್ತಿಹಕ್ಕಿನ ಕಾನೂನಿನ ಕುರಿತು ಮಾಹಿತಿಯನ್ನು ನೀಡುವಂತಾಗಬೇಕು. ಇದರ ಜೊತೆಗೆ ಆಸ್ತಿಗಾಗಿ ಕೋರ್ಟ್‌ಗಳಲ್ಲಿ ದಾಖಲಿಸಿದ ಕೇಸ್‌ಗಳನ್ನು ಹಾಗೆಯೇ ಅವುಗಳ ಅಂತಿಮ ತೀರ್ಮಾನವನ್ನು ಸಹ ವರದಿ ರೂಪದಲ್ಲಿ ಪ್ರಕಟಿಸಬೇಕು. ಅಂದಾಗ ಮಾತ್ರ ಜನರಲ್ಲಿ ಇದರ ಕುರಿತಂತೆ ಜಾಗೃತಿ ಮೂಡುತ್ತದೆ. ಮುಖ್ಯವಾಗಿ ಆಸ್ತಿ ಹಕ್ಕಿನ

ಕುರಿತು ದಾಖಲಾದ ಕೇಸ್‌ಗಳಿಗೆ ಸಂಬಂಧಿಸಿ ಹೈಕೋರ್ಟ್ ಮತ್ತು ಸುಪ್ರೀಂ ಕೋರ್ಟ್‌ಗಳು ನೀಡಿರುವಂಥ ತೀರ್ಪುಗಳ ಬಗೆಗೆ ಧೀರ್ಘವಾದ ಚರ್ಚೆಗಳು ಪತ್ರಿಕೆಗಳಲ್ಲಿ ನಡೆಯಬೇಕು. ಸ್ಥಳೀಯ ನ್ಯಾಯಾಲಯಗಳಲ್ಲಿನ ತೀರ್ಪುಗಳನ್ನೂ ಸಹ ಬಿತ್ತರಿಸಬೇಕು. ಅಂದಾಗ ಮಾತ್ರ ಆಸ್ತಿಹಕ್ಕಿನ ಕಾನೂನಿನ ಕುರಿತು ಮಹಿಳೆಯರಲ್ಲಿ ಒಂದು ಹಂತದ ಜಾಗೃತಿ, ಆತ್ಮಸ್ಥೈರ್ಯ ಮೂಡಿಬರುತ್ತದೆ. ಈ ಕೆಲಸ ಪತ್ರಿಕೆಗಳಲ್ಲಿ ಆಗಬೇಕಿದೆ.

ಎಲೆಕ್ಟ್ರಾನಿಕ್ಸ್ ಮಾಧ್ಯಮಗಳಾದ ಚಲನಚಿತ್ರ, ದೂರದರ್ಶನ ಮತ್ತು ಆಕಾಶವಾಣಿಗಳಲ್ಲಿ ಬಿತ್ತರಗೊಳ್ಳುವ ವಿಷಯಗಳು ಕೇವಲ ಮನರಂಜನೆಯ ವಿಷಯಗಳಾಗಿರುತ್ತವೆ. ಮುಖ್ಯವಾಗಿ ಚಲನಚಿತ್ರಗಳು ಕೇವಲ ಮನರಂಜನೆಯ ಒಂದು ಉಧ್ಯಮವಾಗಿ ಮಾರ್ಪಟ್ಟಿದೆ. ಕನ್ನಡದ ಸಂದರ್ಭದಲ್ಲಿ ಮಹಿಳೆಯರ ಆಸ್ತಿಹಕ್ಕನ್ನೇ ಮುಖ್ಯ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡು ಮೂಡಿಬಂದ ಚಲನಚಿತ್ರಗಳು ಇಲ್ಲವೆಂದೇ ಹೇಳಬಹುದು. ಹಾಗೆಯೇ ದೂರದರ್ಶನಗಳಲ್ಲಿ ಬಿತ್ತರಗೊಳ್ಳುವ ಧಾರವಾಹಿಗಳು ಜನರ ಅದರಲ್ಲಿಯೂ ಮಹಿಳೆಯರ ಮೇಲೆ ಇನ್ನಿಲ್ಲದಂತೆ ಪ್ರಭಾವ ಮತ್ತು ಪರಿಣಾಮವನ್ನು ಬೀರುತ್ತವೆ. ಬಿತ್ತರಗೊಳ್ಳುತ್ತಿರುವ ಈ ಧಾರವಾಹಿಗಳು ಮಹಿಳೆಯರನ್ನು ಮತ್ತೆ ಸಾಂಪ್ರದಾಯಿಕ ಚೌಕಟ್ಟಿಗೆ ಕೊಂಡೊಯ್ಯುವಂತಹವುಗಳಾಗಿವೆ. ಮುಖ್ಯವಾಗಿ ಮಹಿಳೆಯರನ್ನು ತುಂಬಾ ಸಾಂಪ್ರದಾಯಿಕ ನೆಲೆಯಲ್ಲಿ ಚಿತ್ರಿಸುವುದು ಮತ್ತು ಅತ್ಯುಗ್ರವಾದ ರೀತಿಯಲ್ಲಿ ಚಿತ್ರಿಸುವ ಧಾರಾವಾಹಿಗಳು ಹೆಚ್ಚೆಚ್ಚು ಮೂಡಿಬರುತ್ತಿವೆ. ಇವು ಜನರ ಮೇಲೆ ಇನ್ನಿಲ್ಲದಂಥ ಪರಿಣಾಮಗಳನ್ನು ಉಂಟುಮಾಡುತ್ತವೆ. ಆದರೆ ಸಾಮಾಜಿಕ ಕಾಳಜಿಯನ್ನಿಟ್ಟುಕೊಂಡು ಧಾರವಾಹಿಗಳು ಮೂಡಿಬರಬೇಕಾದ ಅನಿವಾರ್ಯತೆ ಇದೆ. ಜೊತೆಗೆ ಮಹಿಳೆಯರ ಆರ್ಥಿಕ ಭದ್ರತೆಯನ್ನು ಹೆಚ್ಚಿಸುವ ರೀತಿಯಲ್ಲಿ ಕಾರ್ಯಕ್ರಮಗಳು ರೂಪುಗೊಳ್ಳಬೇಕಾಗಿದೆ. ಇವುಗಳು ಕುಟುಂಬದ ಹಿತವನ್ನು ಮತ್ತು ಕುಟುಂಬದಲ್ಲಿನ ಮಹಿಳೆಯರ ಘನತೆಯನ್ನು ಎತ್ತಿಹಿಡಿಯುವಂತಿರಬೇಕು. ಜೊತೆಗೆ ಮಹಿಳಾ ಪರ ಕಾನೂನುಗಳ ಕುರಿತಾದ ಕಾರ್ಯಕ್ರಮಗಳು ಮತ್ತು ಜಾಹಿರಾತುಗಳು ಮೂಡಿಬರಬೇಕು. ಅಂದಾಗ ಮಾತ್ರ ಈ ಕಾನೂನಿನ ಕುರಿತು ಜನರಲ್ಲಿ ಜಾಗೃತಿಯುಂಟಾಗುತ್ತದೆ. ಹಾಗೆಯೇ ಆಕಾಶವಾಣಿಯೂ ಸಮಾಜದ ಬದಲಾವಣೆಗೆ ತನ್ನದೇ ಆದ ಪಾತ್ರವನ್ನು ವಹಿಸುತ್ತದೆ. ಹಾಗಾಗಿ ಪ್ರತೀ ದಿನವೂ ಆಸ್ತಿಹಕ್ಕಿನ ಕಾನೂನು ಕುರಿತಂತೆ ಜಾಹಿರಾತು ರೂಪದಲ್ಲಾಗಲೀ, ಒಂದು ಕಿರುಚಿತ್ರದ ರೂಪದಲ್ಲಾಗಲೀ ಅಥವಾ ನಾಟಕದ ರೂಪದಲ್ಲಾಗಲೀ ಮೂಡಿಬಂದು ಜನರನ್ನು ತಲುಪುವಂತಾಗಬೇಕು. ಆಗ ಆಸ್ತಿಹಕ್ಕಿನ ಕಾನೂನು ಮತ್ತು ಅದರ ಕುರಿತ ಸಾಧ್ಯತೆಗಳನ್ನು ಮಹಿಳೆಯರು ತಿಳಿಯುವಂತಾಗುತ್ತದೆ. ಹಾಗೆಯೇ ಇಂದು ವಾರ್ತಾ ಚಾನೆಲ್‌ಗಳೂ ಅಧಿವಾಗಿವೆ. ಇವುಗಳಲ್ಲಿಯೂ ಮಹಿಳಾ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಚರ್ಚೆಗಳು ನಡೆಯಬೇಕು.

ಟಿ.ವಿ. ಮಾಧ್ಯಮಗಳಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳು ಸಮಾಜಕ್ಕೆ ಮುಟ್ಟಿಸುವ ಸಂದೇಶಗಳು ಹಲವು ಬಾರಿ ಅಪಾಯಕಾರಿಯಾಗಿರುತ್ತವೆ. ಈ ಅಪಾಯಗಳಿಗೆ ತುತ್ತಾಗುವುದು

ಪುನಃ ಮಹಿಳಾ ಸಮುದಾಯವೇ ಎಂದರೆ ತಪ್ಪಾಗಲಾರದು. ಏಕೆಂದರೆ ಮಹಿಳೆಯರ ಪರವಾದ ಕಾನೂನುಗಳ ಕುರಿತಂತೆ ಇದುವರೆಗೆ ಮೂಡಿಬಂದಿರುವ ಕಾರ್ಯಕ್ರಮಗಳನ್ನು ವೀಕ್ಷಿಸಿದರೆ ಅಲ್ಲಿ ಲಿಂಗಸೂಕ್ಷ್ಮತೆಯ ಅಂಶಗಳನ್ನು ಹೇಗೆ ಮರೆ ಮಾಚಲಾಗುತ್ತದೆ ಎಂಬುದು ಸ್ಪಷ್ಟಗೊಳ್ಳುತ್ತದೆ ಮತ್ತು ಆ ಪ್ರಕ್ರಿಯೆಗೆ ಬಳಸಿಕೊಳ್ಳುವ ವ್ಯಕ್ತಿಗಳು ಪುನಃ ಮಹಿಳೆಯರೇ ಆಗಿರುತ್ತಾರೆ ಎಂಬುದು ವಿಷಾದದ ಸಂಗತಿ.

ಮಹಿಳಾ ಪರವಾದ ಕಾನೂನು ಕುರಿತು ಜಾಗೃತಿಯನ್ನು ಮೂಡಿಸಲೋ ಅಥವಾ ವ್ಯವಸ್ಥೆಯಲ್ಲಿ ನಡೆದಿರುವ ಅಹಿತಕರ ಘಟನೆಯೊಂದಕ್ಕೆ ಸಂಬಂಧಿಸಿದಂತೆ ಮಾಧ್ಯಮಗಳು ಬಿತ್ತರಿಸುವ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಒಂದು ವಿಷಯ/ಘಟನೆಯ ಕುರಿತಂತೆ ಮಾಹಿತಿ ಯನ್ನು ದಿನಗಟ್ಟಲೆ ಪ್ರಸಾರ ಮಾಡಲಾಗುತ್ತವೆ. ಆದರೆ ಘಟನೆಯು ನಡೆದ ನಂತರದ ಪ್ರಕ್ರಿಯೆ ಏನಾಗಿದೆ?, ದೊರೆತಂಥ ನ್ಯಾಯದ ಸ್ವರೂಪವೇನು?, ದೊರೆತ ನ್ಯಾಯ ಸರಿಯಾದುದೇ?, ಪ್ರಕರಣ ಕುರಿತಂತೆ ಮುಂದುವರೆದ ಪ್ರಕ್ರಿಯೆ ಏನಾಗಿದೆ? ಅನ್ಯಾಯಕ್ಕೊಳಗಾದವರ ಪರವಾಗಿ ಮಾಧ್ಯಮಗಳು ಮಾಡಬೇಕಾದ ಕೆಲಸಗಳೇನು? ಹೀಗೆ ಹಲವು ಅಂಶಗಳ ಕುರಿತಂತೆ ಗೊಂದಲಗಳು ಹಾಗೆಯೇ ಉಳಿದು ಬಿಡುತ್ತವೆ. ಈ ಎಲ್ಲಾ ಮಾಹಿತಿಗಳನ್ನು ಹೊರ ಹಾಕುವ ಬದಲಾಗಿ ಬೇರೊಂದು ಘಟನೆ/ವಿಷಯದ ಕುರಿತು ಅಬ್ಬರದ ಪ್ರಚಾರಕ್ಕೆ ತೊಡಗುವ ಕಾರ್ಯ ಕ್ರಮಗಳತ್ತ ಮಾಧ್ಯಮಗಳು ಮುಖ ಮಾಡಿರುತ್ತವೆ. ಆಸ್ತಿಹಕ್ಕಿನ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಪ್ರಕರಣವೊಂದರಲ್ಲಿ ಆಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದ ಮೆಟ್ಟಿಲೇರಿದ್ದ ಮಹಿಳೆ ಮತ್ತು ಆಕೆಯ ಮಗಳು ಬರ್ಬರವಾಗಿ ಹತ್ಯೆಗೀಡಾಗಿದ್ದ ಪ್ರಕರಣವೊಂದು ರಾಯಚೂರು ಜಿಲ್ಲೆಯ ಲಿಂಗಸ್ಗೂರು ತಾಲೂಕಿನ ವ್ಯಾಪ್ತಿಯಲ್ಲಿ ದಾಖಲಾಗಿದೆ. ಪ್ರಕರಣದ ಹಿನ್ನಲೆಯಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದ ಮೆಟ್ಟಿಲೇರಿದ್ದ ಮಹಿಳೆಯ ಪರವಾಗಿ ನ್ಯಾಯ ತೀರ್ಮಾನವಾಗಿತ್ತು. ಈ ತೀರ್ಮಾನದಂತೆ ತಂದೆಯ ಆಸ್ತಿಯಲ್ಲಿನ ಜಮೀನು ಮಹಿಳೆಗೆ ದೊರೆತಿದೆ. ಆದರೆ ಅದನ್ನು ಸಹಿಸದ ಆಕೆಯ ಸಹೋದರ ಜೀವ ಬೆದರಿಕೆಯನ್ನು ಹಾಕಿದ್ದಾನೆ. ಹಾಗಾಗಿ ಆ ಮಹಿಳೆಯು ಕೃಷಿಯನ್ನೇ ಅವಲಂಬಿಸಿ ಜೀವನವನ್ನು ನಡೆಸುತ್ತಿದ್ದರಿಂದ ಪೋಲಿಸ್ ಠಾಣೆಗೆ ಹೋಗಿ ತಾನು ಜಮೀನಿನಲ್ಲಿ ಉಳುಮೆ ಮಾಡಲು ಹೊರಟಿದ್ದು ತನ್ನ ಸಹೋದರನಿಂದ ಜೀವ ಬೆದರಿಕೆಯಿದೆ. ಕಾರಣ ತಾವುಗಳು ತನಗೆ ರಕ್ಷಣೆ ಕೊಡಬೇಕೆಂದು ಕೇಳಿಕೊಂಡಿದ್ದಾರೆ. ಪೋಲಿಸರು ಬರುವುದಾಗಿ ಹೇಳಿ ಆಕೆಯನ್ನು ಕಳುಹಿಸಿದ್ದಾರೆ. ಆದರೆ ಜಮೀನಿಗೆ ಉಳುಮೆ ಮಾಡಲು ಬಂದ ತಾಯಿ ಮತ್ತು ಮಗಳನ್ನು ಆಕೆಯ ಸಹೋದರ ಕೊಡಲಿಯಿಂದ ಕೊಚ್ಚಿ ಕೊಲೆ ಮಾಡಿದ್ದಾನೆ. ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದೂ ಕೊಲೆಯಾದ ಮಹಿಳೆಯರ ಪ್ರಕರಣವು ಪ್ರಸಾರಗೊಂಡಿದ್ದು ಹೇಗೆಂದರೆ 'ಆಸ್ತಿ ಕೇಳಿದ್ದಕ್ಕಾಗಿ ಕೊಡಲಿಯಿಂದ ಕೊಚ್ಚಿ ಕೊಲೆ' ಎಂದು. ಅಂದರೆ ಮಹಿಳೆಯರು ಆಸ್ತಿಯನ್ನು ಕೇಳಿದರೆ ಕೊಲೆಯಾಗುತ್ತೀರಾ ಹುಷಾರ್! ಎಂದು ಎಚ್ಚರಿಸಿದಂತೆ ಮತ್ತು ಆಸ್ತಿಯಲ್ಲಿ ಪಾಲು ಕೇಳಿದರೆ ನಿಮಗೂ ಇದೇ ಗತಿ ಎನ್ನುವಂತೆ ಅಂದರೆ

ಇಡೀ ಮಹಿಳಾ ಸಮುದಾಯವನ್ನೇ ಹೆದರಿಸುವಂತೆ ಸಂದೇಶಗಳನ್ನು ತಿಳಿಸುವುದು ಅಲ್ಲಿಗೆ ಆ ವಿಷಯ ಮುಕ್ತಾಯವಾಗುತ್ತದೆ. ಆದರೆ ಪ್ರಕರಣ ಮುಂದುವರಿಕೆಯಲ್ಲಿ ತಪ್ಪಿತಸ್ಥರಿಗೆ ಶಿಕ್ಷೆಯಾಯಿತೇ? ಆ ಮಹಿಳೆಯು ಕೇಳಿದ್ದು ಆಕೆಯ ಹಕ್ಕನ್ನು ಹೊರತು ಬೇರೆಯವರ ಹಕ್ಕನ್ನಲ್ಲ. ಅವಳ ಹಕ್ಕನ್ನೂ ಸಹ ಅವಳೇ ಬಳಸಿಕೊಳ್ಳಲು ಆಗದಿರುವಂತಹ ಭಯದ ವಾತಾವರಣ/ ವ್ಯವಸ್ಥೆ ಜಾರಿಯಲ್ಲಿದೆ. ಇದು ಖಂಡನೀಯ ಎಂದು ಪ್ರಕರಣದ ಫಾಲೋಅಪ್ ಅಂಶಗಳನ್ನು ಜನರಿಗೆ ತಿಳಿಸುವ ಜವಾಬ್ದಾರಿಯುತ ಕೆಲಸವನ್ನು ಮಾಧ್ಯಮಗಳು ಮಾಡಬೇಕಾದ ಅನಿವಾರ್ಯತೆ ಹಾಗೂ ಅಗತ್ಯತೆ ಇದೆ. ಜೊತೆಗೆ ಪ್ರಕರಣಕ್ಕೆ ನೀಡುವ ಶೀರ್ಷಿಕೆಯ ಬಗೆಗೆ ತುಂಬಾ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ಏಕೆಂದರೆ ಆ ಶೀರ್ಷಿಕೆಯೇ ಮಹಿಳೆಯರ ಪಾಲಿಗೆ ಉರುಳಾಗುವ ಸಾಧ್ಯತೆಯಿರುತ್ತದೆ. ಪ್ರತಿಯೊಬ್ಬರ ಮನೆಮನೆಗೂ ನಿರಾಯಾಸವಾಗಿ ಈ ರೀತಿಯ ಮಾಹಿತಿಗಳು ದಿನ ಬೆಳಗಾದರೆ ತಲುಪಿದರೆ ಅಗತ್ಯವಾಗಿ ಲಿಂಗ ಸಮಾನತೆಯೆಡೆಗೆ ಆಲೋಚನೆಗಳು ತಂತಾನೇ ಆರಂಭವಾಗುತ್ತವೆ. ಅಷ್ಟೊಂದು ಪರಿಣಾಮಕಾರಿ ಮಾಧ್ಯಮ ದೃಶ್ಯ, ಶ್ರವಣ ಮಾಧ್ಯಮಗಳಾಗಿವೆ.

ಒಟ್ಟಾರೆಯಾಗಿ ಮಾಧ್ಯಮವು ಇಂದು ಉಧ್ಯಮವಾಗಿ ಪರಿವರ್ತನೆಗೊಂಡ ಪರಿಣಾಮವಾಗಿ ಕೇವಲ ಲಾಭಗಳಿಕೆಯೇ ಮುಖ್ಯ ಉದ್ದೇಶವನ್ನಿಟ್ಟುಕೊಂಡು ಕಾರ್ಯಕ್ರಮಗಳು ರೂಪಿತಗೊಳ್ಳುತ್ತಿವೆ ಮತ್ತು ಪ್ರಸಾರವಾಗುತ್ತಿವೆ. ಆದರೆ ಇವುಗಳ ಮಧ್ಯೆಯೇ ಮಹಿಳಾ ಕಾನೂನುಗಳ ಅದರಲ್ಲಿಯೂ ಆಸ್ತಿಹಕ್ಕಿನ ಕಾನೂನಿನ ಕುರಿತು ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕು. ಎಲೆಕ್ಟ್ರಾನಿಕ್ ಮಾಧ್ಯಮವಾಗಲೀ ಅಥವಾ ಪತ್ರಿಕಾ ಮಾಧ್ಯಮವಾಗಲೀ ಸ್ಥಳೀಯ ಮಟ್ಟದ ನ್ಯಾಯಾಲಯಗಳಲ್ಲಿ ಹೊರಬರುವ ಆಸ್ತಿ ಹಕ್ಕಿಗೆ ಸಂಬಂಧಿಸಿದ ತೀರ್ಪುಗಳನ್ನು ವರದಿ ಮಾಡುವ ಮೂಲಕ ಸ್ಥಳೀಯ ಜನರಲ್ಲಿ ಅದರ ಕುರಿತು ಅರಿವನ್ನು ಮೂಡಿಸುವಂತಾಗಬೇಕು. ಅಂದಾಗ ಮಾತ್ರ ಜನರಲ್ಲಿ ಮಹಿಳೆಯರ ಆಸ್ತಿ ಹಕ್ಕಿನ ಕಾನೂನಿನ ಬಗೆಗೆ ಅರಿವು ಮೂಡಲು ಸಾಧ್ಯ.

**೫.೩. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ನ್ಯಾಯಾಂಗ ವ್ಯವಸ್ಥೆಯ ಪಾತ್ರ**

ಭಾರತದ ನ್ಯಾಯಾಂಗ ವ್ಯವಸ್ಥೆಯು ಒಳಗೊಂಡಿರುವ ಕಾಯಿದೆಗಳು ಕಾಲಕಾಲಕ್ಕೆ ಬದಲಾಗಿವೆ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ಹಿಂದೂ ವಾರಸಾ ಅಧಿನಿಯಮದ ಜಾರಿ, ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾಯಿದೆ, ವರದಕ್ಷಿಣೆ ನಿಷೇಧ ಕಾನೂನು ಇತ್ಯಾದಿ. ಈ ಕಾನೂನುಗಳು ಜಾರಿಯಲ್ಲಿವೆ ನಿಜ. ಆದರೆ ಇವುಗಳ ಅನುಷ್ಠಾನದ ವಿಷಯಕ್ಕೆ ಬಂದರೆ ತುಂಬಾ ನಿರಾಸೆಯಾಗುತ್ತದೆ. ಏಕೆಂದರೆ ಈ ಹಂತದಲ್ಲಿ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಇವುಗಳನ್ನು ಹಿಂದಿನ ಅಧ್ಯಾಯದಲ್ಲಿ ಪ್ರಕರಣಗಳ ಸಹಿತ ವಿವರಿಸಲಾಗಿದೆ. ಮುಖ್ಯವಾಗಿ ಕಾನೂನುಗಳು, ಸಂವಿಧಾನ ಮತ್ತು ಜನರ ನಡುವೆ ವಾಹಕದಂತೆ ಕಾರ್ಯ ನಿರ್ವಹಿಸುವ ನ್ಯಾಯಾಲಯಗಳು, ನ್ಯಾಯಾಧೀಶರುಗಳು ಮತ್ತು ವಕೀಲರುಗಳು ಈ

ಕಾನೂನುಗಳನ್ನು ಸರಿಯಾದ ದಾರಿಯಲ್ಲಿ ಚಲಿಸುವಂತೆ ಮಾಡಬೇಕಾಗಿದೆ. ಏಕೆಂದರೆ ನ್ಯಾಯಾಲಯದ ತೀರ್ಪುಗಳಾಗಿರಬಹುದು, ವಕೀಲರುಗಳ ಹೇಳಿಕೆಗಳಾಗಿರಬಹುದು ಇವುಗಳು ಜನರ ಮೇಲೆ ನೇರವಾದ ಪರಿಣಾಮವನ್ನು ಬೀರುತ್ತವೆ. ಈ ನಿಟ್ಟಿನಲ್ಲಿ ನ್ಯಾಯಾಲಯಗಳ ಪ್ರಾಧಿಕಾರ ಸಮಿತಿಯು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿರುವುದು ಕಂಡುಬರುತ್ತದೆ. ಈ ಸಮಿತಿಯು ಸಂವಿಧಾನ ಬದ್ಧವಾಗಿ ಜಾರಿಯಲ್ಲಿರುವ ಕಾನೂನುಗಳ ಬಗೆಗೆ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ಮಾಡುತ್ತಿದೆ. ಮುಖ್ಯವಾಗಿ ಕುಷ್ಟಗಿ ತಾಲೂಕಿನ ತಾಲೂಕು ನ್ಯಾಯಾಲಯದಲ್ಲಿ ವಕೀಲರಾಗಿ ಕಾರ್ಯ ನಿರ್ವಹಿಸುತ್ತಿರುವ ಎಸ್.ವೈ.ಭೂಕನಟ್ಟಿ ಯವರು ಹೇಳುವಂತೆ "ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟಂತಹ ಕಾನೂನುಗಳ ಕುರಿತಂತೆ ಜನಸಾಮಾನ್ಯರಿಗೆ ಅರಿವು ಮೂಡಿಸುವ ಕಾರ್ಯ ನ್ಯಾಯಾಲಯ ಗಳಿಂದಲೇ ನಡೆಯುತ್ತಿದೆ. ಮುಖ್ಯವಾಗಿ ತಾಲೂಕು ನ್ಯಾಯಾಧೀಶರು ಪ್ರತೀ ತಿಂಗಳಿಗೊಮ್ಮೆ ಹಳ್ಳಿಗಳಿಗೆ ಹೋಗಿ ಕಾನೂನುಗಳ ಬಗೆಗೆ ಅರಿವು ಮೂಡಿಸುವ ಕಾರ್ಯ ಮಾಡುತ್ತಾರೆ. ಕೇವಲ ಅವರೊಬ್ಬರೇ ಅಲ್ಲ ಅವರ ಜೊತೆಗೆ ಹಲವಾರು ಜನ ವಕೀಲರು, ವಕೀಲರ ಸಂಘದ ಸದಸ್ಯರು ಇರುತ್ತಾರೆ. ಮುಖ್ಯವಾಗಿ ತಾಲೂಕು ಪ್ರಾಧಿಕಾರ 'ಜನಸಾಮಾನ್ಯರಿಗಾಗಿ ಕಾನೂನು' ಎಂಬ ಒಂದು ಪುಸ್ತಕವನ್ನೂ ಹೊರತಂದಿದೆ. ಈ ಪುಸ್ತಕವನ್ನು ಜನ ಸಾಮಾನ್ಯರಿಗೆ ಉಚಿತವಾಗಿ ಹಂಚುತ್ತಾರೆ. ಹೀಗೆ ಜನರಿಗೆ ಅರಿವು ಮೂಡಿಸುವ ಕೆಲಸ ನಡೆಯುತ್ತದೆ. ಹಾಗೆಯೇ ಪ್ರತೀ ತಾಲೂಕು ನ್ಯಾಯಾಲಯಗಳಲ್ಲಿ 'ಉಚಿತ ಕಾನೂನು ಸಲಹಾ ಕೇಂದ್ರ'ಗಳು ಇರುತ್ತವೆ ಮತ್ತು 'ಮಧ್ಯಸ್ತಿಕೆ ಕೇಂದ್ರ'ಗಳೂ ಸಹ ಇರುತ್ತವೆ. ಇವುಗಳ ಮೂಲಕವೂ ಸಹ ಕಾನೂನಿನ ಕುರಿತಂತೆ ಉಚಿತವಾಗಿ ಸಲಹೆಗಳನ್ನ ನೀಡಲಾಗುತ್ತದೆ. ಇವುಗಳ ಲಾಭವನ್ನು ಯಾರಾದರೂ ಪಡೆಯ ಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಜಿಲ್ಲಾ ನ್ಯಾಯಾಧೀಶರೂ ಸೇರಿದಂತೆ ಅವರ ತಂಡವೂ ಸಹ ಕಾನೂನು ಅರಿವನ್ನು ಮೂಡಿಸಲು ಗ್ರಾಮೀಣ ಪ್ರದೇಶಗಳಿಗೆ ತೆರಳುತ್ತವೆ. ಗ್ರಾಮೀಣ ಪ್ರದೇಶಗಳಲ್ಲಾಗಲೀ ಅಥವಾ ನಗರ ಪ್ರದೇಶಗಳಲ್ಲಾಗಲೀ ನಮಗೆ ಬಹು ಬೇಗನೇ ಸಿಗುವವರೆಂದರೆ ಮಹಿಳಾ ಸ್ವಸಹಾಯ ಸಂಘದವರು. ಹಾಗಾಗಿ ಅವರನ್ನು ಒಗ್ಗೂಡಿಸುವ ಕೆಲಸವನ್ನು ಪಟ್ಟಣ ಪಂಚಾಯತಿಯವರೋ, ನಗರಸಭೆಯವರೋ ಅಥವಾ ಅಂಗನವಾಡಿ ಕೇಂದ್ರಗಳೋ ಮಾಡುತ್ತವೆ. ಹಾಗಾಗಿ ಬಹಳಷ್ಟು ಸ್ವ ಸಹಾಯ ಸಂಘಗಳು ಇದರ ಲಾಭವನ್ನು ಪಡೆದುಕೊಂಡಿವೆ. ಅಲ್ಲಿ ಮುಖ್ಯವಾಗಿ ಆಸ್ತಿಹಕ್ಕಿನ ಕುರಿತಂತೆ ಮಾತ್ರ ಮಾಹಿತಿಯನ್ನು ನೀಡುವುದಿಲ್ಲ ಬದಲಾಗಿ ಇತರೆ ಕಾನೂನುಗಳಾದ ವರದಕ್ಷಿಣೆ ನಿಷೇಧ ಕಾಯಿದೆ, ಬಾಲ್ಯವಿವಾಹ ನಿಷೇಧ ಕಾಯಿದೆ, ಡಿ.ವಿ.ಎ ಬಗೆಗೆ ಹೀಗೆ ಎಲ್ಲಾ ವಿಷಯಗಳ ಕುರಿತಂತೆ ಚರ್ಚಿಸಲಾಗುತ್ತದೆ. ಎಷ್ಟೋ ಜನ ಮಹಿಳೆಯರು ಕಾರ್ಯಕ್ರಮ ಮುಗಿದ ಮೇಲೆ ನಮ್ಮನ್ನು ಭೇಟಿಯಾಗುತ್ತಾರೆ. ಅವರವರ ಸಮಸ್ಯೆಗಳ ಬಗೆಗೆ ಹೇಳಿಕೊಳ್ಳುತ್ತಾರೆ. ಈ ಹಿಂದೆ ನಾನು ಹೇಳಿದ ಚೆನ್ನಬಸಮ್ಮ ಇದರ ಫಲಾನುಭವಿಗಳಲ್ಲಿ ಒಬ್ಬರು. ಇವರು ಜಾಗೃತಿ ಜಾಥಾದಲ್ಲಿ ವಿಷಯಗಳನ್ನು ತಿಳಿದು ಕೊಂಡು ತನಗೆ ತನ್ನ ತವರು ಮನೆಯಿಂದ ತನಗೆ ಬರಬೇಕಾದ ಆಸ್ತಿಯನ್ನು ಪಡೆಯಲು

ಕೋರ್ಟ್ ಮೆಟ್ಟಿಲೇರಿ ಜಯ ಸಾಧಿಸಿದ್ದಾರೆ". ಎಂದು ಹೇಳುತ್ತಾರೆ. ಇಲ್ಲಿ ಮುಖ್ಯವಾಗಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಇದಕ್ಕೆ ಸಂಬಂಧಿಸಿದಂತೆ ಒಂದು ಪ್ರಕರಣ ದೊರೆತಿದೆ. ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ವಣೇನೂರು ಗ್ರಾಮದ ಪಾಪಮ್ಮ ಎಂಬ ಮಹಿಳೆ ಹೇಳುವಂತೆ "ಒಂದಿನ ಬಳ್ಳಾರಿಯಿಂದ ಕೋರ್ಟಿನಾಗಿರೋ ಲಾಯರ್‌ಗಳೆಲ್ಲಾ ಸೇರಿ ಒಂದು ಬಸ್ ಮಾಡ್ಕೆಂಡು ನಮ್ ಊರಿಗಿ ಬಂದಿದ್ರು, ನಮ್ ಊರಾಗಿನ ಗ್ರಾಮ ಪಂಚಾತಿಯಾಗ ಒಂದು ಮೀಟಿಂಗ್ ಮಾಡಿದ್ರು, ಅದಕ್ಕ ಊರಾಗಿನ ಸಂಘದೋರೆಲ್ಲಾ ಬರ್ಬೇಕು ಅಂತ ಹೇಳಿದ್ರು. ಹಂಗಾಗಿ ನಾವೂ ಹೋಗಿದ್ವಿ, ಅಲ್ಲಿ ಹೇಳ್ತಿದ್ರು ಅಪ್ಪನ ಆಸ್ತಿನಾಗ ಹೆಣ್ಮಕ್ಕಳಿಗೂ ಗಂಡು ಮಕ್ಕಳಿಗಿ ಬರೋವಷ್ಟು ಆಸ್ತಿ ಸಿಗತೈತಿ. ಅಂತದ್ದೊಂದು ಕಾನೂನು ಬಂದೈತಿ. ಅದನ್ನ ನೀವು ಬಳ್ಸಿಕೊಳ್ಳಬೇಕು ಅಂತ ಹೇಳಿದ್ರು, ಮತ್ತ ನಿಮ್ ಸಂಘಗಳ ಮೀಟಿಂಗ್ನಾಗ ಇಂತ ವಿಚಾರನ್ನೆಲ್ಲಾ ಮಾತಾಡ್ಬೇಕು. ಕಷ್ಟಗಳನ್ನ ಬಗಿಹರ್ಸಕೋಬೇಕು ಅಂತ ಹೇಳಿದ್ರು, ಆವಾಗ ನನಗೆ ಆಸ್ತಿ ವಿಚಾರಾ ಗೊತ್ತಾತು" ಎಂದು ಹೇಳಿದರು. ನ್ಯಾಯಾಲಯಗಳು ಈ ಬಗೆಯ ಅರಿವನ್ನು ಮೂಡಿಸಲು ಜನರಲ್ಲಿಗೇ ತೆರಳುತ್ತಿರುವುದು ಮತ್ತು ಆ ಮೂಲಕ ಅವರಲ್ಲಿ ಕಾನೂನುಗಳ ಬಗೆಗೆ ಅರಿವನ್ನು ಮೂಡಿಸುತ್ತಿರುವುದು ಕಂಡುಬರುತ್ತಿದೆ. ಈ ಬಗೆಯ ಕಾರ್ಯಗಳಿಂದ ಲಾಭವನ್ನು ಪಡೆದುಕೊಂಡ ಹಲವು ಮಹಿಳೆಯರಿದ್ದಾರೆ. ಹೀಗೆ ನ್ಯಾಯಾಲಯಗಳು ಜನರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಇದರ ಜೊತೆಗೆ ವಕೀಲರುಗಳಿಗೆ ಲಿಂಗ ಸೂಕ್ಷ್ಮತೆಯ ಕುರಿತು ಪ್ರತ್ಯೇಕವಾದ ತರಬೇತಿಯ ಅವಶ್ಯಕತೆ ಇದೆ. ಏಕೆಂದರೆ ಆಸ್ತಿಹಕ್ಕಿನ ವಿಷಯಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿ ವಾದಿ ಮತ್ತು ಪ್ರತಿವಾದಿಗಳ ಪರವಾಗಿ ವಾದಿಸುವ ವಕೀಲರು ಯಾವುದೇ ಲಿಂಗ ಸೂಕ್ಷ್ಮತೆಯ ದೃಷ್ಟಿಯಿಂದ ಆ ಕೇಸನ್ನು ನೋಡದೇ, ಅವರು ಆ ಕೇಸ್‌ನ್ನು ಗೆಲ್ಲುವುದರ ಕಡೆಗೆ ಹೆಚ್ಚಿನ ಗಮನವನ್ನು ಹರಿಸುತ್ತಾರೆ. ಇಂಥ ಸಂದರ್ಭದಲ್ಲಿ ಮಹಿಳೆ ಯರಿಗೆ ತೊಂದರೆಗಳಾಗುವುದು ಕಂಡುಬರುತ್ತದೆ. ಕಾನೂನಿನ ನಿಜವಾದ ಆಶಯ ದಿಕ್ಕುತಪ್ಪುತ್ತದೆ. ಹಾಗಾಗಿ ಆಸ್ತಿಹಕ್ಕಿನ ಅಥವಾ ಸಿವಿಲ್ ಕೇಸ್‌ಗಳನ್ನು ಯಾರು ತೆಗೆದು ಕೊಂಡಿರುತ್ತಾರೋ ಅಂತಹವರಿಗೆ ಲಿಂಗ ಸೂಕ್ಷ್ಮತೆಯ ಕುರಿತು ಅರಿವು ಮೂಡಿಸುವ ಅಗತ್ಯತೆ ಇದೆ.

ನ್ಯಾಯಾಲಯಗಳು ಮಾಡಬೇಕಾದ ಇನ್ನೊಂದು ಮುಖ್ಯ ಕೆಲಸವೇನೆಂದರೆ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷರಂತೆಯೇ ಸಮನಾದ ಪಾಲನ್ನು ತೆಗೆದುಕೊಂಡ ಮಹಿಳೆಯರನ್ನು ಗುರುತಿಸಿ ಅವರನ್ನೂ ಸಹ ತಾವು ಮಾಡುತ್ತಿರುವ ಜಾಗೃತಿ ಕಾರ್ಯಕ್ರಮಗಳಲ್ಲಿ ಒಳಗೊಳ್ಳುವಂತೆ ಮಾಡಬೇಕು. ಅವರನ್ನು ಇನ್ನಿತರ ಮಹಿಳೆಯರ ಜೊತೆ ಮುಕ್ತವಾಗಿ ಚರ್ಚಿಸುವಂತೆ ಮಾಡಬೇಕು. ಅಂದಾಗ ಮಹಿಳೆಯರಲ್ಲಿ ಆತ್ಮಸ್ಥೈರ್ಯ ತುಂಬಿದಂತಾಗುತ್ತದೆ ಮತ್ತು ಮಹಿಳೆಯರು ಆಸ್ತಿಯನ್ನು ಕೇಳಲು ಮುಂದೆ ಬರುತ್ತಾರೆ. ಹಾಗೆಯೇ ಪೊಲೀಸ್ ವ್ಯವಸ್ಥೆಯು ಸಹ ಈ ಕಾರ್ಯದಲ್ಲಿ ಸಹಕಾರಿಯಾಗಬೇಕು. ಏಕೆಂದರೆ ಮಹಿಳೆರು ಮಾತನಾಡು

ವುದನ್ನೇ ಅಪರಾಧ ಎಂದು ತಿಳಿಯುವ ವ್ಯವಸ್ಥೆಯಲ್ಲಿ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಿದರೆ ಪುರುಷಶಾಹಿ ವ್ಯವಸ್ಥೆ ಸುಮ್ಮನಿರುವುದಿಲ್ಲ. ಹಾಗೆ ಕೇಳಿದ ಮಹಿಳೆಯರನ್ನು ನಾನಾ ಬಗೆಯಲ್ಲಿ ಹಿಂಸಿಸುವುದು ಕಂಡುಬರುತ್ತದೆ. ಅಂತಹ ಪ್ರಸಂಗಗಳು ಏನಾದರೂ ಕಂಡುಬಂದಾಗ ಪೋಲಿಸರು ಯಾವುದೇ ಒತ್ತಡಗಳಿಗೆ ಮಣಿಯದೆ ಮಹಿಳೆರಿಗೆ ರಕ್ಷಣೆಯನ್ನು ನೀಡುವ ಕೆಲಸವನ್ನು ಮಾಡಬೇಕಿದೆ. ಈ ಬಗೆಯಲ್ಲಿ ಪೊಲೀಸ್ ಠಾಣೆಗಳು ಜನರಲ್ಲಿ ಜಾಗೃತಿಯನ್ನು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಹಾಗಾದಾಗ ಮಾತ್ರ ಮಹಿಳೆಯರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕನ್ನು ಪಡೆಯಲು ಮುಂದೆ ಬರುತ್ತಾರೆ. ಹೀಗೆ ನ್ಯಾಯಾಲಯಗಳು, ಪೋಲಿಸ್ ವ್ಯವಸ್ಥೆ ತಮ್ಮದೇ ಆದ ಚೌಕಟ್ಟಿನಲ್ಲಿ ಮಹಿಳಾ ಪರವಾದ ಅದರಲ್ಲೂ ಹೆಚ್ಚಾಗಿ ಮಹಿಳೆಯರ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

**೫.೪. ಆಸ್ತಿಹಕ್ಕಿನ ಕಾನೂನು ಅರಿವು ಮೂಡಿಸುವಲ್ಲಿ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳ ಪಾತ್ರ**

ಮಹಿಳಾ ಪರವಾದ ಕಾನೂನಾದ ಹಿಂದೂ ವಾರಸಾ ಅಧಿನಿಯಮದ ಬಗೆಗೆ ಸರಕಾರಿ ಇಲಾಖೆಗಳಿಂದ ಮಹಿಳೆಯರಿಗೆ ಮತ್ತು ಪುರುಷರಿಗೆ ಅರಿವನ್ನು ಮೂಡಿಸುವ ಕೆಲಸ ಆಗಬೇಕಿದೆ. ಮುಖ್ಯವಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಶಿಕ್ಷಣ ಸಂಸ್ಥೆಗಳಂಥವುಗಳು ಈ ಕುರಿತಂತೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳ ಬೇಕಿದೆ. ಮುಖ್ಯವಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಮಹಿಳೆಯರನ್ನು ಒಗ್ಗೂಡಿಸಿ ಆ ಮಹಿಳೆಯರಿಗೆ ಶಿಕ್ಷಣದ ಬಗೆಗೆ ಮತ್ತು ಆಸ್ತಿಹಕ್ಕಿನ ಕಾನೂನಿನ ಬಗೆಗೆ ಮಾಹಿತಿ ಸಿಗುವಂತೆ ಮಾಡಬೇಕು. ಮುಖ್ಯವಾಗಿ ಈ ಇಲಾಖೆಯ ಅಡಿಯಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿಯೂ ಮಹಿಳಾ ಸಂಘಗಳು, ಸ್ತ್ರೀಶಕ್ತಿ ಸಂಘಗಳು ಇರುವುದು ಕಂಡು ಬರುತ್ತದೆ. ಇವುಗಳನ್ನು ಒಗ್ಗೂಡಿಸಿ ಅವರಿಗೆ ಕಾನೂನು ತಜ್ಞರ ಜೊತೆ ಮುಕ್ತವಾಗಿ ಮಾತುಕತೆ ನಡೆಯುವ- ಹಾಗೆ ಮಾಡಬೇಕು. ಹಾಗೆಯೇ ಗ್ರಾಮೀಣ ಭಾಗಗಳಲ್ಲಿನ ಅಂಗನವಾಡಿ ಕೇಂದ್ರಗಳಲ್ಲಿ ಕೆಲಸ ಮಾಡುವ ಕಾರ್ಯಕರ್ತೆಯರಿಗೆ ಮತ್ತು ಆಶಾ ಕಾರ್ಯಕರ್ತೆ ಯರಿಗೆ ವಿಶೇಷವಾಗಿ ಆಸ್ತಿಹಕ್ಕಿನ ಕಾನೂನಿನ ಕುರಿತು ತರಬೇತಿಗಳನ್ನು ಏರ್ಪಡಿಸಬೇಕು. ಈ ಬಗೆಯ ತರಬೇತಿಗಳು ಪ್ರತಿ ತಿಂಗಳಿಗೊಮ್ಮೆ ಅಥವಾ ಎರಡು, ಮೂರು ತಿಂಗಳಿಗೊಮ್ಮೆ ನಡೆಸಬೇಕು ಅಂದಾಗ ಮಾತ್ರ ಈ ಕಾಯಿದೆಯ ಕುರಿತು ಮಹಿಳೆಯರಲ್ಲಿ ಅರಿವು ಮೂಡಿಸಲು ಸಾಧ್ಯವಾಗುತ್ತದೆ. ಇವರಿಗೆ ವಿಶೇಷವಾಗಿ ತರಬೇತಿ ಏಕೆ ಅವಶ್ಯಕವೆಂದರೆ ಸರಕಾರಿ ಸೌಲಭ್ಯಗಳು ಮತ್ತು ಜನರ ಇವರು ನಡುವೆ ಸೇತುವೆಯಂತೆ ಒಂದು ರೀತಿಯ ವಾಹಕದಂತೆ ಕಾರ್ಯ ನಿರ್ವಹಿಸುತ್ತಾರೆ. ಹಾಗಾಗಿ ಇವರನ್ನು ಚೆನ್ನಾಗಿ ತರಬೇತಿಗೊಳಿಸಿದರೆ ತಮ್ಮ ತಮ್ಮ ಗ್ರಾಮಗಳಲ್ಲಿನ ಜನರಲ್ಲಿ ಇವರು ಜಾಗೃತಿಯನ್ನು ಮೂಡಿಸಲು ಮುಂದಾಗುತ್ತಾರೆ. ಮುಖ್ಯವಾಗಿ ಬಾಲ್ಯ ವಿವಾಹಗಳನ್ನು ತಡೆಯಲು ಗ್ರಾಮೀಣ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆ ಯರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿರುತ್ತಾರೆ. ಹಾಗೆಯೇ ಮಹಿಳಾ ಪರವಾದ

ಕಾನೂನುಗಳ ಕುರಿತ ಜಾಗೃತಿಯನ್ನು ಮೂಡಿಸುವ ಮತ್ತು ಅವುಗಳು ಮಹಿಳೆಯರಿಗೆ ಸರಿಯಾದ ರೀತಿಯಲ್ಲಿ ತಲುಪುವ ಸಲುವಾಗಿ ಇಂತಹ ಒಂದು ಸಮಿತಿಯನ್ನು ಗ್ರಾಮೀಣ ಮಟ್ಟದಲ್ಲಿ ನಡೆಸಬೇಕಾದ ಅನಿವಾರ್ಯತೆ ಇದೆ. ಈ ಸಮಿತಿಯು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳಡಿ ಕಾರ್ಯ ನಿರ್ವಹಿಸುತ್ತವೆ. ಇವುಗಳು ಕೇವಲ ಮಹಿಳೆಯರಿಗೆ ಮಾತ್ರವಲ್ಲದೆ ಸ್ತ್ರೀಪುರುಷರಿಬ್ಬರಿಗೂ ಸಮಾನವಾಗಿ ಕಾನೂನುಗಳ ಅರಿವನ್ನು ಮೂಡಿಸುವ ಕಾರ್ಯ ಮಾಡಬೇಕಿದೆ. ಹಾಗೆಯೇ ಸರಕಾರದ ಒಂದು ಅಧೀನ ಸಂಸ್ಥೆಯಾದ ರಾಜ್ಯ ಮಹಿಳಾ ಆಯೋಗವು ಮಹಿಳೆಯರ ಸಂಕಷ್ಟಗಳಿಗೆ ಧ್ವನಿಯಾಗಿದೆ. ಮಹಿಳಾ ಆಯೋಗವು ಮಹಿಳೆಯರ ಕಷ್ಟಗಳಿಗೆ ಸ್ಪಂದಿಸುತ್ತಲೇ ಬಂದಿದೆ. ಈ ಸಂಸ್ಥೆಯು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳ ಬೇಕಾಗಿದೆ. ಮುಖ್ಯವಾಗಿ ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ಅವರ ಸಬಲೀಕರಣಕ್ಕೆ ಪೂರಕವಾದ ಹಿಂದೂ ವಾರಸಾ ಅಧಿನಿಯಮದ ಕುರಿತು ಮಹಿಳೆಯರಲ್ಲಿ ಜಾಗೃತಿಯನ್ನು ಮೂಡಿಸಬೇಕಾಗಿದೆ. ಆಸ್ತಿಹಕ್ಕಿನ ಕಾನೂನು ಕುರಿತು ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಪ್ರದೇಶಗಳವರೆಗೂ ಆಯೋಗದ ಅಡಿಯಲ್ಲಿ ಕೆಲವು ಸಮಿತಿಗಳನ್ನು ರಚಿಸುವುದರ ಮೂಲಕ ಮಹಿಳೆಯರ ಏಳಿಗೆಗೆ ಶ್ರಮಿಸಬೇಕಾಗಿದೆ. ಇನ್ನು ವಿಶ್ವವಿದ್ಯಾಲಯಗಳೂ ಸಹ ಜನರ ನಡುವೆ ಹೋಗಿ ಜನರಲ್ಲಿನ ಲಿಂಗ ತಾರತಮ್ಯವನ್ನು ಹೋಗಲಾಡಿಸಲು ಶ್ರಮಿಸ ಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಮಹಿಳಾ ಪರವಾದ ಕಾನೂನುಗಳ ಕುರಿತಂತೆ ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು, ಈ ವಿಚಾರ ಸಂಕಿರಣಗಳಿಗೆ ಮಹಿಳೆಯರು ಹೆಚ್ಚು ಹೆಚ್ಚು ಭಾಗವಹಿಸುವಂತೆ ಮಾಡುವುದು ಹಾಗೆಯೇ ಲಿಂಗ ಸೂಕ್ಷ್ಮತೆಯನ್ನು ಹೊಂದಿರುವ ತಜ್ಞರ ಜೊತೆ ಮಹಿಳೆಯರು ಚರ್ಚೆಯಲ್ಲಿ ತೊಡಗುವಂತೆ ಮಾಡುವುದು. ಹೀಗೆ ನಾನಾ ವಿಧದಲ್ಲಿ ಕೆಲಸಗಳನ್ನು ಮಾಡಬೇಕಾಗಿದೆ. ಹೀಗೆ ಮಾಡುವುದರ ಮೂಲಕ ಮಹಿಳೆಯರಲ್ಲಿ ಕಾನೂನು ಕುರಿತು ಅರಿವು ಹೆಚ್ಚಾಗುವ ಸಾಧ್ಯತೆ ಇದೆ.

ಸರಕಾರೇತರ ಸಂಘಸಂಸ್ಥೆಗಳು ಈ ಹಿಂದೂ ವಾರಸಾ ಅಧಿನಿಯಮದ ಕುರಿತು ಮಹಿಳೆಯರಲ್ಲಿ ಅರಿವು ಮೂಡಿಸುವ ಕಾರ್ಯದಲ್ಲಿ ತೊಡಗಬೇಕಾಗುತ್ತದೆ. ಏಕೆಂದರೆ ಗ್ರಾಮೀಣ ಭಾಗಗಳಲ್ಲಾಗಲೀ ಅಥವಾ ನಗರ ಪ್ರದೇಶಗಳಲ್ಲಾಗಲೀ ಸರಕಾರೇತರ ಸಂಘಸಂಸ್ಥೆಗಳು ಜನರನ್ನು ನೇರವಾಗಿ ಸಂಪರ್ಕಿಸುತ್ತವೆ. ಆ ಹಿನ್ನಲೆಯಲ್ಲಿ ಎನ್.ಜಿ.ಒ.ಗಳು ಮಹಿಳಾ ಪರ ಕಾನೂನಾದಂಥ ಆಸ್ತಿಹಕ್ಕಿನ ಕಾನೂನಿನ ಕುರಿತು ಜನರಲ್ಲಿ ಅರಿವು ಮೂಡಿಸುವ ಕಾರ್ಯವನ್ನು ಮಾಡಬೇಕಿದೆ. ಮುಖ್ಯವಾಗಿ ಬೀದಿ ನಾಟಕಗಳನ್ನು ಆಡುವುದು, ಕರ ಪತ್ರಗಳನ್ನು ಹಂಚುವುದು, ಮಹಿಳೆಯರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೊಡಿಸುವಂಥ ಕಾರ್ಯದಲ್ಲಿ ತೊಡಗಬೇಕಿದೆ. ಕೆಲವು ಪ್ರಗತಿಪರ ಎನ್.ಜಿ.ಒ.ಗಳು ಈ ಬಗೆಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಮುಖ್ಯವಾಗಿ ಮಹಿಳೆಯರ ಅಭಿವೃದ್ಧಿಗೆಂದೇ ರೂಪಿಸಲ್ಪಟ್ಟಿರುವ ಸಂಸ್ಥೆಗಳು ಈ ಬಗೆಯಲ್ಲಿ ಕಾರ್ಯಪ್ರವೃತ್ತವಾಗಿವೆ. ಮಹಿಳಾ ಪರವಾದ ಸಂಘಟನೆಗಳು ಮತ್ತು ಮಹಿಳಾ ಸಂಘಟನೆಗಳು

ತುಂಬಾ ಬಲಿಷ್ಠವಾಗಬೇಕು. ಏಕೆಂದರೆ ಸರಕಾರಗಳು ತೆಗೆದುಕೊಳ್ಳುವಂತಹ ನಿರ್ಣಯಗಳ ಬಗೆಗಾಗಲೀ ಅಥವಾ ಕಾನೂನುಗಳನ್ನು ರೂಪಿಸುವ ಹಂತದಲ್ಲಾಗಲೀ ಸ್ತ್ರೀ ವಿರೋಧಿ ಅಂದರೆ ಲಿಂಗ ಅಸಮಾನತೆಯ ನೆಲೆಗಳೇನಾದರೂ ಕಂಡುಬಂದರೆ ಅವುಗಳನ್ನು ಗುರುತಿಸುವ ಮತ್ತು ಸರಿಪಡಿಸುವ ಕಾರ್ಯಗಳನ್ನು ಮಾಡಬೇಕಾಗಿದೆ. ವ್ಯವಸ್ಥೆಯಲ್ಲಿ ಲಿಂಗ ಅಸಮಾನತೆ ಎಂಬುದು ಹೇಗೆ ಹೆಣೆದುಕೊಂಡಿದೆ ಎಂಬುದನ್ನು ಗುರುತಿಸುತ್ತಾ ಜನರಲ್ಲಿ ಜಾಗೃತಿಯನ್ನು ಉಂಟುಮಾಡ ಬೇಕಾಗಿದೆ. ಹೀಗೆ ಮಾಡುವುದರ ಜೊತೆಗೆ ಮಹಿಳೆಯರ ಮೇಲಾಗುವ ಹಿಂಸೆಯನ್ನು ಮತ್ತು ಲಿಂಗ ತಾರತಮ್ಯವನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗ ಬೇಕಾಗಿದೆ. ಒಟ್ಟಾರೆಯಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯುವ ಹಾಗೂ ಆ ಮೂಲಕ ಅವರು ಸಬಲರಾಗುವಂತೆ ಮಾಡುವ ಜವಾಬ್ದಾರಿ ಸಮಾಜದ ಎಲ್ಲ ನಾಗರೀಕರ ಮೇಲೂ ಇದೆ. ಹಾಗಾಗಿ ಅದನ್ನು ಸಾಧಿಸುವುದರತ್ತ ಗಮನ ಹರಿಸಬೇಕಿದೆ. ಮುಖ್ಯವಾಗಿ ಮಹಿಳಾ ಪರ ಹಕ್ಕುಗಳ ಕುರಿತಾಗಿ ಹೋರಾಡುವಂತಹ ಹಲವು ಸಂಘಟನೆಗಳು ಇವೆ. ಪಿತೃಪ್ರಧಾನ ವ್ಯವಸ್ಥೆಯೊಳಗಿನ ಶೋಷಣೆಯನ್ನು ಪ್ರತಿಭಟಿಸಲು ಈ ಸಂಘಟನೆಗಳು ಸ್ವಾಯತ್ತ ವಾಗಿರಬೇಕು. ಇದಕ್ಕೆ ಉತ್ತಮ ಉದಾಹರಣೆಯೆಂದರೆ "ಮಾನವ ವರ್ತನಾಶಾಸ್ತ್ರ ವಿಜ್ಞಾನಿ ಯಾದ ತಮಿಳುನಾಡಿನ ಶಕುಂತಲಾ ಅವರು JACW (Tamilnadu Joint Action For Women) ನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದರು. ಮಹಿಳೆಯ ಘನತೆ, ಗೌರವ, ಸ್ಥಾನಮಾನಗಳನ್ನು ಎತ್ತಿ ಹಿಡಿಯುವ, ಮಾನ್ಯ ಮಾಡುವ ಉದ್ದೇಶವನ್ನು ಈ ಸಂಘಟನೆ ಹೊಂದಿದೆ. ಮಹಿಳೆಯರ ಹಕ್ಕು ಬಾಧ್ಯತೆಗಳು, ಮಹಿಳೆಯರ ಉದ್ಯೋಗ, ಶಿಕ್ಷಣದ ಅವಕಾಶಗಳು, ಮಹಿಳೆಯರ ಪ್ರಜ್ಞಾ ವಿಸ್ತಾರ ಮುಂತಾದ ವಿಷಯಗಳನ್ನು ಮುಂದಿಟ್ಟುಕೊಂಡು ಮಹಿಳೆಯರಿಗೆ ತರಬೇತಿಯನ್ನು, ಶಿಕ್ಷಣವನ್ನು, ತಿಳುವಳಿಕೆಯನ್ನು, ಸಹಾಯವನ್ನು ಈ ಸಂಸ್ಥೆ ನೀಡುತ್ತಾ ಬಂದಿದೆ."[2] ಹೀಗೆ ಮಹಿಳಾ ಪರ ಹಕ್ಕುಗಳ ಕುರಿತು ಹೋರಾಡುವಂತಹ ಸಂಘಟನೆಗಳು ಸ್ವಾಯತ್ತವಾಗಿದ್ದಾಗ ಮಾತ್ರ ಈ ಬಗೆಯ ಕಾರ್ಯಗಳನ್ನು ಮಾಡಲು ಸಾಧ್ಯವಾಗುತ್ತದೆ.

ನಮ್ಮಲ್ಲಿ ಮಹಿಳೆಯರನ್ನು ಹಿಂದಿನಿಂದಲೂ ಹೇಗೆ ಪರಿಭಾವಿಸಿಕೊಂಡು ಬರಲಾಗಿದೆಯೋ ಅದರಲ್ಲಿ ಯಾವ ಬದಲಾವಣೆಯೂ ಆಗದಂತೆ ಅವುಗಳನ್ನು ಪುನರ್ ರೂಪಿಸುವ ರೀತಿಯಲ್ಲಿ ಹಲವು ಕಾರ್ಯಕ್ರಮಗಳು ರೂಪುಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಆ ಕಾರಣಕ್ಕಾಗಿ ನಮ್ಮ ಸಮಾಜದಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳದಂತಹ ಪರಿಸ್ಥಿತಿ ಇದೆ. ಕೆಲವು ಮಹಿಳೆಯರಿಗೆ ಆಸ್ತಿ ಹಕ್ಕಿನ ಕುರಿತ ಅರಿವು ಇದ್ದರೂ ಸಹ ವ್ಯವಸ್ಥೆ ಅವರು ಧ್ವನಿ ಎತ್ತದಂತೆ ಮಾಡಿದೆ. ವ್ಯವಸ್ಥೆಯ ನಿರ್ಬಂಧವನ್ನು ದಾಟಿಯೂ ಕೆಲವು ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ. ಆದರೆ ಆ ಆಸ್ತಿಯನ್ನು ಅನುಭವಿಸಲಾರದಂಥ ಸ್ಥಿತಿ ಕೆಲವು ಮಹಿಳೆಯರಲ್ಲಿದ್ದರೆ, ಇನ್ನು ಕೆಲವು

ಮಹಿಳೆಯರು ತಾವು ಪಡೆದ ಆಸ್ತಿಯ ಮೇಲೆ ತಮ್ಮ ನಿಯಂತ್ರಣವನ್ನು ಹೊಂದಿರುವುದು ಕಂಡುಬರುತ್ತದೆ. ಈ ರೀತಿಯ ಸ್ಥಿತಿಗೆ ಮುಖ್ಯ ಕಾರಣ ಮಹಿಳೆಯರಲ್ಲಿ ಇದರ ಕುರಿತ ಸಂಪೂರ್ಣವಾದ ಅರಿವು ದೊರೆಯದಂತೆ ಮಾಡಿರುವ ವ್ಯವಸ್ಥೆಯ ಹುನ್ನಾರವೇ ಆಗಿದೆ. ಹೀಗೆ ಮಹಿಳೆಯರೂ ಸಹ ಮನುಷ್ಯ ಜಾತಿಯ ಅರ್ಧದಷ್ಟಿದ್ದಾರೆ. ಅವರಿಗೂ ಸಮಾನತೆಯ ಬದುಕನ್ನು ಹೊಂದುವ, ಜೀವಿಸುವ ಹಕ್ಕಿದೆ ಎಂಬ ಅರಿವು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮೂಡಬೇಕಾದ ಅನಿವಾರ್ಯತೆಯಿದೆ. ಹಾಗಾಗದ ಹೊರತು ಲಿಂಗ ಸಮಾನತೆಯನ್ನು ಸಾಧಿಸುವುದು ಕಷ್ಟಸಾಧ್ಯ. ಹಾಗಾಗಿ ವ್ಯವಸ್ಥೆಯಲ್ಲಿ ಇದರ ಕುರಿತಂತೆ ಧನಾತ್ಮಕ ಮನೋ ಧೋರಣೆಗಳು ಕಂಡುಬಂದಾಗ ಮಾತ್ರ ಮಹಿಳೆಯರು ಈ ಕಾಯಿದೆಯ ಸಂಪೂರ್ಣ ಲಾಭವನ್ನು ಪಡೆಯುವಂತಾಗಬಹುದು. ಹಾಗಾಗದಿದ್ದಾಗ ಕೇವಲ ಸಂಘರ್ಷಗಳ ಜೊತೆಗೆ ಮಹಿಳಾ ವಿಷಯಗಳು ಸಾಗುತ್ತಿರುತ್ತವೆಯೇ ಹೊರತು ಸಮಾನತೆಯೆಡೆಗಿನ ಚಲನೆ ಕೇವಲ ಏಕಮುಖಿಯಾಗುತ್ತದೆ. ಹಾಗಾಗಿ ಲಿಂಗತ್ವದ ಅರಿವು ಮತ್ತು ಜಾಗೃತಿ ಸ್ತ್ರೀ ಮತ್ತು ಪುರುಷ ರಿಬ್ಬರಲ್ಲೂ ಮೂಡಬೇಕಾದ ಅಗತ್ಯತೆಯಿದೆ. ಆಗ ಮಹಿಳಾ ಪರವಾದ ಕಾನೂನುಗಳು ಸಫಲವಾಗುವುದರ ಮೂಲಕ ಮಹಿಳೆಯರಿಗೆ ಪೂರಕವಾದ ಸಾಮಾಜಿಕ ಪರಿವರ್ತನೆ ಮತ್ತು ಲಿಂಗ ಸಂಬಂಧಿ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ನೆರವಾಗುತ್ತದೆ.

**ಉಲ್ಲೇಖಗಳು**


೧. ಪ್ರಜಾವಾಣಿ, ಭೂಮಿಕಾ ವಿಭಾಗ, ೪ ಜನೇವರಿ ೨೦೧೪, ಪು-೨.

೨. ಪ್ರಜಾವಾಣಿ, ಭೂಮಿಕಾ ವಿಭಾಗ, ೧೫ ಮಾರ್ಚ್ ೨೦೧೪, ಪು-೨

೩. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೧೬

ಅಧ್ಯಾಯ ಆರು

# ಆಸ್ತಿಹಕ್ಕು ಕಾಯಿದೆ : ಕಾನೂನು ರೂಪಿಸುವ ಮತ್ತು ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳು

೬.೧. ಆಸ್ತಿಹಕ್ಕು ಕಾನೂನು : ಕಾನೂನು ರೂಪಿಸುವ ಸಂದರ್ಭದಲ್ಲಿನ ತೊಡಕುಗಳು

೬.೨. ಆಸ್ತಿಹಕ್ಕು ಕಾನೂನು : ಅನುಷ್ಠಾನ ಸಂದರ್ಭದಲ್ಲಿನ ತೊಡಕುಗಳು

೬.೨.೧. ಕೌಟುಂಬಿಕ ಕಾರಣಗಳು

೬.೨.೨. ಭಾವನಾತ್ಮಕ ಕಾರಣಗಳು

೬.೨.೩. ಸಾಮಾಜಿಕ ಮೂಢನಂಬಿಕೆಗಳು

೬.೨.೪. ಆರ್ಥಿಕ ಕಾರಣಗಳು

೬.೨.೫. ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು

## ಅಧ್ಯಾಯ ಆರು

# ಆಸ್ತಿಹಕ್ಕು ಕಾಯಿದೆ : ಕಾನೂನು ರೂಪಿಸುವ ಮತ್ತು ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳು

ಮಹಿಳೆಯರ ಬದುಕಿಗೆ ಸಂಬಂಧಿಸಿದ ಅನೇಕ ಸಂಗತಿಗಳ ಜೊತೆಗೆ ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಅನೇಕ ಕಾನೂನುಗಳು ಅನುಸಂಧಾನ ನಡೆಸುತ್ತಿರುತ್ತವೆ. ಅಂದರೆ ಮಹಿಳೆಯರ ಮೇಲೆ ನಡೆಯುವ ಹಿಂಸೆಯನ್ನು ತಡೆಗಟ್ಟುವ, ಮಹಿಳೆಯರ ಅಭಿವೃದ್ಧಿಗಾಗಿ ರೂಪಿತವಾದ ಕಾನೂನುಗಳು ಮಹಿಳೆಯರ ಬದುಕಿಗೆ ಒಂದಲ್ಲಾ ಒಂದು ರೀತಿಯಲ್ಲಿ ಸಹಾಯಕ ವಾಗಿರುವುದನ್ನು ಕಾಣಬಹುದಾಗಿದೆ. ಈ ಕಾನೂನುಗಳು ಮಹಿಳೆಯರಿಗೆ ರಕ್ಷಣೆಯನ್ನು ನೀಡುವುದರ ಜೊತೆಗೆ ಪುರುಷಶಾಹಿ ವ್ಯವಸ್ಥೆಗೆ ಎಚ್ಚರಿಕೆಯನ್ನೂ ನೀಡುತ್ತಿರುತ್ತವೆ. ಆರ್ಥಿಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿಯನ್ನು ಹೊಂದಲು ಪೂರಕವಾಗಿ ಕಾರ್ಯ ನಿರ್ವಹಿಸುತ್ತವೆ. ಮಹಿಳೆಯರು ಆರ್ಥಿಕವಾಗಿ ಅಭಿವೃದ್ಧಿಯನ್ನು ಹೊಂದುವುದು ಮತ್ತು ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆಯಲು ಆಸ್ತಿಹಕ್ಕಿನ ಕಾನೂನು ತುಂಬಾ ಸಹಕಾರಿಯಾಗಿದೆ. ಆದರೆ ವಾಸ್ತವದಲ್ಲಿ ಇದರ ಫಲಾನುಭವಿಗಳು ಇರುವುದು ಬೆರಳೆಣಿಕೆಯಷ್ಟು ಮಾತ್ರ. ಈ ಕಾನೂನು ಜಾರಿಯಾಗಿ ಹಲವಾರು ವರ್ಷಗಳೇ ಕಳೆದರೂ ಮಹಿಳಾ ಅಭಿವೃದ್ಧಿ ಎಂಬುದು ಮರೀಚಿಕೆಯಾಗಿಯೇ ಉಳಿದಿದೆ. ಅಂದರೆ ಆಸ್ತಿಹಕ್ಕಿನ ಕಾನೂನು ಮಹಿಳೆಯರ ಅಭಿವೃದ್ಧಿಗೆ ಒಂದು ಮಾನದಂಡ ಮಾತ್ರ. ಮಹಿಳೆಯರು ತಮ್ಮ ಹಕ್ಕಿನ ಮೂಲಕ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದ ಕೂಡಲೇ ಅವರೆಲ್ಲರೂ ಅಭಿವೃದ್ಧಿ ಹೊಂದುತ್ತಾರೆ ಎಂದಲ್ಲ. ಆಸ್ತಿ ಹಕ್ಕಿನ ಜೊತೆಗೆ ಆ ಆಸ್ತಿಯನ್ನು ಯಾರ ಹಂಗಿಲ್ಲದೇ ಅನುಭವಿಸುವ ಮತ್ತು ಅದರ ಸಂಪೂರ್ಣ ಅಧಿಕಾರ ಮಹಿಳೆಗೆ ಬಂದಾಗ ಮಾತ್ರ ಅವರು ಸಮಾಜದಲ್ಲಿ ಒಂದು ಸ್ಥಾನವನ್ನು ಪಡೆಯಬಹುದು ಮತ್ತು ಅಭಿವೃದ್ಧಿಗೆ ಬುನಾದಿಯಾಗಬಹುದು. ಆದರೆ ವ್ಯವಸ್ಥೆ ಇದಕ್ಕೆ ಅವಕಾಶ ಮಾಡಿಕೊಟ್ಟಿಲ್ಲ. ಇದಕ್ಕೆ ಮುಖ್ಯ ಕಾರಣ ವ್ಯವಸ್ಥೆಯಲ್ಲಿನ ಪುರುಷಶಾಹಿ ಮೌಲ್ಯಗಳು ಮಹಿಳೆಯರನ್ನು ಕಡೆಗಣಿಸು ತ್ತಿರುವುದೇ ಆಗಿದೆ. ಮುಖ್ಯವಾಗಿ ಆಸ್ತಿಹಕ್ಕಿನ ಕಾನೂನು ಮಹಿಳೆಯರ ಅಭಿವೃದ್ಧಿಗೆ ಭದ್ರವಾದ

ಬುನಾದಿಯನ್ನು ಹಾಕಿಕೊಡುತ್ತದೆ ಎಂಬ ಕಾರಣಕ್ಕಾಗಿ ಇದನ್ನು ತಡೆಯಲು ಪಿತೃಪ್ರಧಾನ ವ್ಯವಸ್ಥೆ ಹಲವಾರು ರಾಜಕಾರಣಗಳನ್ನು ಮಾಡುತ್ತಲೇ ಬರುತ್ತಲಿದೆ. ಧರ್ಮ ಆಚರಣೆ, ಸಂಪ್ರದಾಯಗಳ ಹೆಸರಿನಲ್ಲಿ ಮಹಿಳೆಯರಿಗೆ ಆಸ್ತಿಹಕ್ಕು ಕೈಗೆಟುಕದಂತೆ ನೋಡಿಕೊಳ್ಳುತ್ತಿದೆ. ಹಾಗಾಗಿ ಮಹಿಳೆಯರು ಆಚರಣೆ, ನಂಬಿಕೆ, ಸಂಪ್ರದಾಯಗಳಿಗೆ ಸುಲಭವಾಗಿ ಬಲಿಯಾಗುತ್ತಿರುವುದು ಕಂಡುಬರುತ್ತಿದೆ. ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಯಾವ ರೀತಿಯಲ್ಲಿ ಅಡೆತಡೆಗಳನ್ನು ನಿರ್ಮಾಣವಾಗಿವೆ ಎಂಬುದುನ್ನು ಈ ಅಧ್ಯಾಯದ ಮುಂದಿನ ಭಾಗದಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಸಂವಿಧಾನದ ಆಶಯದ ಪ್ರಕಾರವೇ ಕಾನೂನುಗಳು ರೂಪಿತಗೊಂಡಿದ್ದರೂ ಅವು ಲಿಂಗ ಸಮಾನತೆಯನ್ನು ಕಾಪಾಡುವಲ್ಲಿ ಯಶಸ್ವಿಯಾಗ ದಿರುವುದನ್ನು ಕಾಣಬಹುದಾಗಿದೆ. ಏಕೆಂದರೆ ಈ ಕಾನೂನುಗಳನ್ನು ರೂಪಿಸುವವರು ಪುರುಷರೇ ಆಗಿದ್ದರಿಂದಾಗಿ ಅವರ ಆಲೋಚನಾ ವಿಧಾನದಲ್ಲಿಯೇ ಕಾನೂನುಗಳು ರೂಪಿತಗೊಳ್ಳುತ್ತಿವೆ. ಹಾಗಾಗಿ ಮಹಿಳಾ ಪರವಾದ ಕಾನೂನುಗಳು ಇಂದಿಗೂ ಲಿಂಗ ಅಸಮಾನತೆಯ ಅಂಶಗಳಿಂದ ಮುಕ್ತಿಯನ್ನು ಪಡೆದಿಲ್ಲ.

ಭಾರತವು ಹಲವು ಧರ್ಮಗಳ ತವರೂರಾಗಿರುವುದರಿಂದ ಪ್ರತಿಯೊಂದು ಧರ್ಮಕ್ಕೂ ತಮ್ಮದೇ ಆದ ಧರ್ಮಗ್ರಂಥಗಳಿವೆ. ಹಾಗಾಗಿಯೇ ಭಾರತವು ಧರ್ಮನಿರಪೇಕ್ಷ ಪ್ರಜಾಪ್ರಭುತ್ವ ವಾದಿ ರಾಷ್ಟ್ರವಾಗಿದೆ. ಆದರೆ ಇಲ್ಲಿ ಏಕರೂಪದ ಸಿವಿಲ್ ಸಂಹಿತೆ ಇಲ್ಲ. ಏಕೆಂದರೆ ಆಸ್ತಿ ಹಕ್ಕು, ವಿಚ್ಛೇದನೆ, ವಿವಾಹ, ಜೀವನಾಂಶ ಮುಂತಾದ ವೈಯಕ್ತಿಕ ಕಾನೂನುಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಧರ್ಮದಲ್ಲಿಯೂ ಬೇರೆ ಬೇರೆಯದೇ ಆದಂತಹ ಕಾನೂನುಗಳು ಇರುವುದು ಕಂಡುಬರುತ್ತದೆ. ಇವು ಈ ಗ್ರಂಥಗಳ ನಿಯಮಗಳಿಗೆ ಬದ್ಧವಾಗಿರುತ್ತವೆ. ಮುಖ್ಯವಾಗಿ ಭಾರತದಲ್ಲಿ ಎಲ್ಲಾ ಧರ್ಮದ ಮಹಿಳೆಯರು ಆಸ್ತಿ ವಾರಸುದಾರಿಕೆಯ ವಿಷಯದಲ್ಲಿ ಎರಡನೆಯ ಸ್ಥಾನವನ್ನು ಪಡೆದಿದ್ದಾರೆ. ಇಂಗ್ಲೆಂಡಿನಲ್ಲಿಯೂ ಇಂಗ್ಲಿಷ್ ಮಹಿಳೆಯರಿಗೆ ಪುರುಷನೊಂದಿಗೆ ಸಮಾನ ಹಕ್ಕುಗಳು ಇರಲಿಲ್ಲ. ಆದರೆ ಈಕ್ವಿಟಿ ನ್ಯಾಯಾಲಯಗಳು ಸಮಾನತೆಯ ತತ್ವವನ್ನು ಆಧರಿಸಿ ಕಾನೂನನ್ನು ಅನ್ವಯಿಸಲು ಪ್ರಾರಂಭಿಸಿದ ನಂತರ ಈ ಪರಿಸ್ಥಿತಿಗಳಲ್ಲಿ ಬದಲಾವಣೆ ಗಳಾದವು. ಹಾಗೆಯೇ ಈ ಬಗೆಯ ವೈಯಕ್ತಿಕ ಕಾನೂನುಗಳು ಕಾಲ ಕಾಲಕ್ಕೆ ಜನರ ಆಶೋತ್ತರಗಳಿಗೆ ಅನುಗುಣವಾಗಿ ಬದಲಾವಣೆಗೆ ಒಳಪಟ್ಟಿರುವ ಸಂಗತಿಗಳೂ ಕಂಡುಬರುತ್ತವೆ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ಹಿಂದೂ ಧರ್ಮ. ಈ ಧರ್ಮದಲ್ಲಿ ಪ್ರಾರಂಭದಲ್ಲಿ ಇದ್ದ ನಿಯಮಗಳು ಇಂದು ಇಲ್ಲ. ಹಿಂದೂಗಳಿಗೆ ಸಂಬಂಧಿಸಿದಂತೆ ಸ್ತ್ರೀ ಪುರುಷರ ನಡುವೆ ಇದ್ದ ಈ ಅಸಮಾನತೆಯನ್ನು ಹಿಂದೂ ಮಹಿಳೆಯರ ಆಸ್ತಿ ಹಕ್ಕುಗಳ ಅಧಿನಿಯಮ ೧೯೩೭, ಹಿಂದೂ ಆಸ್ತಿ ವಿಲೇ ಅಧಿನಿಯಮ ೧೯೧೬, ಹಿಂದೂ ವಾರಸುದಾರಿಕೆ (ಅಸಾಮರ್ಥ್ಯಗಳ ನಿವಾರಣೆ) ಅಧಿನಿಯಮ ೧೯೨೮, ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೦೨

ಮುಂತಾದ ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಸ್ವಲ್ಪಮಟ್ಟಿಗೆ ನಿವಾರಿಸುವ ಪ್ರಯತ್ನ ಮಾಡಲಾಯಿತು.

ಸ್ವಾತಂತ್ರ್ಯ ನಂತರ ಸಂವಿಧಾನ ರಚನೆಯಾದ ಬಳಿಕ ಹಿಂದೂ ಧರ್ಮದಲ್ಲಿನ ಕಾನೂನುಗಳಿಗೆ ಅಮೂಲಾಗ್ರವಾದ ಬದಲಾವಣೆಯನ್ನು ಮಾಡಲಾಯಿತು. ಲಿಂಗ ಅಸಮಾನತೆಯ ನೆಲೆಗಳು ವೇದಗಳ ಕಾಲದಿಂದಲೂ ರೂಢಿಯಲ್ಲಿದ್ದರು ಕಾಲ ಕಾಲಕ್ಕೆ ಅವುಗಳ ಚಿಂತನೆಗಳಲ್ಲಿ ಸ್ವಲ್ಪ ಪ್ರಮಾಣದ ಬದಲಾವಣೆಗಳಾಗುತ್ತಾ ಬಂದಿರುವುದು ಕಂಡುಬರುತ್ತದೆ. ಹಾಗಾಗಿ ವೇದಗಳ ಕಾಲದಿಂದ ಹಿಡಿದು ಇಂದಿನ ಸಂದರ್ಭದವರೆಗೂ ಈ ಲಿಂಗ ಅಸಮಾನತೆ ಕುರಿತಂತೆ ಆದ ಬದಲಾವಣೆಗಳನ್ನು ವಿವರಿಸಿಕೊಳ್ಳುವುದು ಮುಖ್ಯವಾಗಿದೆ. ಹಿಂದೂ ಧರ್ಮದ ಕಾನೂನುಗಳ ಬೇರುಗಳನ್ನು ವೇದಗಳ ಕಾಲದಿಂದಲೂ ಗುರುತಿಸಬಹುದಾಗಿದೆ. ಆದರೆ ವೇದಗಳ ಸಂದರ್ಭದ ಕಾನೂನುಗಳು ಅಷ್ಟಾಗಿ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿರಲಿಲ್ಲ. ಹಾಗಾಗಿ ವೇದಗಳ ನಂತರ ಬಂದ ಸ್ಮೃತಿಗಳ ಸಂದರ್ಭದಲ್ಲಿ ಈ ಕಾನೂನುಗಳು ಸ್ಪಷ್ಟತೆಯನ್ನು ಪಡೆದುಕೊಳ್ಳಲು ಆರಂಭಿಸಿದವು. ಮುಖ್ಯವಾಗಿ ಧರ್ಮಶಾಸ್ತ್ರ ಅಥವಾ ಸ್ಮೃತಿಗಳ ಸಂದರ್ಭದಲ್ಲಿ ಗೌತಮ, ಬೌದಾಯಣ, ಆಪಸ್ತಂಭ, ಹರಿತ, ವಸಿಷ್ಠ, ವಿಷ್ಣು, ಮನು, ಯಜ್ಞವಲ್ಕ್ಯಾ, ನಾರದ, ಪರಾಶರ, ಬೃಹಸ್ಪತಿ, ಕಾತ್ಯಾಯನ ಇವರುಗಳೆಲ್ಲರೂ ಕೂಡ ಕಾನೂನುಗಳನ್ನು ರಚಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದವರು. ಇವರೆಲ್ಲರೂ ಸಹ ಋಷಿಮುನಿಗಳೇ ಆಗಿದ್ದರು. ಇವರು ರಚಿಸಿದ ಕಾನೂನುಗಳು ತುಂಬಾ ಸಾಂಪ್ರದಾಯಿಕತೆಯಿಂದ ಕೂಡಿದವುಗಳಾಗಿದ್ದವು. ಮೇಲಿನ ಎಲ್ಲಾ ಸ್ಮೃತಿಕಾರರಲ್ಲಿ ಮನುವು ರಚಿಸಿದಂತಹ ಸ್ಮೃತಿಯೇ ಪ್ರಮುಖವಾಗಿದೆ. ಇದು ಎಷ್ಟರ ಮಟ್ಟಿಗೆ ಪ್ರಾಮುಖ್ಯತೆಯನ್ನು ಪಡೆದಿದೆ ಎಂದರೆ ಇದೊಂದು ಕೇವಲ ಕೃತಿಯಾಗಿ ಉಳಿಯದೇ ಒಂದು ವ್ಯವಸ್ಥೆಯಾಗಿ ರೂಪಿಸಲ್ಪಟ್ಟಿದೆ. ಸಂಪ್ರದಾಯವಾದಿ ವ್ಯವಸ್ಥೆ ಇಂದಿಗೂ ಪಿತೃಪ್ರಧಾನ ಮೌಲ್ಯಗಳನ್ನು ಸಮರ್ಥಿಸಿಕೊಳ್ಳಲು ಮನುಸ್ಮೃತಿಯನ್ನೇ ಅವಲಂಬಿಸುತ್ತಿದೆ. ಹಾಗಾಗಿ ವ್ಯವಸ್ಥೆಯಲ್ಲಿನ ಪ್ರತಿಯೊಂದು ರಂಗಗಳಲ್ಲಿಯೂ, ಕ್ಷೇತ್ರಗಳಲ್ಲಿಯೂ ಈ ಲಿಂಗ ಅಸಮಾನತೆಯ ನೆಲೆಗಳು ಇಂದಿಗೂ ಜಾರಿಯಲ್ಲಿರುವುದು ಕಂಡುಬರುತ್ತದೆ. ಮನುವಿನ ಹುಟ್ಟು ಮತ್ತು ಜೀವಿತದ ಕಾಲಾವಧಿಯ ಬಗೆಗೆ ಬಹಳಷ್ಟು ವಿವಾದಗಳಿವೆ. ಈ ಮನುಸ್ಮೃತಿಯು ವಾರಸುದಾರಿಕೆ, ಕರಾರು ಪತ್ರಗಳು, ಪಾಲುದಾರಿಕೆ, ರಾಜಧರ್ಮ ಮುಂತಾದ ವಿಷಯಗಳ ಕುರಿತು ಮಾತನಾಡುತ್ತದೆ. ಮುಖ್ಯವಾಗಿ ಮನುವು ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರಿಗೆ ಹಕ್ಕನ್ನು ಕೊಡಬಾರದು ಎಂಬ ನಿಲುವನ್ನು ಹೊಂದಿರುವುದು ಜೊತೆಗೆ ಮಹಿಳೆಯರ ವಿಚಾರದಲ್ಲಿ ತುಂಬಾ ಕಠಿಣವಾದ ನಿಲುವುಗಳನ್ನು ಹೊಂದಿದ್ದನು. ಅಂದರೆ ಮಹಿಳೆ ತನ್ನ ಹಕ್ಕಿನಿಂದ ಪಡೆಯಬಹುದಾದ ಯಾವ ವಿಚಾರವನ್ನೂ ಸಹ ಹೇಳುವುದಿಲ್ಲ. ಹಾಗಾಗಿ ಮನು ಸ್ತ್ರೀ ಪುರುಷರ ನಡುವೆ ಒಂದು ದೊಡ್ಡ ಅಂತರವನ್ನು ನಿರ್ಮಿಸಿಬಿಟ್ಟಿದ್ದಾನೆ. ನಂತರ ಬಂದ ಯಜ್ಞಾವಲ್ಕ್ಯ ಸ್ಮೃತಿಯು ಮಹಿಳೆಯರ ವಿಚಾರದಲ್ಲಿ ಸ್ವಲ್ಪ ಉದಾರವಾದಿ ಧೋರಣೆಯನ್ನು ಹೊಂದಿರುವುದು ಕಂಡುಬರುತ್ತದೆ. ಇದಕ್ಕೆ

ಮುಖ್ಯ ಕಾರಣ ಆ ಸಂದರ್ಭದಲ್ಲಿ ಇದ್ದಂತಹ ಬೌದ್ಧ ಧರ್ಮ. ಈ ಧರ್ಮದ ಬೋಧನೆಗಳಾದಂತಹ ದಯೆ, ಕರುಣೆ, ಅಹಿಂಸೆ ಇವುಗಳು ಯಜ್ಞಾವಲ್ಕ್ಯ ಸ್ಮೃತಿಯ ಮೇಲೆ ಪ್ರಭಾವ ಬೀರಿದವು ಎಂದು ಹೇಳಲಾಗುತ್ತಿದೆ. ಈ ಸಂಹಿತೆಯು ಮುಖ್ಯವಾಗಿ ಶೂದ್ರರ ಸ್ಥಾನಮಾನ, ಮಹಿಳೆಯರ ವಾರಸುದಾರಿಕೆಯ ಹಕ್ಕು, ಆಸ್ತಿ ಹೊಂದಲು ಅಧಿಕಾರ, ದಂಡನೆ ಮುಂತಾದ ವಿಷಯಗಳಲ್ಲಿ ಉದಾರ ನೀತಿಯನ್ನು ಅನುಸರಿಸಿತು. ಯಜ್ಞಾವಲ್ಕ್ಯನ ನಂತರ ಕೌಟಿಲ್ಯನ ಅರ್ಥಶಾಸ್ತ್ರ ಪ್ರಮುಖವಾಗಿ ಗುರುತಿಸಲ್ಪಡುತ್ತದೆ. " ಕೌಟಿಲ್ಯನ ಅರ್ಥಶಾಸ್ತ್ರದ ಬಹುಮುಖ್ಯ ಲಕ್ಷಣವೆಂದರೆ ಇದು ಒಂದು ಧರ್ಮ ಶಾಸ್ತ್ರವಾಗಿರದೆ, ಪ್ರಾಚೀನ ಭಾರತದ ರಾಜನೀತಿಯ ಬಗ್ಗೆ ಅತ್ಯಂತ ಅಧಿಕಾರ ಪೂರ್ಣ ಗ್ರಂಥವಾಗಿದೆ. ರಾಜನ ಕರ್ತವ್ಯಗಳು, ಅವನ ಆಡಳಿತದ ಬಗೆಯಲ್ಲದೆ, ನ್ಯಾಯಾಡಳಿತ, ನ್ಯಾಯಾಸ್ಥಾನ, ನ್ಯಾಯ ನಿರ್ಣಯದ ವಿಧಿವಿಧಾನಗಳು, ತೆರಿಗೆ, ಮಹಿಳೆಯರ ಹಕ್ಕುಗಳು, ವಿವಾಹ, ವಿಚ್ಛೇಧನ ಮತ್ತಿತರ ವಿಷಯಗಳ ಬಗ್ಗೆಯೂ ನಿಯಮಗಳನ್ನು ರೂಪಿಸಲಾಗಿದೆ. ಮುಖ್ಯವಾಗಿ ಧಾರ್ಮಿಕ ನೆಲೆಯಲ್ಲಿ ವಿಷಯಗಳನ್ನು ವಿವೇಚಿಸದೇ ಲೌಕಿಕ ನೆಲೆಯಲ್ಲಿ ವಿವೇಚಿಸಿರುವುದು ಇದರ ವಿಶೇಷತೆ. ಸಾಮಾಜಿಕ ಹಿತದ ಮೇಲೆ ಮಾನವನ ಸ್ವಭಾವ ಆಧರಿಸದೇ, ಸ್ವಪ್ರೇಮ, ಸ್ವ ಹಿತರಕ್ಷಣೆಯ ಪ್ರವೃತ್ತಿ ಹಾಗೂ ಸ್ವಾರ್ಥ ಸಾಧನೆಯ ಮೇಲೆ ಅದು ಅವಲಂಬಿಸಿರುತ್ತದೆಂಬ ಭಾವನೆಯ ಮೇಲೆ ಅವನ ಹಲವಾರು ನಿಯಮಗಳು ರೂಪುಗೊಂಡಿವೆ."[7] ಹೀಗೆ ಸ್ಮೃತಿಗಳ ಕಾಲದಲ್ಲಿ ಸ್ಮೃತಿಕಾರರು ಮಹಿಳೆಗೆ ಸ್ವಲ್ಪ ಪ್ರಮಾಣದ ಹಕ್ಕುಗಳನ್ನು ನೀಡಿರುವುದು ಕಂಡುಬರುತ್ತದೆ. ಮನುಸ್ಮೃತಿಯನ್ನು ಹೊರತುಪಡಿಸಿದರೆ ಮಿಕ್ಕೆಲ್ಲಾ ಸ್ಮೃತಿಕಾರರು ಮಹಿಳೆಯರ ವಿಚಾರದಲ್ಲಿ ಉದಾರವಾದ ನೀತಿಯನ್ನೇ ಅನುಸರಿಸಿದ್ದಾರೆ. ಈ ಸಂದರ್ಭದಲ್ಲಿ ಲಿಂಗ ಅಸಮಾನತೆಯು ಸಂಪೂರ್ಣವಾಗಿ ನಾಶಹೊಂದದಿದ್ದರೂ ಕೆಲವು ಚಿಂತನೆಗಳು ಸಮಾಜದಲ್ಲಿ ಜನರ ಮೇಲೆ ಪ್ರಭಾವ ಬೀರಿವೆ. ಆದರೆ ಈ ಲಿಂಗ ಅಸಮಾನತೆ ಎಂಬುದು ಸಮಾಜದಲ್ಲಿ ಹೆಮ್ಮರವಾಗಿ ಬೆಳೆದು ನಿಂತಿರುವ ಕಾರಣಕ್ಕೆ ಇಂದಿಗೂ ಸಹ ಪ್ರತಿಯೊಂದು ರಂಗದಲ್ಲಿಯೂ ಅದರ ಚಹರೆಗಳು ಗೋಚರಿಸುತ್ತಿವೆ. ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಕಾನೂನಾತ್ಮಕ ಕ್ಷೇತ್ರಗಳಲ್ಲೂ ಲಿಂಗ ಅಸಮಾನತೆ ಎಂಬುದು ತಾಂಡವವಾಡುತ್ತಿದೆ. ಕಾಯಿದೆ ಕಾನೂನುಗಳು ವ್ಯವಸ್ಥೆಯಲ್ಲಿನ ತೊಡಕುಗಳನ್ನು ನಿಯಂತ್ರಿಸುವ ಬಹುದೊಡ್ಡ ಅಸ್ತ್ರಗಳಾಗಿವೆ. ಇವುಗಳೇ ವ್ಯವಸ್ಥೆಯ ನಿರ್ಧಾರಕ ಅಂಶಗಳಾಗಿವೆ. ಹಾಗಾಗಿ ಸ್ತ್ರೀಪುರುಷರ ಜೀವನದಲ್ಲಿ ಈ ಕಾಯಿದೆಗಳು ಬಹುದೊಡ್ಡ ಪಾತ್ರವನ್ನು ವಹಿಸುತ್ತವೆ. ಆ ಕಾರಣಕ್ಕಾಗಿ ಕಾನೂನುಗಳ ರಚನೆಯ ಸಂದರ್ಭದಲ್ಲಿ ಲಿಂಗ ಸೂಕ್ಷ್ಮತೆ ಎಂಬುದು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಆದರೆ ಕಾನೂನುಗಳನ್ನು ರಚಿಸುವ ಹಂತದಲ್ಲಿ ಪುರುಷರ ಪಾರುಪತ್ಯವೇ ಅಧಿಕವಾಗಿರುತ್ತದೆಯಾದ್ದರಿಂದ ಲಿಂಗ ಅಸಮಾನತೆ ಎಂಬುದು ಪದೇ ಪದೇ ಗೋಚರಿಸುತ್ತಿರುತ್ತದೆ. ಈ ಹಿನ್ನಲೆಯಲ್ಲಿ ಆಸ್ತಿ ಹಕ್ಕಿನ ಕಾನೂನನ್ನು ರೂಪಿಸುವ ಹಂತದಲ್ಲಿ ಮತ್ತು ಅದನ್ನು ಅನುಷ್ಠಾನಕ್ಕೆ ತರುವ ಹಂತದಲ್ಲಿ ಈ ಲಿಂಗ ಅಸಮಾನತೆಯ ಅಂಶಗಳನ್ನು ಗುರುತಿಸುವ ಕಾರ್ಯ ಮಾಡಬೇಕಾದ ಅನಿವಾರ್ಯತೆ ಇದೆ. ಹಾಗಾಗಿ ಇವುಗಳನ್ನು

ಗುರುತಿಸುವುದರ ಸಲುವಾಗಿ ಈ ಅಧ್ಯಾಯವನ್ನು ಎರಡು ನೆಲೆಯಲ್ಲಿ ವಿಂಗಡಿಸಿಕೊಳ್ಳಲಾಗಿದೆ. ೧) ಕಾನೂನು ರೂಪಿಸುವ ಹಂತ ೨) ಕಾನೂನು ಅನುಷ್ಠಾನದ ಹಂತ ಎಂದು. ಆಸ್ತಿಹಕ್ಕಿನ ಕಾನೂನು ರಚನೆಯಾಗುವುದಕ್ಕೆ ಮುಂಚೆ ಸಂಸತ್ತಿನಲ್ಲಿ ನಡೆದಂತಹ ಚರ್ಚೆಗಳು ಮತ್ತು ಆ ಚರ್ಚೆಗಳಲ್ಲಿನ ಪರ ಮತ್ತು ವಿರೋಧಗಳು ಹಾಗೆಯೇ ತೊಡಕಾಗಿದ್ದ ಅಂಶಗಳನ್ನು ಗುರುತಿ ಸಲಾಗುವುದು. ಹಾಗೆಯೇ ಅವುಗಳ ಪ್ರಭಾವದಿಂದ ಆಸ್ತಿ ಹಕ್ಕಿನ ಕಾನೂನಿನಲ್ಲಾದ ಬದಲಾವಣೆಗಳ ಕುರಿತಂತೆ ಮೊದಲ ಭಾಗದಲ್ಲಿ ಚರ್ಚಿಸಲಾಗುವುದು. ನಂತರದಲ್ಲಿ ಆಸ್ತಿ ಹಕ್ಕಿನ ಕಾನೂನು ರಚನೆಯಾದರೂ ವ್ಯವಸ್ಥೆಯಲ್ಲಿ ಇದರ ಫಲಾನುಭವಿಗಳು ತುಂಬಾ ಕಡಿಮೆ ಇರುವುದನ್ನು ಕಾಣಬಹುದಾಗಿದೆ. ಅದರಲ್ಲಿಯೂ ಮಹಿಳೆಯರು ಈ ಕಾನೂನಿನ ಲಾಭವನ್ನು ಎಷ್ಟರ ಮಟ್ಟಿಗೆ ಪಡೆದಿದ್ದಾರೆ ಮತ್ತು ವ್ಯವಸ್ಥೆಯಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯದ ಹಾಗೆ ಮಾಡಲು ಪುರುಷ ಪ್ರಧಾನ ವ್ಯವಸ್ಥೆ ಯಾವ ಯಾವ ರಾಜಕಾರಣ ಗಳನ್ನು ಮಾಡಿದೆ ಮತ್ತು ಈ ಬಗೆಯ ರಾಜಕಾರಣದ ಹೊರತಾಗಿಯೂ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷನಷ್ಟೇ ಸಮ ಪಾಲನ್ನು ಪಡೆದಿರುವ ಅಂಶಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಕ್ಷೇತ್ರಾಧ್ಯಯನವು ಉತ್ತರಕರ್ನಾಟಕದ ಜಿಲ್ಲೆಗಳಾದ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಜಿಲ್ಲಾ ನ್ಯಾಯಾಲಯ ಹಾಗೂ ಪ್ರತೀ ಜಿಲ್ಲೆಯ ಎರಡು ತಾಲೂಕು ನ್ಯಾಯಾಲಯಗಳಲ್ಲಿ ದಾಖಲಾಗಿರುವ ಕೇಸ್ ಗಳನ್ನು ಒಳಗೊಂಡಿದೆ. ಈ ಅಧ್ಯಾಯವು ವಕ್ತೃಗಳು ನೀಡಿದ ಮಾಹಿತಿಯನ್ನಾಧರಿಸಿ ರೂಪುಗೊಂಡಿದೆ.

**೬.೧. ಆಸ್ತಿಹಕ್ಕು ಕಾನೂನು : ಕಾನೂನು ರೂಪಿಸುವ ಸಂದರ್ಭದಲ್ಲಿನ ತೊಡಕುಗಳು**

ಭಾರತಕ್ಕೆ ಸ್ವಾತಂತ್ರ್ಯ ದೊರೆತು ಪ್ರತ್ಯೇಕ ಸಂವಿದಾನ ರಚನೆಗೊಂಡ ಕಾಲಾವಧಿಯಿಂದ ಸಮಾಜದಲ್ಲಿ ಕಾನೂನುಗಳು ಅಧಿಕೃತತೆಯನ್ನು ಪಡೆದುಕೊಂಡವು. ಅಲ್ಲಿಯವರೆಗೆ ಮಹಿಳಾ ಪರವಾದ ಕಾನೂನುಗಳು ಜಾರಿಯಲ್ಲಿದ್ದರೂ ಅವುಗಳ ಮೇಲೆ ಧರ್ಮಗ್ರಂಥಗಳ ಪ್ರಭಾವವೇ ಅಧಿಕವಾಗಿತ್ತು ಇದರಿಂದಾಗಿ ಸಾಂಪ್ರದಾಯಿಕ ಅಂಶಗಳು ಹೆಚ್ಚು ಹೆಚ್ಚು ಕಾನೂನುಗಳಲ್ಲಿ ಕಾಣಿಸಿ ಕೊಳ್ಳುತ್ತಿದ್ದವು. ಜೊತೆಗೆ ಆ ಸಂದರ್ಭದಲ್ಲಿದ್ದ ವಸಾಹತುಶಾಹಿ ಆಡಳಿತ ವ್ಯವಸ್ಥೆ ಲಿಂಗ ಅಸಮಾನತೆಯ ಅಂಶಗಳಿಗೆ ಹೆಚ್ಚು ಒತ್ತನ್ನು ಕೊಟ್ಟಿರಲಿಲ್ಲ. ಏಕೆಂದರೆ ಆ ಸಂದರ್ಭದಲ್ಲಿ ಸಂಪ್ರದಾಯವಾದಿಗಳಿಗೇ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದರು. ಇದಕ್ಕೆ ಕಾರಣ ಅವರ ವ್ಯಾಪಾರೀ ಮನೋಭಾವ ಮತ್ತು ಒಡೆದಾಳುವ ನೀತಿ. ಆದರೂ ಹತ್ತೊಂಬತ್ತನೆಯ ಶತಮಾನದ ಸಂದರ್ಭದ ವ್ಯವಸ್ಥೆಯಲ್ಲಿ ಇದ್ದ ಲಿಂಗ ಅಸಮಾನತೆ ಮತ್ತು ಮಹಿಳೆಯರ ಕುರಿತಾದ ತಾರತಮ್ಯ ಧೋರಣೆಯು ಜನರಲ್ಲಿ ಜಾಗೃತಿ ಮೂಡಲಾರಂಭಿಸಿತು.

ಅಂದಿನ ಸಂದರ್ಭದ ಮಹಿಳಾ ಸಂಘಟನೆಗಳು ಮಹಿಳೆಯರ ಆರ್ಥಿಕ ಸಬಲತೆಗೆ ಕಾರಣವಾಗುವ ಆಸ್ತಿಹಕ್ಕಿನಲ್ಲಿ ಪಾಲನ್ನು ಪಡೆಯುವುದರ ಕಡೆಗೆ ಗಮನವನ್ನು ಹರಿಸಿದವು. ಈ

ಕಾರಣಕ್ಕಾಗಿ ೧೯೩೭ರಲ್ಲಿ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮ ಜಾರಿಗೆ ಬಂದಿತು. ಆದರೆ ಈ ಅಧಿನಿಯಮ ಹಲವಾರು ಲಿಂಗ ಅಸಮಾನತೆಯ ಅಂಶಗಳಿಂದ ಕೂಡಿತ್ತು. ಅಂದರೆ "ಈ ಅಧಿನಿಯಮದಲ್ಲಿ ವಿಧವೆಯರಿಗೆ ನೀಡುವ ಹಕ್ಕುಗಳ ಬಗ್ಗೆ ಬಹಳಷ್ಟು ಗೊಂದಲಗಳಿದ್ದವು. ಆ ಬಗೆಗೆ ಸ್ಪಷ್ಟೀಕರಣ ನೀಡಲು ಮತ್ತು ಈ ಅಧಿನಿಯಮದಿಂದ ಹೆಣ್ಣು ಮಕ್ಕಳಿಗೆ ಆಗಿರುವ ಅನ್ಯಾಯವನ್ನು ತೊಡೆದು ಹಾಕಲು ಈ ಕಾನೂನಿಗೆ ತರಬಹುದಾದ ತಿದ್ದುಪಡಿಗಳ ಬಗ್ಗೆ ಸಲಹೆ ನೀಡುವುದಕ್ಕಾಗಿ ಸರ್ಕಾರವು ೧೯೪೧ರಲ್ಲಿ ರಾವ್(ಹಿಂದೂ ಕಾನೂನು) ಸಮಿತಿಯನ್ನು ರಚಿಸಿತು. ಈ ಸಮಿತಿಯು ಒಂದು ವರದಿಯನ್ನು ನೀಡಿತು. ಅದರ ಪ್ರಕಾರ ಕಾನೂನಿಗೆ ತಿದ್ದುಪಡಿ ಮಾಡುವುದರಿಂದ ಅನೇಕ ಗೊಂದಲಗಳು ಉಂಟಾಗುತ್ತವೆ ಹಾಗಾಗಿ ವಿವಾಹ, ವಾರಸುದಾರಿಕೆ ಮತ್ತಿತರ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ಸಮಗ್ರವಾದ ಹಿಂದೂ ಕಾನೂನನ್ನು ಸಿದ್ಧಪಡಿಸಬೇಕೆಂದು ಸಮಿತಿಯು ಶಿಫಾರಸ್ಸು ಮಾಡಿತು. ಇದರ ಜೊತೆಗೆ ಸ್ತ್ರೀ ಪುರುಷರಿಬ್ಬರಿಗೂ ಸಮಾನ ಹಕ್ಕುಗಳು, ಸಮಾನ ಹೊಣೆಗಾರಿಕೆ ಮತ್ತು ಸಮಾನ ಸ್ಥಾನಮಾನ ನೀಡಬೇಕೆಂದು ಇದರ ಪ್ರಮುಖ ಆಶಯವಾಗಿತ್ತು."[3]

ಇದಾದ ನಂತರದಲ್ಲಿ ಆಸ್ತಿ ಹಕ್ಕಿನ ಕಾನೂನಿನಲ್ಲಿ ಯಾವುದೇ ಬದಲಾವಣೆಗಳು ಆಗಲಿಲ್ಲ. ಹಾಗಾಗಿ ೧೯೪೪ರಲ್ಲಿ ಹಿಂದೂ ಸಂಹಿತೆಯನ್ನು ಸಿದ್ಧಪಡಿಸುವುದಕ್ಕಾಗಿ ರಾವ್ ಸಮಿತಿಯನ್ನು ಮತ್ತೆ ರಚಿಸಲಾಯಿತು. ಇದರ ಕರಡು ಸಂಹಿತೆಯನ್ನು ಅದೇ ವರ್ಷ ಆಗಸ್ಟ್‌ನಲ್ಲಿ ಸಿದ್ಧಪಡಿಸಿ ಹಲವು ಬದಲಾವಣೆಗಳನ್ನು ಮಾಡಲು ಮುಂದಾಯಿತು. ಮುಖ್ಯವಾಗಿ ಮಿತಾಕ್ಷರ ಸಂಹಿತೆಯಲ್ಲಿ ಇದ್ದ ಪುರುಷರಿಗೆ ಹುಟ್ಟಿನಿಂದ ಪ್ರಾಪ್ತವಾಗುವ ವಾರಸುದಾರಿಕೆ, ಗಂಡು ಮಕ್ಕಳಿಗೆ ಮತ್ತು ಮೃತ ಗಂಡುಮಕ್ಕಳ ವಿಧವೆಯರಿಗೆ ಆಸ್ತಿಯಲ್ಲಿ ಸಮ ಪಾಲು, ಮರಣಶಾಸನ ರಹಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಗಂಡುಮಕ್ಕಳ ಪಾಲಿನಲ್ಲಿ ಅರ್ಧಪಾಲು. ವಿಧವೆಯರಿಗೆ ಆಸ್ತಿಯಲ್ಲಿ ನಿರುಪಾಧಿಕ ಹಕ್ಕು, ಏಕಪತ್ನಿತ್ವದ ಕಡ್ಡಾಯ ಹೇರಿಕೆ ಮತ್ತು ಕೆಲವು ಸಂದರ್ಭಗಳಲ್ಲಿ ವಿಚ್ಛೇಧನೆ ಪಡೆಯುವುದನ್ನು ಕಾನೂನುಬದ್ಧಗೊಳಿಸುವುದು. ಇವೆಲ್ಲವೂ ಹಿಂದೂ ಸಂಹಿತೆಯಲ್ಲಿ ಅಳವಡಿಸಿದ್ದ ಮುಖ್ಯ ಅಂಶಗಳಾಗಿದ್ದವು. ಆದರೆ ಇಲ್ಲಿಯೂ ಕೃಷಿಭೂಮಿಯ ಆಸ್ತಿ ಹಕ್ಕನ್ನು ಅದರ ಪ್ರಾಂತಗಳ ಅಧಿಕಾರದ ಪರಿಧಿಗೆ ಸೇರುತ್ತದೆಂಬ ಕಾರಣದ ಮೇಲೆ ಬಿಟ್ಟು ಬಿಡಲಾಗಿತ್ತು. ಇದಕ್ಕೆ ಮುಖ್ಯ ಕಾರಣ ೧೯೩೫ರಲ್ಲಿ ಭಾರತ ಸರ್ಕಾರದ ಅಧಿನಿಯಮ ಜಾರಿಗೆ ಬಂದ ನಂತರ (Govt of India Act,1935) ಕೃಷಿ ಆಸ್ತಿಯು ಪ್ರಾಂತೀಯ ಅಧಿಕಾರದ ವ್ಯಾಪ್ತಿಗೆ ಒಳಪಟ್ಟಿತು. ಅಂದರೆ ಅಂದಿನ ಸಂದರ್ಭದಲ್ಲಿ ಪ್ರಾಂತೀಯ ಆಡಳಿತದ ಕಾರಣವಾಗಿ ಪ್ರತಿಯೊಂದು ಪ್ರಾಂತವೂ ತನ್ನ ವ್ಯಾಪ್ತಿಯಲ್ಲಿನ ಪ್ರದೇಶಗಳ ಮೇಲೆ ಹಿಡಿತವನ್ನು ಸಾಧಿಸಿದ್ದವು. ಹಾಗಾಗಿ ಕೃಷಿ ಭೂಮಿಯ ಆಸ್ತಿಯೂ ಅವುಗಳ ಆಡಳಿತದ ವ್ಯಾಪ್ತಿಗೆ ಸೇರಿಸಲಾಯಿತು. ಹಾಗಾಗಿ ಪ್ರಾಂತಾಡಳಿತವು ಮುಖ್ಯವಾಗಿ ಪುರುಷರ ವಶದಲ್ಲಿದ್ದರಿಂದ ಸಹಜವಾಗಿಯೇ ಮಹಿಳೆಯರ ಹಕ್ಕುಗಳಿಗೆ ಚ್ಯುತಿಯುಂಟಾಯಿತು. ಆಸ್ತಿ ಮತ್ತು ವಿವಾಹಗಳಿಗೆ ಸಂಬಂಧಿಸಿದಂತೆ

ಮಾಡಲಾಗಿದ್ದ ಕೆಲವು ಉಪಬಂಧಗಳು ಮಹಿಳಾ ಪರವಾಗಿವೆ ಎಂಬ ಕಾರಣಕ್ಕೆ ಈ ಸಂಹಿತೆಗೆ ಬಹಳಷ್ಟು ವಿರೋಧಗಳು ವ್ಯಕ್ತವಾದವು. ಆದರೆ ವಾಸ್ತವದಲ್ಲಿ ಇವು ಮಹಿಳಾ ಪರವಾದ ಕಾನೂನುಗಳಾಗಿರದೇ ಮಹಿಳೆಯರಿಗೆ ಸಂವಿಧಾನದ ಆಶಯದಂತೆ ನೀಡಬೇಕಾದ ಸಮಾನ ಸ್ಥಾನಮಾನ ಹಾಗೂ ಸಮಾನ ಅವಕಾಶಗಳಾಗಿ ಕಲ್ಪಿಸಲಾದ ಉಪಬಂಧಗಳಾಗಿದ್ದು, ಸಂವಿಧಾನದ ಆಶಯಕ್ಕೆ ಪೂರಕವಾದವುಗಳಾಗಿದ್ದವು. ಆದರೆ ೧೯೫೦ರ ನಂತರ ಆಸ್ತಿ ಹಕ್ಕಿನ ಕಾನೂನಿಗೆ ಸಂಬಂಧಿಸಿ ೧೯೫೬ರ ಹಿಂದೂ ವಾರಸಾ ಅಧಿನಿಯಮವೇ ಹೆಚ್ಚಿನ ಮೌಲ್ಯವನ್ನು ಪಡೆದುಕೊಳ್ಳುತ್ತದೆ. ಇದಕ್ಕೂ ಮೊದಲು ೧೯೩೭ರಲ್ಲಿನ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಕಾನೂನು ಜಾರಿಯಲ್ಲಿತ್ತಾದರೂ ಆ ಸಂದರ್ಭ ವಸಾಹತು ಕಾಲಘಟ್ಟದ್ದಾಗಿತ್ತು. ಹಾಗೂ ಆ ಕಾನೂನು ಹೆಚ್ಚು ಹೆಚ್ಚು ಪಿತೃಪ್ರಧಾನ ಮೌಲ್ಯಗಳನ್ನು ಒಳಗೊಂಡಿತ್ತು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಹಿಂದೂ ಮಹಿಳೆಯರ ಆಸ್ತಿಹಕ್ಕಿನ ವಿಚಾರದಲ್ಲಿ ಅಮೂಲಾಗ್ರವಾದ ಬದಲಾವಣೆಗಳನ್ನು ಮಾಡಲಾಯಿತು. ಈ ಬದಲಾವಣೆಯ ಕಾರಣವಾಗಿ ೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮ ಜಾರಿಗೆ ಬಂದಿತಾದರೂ, ಈ ಕಾಯಿದೆ ಜಾರಿಗೆ ಬರುವುದಕ್ಕೂ ಪೂರ್ವದಲ್ಲಿ ಹಲವಾರು ಪರ ಮತ್ತು ವಿರೋಧ ಚರ್ಚೆಗಳು ನಡೆದವು. ಈ ಚರ್ಚೆಗಳು ಲಿಂಗೀಯ ಕಾರಣಕ್ಕೆ ನಡೆದ ಚರ್ಚೆಗಳಾಗಿವೆ. ಮುಖ್ಯವಾಗಿ ಡಾ.ಬಿ.ಆರ್.ಅಂಬೇಡ್ಕರರು ಕಾನೂನು ಮಂತ್ರಿಗಳಾಗಿದ್ದಾಗ ಹಿಂದೂ ಕೋಡ್ ಬಿಲ್ಲನ್ನು ಶಾಸನ ಸಭೆಯಲ್ಲಿ ಮಂಡಿಸಿದರು. ಈ ಸಂದರ್ಭದಲ್ಲಿ ನಡೆದ ಚರ್ಚೆಗಳು ತುಂಬಾ ಪ್ರಮುಖವಾಗಿವೆ. ಏಕೆಂದರೆ ಹಿಂದೂ ಕೋಡ್ ಬಿಲ್‌ನ ಚರ್ಚೆಯಲ್ಲಿ ಹಲವಾರು ಜನ ಸಂಪ್ರದಾಯವಾದಿಗಳು ಇದರ ವಿರುದ್ಧ ಧ್ವನಿ ಎತ್ತಿದರು. ಇವರು ಯಾವ ಕಾರಣಗಳನ್ನು ಮುಂದಿಟ್ಟುಕೊಂಡು ಈ ಮಸೂದೆಗೆ ವಿರೋಧವನ್ನು ವ್ಯಕ್ತಪಡಿಸಿದರು ಎಂಬುದನ್ನು ವಿವರಿಸಿಕೊಳ್ಳುವುದು ಮುಖ್ಯವಾಗುತ್ತದೆ. ಏಕೆಂದರೆ ಹಿಂದೂ ಕೋಡ್ ಬಿಲ್ ಸಂಪೂರ್ಣವಾಗಿ ಜಾರಿಯಾಗದೇ ಇರುವುದಕ್ಕೆ ಈ ವಿರೋಧಿ ಅಂಶಗಳೇ ಕಾರಣವಾಗಿದ್ದವು. ಮತ್ತು ಇಂದು ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಮಗನಿಗೆ ಸರಿಸಮನಾದ ಪಾಲು ದೊರೆತಿದೆ ಎಂದರೆ ಅಂದಿನ ೧೯೫೬ರ ಹಿಂದೂ ವಾರಸಾ ಅಧಿನಿಯಮವೇ ಮೂಲ ಕಾರಣ. ಹಾಗಾಗಿ ಈ ಅಧಿನಿಯಮ ಮಹಿಳೆಯರ ಆಸ್ತಿಹಕ್ಕಿನ ಕಾನೂನಿನ ವಿಚಾರದಲ್ಲಿ ಬುನಾದಿ ಇದ್ದಂತೆ. ಮತ್ತು ೧೯೫೬ರಲ್ಲಿ ಹಿಂದೂ ವಾರಸಾ ಅಧಿನಿಯಮ ಜಾರಿಗೆ ಬರುವವರೆಗೆ ಆಸ್ತಿ ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಒಂದು ಸಮಗ್ರವಾದ ಕಾನೂನು ಕ್ರೋಢೀಕೃತವಾಗಿರಲಿಲ್ಲ. ಹಾಗಾಗಿ ೧೯೫೬ರ ಹಿಂದೂ ವಾರಸಾ ಅಧಿನಿಯಮ ಜಾರಿಗೆ ಪೂರ್ವದಲ್ಲಿ ನಡೆದ ಚರ್ಚೆಗಳನ್ನು ಇಲ್ಲಿ ವಿಶ್ಲೇಷಿಸುವುದು ಮುಖ್ಯ ವಾಗಿದೆ. ಹಾಗೆಯೇ ಸಂಪ್ರದಾಯವಾದಿಗಳ ವಿರೋಧದ ನಡುವೆಯೂ ೧೯೫೬ರ ಹಿಂದೂ ವಾರಸಾ ಅಧಿನಿಯಮ ಜಾರಿಗೆ ಬಂದುದರ ಹಿನ್ನಲೆಯನ್ನು ಗುರುತಿಸುವುದು ಮುಖ್ಯವಾಗಿದೆ.

ಹಿಂದೂ ಕೋಡ್ ಬಿಲ್‌ನ್ನು ಸಂವಿದಾನ ರಚನಾ ಸಮಿತಿಯ ಅಧ್ಯಕ್ಷರಾದ ಡಾ. ಬಿ.ಆರ್. ಅಂಬೇಡ್ಕರರು ತಯಾರಿಸಿ ದಿನಾಂಕ ೧೨.೮.೧೯೪೮ರಲ್ಲಿ ಸದನದಲ್ಲಿ ಮಂಡಿಸಿದರು. ಹಿಂದೂ ಕಾನೂನಿನ ಕೆಲವು ಶಾಖೆಗಳನ್ನು ಕ್ರೋಢೀಕರಿಸಿ ತಿದ್ದುಪಡಿ ಮಾಡುವ ಮಸೂದೆ ಯನ್ನು ಒಂದು ಆಯ್ಕೆ ಸಮಿತಿಗೆ ವಹಿಸಿಕೊಡಲಾಗಿತ್ತು. "ಆ ಸಮಿತಿಯಲ್ಲಿ ಶ್ರೀ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಡಾ.ಭಕ್ಷಿ ಟೇಕ್‌ಚಂದ್, ಶ್ರೀ ಎಂ. ಅಣಂತಶಯನಮ್ ಅಯ್ಯಂಗಾರ್, ಶ್ರೀಮತಿ ದುರ್ಗಾಬಾಯಿ, ಶ್ರೀ ಎಲ್ ಕೃಷ್ಣಸ್ವಾಮಿ ಭಾರತಿ, ಶ್ರೀ ಯು. ಶ್ರೀನಿವಾಸಮಲ್ಯ, ಶ್ರೀ ಮಿಹಿರ್ಲಾಲ್ ಚಟ್ಟೋಪಾಧ್ಯಾಯ, ಡಾ.ಪಿ.ಎಸ್.ದೇಶ್‌ಮುಖ್, ಶ್ರೀಮತಿ ರೇಣುಕಾ ರೇ, ಡಾ.ಪಿ.ಕೆ.ಸೇನ್, ಬಾಬು ರಾಮನಾರಾಯಣಸಿಂಗ್, ಶ್ರೀ ಕಿಶೋರಿ ಮೋಹನ್ ತ್ರಿಪಾಠಿ, ಶ್ರೀಮತಿ ಅಮ್ಮು ಸ್ವಾಮಿನಾಥನ್, ಪಂಡಿತ್ ಬಾಲಕೃಷ್ಣ ಶರ್ಮ, ಶ್ರೀ ಖುರ್ಷಿದ್‌ಲಾಲ್, ಶ್ರೀ ಬಜೇಶ್ವರ ಪ್ರಸಾದ್, ಶ್ರೀ ವಿ. ಶಿವರಾವ್, ಶ್ರೀ ಬಲದೇವ್ ಸ್ವರೂಪ್, ಶ್ರೀ ವಿ.ಸಿ. ಕೇಶವರಾವ್ ಮತ್ತು ಮಸೂದೆಯ ಸೂಚಕರು"[೩] ಇವರುಗಳಲ್ಲಿ ಒಳಗೊಂಡಿದ್ದರು. ಈ ಸಮಿತಿಯು ಮುಖ್ಯವಾಗಿ ಸದನದಲ್ಲಿ ಮಂಡನೆಯಾಗುವ ಹಿಂದೂ ಕೋಡ್ ಬಿಲ್ಲಿಗೆ ಸಂಬಂಧಿಸಿದಂತೆ ನಡೆಯುವ ಚರ್ಚೆಗಳೆಲ್ಲವನ್ನೂ ಕ್ರೋಢೀಕರಿಸಿ ಅದಕ್ಕೆ ಒಂದು ಸ್ವರೂಪವನ್ನು ಕೊಡುವ ಜವಾಬ್ದಾರಿ ಹೊಂದಿತ್ತು..

ಅಂಬೇಡ್ಕರರು ಹಿಂದೂ ಕೋಡ್ ಬಿಲ್‌ನಲ್ಲಿ ಹಿಂದೂ ಶಾಸನಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಲವನ್ನು ಮಾರ್ಪಡಿಸಿ, ಕೆಲವನ್ನು ಕ್ರೂಢೀಕರಿಸಿ ೩೯ ಪುಟಗಳ ಒಂದು ವರದಿಯನ್ನು ತಯಾರಿಸಿದ್ದರು. ಈ ವರದಿಯು ಒಂಬತ್ತು ಭಾಗಗಳನ್ನು ಒಳಗೊಂಡಿತ್ತು. ಅವುಗಳೆಂದರೆ

೧. ಪ್ರಸ್ತಾವನೆ

೨. ವಿವಾಹ ಮತ್ತು ವಿಚ್ಛೇಧನೆ

೩. ದತ್ತು ಸ್ವೀಕಾರ

೪. ಮೈನಾರಿಟಿ ಮತ್ತು ಗಾರ್ಡಿಯನ್‌ಶಿಪ್

೫. ಜಂಟಿ ಕುಟುಂಬದಲ್ಲಿ ಆಸ್ತಿ

೬. ಆಸ್ತಿಹಕ್ಕು

೭. ಉತ್ತರಾಧಿಕಾರತ್ವ

೮. ನಿರ್ವಹಣೆ

೯. ಇತರೆ

ಹೀಗೆ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಹಿಂದೂ ಕೋಡ್ ಬಿಲ್ಲನ್ನು ರಚಿಸಿದ್ದರು. ಈ ಮಸೂದೆ ಜಾರಿಯಾಗಲು ಹಲವು ಕಾರಣಗಳಿದ್ದವು. ಮುಖ್ಯವಾಗಿ ಸ್ತ್ರೀಯಾಗಲೀ ಅಥವಾ ಪುರುಷನಾಗಲೀ ಒಂದು ಉಯಿಲನ್ನು ಬರೆದಿಡದೆ ಸತ್ತು ಹೋದ ಹಿಂದುವಿನ ಆಸ್ತಿಯ ಹಕ್ಕುಗಳಿಗೆ ಸಂಬಂಧಿಸಿದ ಕಾನೂನನ್ನು ಕ್ರೋಢೀಕರಿಸುವುದು. ಉಯಿಲು ಬರೆದಿಡದೇ ಮೃತನಾದ ವ್ಯಕ್ತಿಯ ಆಸ್ತಿಗೆ ಇರಬಹುದಾದ ಬೇರೆ ಬೇರೆ ವಾರಸುದಾರರಲ್ಲಿ ಸ್ವಲ್ಪ ಮಟ್ಟಿಗೆ ವ್ಯತ್ಯಾಸವಾದ ಒಂದು ಉತ್ತರಾಧಿಕಾರ ಕ್ರಮವನ್ನು ವಿಧಿಸುವುದು, ಮಸೂದೆಯು ಪರಿಶೀಲಿಸುವ ಮುಂದಿನ ಅಂಶ ಪಾಲನೆ, ವಿವಾಹ, ವಿವಾಹ ವಿಚ್ಛೇಧನಾ, ದತ್ತ ಸ್ವೀಕಾರ, ಅಲ್ಪಸಂಖ್ಯಾತತೆ ಮತ್ತು ಪೋಷಕತ್ವ  ಈ ಎಲ್ಲಾ ಕಾರಣಗಳಿಂದ ಹಿಂದೂ ಕೋಡ್ ಬಿಲ್ಲನ್ನು ಸೂತ್ರೀಕರಿಸಲು ಮುಂದಾಯಿತು. ಮುಖ್ಯವಾಗಿ ಈ ಎಲ್ಲಾ ಅಂಶಗಳ ಕುರಿತಂತೆ ಡಾ.ಅಂಬೇಡ್ಕರರು ಸವಿಸ್ತಾರವಾಗಿ ಸದನದಲ್ಲಿ ಮಂಡಿಸಿದರು. ಮುಖ್ಯವಾಗಿ ಇವರು ಮಿತಾಕ್ಷರ ಮತ್ತು ದಾಯಭಾಗ ಪದ್ಧತಿಗಳನ್ನು ರದ್ದುಗೊಳಿಸುವ ಕಾರ್ಯಕ್ಕೆ ಕೈ ಹಾಕಿದ್ದರು. ಅಂಬೇಡ್ಕರರು ಹೇಳುವಂತೆ "ವಾರಸುದಾರಿಕೆಯ ಅನುಕ್ರಮಕ್ಕೆ ಸಂಬಂಧಿಸಿದಂತೆ ಮಸೂದೆಯು ನಾಲ್ಕು ಬದಲಾವಣೆಗಳನ್ನು ತರಲು ಉದ್ದೇಶಿಸಿದೆ. ೧) ವಿಧವೆ ಪತ್ನಿ, ಮಗಳು, ಮೊದಲೇ ಮೃತ ಪಟ್ಟಿದ್ದ ಮಗನ ವಿಧವೆ ಇವರೆಲ್ಲರಿಗೂ ಪಿತ್ರಾರ್ಜಿತದ ವಿಷಯದಲ್ಲಿ ಸಮಾನ ಮಟ್ಟವನ್ನು ಕಲ್ಪಿಸಲಾಗಿದೆ. ಅದರ ಜೊತೆಗೆ ಮಗಳಿಗೂ ತಂದೆಯ ಆಸ್ತಿಯಲ್ಲಿ ಒಂದು ಪಾಲನ್ನು ಕೊಡಲಾಗಿದೆ. ೨) ಮಿತಾಕ್ಷರದಲ್ಲಾಗಲೀ, ದಾಯಭಾಗದಲ್ಲಾಗಲೀ ಹೇಳಿರುವುದಕ್ಕಿಂತ ಹೆಚ್ಚು ಸಂಖ್ಯೆಯ ಸ್ತ್ರೀ ವಾರಸುದಾರರನ್ನು ಗುರುತಿಸಲಾಗಿದೆ. ೩) ಹಳೆಯ ಕಾನೂನಿನಲ್ಲಿ ಮಿತಾಕ್ಷರವಾಗಲೀ, ದಾಯಭಾಗವಾಗಲೀ ಸ್ತ್ರೀ ವಾರಸುದಾರುಗಳ ವಿಷಯದಲ್ಲಿ ಅಷ್ಟೊಂದು ತಾರತಮ್ಯ ಮಾಡಲಾಗಿತ್ತು. ವ್ಯಕಿಯು ಮೃತನಾದಾಗ ಅವನಿಗೆ ಸಂಬಂಧಿಸಿದ ಸ್ತ್ರೀಯು ಶ್ರೀಮಂತಳಾಗಿದ್ದಳೇ ಅಥವಾ ಬಡವಳೆ, ಅವಳು ವಿವಾಹಿತಳಾಗಿದ್ದಳೆ ಅಥವಾ ಅವಿವಾಹಿತಳೆ, ಅವಳಿಗೆ ಸಂತಾನವಿದೆಯೇ ಅಥವಾ ಇಲ್ಲವೇ ಇತ್ಯಾದಿ. ಪಕ್ಷಪಾತಕ್ಕೆ ಎಡೆಮಾಡಿಕೊಡುವ ಈ ಎಲ್ಲಾ ಪರಿಗಣನೆಗಳನ್ನು ಪ್ರಸ್ತುತ ಮಸೂದೆಯು ರದ್ದುಗೊಳಿಸುತ್ತದೆ. ಆಸ್ತಿಯನ್ನು ಪಡೆಯಲು ಹಕ್ಕಿರುವ ಒಬ್ಬ ಮಹಿಳೆಯು ಅವಳು ಒಬ್ಬ ವಾರಸುದಾರಳು ಎಂದು ಘೋಷಿಸುವುದರ ಆಧಾರದಿಂದ ಬೇರೆ ಯಾವ ಪರಿಗಣನೆಯೂ ಇಲ್ಲದೆ ಆಸ್ತಿಯನ್ನು ಪಡೆಯುತ್ತಾಳೆ. ೪) ಪ್ರಸ್ತುತ ಮಸೂದೆಯಲ್ಲಿ ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ತಂದೆಗಿಂತ ಮೊದಲು ತಾಯಿ ಪಡೆಯುವಂತೆ ಮಾಡಲಾಗಿದೆ.

ಇನ್ನು ಮುಂದುವರೆದು ಸ್ತ್ರೀಧನ ಮತ್ತು ಮಹಿಳಾ ಆಸ್ತಿಯ ಕುರಿತು ಚರ್ಚಿಸುತ್ತಾರೆ. ಇವರು ಎರಡು ಬಗೆಯ ಬದಲಾವಣೆಗಳನ್ನು ಮಾಡಲು ಮುಂದಾಗುತ್ತಾರೆ. ಅದು ಸ್ತ್ರೀಧನದ ಬೇರೆ ಬೇರೆ ಬಗೆಗಳನ್ನು ಕ್ರೋಡೀಕರಿಸಿ ಒಂದೇ ವರ್ಗದ ಆಸ್ತಿಯನ್ನಾಗಿ ಮಾಡುತ್ತದೆ. ಮತ್ತು ಏಕರೂಪದ ವಾರಸುದಾರಿಕೆಯನ್ನು ರೂಪಿಸುತ್ತದೆ. ಈಗ ಸ್ತ್ರೀಧನದ ವಿಭಿನ್ನ ವರ್ಗಗಳಿಗೆ ತಕ್ಕಂತೆ ವಿವಿಧ ವಾರಸುದಾರ ವರ್ಗವಿಲ್ಲ. ಎಲ್ಲಾ ಸ್ತ್ರೀಧನವೂ ಒಂದೇ ಮತ್ತು ವಾರಸುದಾರಿಕೆಯ

ಕಾನೂನು ಒಂದೇ. ಹಾಗೆಯೇ ಇನ್ನೊಂದು ಪ್ರಮುಖ ಬದಲಾವಣೆಯೆಂದರೆ ಸ್ತ್ರೀಧನದ ಪಾಲನ್ನು ಪಡೆಯಲು ಮಗನಿಗೂ ಹಕ್ಕನ್ನು ನೀಡಿರುವುದು. ಅಂದರೆ ತಂದೆಯ ಆಸ್ತಿಯಲ್ಲಿ ಮಗನು ಪಡೆಯುವುದರ ಅರ್ಧಪಾಲು ಮಗಳಿಗೆ ಬರುವುದಾದರೆ ತಾಯಿಯ ಆಸ್ತಿಯಲ್ಲಿ ಮೊದಲು ಪಡೆಯುವುದರ ಅರ್ಧಪಾಲು ಮಗನಿಗೂ ಬರುತ್ತದೆ. ಅಂದರೆ ಒಂದು ಅರ್ಥದಲ್ಲಿ ಮಸೂದೆಯು ಮಗ ಮತ್ತು ಮಗಳು ಇಬ್ಬರಿಗೂ ಸ್ಥಾನ ಸಮಾನತೆಯನ್ನು ಉಳಿಸುತ್ತದೆ."[4] ಹೀಗೆ ಈ ಹಿಂದೆ ಇದ್ದ ಆಸ್ತಿ ಹಕ್ಕಿನ ಕಾನೂನಿಗೆ ಅಮೂಲಾಗ್ರವಾದ ಬದಲಾವಣೆಯನ್ನು ತರಲು ಈ ಎಲ್ಲಾ ಅಂಶಗಳನ್ನು ಶಾಸನಸಭೆಯಲ್ಲಿ ಡಾ. ಅಂಬೇಡ್ಕರರು ವಿವರಿಸಿದರು.

ಒಟ್ಟಾರೆಯಾಗಿ ಈ ಮಸೂದೆಯಲ್ಲಿ ಪರಿಶೀಲನೆಗೆ ಒಳಪಡುವ ಅಂಶಗಳು ಮತ್ತು ಅವುಗಳಲ್ಲಿ ಹೊಸತಾದುವು ಹೀಗಿವೆ. "ಮೊದಲನೆಯದು ಆಜನ್ಮ ಹಕ್ಕನ್ನು ರದ್ದುಪಡಿಸಿ ಬದುಕಿರುವಿಕೆಯ ಆಧಾರದಿಂದ ಆಸ್ತಿಯನ್ನು ಪಡೆಯುವುದು, ಎರಡನೆಯದು ಮಗಳಿಗೆ ಅರ್ಧಪಾಲನ್ನು ಕೊಡುವುದು. ಮೂರನೆಯದು ಮಹಿಳೆಯರ ಸೀಮಿತ ಸ್ಥಿರಾಸ್ತಿಯನ್ನು ಪರಿಪೂರ್ಣ ಆಸ್ತಿಯನ್ನಾಗಿ ಪರಿವರ್ತಿಸುವುದು. ನಾಲ್ಕನೆಯದಾಗಿ ವಿವಾಹ ಮತ್ತು ದತ್ತು ಸ್ವೀಕಾರದಲ್ಲಿ ಜಾತಿ ವಿವಕ್ಷೆಯನ್ನು ರದ್ದು ಪಡಿಸುವುದು. ಐದನೆಯದು ಏಕಪತ್ನಿತ್ವ ತತ್ವ ಮತ್ತು ಆರನೆಯದು ವಿಚ್ಛೇಧನೆಯ ತತ್ವ."[5] ಈ ಎಲ್ಲಾ ಅಂಶಗಳನ್ನು ಡಾ.ಅಂಬೇಡ್ಕರರು ಪ್ರತ್ಯೇಕವಾಗಿ ಸ್ಪಷ್ಟವಾಗಿ ವಿವರಿಸಿದರು. ಮುಂದೆ ಈ ಎಲ್ಲಾ ಅಂಶಗಳ ಮೇಲೆ ಚರ್ಚೆಗಳು ಆರಂಭವಾದವು. ಈ ಚರ್ಚೆಯ ಸಂದರ್ಭದಲ್ಲಿ ಹಲವಾರು ಸಾಂಪ್ರದಾಯಿಕ ಮನಸ್ಸುಗಳು ಅಂಬೇಡ್ಕರರ ವಿಚಾರ ಗಳನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ.

ಅಂಬೇಡ್ಕರರು ವಿವರಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಶ್ರೀಮತಿ ಹನ್ಸಾ ಮೆಹೆತಾರವರು ಈ ಸಂಹಿತೆಯನ್ನು ಒಪ್ಪುವುದರ ಜೊತೆಗೆ ಒಂದು ಅಂಶದ ಕುರಿತು ಚರ್ಚಿಸುತ್ತಾರೆ. ಮುಖ್ಯವಾಗಿ ಅವರು ಹೇಳುವಂತೆ "ವಾರಸುದಾರಳೆಂದು ಪರಿಗಣಿಸಲ್ಪಟ್ಟ ಮಗಳು ಆಸ್ತಿಯನ್ನು ಪಡೆಯುತ್ತಾಳೆ. ಆದರೆ ಅವಳಿಗೆ ಬರುವುದು ಮಗನಿಗೆ ಬರುವುದರ ಅರ್ಧಪಾಲು ಮಾತ್ರ, ನಮ್ಮ ಸಂವಿಧಾನಕ್ಕೆ ಆಧಾರವಾಗಿರಬೇಕೆಂದು ನಾನು ಮತ್ತೆ ಮತ್ತೆ ಹೇಳುತ್ತಿರುವ ಸಮಾನತೆಯ ತತ್ವವನ್ನು ಇದು ಉಲ್ಲಂಘಿಸುತ್ತದೆ"[6] ಎಂದು ಹೇಳುತ್ತಾರೆ. ಇದು ನಿಜವಾಗಿಯೂ ಸಮಾನತೆಯನ್ನು ಸಾಂಕೇತೀಕರಿಸುವುದಿಲ್ಲ. ಏಕೆಂದರೆ ತಂದೆಯ ಆಸ್ತಿಯಲ್ಲಿ ಮಗ ಮತ್ತು ಮಗಳು ಇಬ್ಬರೂ ಸಮಾನವಾದ ಪಾಲನ್ನು ಪಡೆದಾಗ ಮಾತ್ರ ಇದು ಲಿಂಗ ತಾರತಮ್ಯದಿಂದ ಮುಕ್ತವಾಗುತ್ತದೆ ಎಂಬುದು ಅವರ ವಾದವಾಗಿತ್ತು. ಅಂದರೆ ತಂದೆಯ ಆಸ್ತಿಯಲ್ಲಿ ಮಗನಾದವನು ಎಷ್ಟು ಪಾಲನ್ನು ಪಡೆಯುತ್ತಾನೋ ಅದರ ಅರ್ಧಪಾಲನ್ನು ಮಗಳಾದವಳು ಪಡೆಯಬೇಕು ಎಂಬುದನ್ನು ಅವರು ಖಂಡಿಸುತ್ತಾರೆ. ಹಾಗಾದಲ್ಲಿ ಮಗ ಮತ್ತು ಮಗಳು ಪಡೆಯುವ ಪಾಲಿನಲ್ಲಿ ಯಾವುದೇ ಸಮಾನತೆಯು ಕಂಡುಬರುವುದಿಲ್ಲ ಎಂಬುದು ಅವರ ವಾದ. ಹಾಗೆಯೇ ಇವರು ಮತ್ತೊಂದು ವಾದವನ್ನು ಮಂಡಿಸುತ್ತಾರೆ. "ಮಗಳು ತನ್ನ ತಂದೆಯ

ಆಸ್ತಿಯಲ್ಲಿ ಮಗ ಪಡೆಯುವುದಕ್ಕೆ ಸಮಾನವಾದ ಆಸ್ತಿಯ ಪಾಲನ್ನು ಪಡೆಯಬೇಕು. ಹಾಗೆಯೇ ತನ್ನ ತಾಯಿಯ ಆಸ್ತಿಯಲ್ಲೂ ಮಗಳಿಗೆ ದೊರಕುವ ಪಾಲಿಗೆ ಸಮಾನವಾದ ಪಾಲನ್ನು ಮಗನು ಪಡೆಯಬೇಕು. ಮಗಳು ತಂದೆಯಿಂದಲೂ ಮತ್ತು ಪತಿಯಿಂದಲೂ ಆಸ್ತಿಯ ಪಾಲನ್ನು ಪಡೆಯುತ್ತಾಳೆ. ಹಾಗೆಯೇ ಪತಿಯೂ ತನ್ನ ಪತ್ನಿಯ ಆಸ್ತಿಯಿಂದಲೂ ಸಮಾನವಾದ ಪಾಲನ್ನು ಪಡೆಯಬಹುದು"[೭] ಎಂದು ವಾದಿಸುತ್ತಾರೆ. ಇದಕ್ಕೆ ವಿರುದ್ಧವಾಗಿ ಶ್ರೀರಾಮ್ ಸಹಾಯ್ ಎಂಬುವವರು ಹನ್ಸಾ ಮೆಹೆತಾರವರ ಮಾತುಗಳನ್ನು ಪ್ರಶ್ನಿಸುತ್ತಾರೆ. ಇವರು ಹೇಳುವಂತೆ "ನನ್ನ ಅಭಿಪ್ರಾಯದಲ್ಲಿ ವಾರಸುದಾರಿಕೆಯ ಕ್ರಮವನ್ನು ನಿರೂಪಿಸಿರುವ ರೀತಿಯು ಧರ್ಮಶಾಸ್ತ್ರಗಳ ಮೂಲ ತತ್ವವನ್ನು ಅಲಕ್ಷಿಸುತ್ತದೆ. ಇಲ್ಲಿ ಪುರುಷರಿಗಿಂತಲೂ ಹೆಚ್ಚಿನ ಹಕ್ಕುಗಳನ್ನು ಮಹಿಳೆಯರಿಗೆ ನೀಡಲಾಗಿದೆ ಎಂಬುದು ನನ್ನ ಅಭಿಪ್ರಾಯ. ಮಗಳಿಗೆ ಪಿತ್ರಾರ್ಜಿತದಿಂದಲೂ ಪಾಲು ಬರುತ್ತದೆ, ಹಾಗೆಯೇ ಪತಿಯ ಕುಟುಂಬದ ಆಸ್ತಿಯಿಂದಲೂ ಪಾಲು ಬರುತ್ತದೆ. ಆದರೆ ಪುರುಷನಿಗೆ ಅವನ ಪಿತ್ರಾರ್ಜಿತದ ಜೊತೆಗೆ ಅವನ ಮಾವನ ಆಸ್ತಿಯಿಂದಲೂ ಪಾಲು ಬರುವ ಯಾವ ಅವಕಾಶವೂ ಈ ಮಸೂದೆಯಲ್ಲಿಲ್ಲ. ಧರ್ಮಶಾಸ್ತ್ರದ ತತ್ವಗಳಿಗೂ ಮತ್ತು ಇಂದಿನ ಪರಿಸ್ಥಿತಿಗಳಿಗೂ ನಡುವೆ ವ್ಯತ್ಯಾಸಗಳು ಏನೇ ಇರಲಿ ಅಲ್ಲಿ ಪ್ರತಿಪಾದಿತವಾದ ಮೂಲ ತತ್ವಗಳನ್ನು ನಾವು ಪಾಲಿಸಲೇ ಬೇಕೆಂಬುದು ನನ್ನ ಭಾವನೆ. ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾವು ಎಲ್ಲಾ ವಿಚಾರಗಳನ್ನು ನಿರ್ಧರಿಸಬೇಕು. ಇಂದಿನ ಪರಿಸ್ಥಿತಿಗಳು ಮತ್ತು ಸಮಾಜದ ಒಲವುಗಳ ದೃಷ್ಟಿಯಿಂದ ಅತ್ಯಗತ್ಯವೆನಿಸುವ ಬದಲಾವಣೆಗಳನ್ನು ಮಾತ್ರ ಮಾಡಬೇಕು. ಕೇವಲ ಉದ್ವೇಗಕ್ಕೆ ಸಿಕ್ಕಿ ಅಥವಾ ಪಾಶ್ಚಾತ್ಯ ನಾಗರೀಕತೆಯ ಅನುಕರಣೆಯಿಂದ ನಾವು ಯಾವ ಬದಲಾವಣೆಯನ್ನೂ ಮಾಡಬಾರದು. ಅದು ನಮ್ಮ ಸಮಾಜದ ಬೆಳವಣಿಗೆಗೆ ತಡೆಯೊಡ್ಡುತ್ತದೆ ಮತ್ತು ಅಪೇಕ್ಷಣೀಯವಲ್ಲದ ಕಷ್ಟಗಳನ್ನು ಉಂಟು ಮಾಡುತ್ತದೆ"[೮] ಎಂದು ವಾದಿಸಿದರು. ಹೀಗೆ ಈ ಅಭಿಪ್ರಾಯ ಸಂಪ್ರದಾಯವಾದಿ ನೆಲೆಯಲ್ಲಿರುವುದನ್ನು ಕಾಣಬಹುದಾಗಿದೆ. ಅಂದರೆ ಧರ್ಮಶಾಸ್ತ್ರಗಳು ಹೇಳುವ ಪ್ರಕಾರದಲ್ಲಿಯೇ ಆಸ್ತಿಯಲ್ಲಿನ ಉತ್ತರಾಧಿಕಾರದ ಹಕ್ಕುಗಳನ್ನು ರೂಪಿಸಬೇಕು. ಇಲ್ಲದಿದ್ದಲ್ಲಿ ವ್ಯವಸ್ಥೆ ಅಸ್ತವ್ಯಸ್ತಗೊಳ್ಳುತ್ತದೆ ಎಂಬುದು ಅವರ ವಾದವಾಗಿರುವುದನ್ನು ಕಾಣಬಹುದು. ಈ ಅಭಿಪ್ರಾಯವು ಸಾಮಾನ್ಯ ಜನರ ಅಭಿಪ್ರಾಯಕ್ಕಿಂತ ಭಿನ್ನವಾಗೇನೂ ಇಲ್ಲ. ಇವರ ಜೊತೆಗೆ ಮುಖ್ಯವಾಗಿ ಅಂದಿನ ಪ್ರಮುಖ ರಾಜಕೀಯ ನೇತಾರರಾದ "ಶ್ರೀ ಮದನ ಮೋಹನ ಮಾಳವೀಯ, ಸರ್ದಾರ್ ವಲ್ಲಭಭಾಯ್ ಪಾಟೇಲ್, ಪಂಜಾಬಿನ ದೇಶಮುಖ್, ಶ್ಯಾಂಪ್ರಸಾದ್ ಮುಖರ್ಜಿ, ಸರ್ದಾರ್ ಹುಕುಂಸಿಂಗ್, ಪಂ.ಠಾಕುರ್ದಾಸ್ ಬಾರ್ಗವರಂಥ ನಾಯಕರು ಈ ಮಸೂದೆಯನ್ನು ಪ್ರಭಲವಾಗಿ ವಿರೋಧಿಸಿದರು. ಇವರು ಎತ್ತಿದ ಪ್ರಮುಖ ಆಕ್ಷೇಪಣೆಗಳೆಂದರೆ:

೧. ಹಿಂದೂ ಕೋಡ್ ಬಿಲ್ ಪಾಸಾದರೆ ಸರ್ಕಾರ ಉರುಳುವುದು

೨. ಹಿಂದೂ ಕೋಡ್ ಬಿಲ್‌ನಲ್ಲಿ ಸಿಖ್ ಸಮುದಾಯ ಸೇರ್ಪಡೆ ಮಾಡುವಂತಿಲ್ಲ.

೩. ಹಿಂದೂ ಸಮಾಜದ ಅಭಿಪ್ರಾಯ ಪಡೆದಿಲ್ಲ.

೪. ಇದನ್ನು ಪಂಜಾಬಿಗೆ ಅನ್ವಯಿಸಬಾರದು.

೫. ಇಂಥ ಕ್ರಾಂತಿಕಾರಿ ಬಿಲ್ ಪಾಸುಮಾಡುವ ಸಮಯ ಇದಲ್ಲ. ಎಂಬ ಪಕ್ಷ ಹಿತಾಸಕ್ತಿಯ ಮತ್ತು ರಾಜಕೀಯ ಹಿತಾಸಕ್ತಿಯ ಆಕ್ಷೇಪಗಳನ್ನು ಮಾಡಿದರು."

ಈ ಮೇಲಿನ ಆಕ್ಷೇಪಣೆಗಳು ರಾಜಕೀಯ ಪ್ರೇರಿತವಾಗಿದ್ದು, ಪಕ್ಷಾಧಾರಿತ ಹಿತಾಸಕ್ತಿಯನ್ನು ಹೊಂದಿರುವುದನ್ನು ಕಾಣಬಹುದು. ಆದರೆ ಆಕ್ಷೇಪಣೆಗಳು ಯಾವ ಮೂಲದಿಂದಲಾದರೂ ಸಹ ಅವು ಹಿಂದೂ ಕೋಡ್ ಬಿಲ್ ಜಾರಿಯಾಗಲು ಅಡ್ಡಿಪಡಿಸಿದ್ದಂತೂ ಸತ್ಯ. ಹಾಗಾಗಿ ಇವುಗಳನ್ನು ಇಲ್ಲಿ ಪ್ರಸ್ತಾಪಿಸಲೇಬೇಕಾದ ಅಗತ್ಯಕ್ಕಾಗಿ ಇಲ್ಲಿ ವಿವರಿಸಲಾಗಿದೆ. ಅಂದರೆ ಇಲ್ಲಿ ಸ್ವಪಕ್ಷಗಳನ್ನು ಅಧಿಕಾರಕ್ಕೆ ತಂದುಕೊಳ್ಳಬೇಕಾದರೆ ಈ ಬಗೆಯ ಬದಲಾವಣೆಗಳನ್ನು ಮಾಡಿದರೆ ಸಾಧ್ಯವಿಲ್ಲ. ಏಕೆಂದರೆ ಭಾರತದಲ್ಲಿ ಹಿಂದೂ ಧರ್ಮವು ಅತ್ಯಂತ ಪ್ರಭಲವಾಗಿ ಬೇರೂರಿರುವುದರಿಂದ ಅದರ ನಿಯಮಗಳನ್ನು ವ್ಯವಸ್ಥೆಯಲ್ಲಿನ ಎಲ್ಲಾ ಜನರು ಪಾಲಿಸುತ್ತಿರುವುದರಿಂದಾಗಿ ಆ ಎಲ್ಲಾ ಜನರ ವಿರೋಧವನ್ನು ಎದುರಿಸಬೇಕಾದ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಹಿಂದೂ ಧರ್ಮದ ವಿರುದ್ಧ ಚಲಿಸಬೇಕಾದ ಅನಿವಾರ್ಯತೆ ಒದಗಿಬರುತ್ತದೆಂಬ ಭಯದಿಂದಾಗಿ ಮತ್ತು ಭಾರತದಲ್ಲಿನ ಬಹು ಸಂಖ್ಯಾತರು ಪುರುಷರೇ ಆಗಿದ್ದರಿಂದ ಮತ್ತು ಕುಟುಂಬದ ಯಜಮಾನರು ಅವರೇ ಆಗಿದ್ದರಿಂದಾಗಿ ಅವರುಗಳು ಈ ಬಗೆಯ ಬದಲಾವಣೆಯನ್ನು ಬಯಸುವುದಿಲ್ಲ. ಮತ್ತು ಪಿತೃಪ್ರಧಾನ ವ್ಯವಸ್ಥೆಯಾಗಿದ್ದರಿಂದಾಗಿ ಮಹಿಳೆಯರ ಹಕ್ಕುಗಳಿಗೆ ಮಾನ್ಯತೆಯನ್ನು ನೀಡುವುದಿಲ್ಲ. ಮತ್ತು ಈ ಬಗೆಯ ಕಾನೂನುಗಳನ್ನೇನಾದರೂ ಜಾರಿಗೊಳಿಸಿದರೆ ಸರ್ಕಾರ ಉರುಳುತ್ತದೆ ಎಂಬ ಭಯದ ಕಾರಣವಾಗಿ ಈ ಮಸೂದೆಗೆ ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಇವರ ಮುಖ್ಯ ಉದ್ದೇಶ ಸರ್ಕಾರವನ್ನು ಉಳಿಸಿಕೊಳ್ಳುವುದೇ ಆಗಿದ್ದರೂ ಪರೋಕ್ಷವಾಗಿ ಮಹಿಳೆಯರ ಸ್ವಾತಂತ್ರ್ಯ ವನ್ನು ಒಪ್ಪಿಕೊಳ್ಳದಿರುವುದನ್ನು ಮತ್ತು ಲಿಂಗ ಸಮಾನತೆ ನೆಲೆಯ ಸಂವಿದಾನದ ಆಶಯಕ್ಕೆ ವಿರೊಧಿಸುತ್ತಿರುವುದನ್ನು ಕಾಣಬಹುದಾಗಿದೆ. ಹೀಗೆ ಮಾಡುವುದರ ಮೂಲಕ ಪಿತೃಪ್ರಧಾನ ವ್ಯವಸ್ಥೆಯನ್ನು ಮತ್ತೆ ಸ್ಥಿರೀಕರಿಸುವ ಕೆಲಸಕ್ಕೆ ಮುಂದಾಗಿರುವುದು ಕಂಡು ಬರುತ್ತದೆ.

ಇವುಗಳ ಜೊತೆಗೆ ಈ ಮಸೂದೆಯನ್ನು ವಿರೋಧಿಸಲು ಇನ್ನು ಹಲವು ಪ್ರಮುಖ ಕಾರಣಗಳಿದ್ದವು ಈ ತಿದ್ದುಪಡಿಯಿಂದಾಗಿ ಹೆಣ್ಣಿನ ಪರಿಸ್ಥಿತಿ ಸುಧಾರಿಸುವ ಬದಲು ಅವಳ ಬದುಕು ದುರ್ಭರವಾಗುತ್ತದೆ. ತವರು ಮನೆಯೊಂದಿಗೆ ಆಕೆಗೆ ಇರುವ ಸೌಹಾರ್ದಯುತ ಸಂಬಂಧ ಕೊನೆಗಾಣುತ್ತದೆ. ಮನೆಯ ಹೆಣ್ಣು ಮಗಳ ಕಷ್ಟದಲ್ಲಿ ಆಸರೆಯಾಗಿ ಬಾಗಿಯಾಗುತ್ತಿದ್ದ ಅಣ್ಣ ತಮ್ಮಂದಿರು ಆಸ್ತಿಯ ಕಾರಣಕ್ಕೆ ದೂರವೇ ಉಳಿಯಬಹುದು ಎಂದು ಕೆಲವರು ಶಂಕಿಸಿದ್ದಾರೆ. ಈ ತಿದ್ದುಪಡಿಯಿಂದಾಗಿ ವಿಧವೆಯರಿಗೆ ಮತ್ತು ಅವಿವಾಹಿತರಿಗೆ ಸಹಾಯ ವಾಗಬಹುದು. ಆದರೆ ವಿವಾಹಿತ ಮಹಿಳೆಗೆ ಗಂಡನಿಂದ ಕಿರುಕುಳ ಪ್ರಾರಂಭವಾಗಬಹುದು. ತವರು ಮನೆಯಿಂದ ಆಸ್ತಿಯಲ್ಲಿ ಪಾಲು ಪಡೆಯುವಂತೆ ಆಕೆಯ ಮೇಲೆ ಒತ್ತಡ

ಹೇರಬಹುದು ಎಂಬ ಆತಂಕವನ್ನೂ ಮುಂದಿಟ್ಟಿದ್ದರು. ಇನ್ನೊಂದು ಪ್ರಮುಖ ಕಾರಣವೆಂದರೆ ಮಗಳಿಗೆ ಅವಳ ಪಾಲನ್ನು ಕೊಟ್ಟರೆ ಅದು ಭೂಮಿ ಆಸ್ತಿಯಾಗಿದ್ದರೆ ಅದರಿಂದ ನೆಲವು ತುಂಡು ತುಂಡಾಗುತ್ತದೆ ಎಂಬ ವಾದವನ್ನೂ ಮಂಡಿಸಿದ್ದರು.

ಇದಕ್ಕೆ ಉತ್ತರವಾಗಿ ಹನ್ಸಾ ಮೆಹೆತಾರವರು "ಮಗಳಿಗೆ ಆಸ್ತಿ ಬರುವ ವಿಷಯದಲ್ಲಿ ಮಾತ್ರ ಈ ವಾದ ಏಕೆ ಮುಂದೆ ಬಂದಿದೆ? ಒಬ್ಬ ವ್ಯಕ್ತಿಗೆ ಒಬ್ಬನಿಗಿಂತ ಹೆಚ್ಚು ಪುತ್ರರಿದ್ದರೆ ಇದೇ ವಿಷಯ ಅನ್ವಯವಾಗುವುದಿಲ್ಲವೇ? ಅವನಿಗೆ ನಾಲ್ಕೋ ಐದೋ ಜನ ಗಂಡು ಮಕ್ಕಳಿದ್ದರೆ ಆಗಲೂ ನೆಲವು ತುಂಡು ತುಂಡಾಗುತ್ತದೆ. ಆಗ ಏಕೆ ಈ ವಾದವನ್ನು ಮುಂದಿಡಲಿಲ್ಲ. ಮಗಳು ಆಸ್ತಿಯನ್ನು ಪಡೆಯುವ ಸಂದರ್ಭ ಬಂದಾಗ ಏಕೆ ಮುಂದೊಡ್ಡಲಾಗುತ್ತಿದೆ?"[೧೦] ಎಂದು ವಾದಿಸಿದರು. ಹನ್ಸಾ ಮೆಹೆತಾರವರು ಎತ್ತಿದ ಪ್ರಶ್ನೆಗಳು ಅಮೂಲ್ಯವಾದವುಗಳು. ಏಕೆಂದರೆ ಸಂಪ್ರದಾಯವಾದಿಗಳು ಅವಿಭಕ್ತ ಕುಟುಂಬ ಪದ್ಧತಿಗೆ ಅಂಟಿಕೊಂಡಿದ್ದು, ಕುಟುಂಬದಲ್ಲಿ ಮಹಿಳೆಯರು ದಾಸಿಯರಾಗಿಯೇ ಜೀವಿಸುವುದನ್ನು ಅವರು ಒಪ್ಪುತ್ತಾರೆ. ಒಂದುವೇಳೆ ಮಹಿಳೆಯರಿಗೇನಾದರೂ ಆಸ್ತಿಯಲ್ಲಿ ಪಾಲು ದೊರೆತರೆ ಅವರು ಆ ಕುಟುಂಬದಲ್ಲಿ ಪುರುಷನ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ ಮತ್ತು ಅವರ ಹಕ್ಕುಗಳ ಬಗೆಗೆ ಪ್ರಜ್ಞಾವಂತರಾಗುತ್ತಾರೆ ಎಂಬ ಭಯ ಅವರನ್ನು ಕಾಡಿರದಿರದು. ಆ ಕಾರಣಕ್ಕಾಗಿಯೇ ಈ ಮಸೂದೆಯನ್ನು ವಿರೋಧಿಸಲು ಹಲವಾರು ಕಾರಣಗಳನ್ನು ನೀಡುತ್ತಿರುವುದು ಕಂಡುಬರುತ್ತದೆ. ಇಲ್ಲಿ ಸಂಪ್ರದಾಯವಾದಿಗಳಿಗೆ ಭೂಮಿ ತುಂಡಾಗುವ ಆತಂಕಕ್ಕಿಂತ ಮಹಿಳೆಯರು ಆರ್ಥಿಕವಾಗಿ ಸಬಲರಾಗುತ್ತಾರಲ್ಲಾ ಎಂಬ ಆತಂಕ ಹೆಚ್ಚು ಕಾಡಿದೆ ಎಂದೇ ಹೇಳಬಹುದು. ಅಂದರೆ ವ್ಯವಸ್ಥೆಯಲ್ಲಿ ಆರ್ಥಿಕ ಸದೃಡತೆ, ಅಧಿಕಾರ, ಆಡಳಿತ ಇವುಗಳು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರು ಪುರುಷನಷ್ಟೇ ಸಮಪಾಲನ್ನು ಪಡೆದುಕೊಂಡರೆ ಅವರು ಆರ್ಥಿಕವಾಗಿ ಸದೃಡರಾದಂತೆಯೇ. ಅಂದರೆ ಭೂಮಿಯ ಮೇಲಿನ ಸಂಪೂರ್ಣವಾದ ಹಕ್ಕು ಅವರಿಗೆ ದೊರೆಯುತ್ತದೆ. ಆಗ ಅವರು ಪುರುಷರ ಮೇಲೆ ಅಧಿಕಾರವನ್ನು ಚಲಾಯಿಸುತ್ತಾರೆ ಮತ್ತು ಕುಟುಂಬದ ಆಡಳಿತದಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಾರೆ. ಆಗ ಪುರುಷರು ಕುಟುಂಬದಲ್ಲಿನ ಅಧಿಕಾರದಿಂದ ವಂಚಿತರಾಗುತ್ತಾರೆ ಎಂಬ ಕಾರಣಕ್ಕಾಗಿ ಈ ಬಗೆಯ ತಂತ್ರಗಳನ್ನು ಹೂಡುವುದು ಕಂಡುಬರುತ್ತದೆ.

ಇದೇ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀಮತಿ ಸುಚೇತಾ ಕೃಪಲಾನಿಯವರೂ ಕೆಲವು ಸಲಹೆಗಳನ್ನು ನೀಡಿದ್ದಾರೆ. "ನಾವು ಯಾವುದೇ ಬದಲಾವಣೆಗಳನ್ನು ಮಾಡಿದಾಗ ಈಗಾಗಲೇ ನೆಲೆಗೊಂಡಿರುವ ಸಂಪ್ರದಾಯಗಳು, ನಿಯಮಗಳು ಅಸ್ತವ್ಯಸ್ತಗೊಳ್ಳಬಹುದು. ಅವುಗಳನ್ನು ಸಹಿಸಿಕೊಳ್ಳಬೇಕು. ಸ್ಮೃತಿಗಳು ಮಹಿಳೆಯರಿಗೆ ಆಸ್ತಿ ಹಕ್ಕನ್ನು ಮಾನ್ಯ ಮಾಡಿವೆ ಎಂದು ಡಾ.ಅಂಬೇಡ್ಕರ್ ಮತ್ತು ಇತರರು ಹೇಳಿದ್ದಾರೆ. ಯಾವುದನ್ನು ಕಾನೂನು ಕೊಟ್ಟಿದೆಯೋ, ರೂಢಿ ಅದನ್ನು ವಂಚಿಸಿದೆ. ರೂಢಿಯಿಂದ ಆ ಹಕ್ಕಿನ ಉಲ್ಲಂಘನೆಯಾಗಿದೆ. ನಾವು ಅದನ್ನು ಮತ್ತೆ

ಕೊಡಲು ಪ್ರಯತ್ನಿಸುತ್ತಿದ್ದೇವೆ. ಹಿಂದೂ ಧರ್ಮದ, ಹಿಂದೂ ನ್ಯಾಯ ಪದ್ಧತಿಯ, ಹಿಂದೂ ಸಂಪ್ರದಾಯದ ಮೂಲಭೂತ ತತ್ವಗಳ ವಿರುದ್ಧ ನಾವು ಹೋಗುತ್ತಿಲ್ಲ. ಹಿಂದೂ ನ್ಯಾಯ ಪದ್ಧತಿಯು ನಮಗೆ ಏನನ್ನು ಕೊಟ್ಟಿತ್ತೋ, ಅದು ನಮಗೆ ಸಿಗದಂತೆ ವಂಚಿಸಲಾಗಿತ್ತೋ ಅದನ್ನು ಮತ್ತೆ ಪಡೆಯಲು ನಾವು ಪ್ರಯತ್ನ ಮಾಡುತ್ತಿದ್ದೇವೆ. ಅಂದರೆ ಈ ಎಲ್ಲಾ ವರ್ಷಗಳಲ್ಲಿ ಸಮಾಜವು ಕೊಡದೇ ವಂಚಿಸಿತ್ತೋ ಅದನ್ನೇ ನೀವು ಈಗ ನಮಗೆ ಕೊಡುತ್ತಿದ್ದೀರಿ. ಬಹಳ ಕಾಲದಿಂದ ಕೊಡದಿದ್ದ ನ್ಯಾಯ ಅದು”[೧೧] ಎಂದು ಹೇಳುತ್ತಾರೆ. ಅಂದರೆ ಹಿಂದಿನಿಂದಲೂ ಮಹಿಳೆಯರಿಗಾಗಿಯೇ ಕೆಲವು ನಿಯಮಗಳನ್ನು, ರೂಢಿ ಸಂಪ್ರದಾಯಗಳನ್ನು ರೂಪಿಸಲಾಗಿದೆ. ಆದರೆ ಅವುಗಳನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಕೆಲವನ್ನು ಹೊರತುಪಡಿಸಿ ಅಂದರೆ ಪುರುಷಶಾಹಿ ವ್ಯವಸ್ಥೆಗೆ ಪೂರಕವಾದವುಗಳನ್ನು ಹೊರತುಪಡಿಸಿ ಮಿಕ್ಕೆಲ್ಲವುಗಳನ್ನು ರೂಢಿಗತಗೊಳಿಸಲೇ ಇಲ್ಲ. ಅವುಗಳನ್ನು ಹಾಗೆಯೇ ಕಿತ್ತುಕೊಳ್ಳಲಾಗಿದೆ. ಅಂದರೆ ಕುಟುಂಬ ದಲ್ಲಿನ ಹಕ್ಕು ಬಾಧ್ಯತೆಗಳೆಲ್ಲವೂ ಅಲಿಖಿತವಾಗಿ ಬಂದಿರುತ್ತವೆ. ವ್ಯವಸ್ಥೆಯಲ್ಲಿ ಯಾವುದೇ ನಿಯಮಗಳು ರೂಪಿಸಲ್ಪಟ್ಟರೂ ಅವು ಪುರುಷನಿಗೆ ಪೂರಕವಾಗಿರುತ್ತವೆ ಇದಕ್ಕೆ ಕಾರಣ ಅವು ಗಳನ್ನು ರೂಪಿಸುವವನು ಪುರುಷನೇ ಆಗಿರುತ್ತಾನೆ. ಹಾಗಾಗಿ ಹಕ್ಕುಗಳೆಲ್ಲಾ ಪುರುಷನಿಗೆ ಮತ್ತು ಬಾಧ್ಯತೆಗಳೆಲ್ಲಾ ಮಹಿಳೆಯರದು ಎಂಬಂತಾಗಿಬಿಟ್ಟಿದೆ. ಹಾಗೆಯೇ ಮಹಿಳೆ ವಿವಾಹ ಎಂಬ ಚೌಕಟ್ಟಿನಡಿ ಸಿಲುಕಿ ಪಾತಿವ್ರತ್ಯದ ಮೌಲ್ಯಗಳನ್ನು ಪಾಲಿಸುವ ಹಾಗೂ ಅವುಗಳನ್ನೇ ರೂಢಿಗತವಾಗಿ ಬೆಳೆಸಿಕೊಂಡು ಹೋಗುವ ಕಾರ್ಯಕ್ಕೆ ಮುಂದಾದುದು, ಕುಟುಂಬದ ಚೌಕಟ್ಟಿನಲ್ಲಿ ಪಾವಿತ್ರತೆಯನ್ನು ಕಾಯ್ದುಕೊಂಡು ಬಾಳುವಂತಾದುದು, ಇವುಗಳು ಮಹಿಳೆಯರನ್ನು ವ್ಯವಸ್ಥೆಯಲ್ಲಿ ಪರಾವಲಂಬಿತನಕ್ಕೆ ದೂಡಿದವು. ಹಾಗಾಗಿ ವ್ಯವಸ್ಥೆಯಲ್ಲಿ ಯಾವುದೇ ಕಾನೂನಾಗಲೀ ಅಥವಾ ನಿಯಮಗಳಾಗಲೀ ಜಾರಿಯಾದರೆ ಅವುಗಳೆಲ್ಲವೂ ಪುರುಷರಿಗೆ ಪೂರಕವಾಗಿ ಮತ್ತು ಮಹಿಳೆಯರಿಗೆ ಮಾರಕವಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಈ ಸಂಪ್ರದಾಯಗಳು ರೂಢಿಯಾಗಿ ಬರಬೇಕದರೆ ಅದಕ್ಕೆ ಮಹಿಳೆರನ್ನೇ ವಾಹಕಗಳಂತೆ ಬಳಸಿಕೊಳ್ಳಲಾಗುತ್ತದೆ. ಮುಖ್ಯವಾಗಿ ಹಿಂದಿನಿಂದಲೂ ಸಂಪ್ರದಾಯ, ರೂಢಿಗಳ ಹೆಸರಿನಲ್ಲಿ ಮಹಿಳೆರ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ಕಿತ್ತುಕೊಳ್ಳಲಾಗಿದೆ. ಅವುಗಳನ್ನು ಪುನಃ ಹಿಂದೂ ಕೋಡ್ ಬಿಲ್ಲಿನ ರೂಪದಲ್ಲಿ ಮಹಿಳೆಯರಿಗೆ ನೀಡುವುದರಲ್ಲಿ ತಪ್ಪಿಲ್ಲ ಎಂಬುದು ಅವರ ವಾದವಾಗಿತ್ತು.

ಹಿಂದಿನಿಂದಲೂ ಮಹಿಳೆಯರನ್ನು ಸಂಪ್ರದಾಯ, ಆಚರಣೆ, ಪದ್ಧತಿ ಎಂಬವುಗಳಿಂದಲೇ ಅವರನ್ನು ಒಂದು ವ್ಯವಸ್ಥೆಗೆ ಕಟ್ಟಿ ಹಾಕಿರುವುದು ಕಂಡುಬರುತ್ತದೆ. ಈಗಲಾದರೂ ಅವುಗಳಿಂದ ಹೊರಬರಲು ಇದೊಂದು ಒಳ್ಳೆಯ ಅವಕಾಶ ಎಂಬ ಮಾತನ್ನು ಸ್ತ್ರೀವಾದದ ನೆಲೆಯಲ್ಲಿ ಹೇಳಿರುವುದನ್ನು ಕಾಣಬಹುದು.

ಈ ರೀತಿಯ ವಿರೋಧಿ ಅಭಿಪ್ರಾಯಗಳು ಆಸ್ತಿ ಹಕ್ಕಿನ ವಾರಸುದಾರಿಕೆಗೆ ಸಂಬಂಧಿಸಿದಂತೆ ಮಗಳಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುತ್ತಿರುವುದೇ ಆಗಿತ್ತು. ಹೀಗೆ ಹಿಂದೂಕೋಡ್ ಬಿಲ್‌ನ್ನು ಡಾ.ಅಂಬೇಡ್ಕರರು ಶಾಸನ ಸಭೆಯಲ್ಲಿ ಮಂಡಿಸಿದ ನಂತರ ಅದರ ಮೇಲೆ ಬಹಳಷ್ಟು ಚರ್ಚೆಗಳು ನಡೆದವು. ಈ ಎಲ್ಲಾ ಚರ್ಚೆಗಳು ಹಿಂದೂ ಕೋಡ್ ಬಿಲ್ಲನ್ನು ಸೂಕ್ಷ್ಮ ಗೊಳಿಸುತ್ತಿದ್ದವು. ಹೀಗೆ ಸದನದಲ್ಲಿ ಹಿಂದೂ ಕೋಡ್ ಬಿಲ್ ಜಾರಿಗೆ ಸಂಬಂಧಿಸಿದಂತೆ ಹಲವಾರು ಚರ್ಚೆಗಳು ನಡೆದವು. ಅಂತಿಮವಾಗಿ ಹಿಂದೂ ಕೋಡ್ ಬಿಲ್‌ನ ಮೊದಲನೆಯ ಭಾಗವನ್ನು ಮಾತ್ರ ಸಮಿತಿಯು ಪುರಸ್ಕರಿಸಿತು. ಮಹಿಳಾ ಆಸ್ತಿಗೆ ಸಂಬಂಧಿಸಿದ ಭಾಗವನ್ನು ಬಹಳಷ್ಟು ಜನ ವಿರೋಧಿಸಿದ್ದರಿಂದಾಗಿ ಅದನ್ನು ಇನ್ನೂ ಕೆಲವು ದಿನಗಳ ಕಾಲ ಮುಂದೂಡಿತು. ಆದರೂ ಈ ವಿರೋಧಗಳ ನಡುವೆಯೇ ಡಾ.ಅಂಬೇಡ್ಕರರು ಇದನ್ನು ಸಮರ್ಥಿಸುವ ಸಲುವಾಗಿ ಹೀಗೆ ಹೇಳುತ್ತಾರೆ. “ ಮಹಿಳೆಯ ಆಸ್ತಿಹಕ್ಕನ್ನು ಸಮರ್ಥಿಸುವ ಬೃಹಸ್ಪತಿಯನ್ನು, ವಿಚ್ಛೇಧನ ಸಿದ್ಧಾಂತವನ್ನು ಪ್ರತಿಪಾದಿಸುವ ಪರಾಶರ ಸ್ಮೃತಿಯನ್ನು ಹಿಂದೂ ಮೂಲಭೂತವಾದಿ ಮುಖಂಡರ ಮುಂದೆ ಎತ್ತಿ ಹಿಡಿದರು. ಇದು ಹಿಂದೂ ಕೋಡ್ ಬಿಲ್ಲಿನಲ್ಲಿರುವ ತಮ್ಮ ಸಿದ್ಧಾಂತದ ಮೂಲಭೂತ ಸತ್ಯ ಎಂದು ನುಡಿದರು”[೧೨] ಹಾಗೆಯೇ ಅಂದಿನ ಪ್ರಧಾನ ಮಂತ್ರಿಗಳಾಗಿದ್ದಂತಹ ಜವಾಹರಲಾಲ್ ನೆಹರೂರವರು ಇದನ್ನು ಜಾರಿಗೊಳಿಸಲು ಪ್ರತ್ನಿಸಿದರು. ಆದರೆ ಪಿತೃಪ್ರಧಾನ, ಜಾತಿ ಪ್ರಧಾನ ಗುಣಗಳನ್ನು ಸಮರ್ಥಿಸುವ ಮನಸ್ಸುಗಳ ಪ್ರತಿರೋಧವನ್ನು ಎದುರಿಸಬೇಕಾಯಿತು. ಹಾಗಾಗಿ ಹಿಂದೂ ಕೋಡ್ ಬಿಲ್‌ನ ಎರಡನೆಯ ಭಾಗ ಜಾರಿಯಾಗಲೇ ಇಲ್ಲ. ಇದರಿಂದ ತುಂಬಾ ಬೇಸರಗೊಂಡ ಡಾ. ಅಂಬೇಡ್ಕರರು ಸಂಸತ್ತಿನ ನಿಲುವನ್ನು ವಿರೋಧಿಸಿ ತಮ್ಮ ಕಾನೂನು ಮಂತ್ರಿ ಪದವಿಗೆ ಸೆಪ್ಟೆಂಬರ್ ೨೭, ೧೯೫೧ರಂದು ರಾಜೀನಾಮೆ ನೀಡಿದರು. ಮಹಿಳೆಯರ ಮೂಲಭೂತ ಹಕ್ಕಿಗಾಗಿ ಹೋರಾಡಿ ಅವರ ಪರವಾಗಿ ಧ್ವನಿಯೆತ್ತಿ ಮಂತ್ರಿ ಪದವಿಗೆ ರಾಜೀನಾಮೆ ನೀಡಿದ ನಾಯಕರಲ್ಲಿ ಡಾ.ಅಂಬೇಡ್ಕರರೇ ಮೊದಲಿಗರು ಮತ್ತು ಕೊನೆಯವರು ಎಂದು ಹೇಳಿದರೆ ತಪ್ಪಾಗಲಾರದು. ಅಂದಿನ ಸಂದರ್ಭದಲ್ಲಿ ಇವರು ತಳೆದ ಅಚಲ ನಿಲುವು ಎಲ್ಲರನ್ನೂ ಧಿಗ್ಭ್ರಮೆಗೊಳಿಸುತ್ತದೆ. ಹಾಗೆಯೇ ವ್ಯವಸ್ಥೆಯಲ್ಲಿನ ಲಿಂಗ ಅಸಮಾನತೆಯನ್ನು ಹೋಗಲಾಡಿಸಲು ಮತ್ತು ಮಹಿಳೆಯರ ಕುರಿತಂತೆ ಇರುವ ತಾರತಮ್ಯವನ್ನು ಹೋಗಲಾಡಿಸಲು ಕಾನೂನುಗಳಲ್ಲಿ ಲಿಂಗ ಸಮಾನತೆಯನ್ನು ತರುವುದೊಂದೇ ಮಾರ್ಗ ಎಂಬುದನ್ನು ನಂಬಿದ್ದರು. ೧೯೫೬ರ ನಂತರ ಹಿಂದೂ ಸಂಹಿತೆಯ ವಿಧೇಯಕದ ಪ್ರಮುಖ ಅಂಶಗಳು ನಾಲ್ಕು ಪ್ರತ್ಯೇಕ ಅಧಿನಿಯಮಗಳಾಗಿ ಜಾರಿಗೊಂಡವು. ಅವುಗಳಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ ಕೂಡ ಒಂದಾಗಿತ್ತು.

ಅಂಬೇಡ್ಕರರು ಮಹಿಳೆಯರ ಅಭಿವೃದ್ಧಿಯ ಪರವಾಗಿ ಮತ್ತು ಅವರ ಸ್ವಾತಂತ್ರಕ್ಕಾಗಿ ಯಾವ ಧೋರಣೆಯನ್ನು ತಳೆದಿದ್ದರು ಎಂಬುದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ, ೧೯೫೬ರಲ್ಲಿ ಅಂಬೇಡ್ಕರರು ಸಿದ್ಧಾರ್ಥ ಕಾಲೇಜಿನಲ್ಲಿ ಮಾತನಾಡುತ್ತಿದ್ದ ಸಂದರ್ಭದಲ್ಲಿ

“ಹಿಂದೂ ವಿವಾಹ ಕಾಯಿದೆಯ ಕೊನೆಯ ಬದಲಾವಣೆ ಮಹಿಳೆಯ ಆಸ್ತಿ ಹಕ್ಕಿಗೆ ಸಂಬಂಧಿಸಿದ್ದು. ೧೯೩೭ಕ್ಕೆ ಮುನ್ನ ಆಕೆ ಒಂದು ಕುಟುಂಬದ ಸೊಸೆಯಾಗಲೀ ಅಥವಾ ವಿಧವೆ ಸೊಸೆಯಾಗಲೀ ಆ ಕುಟುಂಬದಲ್ಲಿ ಆಸ್ತಿಯ ಪಾಲನ್ನು ಕೇಳುವಂತಿರಲಿಲ್ಲ. ಆದರೆ ೧೯೩೭ರ ಕಾಯಿದೆಯಲ್ಲಿ ವಿಧವೆಗೆ ತಮ್ಮ ಮೃತ ಪತಿಯ ಆಸ್ತಿಯ ಹಕ್ಕನ್ನು ನೀಡಿತು. ಆದರೆ ಮಹಿಳೆಯ ಆಸ್ತಿ ಅಪೂರ್ಣವಾಗಿತ್ತು. ಆದರೆ ಈಗ ಹಿಂದೂ ವಿವಾಹ ಕಾಯಿದೆಯ ಮೂಲಕ ಮನೆಯ ಮಗಳಿಗೂ ಸಹ ಮಗನಷ್ಟೇ ಆಸ್ತಿ ಮೇಲೆ ಹಕ್ಕು ಇರುವ ಸಂಗತಿಯನ್ನು ಒಳಗೊಂಡಿದೆ. ಇದು ಸಮಾಜದಲ್ಲಿ ಅಳವಡಿಸಲಾಗಿರುವ ಮೌಲ್ಯಗಳನ್ನು ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದಿರುವ ಜಾತಿ ಪದ್ಧತಿಯಲ್ಲಿನ ಅಮೂಲಾಗ್ರ ಬದಲಾವಣೆಗೆ ಸಾಧ್ಯವಾಗುವುದೆಂದು ಹಿಂದೂ ಕೋಡ್ ಬಿಲ್ಲನ್ನು ರೂಪಿಸಲಾಗಿದೆ.”[೧೩] ಎಂದರು. ಈ ಕಾಯಿದೆ ಜಾರಿಗೆ ಬರುವಲ್ಲಿ ಡಾ.ಅಂಬೇಡ್ಕರರ ಪಾತ್ರ ಬಹು ದೊಡ್ಡದಿದೆ. ಇದು ಮಹಿಳೆಯರ ಕುರಿತಾದ ಅವರ ಕಾಳಜಿಯನ್ನು ತೋರಿಸುತ್ತದೆ.

ಸಂವಿದಾನ ರಚನೆಯಾದ ಸಂದರ್ಭದಿಂದ ಹಿಡಿದು ಪ್ರಸ್ತುತ ಸಂದರ್ಭದವರೆಗೂ ಮಹಿಳಾ ಪರವಾದ ಯಾವುದೇ ಕಾನೂನು ರಚನೆಯಾಗಿದ್ದರೂ ಸಹ ಅದು ಲಿಂಗ ಅಸಮಾನತೆ ಯಿಂದ ಮುಕ್ತವಾಗಿಲ್ಲದಿರುವುದು ಕಂಡುಬರುತ್ತದೆ. ಹಾಗಾಗಿ ಕಾನೂನು ರಚನೆಯ ಹಂತದಲ್ಲಿರಬಹುದು ಅಥವಾ ಅದನ್ನು ಜಾರಿಗೊಳಿಸುವ ಹಂತದಲ್ಲಿರಬಹುದು ಪ್ರತೀ ಹಂತದಲ್ಲಿಯೂ ಮಹಿಳೆಯರು ಹಿಂಸೆಯನ್ನು ಅನುಭವಿಸುವಂತಾಗಿದೆ. ಆಸ್ತಿ ಹಕ್ಕಿನ ಕಾನೂನನ್ನು ರಚಿಸುವ ಹಂತದಲ್ಲಿಯೇ ಈ ಬಗೆಯ ವಿರೋಧಗಳು ಸಂಪ್ರದಾಯವಾದಿಗಳಿಂದ ಎದುರಿಸಬೇಕಾಯಿತು. ಅಂಬೇಡ್ಕರರು ಈ ಅಸಮಾನತೆಯ ಮನಸ್ಸುಗಳನ್ನು ಒಪ್ಪಿಸಲು ನಾನಾ ಪ್ರಯತ್ನಗಳನ್ನು ಮಾಡಿದರಾದರೂ ಆ ಸಂದರ್ಭಕ್ಕೆ ಅವರ ಒತ್ತಾಸೆಗೆ ಬೆಲೆ ಇಲ್ಲದಂತಾಗಿತ್ತು. ಹಾಗಾಗಿಯೇ ಅವರು ಇದರಿಂದ ಬೇಸರಗೊಂಡು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟಿದ್ದರು. ಅಂದರೆ ಸಾಂಪ್ರದಾಯಿಕ ಮನಸ್ಸುಗಳು ಅಥವಾ ಮನುವಾದಿಗಳು ಎಷ್ಟೊಂದು ಬಲಿಷ್ಠರಾಗಿರುತ್ತಾರೆ ಎಂದರೆ ಅವರು ತಾವು ಅಂದುಕೊಂಡಿದ್ದನ್ನು ಸಾಧಿಸಿಯೇ ತೋರಿಸುತ್ತಾರೆ. ಇಂತಹ ಆಲೋಚನೆಗಳಿಗೆ ಸಮಾಜವು ಒಪ್ಪಿಗೆ ನೀಡುವುದರಲ್ಲಿ ಹಿಂಜರಿಯುವುದಿಲ್ಲ. ಹಿಂದೂ ಕೋಡ್‌ಬಿಲ್‌ನ್ನು ಜಾರಿಗೆ ತರುವ ಸಲುವಾಗಿ ನಡೆದ ಚರ್ಚೆಗಳಲ್ಲಿ ಕಂಡುಬರುವ ಅಂಶಗಳು ಇಂದಿಗೂ ವ್ಯವಸ್ಥೆಯಲ್ಲಿ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ. ಅಂದರೆ ಇಂದು ಮಹಿಳೆಯರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಸಮ ಪಾಲು ನೀಡಬೇಕೆಂಬ ನಿಯಮ ಜಾರಿಯಲ್ಲಿದೆ ನಿಜ. ಆದರೆ ಅದನ್ನು ಪಡೆಯುವಲ್ಲಿ ಹಲವಾರು ತೊಂದರೆಗಳನ್ನು ಮಹಿಳೆಯರು ಎದುರಿಸುತ್ತಿರುವುದು ಕೂಡ ಅಷ್ಟೇ ಸತ್ಯ. (ಇಂದು ಜಾರಿಯಲ್ಲಿರುವ ಹಿಂದೂ ವಾರಸಾ ಅಧಿನಿಯಮದ ಪ್ರಕಾರ ಸ್ತ್ರೀ ಪುರುಷರಿಬ್ಬರೂ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಸಮ ಪಾಲನ್ನು ಪಡೆಯಬಹುದಾಗಿದೆ. ಆದರೆ ಇದರ ಲಾಭವನ್ನು ಪಡೆಯಲು ಮಹಿಳೆಯರಿಗೆ ಹಲವಾರು ಸಾಮಾಜಿಕ ತೊಡಕುಗಳು ಎದುರಾಗಿರುವುದು ಕಂಡುಬರುತ್ತಿದೆ. ಹಾಗಾಗಿ ಕ್ಷೇತ್ರಕಾರ್ಯದಲ್ಲಿ

ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಪ್ರಕರಣಗಳ ಉದಾಹರಣೆಯೊಂದಿಗೆ ಮುಂದಿನ ಹಂತದಲ್ಲಿ ವಿವರಿಸಲಾಗಿದೆ). ೧೯೫೬ರ ಸಂದರ್ಭದಲ್ಲಿ ಸದನದಲ್ಲಿ ಚರ್ಚಿತವಾದ ಅಂಶಗಳೇ ಮಹಿಳೆಯರಿಗೆ ಆಸ್ತಿಹಕ್ಕು ಸಿಗದಂತೆ ಮಾಡಿರುವುದು ಕಂಡುಬರುತ್ತದೆ. ಹಿಂದೂ ಕೋಡ್‌ಬಿಲ್ ಒಂದು ಉತ್ತಮ ಮಸೂದೆಯಾಗಿತ್ತಾದರೂ ಪಟ್ಟಭದ್ರ ಹಿತಾಸಕ್ತಿಗಳ ಕಾರಣವಾಗಿ ಅಂದು ಸಂಪೂರ್ಣವಾಗಿ ಜಾರಿಯಾಗಲಿಲ್ಲ. ಇದಕ್ಕೆ ಕಾರಣಗಳು ಹಲವು. ಮುಖ್ಯವಾಗಿ ಈ ಸಂಹಿತೆಯನ್ನು ತಿದ್ದುಪಡಿ ಮಾಡಲು ರಚಿಸಿದ ಸಮಿತಿಯಲ್ಲಿ ಒಟ್ಟು ೧೯ ಜನ ಸದಸ್ಯರಿದ್ದರು. ಇದರಲ್ಲಿ ೧೬ ಜನ ಪುರುಷರಿದ್ದರೆ, ಮಹಿಳೆಯರ ಸಂಖ್ಯೆ ಕೇವಲ ೩ ಮಾತ್ರ. ಈ ಸಮಿತಿಯ ತೀರ್ಮಾನವೇ ಮುಖ್ಯವಾಗಿತ್ತಾದ್ದರಿಂದ ಇಲ್ಲಿಯೇ ಮಹಿಳೆಯರ ಪ್ರಮಾಣ ತೀರಾ ಕಡಿಮೆ ಇದ್ದುದರಿಂದ ಬಹುಮತ ಪುರುಷರದ್ದೇ ಆಗಿರುತ್ತದೆ. ಮಹಿಳೆಯರ ಧ್ವನಿ ಕ್ಷೀಣಿಸುತ್ತದೆ. ಹಾಗಾಗಿಯೇ ಏನೋ ಆ ಸಂದರ್ಭದಲ್ಲಿ ಹಿಂದೂ ಸಂಹಿತೆ ಸಂಪೂರ್ಣವಾಗಿ ಜಾರಿಯಾಗಲಿಲ್ಲ. ಅದರಲ್ಲೂ ಆಸ್ತಿ ಹಕ್ಕಿನ ವಾರಸುದಾರಿಕೆಗೆ ಸಂಬಂಧಿಸಿದಂತೆ ಹಲವು ವಿರೋಧಗಳನ್ನು ಎದುರಿಸಬೇಕಾಯಿತು ಎಂದು ಹೇಳಬಹುದು. ಏನೇ ಆಗಲೀ ಕಾನೂನನ್ನು ರೂಪಿಸುವವರಿಗೆ ಲಿಂಗ ಸಮಾನತೆಯ ಅಥವಾ ಲಿಂಗ ಸೂಕ್ಷ್ಮತೆಯ ಕುರಿತಂತೆ ಅರಿವು ಇರಬೇಕಾದುದು ಮುಖ್ಯವಾಗಿರುತ್ತದೆ. ಅದರಲ್ಲೂ ಮಹಿಳೆಯರನ್ನು ಒಬ್ಬ ವ್ಯಕ್ತಿಯನ್ನಾಗಿ ನೋಡುವ ಮನೋಭಾವ ಇರಬೇಕಾದುದು ಅವಶ್ಯಕ. ಇವುಗಳು ಇಲ್ಲದೇ ಯಾವುದೇ ಕಾನೂನುಗಳು ಜಾರಿಯಾದರೂ ಅವು ನಿಷ್ಪ್ರಯೋಜಕ ಎಂದೆನಿಸಿಕೊಳ್ಳುತ್ತವೆ.

೧೯೫೬ರಲ್ಲಿ ಹಿಂದೂ ವಾರಸಾ ಅಧಿನಿಯಮ ಹೊಸ ರೂಪವನ್ನು ಪಡೆದುಕೊಂಡು ಜಾರಿಯಾಯಿತಾದರೂ ಅಲ್ಲಿಯೂ ಲಿಂಗ ಅಸಮಾನತೆಯ ಅಂಶಗಳು ಇರುವುದು ಕಂಡು ಬರುತ್ತದೆ. ಮುಖ್ಯವಾಗಿ ಹಿಂದೂ ಪುರುಷನು ಮರಣ ಹೊಂದುವಾಗ ಅವನು ಹೊಂದಿದ್ದ ಪಿತ್ರಾರ್ಜಿತ ಆಸ್ತಿಯಲ್ಲಿನ ಪಾಲು, ಉಳಿದ ಪುರುಷ ಸಹಭಾಗಿದಾರರಿಗೆ ಹೋಗದೇ ಅವನ ಮೊದಲ ವರ್ಗದ ಪುರುಷ ಸ್ತ್ರೀ ಸಂಬಂಧಿಕರಿಗೆ ಸಮಭಾಗದಲ್ಲಿ ಹೋಗುತ್ತದೆ. ಹಾಗೆಯೇ ಅವನ ಸ್ವಯಾರ್ಜಿತ ಸ್ವತ್ತು ಅವನ ಮೊದಲ ವರ್ಗದ ಪುರುಷ–ಸ್ತ್ರೀ ಸಂಬಂಧಿಕರಿಗೆ ಸಮಭಾಗವಾಗಿ ವಾರಸುದಾರಿಕೆಯಲ್ಲಿ ಬರುತ್ತಿತ್ತು. ಆದರೆ ಮಿತಾಕ್ಷರ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಹಾಗೆಯೇ ಉಳಿಸಿಕೊಂಡಿದ್ದರಿಂದ ಗಂಡು ಮಕ್ಕಳು ಹುಟ್ಟಿನೊಂದಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಪಡೆಯುವುದು, ಪಾಲು ಮಾಡುವಂತೆ ಕೇಳುವ ಹಕ್ಕು ಮುಂದುವರೆಯಿತು. ಆದರೆ ಈ ಹಕ್ಕುಗಳು ಅದೇ ಮನೆಯಲ್ಲಿ ಹುಟ್ಟುವ ಹೆಣ್ಣು ಮಕ್ಕಳಿಗೆ ಇರಲಿಲ್ಲ. ಹಾಗಾಗಿ ಹಿಂದೂ ಮಹಿಳೆಯರಿಗೆ ಸಮಾನ ಹಕ್ಕು ಮತ್ತು ಸ್ಥಾನಮಾನವನ್ನು ಕೊಡಬೇಕೆಂಬ ಉದ್ದೇಶ ಸಂಪೂರ್ಣವಾಗಿ ಈಡೇರಲಿಲ್ಲ. ಹಾಗಾಗಿಯೇ ೧೯೯೦ರಲ್ಲಿ ನೆರೆಯ ಆಂದ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳು ತಮ್ಮ ತಮ್ಮ ರಾಜ್ಯ ತಿದ್ದುಪಡಿಗಳನ್ನು ತರುವುದರ ಮೂಲಕ ಹೆಣ್ಣು ಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹುಟ್ಟಿನಿಂದಲೇ ಸಮಪಾಲು

ಕೊಡುವ ಅವಕಾಶವನ್ನು ಕಲ್ಪಿಸಿದವು. ಕರ್ನಾಟಕ ರಾಜ್ಯವೂ ಸಹ ಇದಕ್ಕೆ ಹಿಂದೆ ಬೀಳದೆ ೧೯೯೪ರ ಜುಲೈ ೩೦ರಂದು ರಾಷ್ಟ್ರಪತಿಗಳ ಒಪ್ಪಿಗೆಯನ್ನು ಪಡೆದುಕೊಂಡು ಈ ಕಾನೂನನ್ನು ಜಾರಿಗೆ ತಂದಿತು. ಆದರೂ ಈ ಕಾನೂನಿನ ತಿದ್ದುಪಡಿಯಲ್ಲಿಯೂ ಸಹ ಲಿಂಗ ಅಸಮಾನತೆಯ ಹಲವು ಪ್ರಶ್ನೆಗಳು ಹಾಗೆಯೇ ಉಳಿದುಕೊಂಡವು. ಮುಖ್ಯವಾಗಿ ಮಹಿಳೆಗೆ ಬೇಕಾದಾಗ ಆಸ್ತಿ ವಿಭಾಗ ಮಾಡುವಂತೆ ಕೇಳಲು ಅಧಿಕಾರವನ್ನು ಕೊಟ್ಟಿರಲಿಲ್ಲ. ಮಹಿಳೆ ಕುಟುಂಬದಲ್ಲಿ ಮದುವೆಗೆ ಮುಂಚಿತವಾಗಿ ಅಥವಾ ಮದುವೆಯ ನಂತರದಲ್ಲಿ ಕುಟುಂಬದ ಸಹಭಾಗಿದಾರಳಾದರೆ ಕುಟುಂಬದ ಮುಖ್ಯಸ್ಥಳಾಗಿ, ಕುಟುಂಬದ ನಿರ್ವಹಣೆ ಮಾಡಲು ಅಧಿಕಾರವಿರಲಿಲ್ಲ. ಹೀಗೆ ಅನೇಕ ಬಗೆಯ ಅಂಶಗಳು ತಾರತಮ್ಯದ ನೆಲೆಯಲ್ಲಿ ಗುರುತಿಸ ಬಹುದಾಗಿದೆ. ಮುಖ್ಯವಾಗಿ ಕಾನೂನನ್ನು ರೂಪಿಸುವ ಹಂತವೇ ಪ್ರಮುಖ ಘಟ್ಟವಾಗಿ ರುವುದರಿಂದ ಆ ಸಂದರ್ಭದಲ್ಲಿಯೇ ಈ ಬಗೆಯ ತಾರತಮ್ಯದ ಅಂಶಗಳನ್ನು ಕಿತ್ತೆಸೆಯುವ ಕೆಲಸವನ್ನು ಮಾಡಬೇಕಾಗುತ್ತದೆ. ಆದರೆ ಆ ಸಂದರ್ಭದಲ್ಲಿಯೇ ಅನೇಕ ಪಟ್ಟಭದ್ರ ಹಿತಾಸಕ್ತಿಗಳ ಕಾರಣವಾಗಿ ಲಿಂಗ ಅಸಮಾನತೆ ಎಂಬುದು ಹಾಗೆಯೇ ಉಳಿದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ೧೯೫೬ರ ಹಿಂದೂ ವಾರಸಾ ಅಧಿನಿಯಮವೇ ಮೂಲ ಕಾನೂನಾಗಿದೆ. ಇದಕ್ಕೆ ಹಲವು ತಿದ್ದುಪಡಿಗಳನ್ನು ಮಾತ್ರ ಮಾಡಲಾಯಿತು. ಆದರೂ ಈ ಲಿಂಗ ಅಸಮಾನತೆ ಎಂಬುದು ಎಷ್ಟೊಂದು ಬಲಿಷ್ಟವಾಗಿದೆ ಎಂಬುದು ಈ ತಿದ್ದುಪಡಿಗಳ ನಂತರವೂ ಉಳಿದು ಕೊಂಡಿರುವ ಅಂಶಗಳಿಂದ ತಿಳಿದುಬರುತ್ತದೆ. ಹಾಗಾಗಿಯೇ ಈ ಬಗೆಯ ಅಸಮಾನತೆಯನ್ನು ಹೋಗಲಾಡಿಸಲು ೨೦೦೫ರಲ್ಲಿ ಮತ್ತೊಮ್ಮೆ ಆಸ್ತಿಹಕ್ಕಿನ ಕಾನೂನಿಗೆ ತಿದ್ದುಪಡಿಯನ್ನು ತರಲಾಯಿತು. ಒಟ್ಟಾರೆಯಾಗಿ ಆಸ್ತಿಹಕ್ಕಿನ ಕಾನೂನು ರೂಪಿಸುವ ಸಂದರ್ಭದಲ್ಲಿ ಯಾವ ಯಾವ ಬಗೆಯಲ್ಲಿ ಲಿಂಗ ಅಸಮಾನತೆಯ ಅಂಶಗಳು ಕಂಡುಬಂದಿವೆ ಎಂಬುದನ್ನು ನೋಡಲಾಗಿದೆ. ಇನ್ನು ಜಾರಿಯಲ್ಲಿರುವ ಹಿಂದೂ ವಾರಸಾ ಅಧಿನಿಯಮ ಮಹಿಳೆಯರನ್ನು ನಿಜವಾಗಿಯೂ ತಲುಪಿದೆಯೇ ಎಂಬುದನ್ನು ಅಥವಾ ಇದರ ಲಾಭವನ್ನು ಮಹಿಳೆಯರು ಪಡೆದಿದ್ದಾರೆಯೇ ಅಥವಾ ಅನುಷ್ಠಾನದ ಸಂದರ್ಭದಲ್ಲಿ ಏನಾದರೂ ಲಿಂಗ ಅಸಮಾನತೆಯ ಮೌಲ್ಯಗಳಿಗೆ ಮಹಿಳೆಯರು ಒಳಗಾಗಿ ತಮ್ಮ ಆಸ್ತಿಯನ್ನು ಕಳೆದುಕೊಂಡಿದ್ದಾರೆಯೇ ಎಂಬುದನ್ನು ವಿಶ್ಲೇಷಿಸುವ ಅಗತ್ಯತೆ ಇದೆ.

### ೬.೨. ಆಸ್ತಿಹಕ್ಕು ಕಾನೂನು : ಅನುಷ್ಠಾನ ಸಂದರ್ಭದಲ್ಲಿನ ತೊಡಕುಗಳು

ಕಾನೂನನ್ನು ರೂಪಿಸುವ ಹಂತದ ಸಂದರ್ಭದಲ್ಲಿನ ತೊಡಕುಗಳು ಒಂದು ಬಗೆಯದ್ದಾದರೆ, ಹಾಗೆ ರೂಪುಗೊಂಡ ಕಾನೂನನ್ನು ಜಾರಿಗೆ ಅಥವಾ ಅನುಷ್ಠಾನಕ್ಕೆ ತರುವ ಪ್ರಕ್ರಿಯೆಯಲ್ಲಿಯೂ ಹಲವಾರು ತೊಡಕುಗಳು ಎದುರಾಗಿರುವುದು ಕಂಡುಬರುತ್ತದೆ. ಇದು ರೂಪಿಸುವ ಹಂತಕ್ಕಿಂತ ಹೆಚ್ಚಿನ ಸವಾಲಿನದ್ದಾಗಿರುತ್ತದೆ. ಈ ಹಿಂದೆ ವಿವರಿಸಿದಂತೆ ಆಸ್ತಿಹಕ್ಕಿನ ಕಾನೂನನ್ನು ರೂಪಿಸುವ ಸಂದರ್ಭದಲ್ಲಿ ಯಾವ ಲಿಂಗ ಅಸಮಾನತೆಯ ಅಂಶಗಳು

ಅಡ್ಡಿಯಾಗಿದ್ದವೋ, ಅವೇ ಅಂಶಗಳು ಈ ಕಾನೂನನ್ನು ಬಳಸಿಕೊಳ್ಳುವಲ್ಲಿಯೂ ಸಮಸ್ಯೆಗಳಾಗಿ ಮತ್ತು ತೊಡಕುಗಳಾಗಿ ರೂಪುಗೊಂಡಿವೆ. ಮುಖ್ಯವಾಗಿ ಈ ಕಾನೂನಿನ ಸಾಫಲ್ಯತೆ ಅಥವಾ ವಿಫಲತೆಯು ಮಹಿಳೆಯರು ಈ ಕಾನೂನನ್ನು ಎಷ್ಟು ಸಮರ್ಥವಾಗಿ ಬಳಸಿಕೊಂಡಿದ್ದಾರೆ ಎಂಬುದರ ಮೇಲೆ ನಿಂತಿದೆ. ಆದರೆ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರು ಪುರಷನಷ್ಟೇ ಸಮಪಾಲನ್ನು ಪಡೆಯಲು ಅರ್ಹಳು. ಇದನ್ನು ಕಾನೂನೇ ಮಾನ್ಯ ಮಾಡಿದೆ. ಆದರೆ ವಾಸ್ತವದಲ್ಲಿ ಇದನ್ನು ಪಡೆಯುವುದೆಂದರೆ ಮಹಿಳೆಗೆ ಇದೊಂದು ಸವಾಲೇ ಸರಿ. ಏಕೆಂದರೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಎರಡನೆಯ ದರ್ಜೆಯವಳಾಗಿ ಜೀವಿಸುತ್ತಿರುವುದರಿಂದಾಗಿ ಹಲವಾರು ಬಂಧನಗಳಿಗೆ ಒಳಪಟ್ಟಿದ್ದಾಳೆ. ಮತ್ತು ಈ ಬಂಧನಗಳನ್ನು ಅಥವಾ ನಿರ್ಬಂಧಗಳನ್ನು ಮೀರಿ/ ಧಿಕ್ಕರಿಸಿ ಆಸ್ತಿಯಲ್ಲಿ ಪಾಲನ್ನು ಪಡೆಯಲು ಕಾನೂನಾತ್ಮಕವಾಗಿ ಮುನ್ನೆಡೆದರೆ ವ್ಯವಸ್ಥೆಯಲ್ಲಿ ಹಲವಾರು ಸಾಮಾಜಿಕ ಮತ್ತು ಕಾನೂನಾತ್ಮಕ ತೊಡಕುಗಳನ್ನು ಎದುರಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ. ಆದರೂ ಈ ಎಲ್ಲ ಬಗೆಯ ತೊಡಕುಗಳನ್ನು ಎದುರಿಸಿಯೂ ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಬೇಕಾಗಿದೆ. ಮಹಿಳೆಯರು  ಸಾಮಾಜಿಕ, ಕೌಟುಂಬಿಕ ಒತ್ತಡಗಳಿಗೆ ಮಣಿದು ಆಸ್ತಿಯನ್ನು ನಿರಾಕರಿಸಿದ ಅಥವಾ ಆಸ್ತಿಯಿಂದ ವಂಚಿತರಾದಂತಹ ಉದಾಹರಣೆಗಳೂ ಕಂಡುಬಂದಿವೆ. ಮಹಿಳೆಯರು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಪುರುಷರನ್ನೇ ಅವಲಂಬಿಸಿರುವುದರಿಂದಾಗಿ ಈ ಬಗೆಯ ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆ ಎಂದು ಹೇಳಬಹುದು.

ಮುಖ್ಯವಾಗಿ ಮಹಿಳೆಯರು ಆಸ್ತಿ ಹಕ್ಕಿನ ವ್ಯಾಪ್ತಿಗೆ ಬರದಂತೆ  ಹಲವಾರು ತೊಡಕುಗಳನ್ನು ನಿರ್ಮಿಸಿದೆ. ಅಂದರೆ ನಾನಾ ಕಾರಣಗಳಿಗಾಗಿ ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯದ ಹಾಗೆ ಮಾಡಲು ಹಲವು ನಿಬಂಧನೆಗಳನ್ನು ಮಹಿಳೆಯರ ಮೇಲೆ ಹೇರಲಾಗಿದೆ. ಸಮಾಜದಲ್ಲಿ ಪುರುಷಸಾಹಿ ವ್ಯವಸ್ಥೆಯು ಸೃಷ್ಟಿಸುವ ತೊಡಕುಗಳು ಹಲವಿವೆ. ಈ ತೊಡಕುಗಳೇ ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಅಡ್ಡಿಯನ್ನುಂಟು ಮಾಡುತ್ತಿವೆ. ಈ ಹಿನ್ನಲೆಯಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ನ್ಯಾಯಾಲಯದ ಮೆಟ್ಟಿಲೇರುವ ಪೂರ್ವದಲ್ಲಿ ಮತ್ತು ನ್ಯಾಯಾಲಯದ ಮೆಟ್ಟಿಲೇರಿದ ನಂತರದಲ್ಲಿ ಅವರಿಗೆ ಯಾವ ಯಾವ ತೊಡಕುಗಳು ಎದುರಾದವು ಮತ್ತು ಅವುಗಳನ್ನು ಹೇಗೆ ನಿಭಾಯಿಸಿದರು ಎಂಬ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ. ಆದರೆ ತೊಡಕುಗಳನ್ನು ಹಿಡಿಯಾಗಿ ವಿವರಿಸುವುದಕ್ಕಿಂತ ಬಿಡಿ ಬಿಡಿಯಾಗಿ ವಿವರಿಸುವುದು ಉತ್ತಮ. ಏಕೆಂದರೆ ಬಿಡಿಯಾಗಿ ವಿವರಿಸುವಾಗ ವಿಷಯದ ಆಳಕ್ಕೆ ಹೋಗಬಹುದು ಹಾಗೆಯೇ ಸಮಸ್ಯೆಯನ್ನು ಅಲ್ಲಿಂದಲೇ ಗುರುತಿಸಬಹುದಾಗಿದೆ. ಈ ಹಿನ್ನಲೆಯಲ್ಲಿ.  ಪಿತೃಪ್ರಧಾನ ತೊಡಕುಗಳನ್ನು  ಈ ಕೆಳಕಂಡಂತೆ ಗುರುತಿಸಲಾಗಿದೆ. ೧. ಕೌಟುಂಬಿಕ ಕಾರಣಗಳು ೨. ಭಾವನಾತ್ಮಕ ಕಾರಣಗಳು ೩.

ಸಾಮಾಜಿಕ ಮೂಢನಂಬಿಕೆಗಳು ೪. ಆರ್ಥಿಕ ಕಾರಣಗಳು ೫. ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು. ಇವುಗಳನ್ನು ಒಂದೊಂದಾಗಿ ಕೆಳಗಿನಂತೆ ಚರ್ಚಿಸಲಾಗಿದೆ.

**೬.೨.೧. ಕೌಟುಂಬಿಕ ಕಾರಣಗಳು**

ಸಮಾಜ ವ್ಯವಸ್ಥೆಯಲ್ಲಿ ಕುಟುಂಬ ಅತ್ಯಂತ ಪ್ರಭಾವಶಾಲಿಯಾದ ಸಂಸ್ಥೆಯಾಗಿದೆ. ಕುಟುಂಬದಲ್ಲಿನ ಪಾತ್ರಗಳು ಭಿನ್ನವಾಗಿ ರೂಪಿತಗೊಂಡಿದ್ದು, ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ಪಾತ್ರ ಜವಾಬ್ದಾರಿಗಳು ಇರುವುದನ್ನು ಕಾಣಬಹುದು. ಆದರೆ ಪಾತ್ರ ಜವಾಬ್ದಾರಿಗಳ ವಿಷಯದಲ್ಲಿ ತಾರತಮ್ಯ ಏರ್ಪಟ್ಟಿರುವುದು ಮತ್ತು ಆ ಮೂಲಕ ಒಂದು ಲಿಂಗವನ್ನು ಕುಟುಂಬದ ಹಂತದಿಂದಲೇ ಕಡೆಗಣಿಸಿರುವುದು ಕಂಡುಬರುತ್ತದೆ. ಮುಖ್ಯವಾಗಿ ಸಾಮಾಜೀಕರಣದ ಪ್ರಕ್ರಿಯೆ ಇಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಕುಟುಂಬದಲ್ಲಿನ ತಾತಮ್ಯಗಳು ಈ ಸಾಮಾಜೀಕರಣದ ಹಂತದಿಂದಲೇ ಆರಂಭವಾಗುತ್ತದೆ. ಹಾಗಾಗಿ ಮಹಿಳೆಯರಿಗೆ ಹೆಚ್ಚಿನ ಜವಾಬ್ದಾರಿಗಳನ್ನು ವಹಿಸಲಾಗಿದೆ. ಹಾಗೆಯೇ ಮಹಿಳೆ ತಾನು ಹುಟ್ಟಿದ ಮನೆಯಿಂದಲೇ ಅನ್ಯಳಾಗಿಯೇ ಗುರುತಿಸಲ್ಪಡುತ್ತಾಳೆ. ಹಾಗೆಯೇ ವಿವಾಹ ಬಂಧನಕ್ಕೆ ಒಳಗಾದ ನಂತರವೂ ಆಕೆಯನ್ನು ಅನ್ಯಳನ್ನಾಗಿಯೇ ನೋಡಲಾಗುತ್ತದೆ. ಹೀಗೆ ಕುಟುಂಬದಲ್ಲಿ ಮಹಿಳೆಯನ್ನು ಯಾವತ್ತಿಗೂ ಒಬ್ಬ ವ್ಯಕ್ತಿಯಾಗಿ ಪರಿಗಣಿಸಿದ್ದೇ ಇಲ್ಲ. ಹಾಗಾಗಿ ಹೆಣ್ಣು ತಾನು ಹುಟ್ಟಿನಿಂದ ಹಿಡಿದು ಸಾಯುವವರೆಗೆ ಪರಾವಲಂಬಿಯಾಗಿಯೇ ಜೀವಿಸುವ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾಳೆ. ಈ ಅನಿವಾರ್ಯತೆಗಳು ಆಕೆಯ ಎಲ್ಲಾ ಸ್ಥಾನಮಾನಗಳನ್ನು ಕಿತ್ತುಕೊಳ್ಳುತ್ತವೆ. ಮುಖ್ಯವಾಗಿ ಆರ್ಥಿಕ ಅಭದ್ರತೆಯನ್ನು ಸೃಷ್ಟಿಸುತ್ತವೆ. ಕಾನೂನುಗಳು ಈ ಬಗೆಯ ಆರ್ಥಿಕ ಅಭದ್ರತೆಯಿಂದ ಮಹಿಳೆಯರನ್ನು ಹೊರತರಲು ಹಲವಾರು ಕಾನೂನಾತ್ಮಕ ಪ್ರಯತ್ನಗಳನ್ನು ಮಾಡಿದೆ. ಅಂತಹ ಕಾನೂನುಗಳಲ್ಲಿ ಉತ್ತರಾಧಿಕಾರ ಕಾಯಿದೆಯೂ ಒಂದು. ಈ ಕಾಯಿದೆ ಜಾರಿಗೆ ಬಂದು ಹಲವು ವರ್ಷಗಳೇ ಕಳೆದರೂ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಸಂಪೂರ್ಣವಾದ ಪಾಲನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಆದರೆ ಕೆಲವು ಮಹಿಳೆಯರು ಈ ಕಾನೂನನ್ನು ತುಂಬಾ ಸೂಕ್ತವಾಗಿ ಬಳಸಿಕೊಂಡಿದ್ದಾರೆ ಆದರೆ ಇವರ ಸಂಖ್ಯೆ ಬಹಳ ಕಡಿಮೆ. ಮಹಿಳೆಯರ ಈ ಬಗೆಯ ಸ್ಥಿತಿಗೆ ಹಲವು ಕೌಟುಂಬಿಕ ತೊಡಕುಗಳು ಎದುರಾಗಿರುವುದನ್ನು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದು ಬಂದಿದೆ. ಅವುಗಳನ್ನು ಈ ಮುಂದಿನಂತೆ ಗುರುತಿಸಲಾಗಿದೆ. ಅ. ಹೆಣ್ಣು ಮಕ್ಕಳನ್ನು ಮನೆಯ ಸದಸ್ಯರು ಎಂದು ಪರಿಗಣಿಸದೇ ಇರುವುದು ಆ. ಸೊಸೆಯನ್ನು ಅನ್ಯವೆಂದು ಭಾವಿಸುವ ಪ್ರಕ್ರಿಯೆ ಇ. ಮದುವೆಯಾದ ಮಹಿಳೆಗೆ ಮಕ್ಕಳಾಗದೇ ಇದ್ದರೆ ಆ ಮಹಿಳೆಯರನ್ನು ಆಸ್ತಿ ಹಕ್ಕಿನ ವ್ಯಾಪ್ತಿಗೆ ತರದೇ ಇರುವುದು. ಈ. ವಿವಾಹಿತ ಮಹಿಳೆಗೆ ಕೇವಲ ಹೆಣ್ಣು ಮಕ್ಕಳಾದರೆ ಅವರನ್ನು ಆಸ್ತಿ ಹಕ್ಕಿನ ವ್ಯಾಪ್ತಿಯಿಂದ ಹೊರಗಿಡುವುದು. ಇವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

**ಆ. ಹೆಣ್ಣು ಮಕ್ಕಳನ್ನು ಮನೆಯ ಸದಸ್ಯರು ಎಂದು ಪರಿಗಣಿಸದೇ ಇರುವುದು :** ಕುಟುಂಬದಲ್ಲಿ ಹೆಣ್ಣು ಹುಟ್ಟಿದರೆ ಹುಣ್ಣು ಎಂಬ ಮಾತು ವ್ಯವಸ್ಥೆಯಲ್ಲಿ ಜಾರಿಯಲ್ಲಿದೆ. ಇದು ಏನನ್ನು ಸೂಚಿಸುತ್ತದೆಯೆಂದರೆ ಹೆಣ್ಣು ಕುಟುಂಬದಲ್ಲಿ ಯಾವ ಬಗೆಯ ಸ್ಥಾನವನ್ನು ಪಡೆದಿದ್ದಾಳೆ ಮತ್ತು ಹೇಗೆ ಕಡೆಗಣಿಸಲ್ಪಟ್ಟಿದ್ದಾಳೆ ಎಂಬುದರ ಸಂಕೇತವಾಗಿದೆ. ಅಂದರೆ ಕುಟುಂಬದಲ್ಲಿ ಹೆಣ್ಣು ಮಗು ಜನಿಸಿತೆಂದರೆ ಆ ಕುಟುಂಬಕ್ಕೆ ಅದೊಂದು ವಿಷಾಧನೀಯ ಸಂಗತಿ. ಆದರೆ ಗಂಡುಮಗುವಿನ ವಿಷಯದಲ್ಲಿ ಇದಕ್ಕೆ ವಿರುದ್ಧವಾದ ನಡೆಗಳಿರುವುದು ಕಂಡುಬರುತ್ತದೆ. ಆ ಕಾರಣಕ್ಕಾಗಿ ಹೆಣ್ಣುಮಗು ಹುಟ್ಟುವ ಮೊದಲೇ ಸಾಯಿಸುವ, ಹತ್ಯೆ ಮಾಡುವಂಥ ಪ್ರಕರಣಗಳು ಸಾಕಷ್ಟು ದೊರೆಯುತ್ತವೆ. ಅಂದರೆ ಹೆಣ್ಣು ಸಮಾಜಕ್ಕೆ ಅಷ್ಟು ಬೇಡವಾಗಿದ್ದಾಳೆ ಎಂದರ್ಥ. ಆ ಕಾರಣಕ್ಕಾಗಿ ಮಹಿಳೆ ತನ್ನ ಸ್ವಂತ ಕುಟುಂಬವೆಂದು ಭಾವಿಸಿರುವ ಮನೆಯಿಂದ ಹಿಡಿದು ತನ್ನ ಗಂಡನ ಮನೆಯಲ್ಲಿಯೂ ಸಹ ಅನ್ಯಳಾಗಿಯೇ ಜೀವಿಸುವಂತಹ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾಳೆ. ಅವಳನ್ನು ಎಲ್ಲಿಯೂ ಒಬ್ಬ ವ್ಯಕ್ತಿಯನ್ನಾಗಿ ನೋಡುವ ಆಲೋಚನೆಯೇ ಇಲ್ಲವಾಗಿದೆ. ಈ ಕಾರಣಕ್ಕಾಗಿ ಮಹಿಳೆ ಎಲ್ಲಾ ಸೌಲಭ್ಯಗಳಿಂದ ವಂಚಿತಳಾಗುವಂಥ ಸ್ಥಿತಿ ನಿರ್ಮಾಣವಾಗಿದೆ. ಕಾನೂನಾತ್ಮಕ ಬೆಂಬಲ ದೊರೆತಿದ್ದರೂ ಅದನ್ನು ಪಡೆಯದಂಥ ವಾತಾವರಣ ನಿರ್ಮಾಣವಾಗಿದೆ. ಅದು ಆಸ್ತಿ ಹಕ್ಕಿನ ಸಂದರ್ಭದಲ್ಲಿಯೂ ಸಾಬೀತಾಗಿದೆ. ಅಂದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಬಗೆಯ ಕಾರಣಕ್ಕಾಗಿಯೇ ಹಲವು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗಿದ್ದಾರೆ. ಇದನ್ನು ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮಾಹಿತಿಯನ್ನಾಧರಿಸಿ ಕೆಳಗಿನಂತೆ ವಿಸ್ತರಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಜೂಲಕುಂಟ ಗ್ರಾಮದ ಗ್ಯಾನಮ್ಮ ಎಂಬುವವರು ತಮ್ಮ ತವರು ಮನೆಯಿಂದ ಮತ್ತು ಗಂಡನ ಮನೆಯಿಂದ ಎರಡೂ ಕುಟುಂಬಗಳಿಂದ ಅನ್ಯಳಾಗಿದ್ದಾರೆ. ಮತ್ತು ಆ ಕಾರಣಕ್ಕೆ ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗಿದ್ದಾರೆ. ಮುಖ್ಯವಾಗಿ ಅವರೇ ಹೇಳುವಂತೆ, " ನಮ್ದು ತವ್ರ ಮನಿ ಮನ್ನೇರಾಳ, ಅಲ್ಲಿ ನಮ್ ಅಪ್ಪಂದು ಐದು ಎಕ್ರೆ ಹೊಲ ಐತಿ, ನಮ್ ಅಪ್ಪಗ ಮೂವರೇ ಮಕ್ಕಳು, ನಾನೇ ಹಿರೇಳು, ಇನ್ನಿಬ್ರು ತಮ್ಮನೋರು ಐದಾರ. ನನಗ ಇಲ್ಲಿಗೆ ಮದುವಿ ಮಾಡಿ ಕೊಟ್ಟಾರ. ಮದುವಿ ಆಗಿ ಐದಾರು ವರ್ಸ ಆದಮ್ಯಾಲ ನಮ್ ಅತ್ತಿ ಮನ್ಯಾಗ ಮೆಲ್ಲಕ ಕಿರಿ ಕಿರಿಗಳು ಸುರು ಆದ್ವು, ನನ ಗಂಡ ತುಂಬಾ ಒಳ್ಳೇನು. ಆದ್ರೆ ಮನ್ಯಾಗಿನ ನಮ್ ಅತ್ತಿ ಮಾವ ಇಬ್ರು ಸೇರಿ ನನಗ ದುಡ್ಡು ತಗಂಡು ಬಾ ಅಂತೇಳಿ ದಿನಾಲೂ ಪೀಡಿಸ್ತಿದ್ರು, ನನ ಗಂಡ ಅವ್ರಿಗೂ ಏನೂ ಅಂತಿರ್ಲಿಲ್ಲ, ಮತ್ತೆ ನನಗೂ ಏನೂ ಅಂತಿರ್ಲಿಲ್ಲ. ಆದ್ರೆ ನಾನೇ ಹಂಗು ಹಿಂಗು ಮಾಡಿ ನಿಭಾಯಿಸಿಕೊಂಡು ಹೋಗ್ತಿದ್ದೆ. ನಮ್ ತವ್ರ ಮನಿ ಆಸ್ತಿ ಮ್ಯಾಲ ಅವ್ರ ಕಣ್ಣು ಬಿದ್ದಿತ್ತು. ಹಂಗಾಗಿ ಅದರಾಗ ಭಾಗ ಕೇಳು ಅಂತೇಳಿ ಪೀಡಿಸ್ತಿದ್ರು. ಅದಕ್ಕಂತ ನಾನು ನಮ್ ಅಪ್ಪಗ ಈ ವಿಚಾರಾನ ಹೇಳಿದೆ. ಆದ್ರೆ ಅವ್ರು ಇದಕ್ಕ ಒಪ್ಲಿಲ್ಲ. ನಿನಗ ಮದುವಿ ಮಾಡಿ ಕೊಟ್ ಮ್ಯಾಲ ಮುಗೀತು. ತವ್ರಮನಿಯಿಂದ ಏನೂ

ಕೇಳ್ಬಾರ್ದು, ಏನಿದ್ರು ನಿನ್ ಗಂಡನ ಮನ್ಯಾಗೇ ಕೇಳು. ನೀನು ಇದನ್ನ ಕೇಳಾಕ ಸಂಬಂಧಾನೇ ಇಲ್ಲ ಅಂತೇಳಿ, ಆಸ್ತಿನಾಗ ಮಾತ್ರ ನಿನಗ ಪಾಲು ಸಿಗಂಗಿಲ್ಲ. ಅದೇನಿದ್ರೂ ನಿಮ್ ತಮ್ಮನೋರಿಗೇ ಸೇರ್ತೈತಿ. ನೀನು ಅದರಾಗ ಪಾಲು ಕೇಳ್ಬೇಡ ಅಂತ ಹೇಳಿದ. ನನಿಗೆ ನೋಡಿದ್ರ ಗಂಡನ ಮನ್ಯಾಗ ಅತ್ತಿ ಮಾವನೋರು ಆಸ್ತಿನಾಗ ಪಾಲು ತಗಂಡು ಬಾ ಇಲ್ಲಾಂದ್ರ ಮನೀಗೇ ಬರ್ಬೇಡ ಅಂತ ಹೇಳಿ ಕಳಿಸ್ಯಾರ. ಆದ್ರೆ ಇಲ್ಲಿ ನಮ್ ಅಪ್ಪ ಆಸ್ತಿನಾಗ ಭಾಗ ಕೊಡಂಗಿಲ್ಲ ಅಂತಾರ. ಅದಕ್ಕ ಏನ್ ಮಾಡ್ಲಿ ಅಂತೇಳಿ, ನನ್ ಗಂಡಗ ಹೇಳಿದ್ರೆ ಆತ ಕಿವ್ಯಾಕೇ ಹಾಕೆಲ್ಲಿಲ್ಲ. ನಾನು ನಮ್ ಸಂಬಂಧಿಕ್ರನ್ನ ಪಂಚಾತಿ ಸೇರ್ಸಿದೆ. ಅಲ್ಲಿ ಆಸ್ತಿನಾಗ ಪಾಲು ಕೊಡಾದು ಬ್ಯಾಡ ಸ್ವಲ್ಪ ದುಡ್ಡು ಕೊಟ್ ಬಿಡ್ರಿ ಅಂತ ತೀರ್ಮಾನ ಮಾಡಿದ್ರು, ಅದನ್ನೇ ತಗಂಡು ಬಂದು ನಮ್ ಮಾವನೋರಿಗೆ ಕೊಡಾನು ಅಂತ ಅನ್ಕಂಡಿದ್ದೆ. ಆದ್ರೆ, ಮತ್ತೆ ಇವ್ರು ಕಾಟ ಕೊಡ್ತಾರ ಅಂತೇಳಿ, ನನ ಗಂಡಗ ಹೇಳಿ ಬ್ಯಾರೆ ಮನಿ ಮಾಡಿಬಿಟ್ವಿ, ಈಗ ದುಡ್ಕಂಡು ಜೀವ್ನ ಮಾಡಾಕ್ಹತ್ತೀವಿ" ಎಂದರು. ಇನ್ನೊಂದು ಪ್ರಕರಣದಲ್ಲಿ

ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ವದ್ದಟ್ಟಿ ಗ್ರಾಮದ ರತ್ನಮ್ಮ ತನ್ನ ತಂದೆಯ ಆಸ್ತಿಯಿಮದ ವಂಚಿತರಾಗಿದ್ದಾರೆ. ಮುಖ್ಯವಾಗಿ ಇವರು ಹೇಳುವಂತೆ " ನಮ್ ಮನ್ಯಾಗ ನನ್ನ ಬಾಳ ಕೆಟ್ಟದಾಗಿ ನೋಡ್ಕಂಡಾರ. ನಾನು ಓತ್ತೀನಿ ಅಂದ್ರೆ ಸಾಲೀಗೇ ಕಳಿಸ್ಲಿಲ್ಲ. ನೀನು ಮದುವಿ ಆದ್ ಮ್ಯಾಲ ಬ್ಯಾರೇರ ಮನಿಗೆ ಸೇರೋಳು, ನಿನಿಗೆ ಯಾಕ ಓದು. ಸುಮ್ನೆ ಮನ್ಯಾಗೇ ಕೆಲ್ಸ ಮಾಡಿಕೆಂಡು ಇರು, ಒಳ್ಳೆ ಸಂಬಂಧ ನೋಡಿ ಮದುವಿ ಮಾಡ್ತೀವಿ ಅಂತ ನನ್ನ ಓದಾಕೇ ಕಳಿಸ್ಲಿಲ್ಲ. ಹಂಗಾಗಿ ನಾನು ೩ನೇ ಕ್ಲಾಸು ಓದಿ ಬಿಟ್ಟುಬಿಟ್ಟೆ. ನಮ್ ಅಣ್ಣ ಈಗ ಸರ್ಕಾರಿ ಆಸ್ಪತ್ರ್ಯಾಗ ನರ್ಸ ಆಗ್ಯಾನ. ನಮ್ ಅಪ್ಪ ಮಾಡಿದ ಆಸ್ತಿ ಎರಡು ಎಕ್ರಿ ಜಮೀನು, ಒಂದು ಮನಿ ಐತಿ. ನನ ಗಂಡ ಇದರ ಮ್ಯಾಲ ಆಸಿ ಬಿದ್ದು, ಆಸ್ತಿನಾಗ ಪಾಲು ಕೇಳು, ಅದ್ರಾಗ ಬಂದ ದುಡ್ಡಿಂದ ಒಂದು ಡಬ್ಬಿ ಅಂಗಡಿ ಇಡಾನು ಅಂತ ಹೇಳಿದ್ದ. ನನ ಗಂಡ ಬಿ.ಎ. ಓದ್ಯಾನ. ಹಂಗಾಗಿ ಆತ ಕಾನೂನು ಸ್ವಲ್ಪ ತಿಳ್ಕಂಡಾನ. ಅದಕ್ಕ ಅಪ್ಪನ ಆಸ್ತಿನಾಗ ಪಾಲು ಕೇಳು ಅಂತ ಹೇಳಿದ್ದ. ನಾನು ಸತೆ ಇದು ಸರಿ ಐತಿ ಅಂತೇಳಿ ಅಪ್ಪಗ ಪಾಲು ಕೇಳಿದೆ. ಆದ್ರೆ ಆತ ಆಸ್ತಿನಾಗ ಪಾಲು ಕೊಡಂಗಿಲ್ಲ ಅಂತೇಳಿ ಕಡ್ಡಿ ಮುರ್ದಂಗ ಮಾತಾಡಿಬಿಟ್ಟ, ನಮ್ ಅಮ್ಮ ಇದ್ದು ಇರೋ ಎರಡು ಎಕ್ರಿನಾಗ ನಮ್ ಜೀವ್ನನೇ ಸಾಗುವಲ್ದು ಅಂತಾದ್ರಾಗ ನೀನು ಅದರಾಗೇ ಒಂದು ಎಕ್ರಿ ಕೇಳ್ತೀಯಲ್ಲ. ನಿನಿಗೆ ಮದುವಿ ಮಾಡಿ ಕೊಟ್ ಮೇಲೆ ಆತು ನೀನು ತವ್ರ ಮನಿಯಾಗಿಂದ ಏನೂ ಕೇಳ್ಬಾರ್ದು. ಯಾವದಾದ್ರು ಹಬ್ಬಕ್ಕ ಬಂದು ಸೀರಿ ಉಟ್ಗಂಡು ಹೋಗು ಬೇಕಿದ್ರೆ, ಆದ್ರೆ ಆಸ್ತಿನಾಗ ಪಾಲು ಮಾತ್ರ ಕೇಳ್ಬೇಡ. ಕೊಟ್ ಹೆಣ್ಣು ಕುಲಕ್ಕ ಹೊರ್ಗ ಅಂತ ದೊಡ್ಡೋರು ಹೇಳ್ತಾರ. ಹಂಗ ನೀನಿಗೆ ಮದುವಿ ಮಾಡಿ ಕೊಟ್ ಮ್ಯಾಲ ಮುಗೀತು. ನೀನು ಏನು ಕೇಳೋದಿದ್ರು ಅದು ನಿನ್ ಗಂಡನ ಮನ್ಯಾಗ ಮಾತ್ರ, ಅದನ್ನ ಬಿಟ್ಟು ಆಸ್ತಿನಾಗ ಪಾಲು ಕೇಳಿ ಇರೋ ತವ್ರ ಮನೀನೂ ದೂರ ಮಾಡ್ಕಕಂತೀಯೇನು? ಹಂಗೆಲ್ಲಾ ಮಾಡ್ಬ್ಯಾಡ, ಕಷ್ಟ ಬಂದಾಗ

ಏನೋ ಸ್ವಲ್ಪ ದುಡ್ಡುಗಿಡ್ಡು ಇಸ್ಕಂಡು ಹೋಗು. ಅಂತ ಹೇಳಿದ್ರು, ಅದಾದ್ ಮ್ಯಾಲೆ ನಮ್ ತಮ್ಮನ್ನ ಒಂದು ಮಾತು ಕೇಳಾನು ಅಂತೇಳಿ ಕೇಳಿದ್ರೆ, ಅವ್ನು ಸತೆ ನಿನಿಗೆ ಮದುವಿ ಮಾಡಿ ಕೊಟ್ಟೇವಿ, ಬಂಗಾರ ಬಟ್ಟೆಗಳು ಅಂತ ಬಾಳ ಕೊಟ್ಟೇವಿ. ಅದಕ್ಕೆಲ್ಲಾ ಬಾಳ ಖರ್ಚು ಆಗೇತಿ. ಅದೆಲ್ಲಾ ನಿಮಿಗೆ ಗೊತ್ತಾಗಲ್ಲ. ಅಂತೇಳಿ ಬೈದು ಬಿಟ್ಟ. ಇದನ್ನೆಲ್ಲಾ ಕೇಳಿ ನನ ಗಂಡಗ ಏನೋ ಹೇಳಿ ಸುಮ್ನಿರ್ಸಿದೆ. ಆಮ್ಯಾಲೆ ನಾನು ಆ ಕಡಿಗಿ ಕಾಲೇ ಇಟ್ಟಿಲ್ಲ" ಎಂದರು.

ಈ ಎರಡೂ ಪ್ರಕರಣಗಳನ್ನು ಗಮನಿಸಿದಾಗ ಗ್ಯಾನಮ್ಮ ಮತ್ತು ರತ್ನಮ್ಮ ಇಬ್ಬರೂ ತಮ್ಮ ಕುಟುಂಬಗಳಿಂದ ಅನ್ಯರಾಗಿಯೇ ಉಳಿದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಕುಟುಂಬದಲ್ಲಿ ಮಹಿಳೆ ಯಾವ ಬಗೆಯ ಭದ್ರತೆಯನ್ನು ಹೊಂದಿದ್ದಾಳೆ ಎಂಬುದು ತಿಳಿದುಬರುತ್ತದೆ. ಅಂದರೆ ಗ್ಯಾನಮ್ಮಳಿಗೆ ತನ್ನ ತವರು ಮನೆಯವರು ಆಸ್ತಿನೀಡಲು ನಿರಾಕರಿಸಿರುವುದು ಮತ್ತು ಗಂಡನ ಮನೆಯವರು ಆಸ್ತಿಗಾಗಿ ಅವಳನ್ನು ಕುಟುಂಬದಿಂದ ದೂರ ಇಟ್ಟಿರುವುದು ಕಂಡುಬರುತ್ತದೆ. ಆದರೆ ತಾನು ತೆಗೆದುಕೊಂಡ ನಿರ್ಧಾರದಿಮದ ಗ್ಯಾನಮ್ಮ ಎರಡೂ ಕುಟುಂಬಗಳಿಂದ ಮುಕ್ತಿಯನ್ನು ಪಡೆದಿದ್ದಾಳೆ. ಆದರೆ ಅವರು ಅನುಭವಿಸಿದ ನೋವು ಅವಳನ್ನು ಕುಟುಂಬದಿಂದ ಅನ್ಯಳನ್ನಾಗಿ ಮಾಡಿದೆ. ಹಾಗೆಯೇ ರತ್ನಮ್ಮನವರೂ ಸಹ ಮಹಿಳೆ ಎಂಬ ಕಾರಣಕ್ಕಾಗಿ ತಾನು ಹುಟ್ಟಿದ ಮನೆಯಿಂದಲೇ ಮೊದಲು ಶಿಕ್ಷಣದಿಂದ ವಂಚಿತರಾಗಿದ್ದಾರೆ. ನಂತರ ತನ್ನ ತಂದೆಯ ಆಸ್ತಿಯಿಂದ ವಂಚಿತರಾಗಿದ್ದಾರೆ. ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬ ಮಾತು ಪ್ರತಿಯೊಬ್ಬರ ಆಲೋಚನೆಗಳ ಒಂದು ಭಾಗವಾಗಿಯೇ ಇದೆ. ಮತ್ತು ಅದು ಕೇವಲ ಆಲೋಚನೆಯಾಗಿ ಉಳಿಯದೇ ಅದು ವ್ಯವಸ್ಥೆಯಲ್ಲಿ ಪ್ರಯೋಗಕ್ಕೆ ಒಳಪಟ್ಟಿದೆ. ಹಾಗಾಗಿ ಈ ಆಲೋಚನೆ ಮಹಿಳೆಯರ ಅಭಿವೃದ್ಧಿಗೆ ತುಂಬಾನೇ ಪೆಟ್ಟು ಕೊಟ್ಟಿದೆ ಎಂದು ಹೇಳಬಹುದು. ಮುಖ್ಯವಾಗಿ ಈ ಕಾರಣಕ್ಕಾಗಿಯೇ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯುವ ಸಂದರ್ಭದಲ್ಲಿ ಹೊರಗುಳಿಯುವಂತಾಗಿದೆ. ಕುಟುಂಬದಲ್ಲಿ ಈ ಬಗೆಯ ಆಲೋಚನೆಗಳು ಮಹಿಳೆಯರ ಬೌದ್ಧಿಕತೆಯ ಮೇಲೆ ಸವಾರಿಯನ್ನು ಮಾಡುತ್ತಿವೆ. ಹಾಗಾಗಿ ಕುಟುಂಬದಲ್ಲಿ ಅದು ತವರು ಮನೆಯಾಗಿರಬಹುದು ಅಥವಾ ಗಂಡನ ಮನೆಯಾಗಿರಬಹುದು ಈ ಎರಡೂ ಕುಟುಂಬಗಳಲ್ಲಿ ಅನ್ಯಳಾಗಿಯೇ ಉಳಿದಿರುವುದು ಕಂಡುಬರುತ್ತದೆ.

**ಆ. ಸೊಸೆಯನ್ನು ಅನ್ಯವೆಂದು ಭಾವಿಸುವುದು :** ಕುಟುಂಬದಲ್ಲಿ ಮಹಿಳೆಯರು ಯಾವಾಗಲೂ ಅನ್ಯರಾಗಿಯೇ ಉಳಿದಿರುತ್ತಾರೆ. ಮುಖ್ಯವಾಗಿ ತಾನು ಹುಟ್ಟಿದ ಮನೆಯಿಂದಲೇ ಮೊದಲು ಅನ್ಯಳಾಗಿರುತ್ತಾಳೆ. ವಿವಾಹದ ನಂತರ ತನ್ನ ಗಂಡನ ಮನೆಗೆ ಹೋಗುವ ಮಹಿಳೆ ಅಲ್ಲಿಯೂ ಅನ್ಯಳಾಗಿ ಪರಿಗಣಿಸಲ್ಪಡುತ್ತಾಳೆ. ಮದುವೆಯ ಸಂದರ್ಭದಲ್ಲಿ ಮಹಿಳೆ ವರದಕ್ಷಿಣೆಯ ರೂಪದಲ್ಲಿ ಏನಾದರೂ ಸಂಪತ್ತನ್ನು ತಂದರೆ, ಗಂಡನ ಮನೆಯಲ್ಲಿ ಅವಳಿಗೆ ಅಲ್ಪ ಸ್ವಲ್ಪ ಸ್ಥಾನಮಾನ ದೊರೆಯಬಹುದು. ಆದರೆ ಸಾಮಾನ್ಯವಾಗಿ ಸೊಸೆಯನ್ನು ತಮ್ಮ ಸ್ವಂತ ಕುಟುಂಬದ ವ್ಯಕ್ತಿ ಎಂದು ಭಾವಿಸುವುದೇ ಕಡಿಮೆ. ಹಾಗಾಗಿ ಮಹಿಳೆ ಹಲವಾರು ಸಮಸ್ಯೆಗಳಿಗೆ ತುತ್ತಾಗುತ್ತಾಳೆ.

ಮುಖ್ಯವಾಗಿ ಆಸ್ತಿಯ ವಿಚಾರದಲ್ಲಿ ಗಂಡನಿಗೆ ಸೇರುವ ಆಸ್ತಿಯಲ್ಲಿ ಮಹಿಳೆಗೂ ಸಮಾನ ಹಕ್ಕು ಬಾಧ್ಯತೆಗಳಿರುತ್ತವೆ. ಆದರೆ ಕೆಲವು ಸಂದರ್ಭಗಳಲ್ಲಿ ಈ ಹಕ್ಕುಗಳಿಂದ ಮಹಿಳೆಯನ್ನು ವಂಚಿತಳನ್ನಾಗಿ ಮಾಡಲಾಗುತ್ತದೆ. ಈ ಬಗೆಯ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಮುಖ್ಯವಾಗಿ ಇದನ್ನು ವಕ್ತೃಗಳ ಮಾತಿನಲ್ಲಿಯೇ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಕಬ್ಬರಗಿ ಗ್ರಾಮದ ಮಾಸವ್ವ ತನ್ನ ಗಂಡನ ಆಸ್ತಿಯಿಂದ ವಂಚಿತಳಾಗಿದ್ದಾರೆ. ಮೂಲತಃ ಕಂಪ್ಲಿಯವರಾದ ಈಕೆಯನ್ನು ಕಬ್ಬರಗಿ ಗ್ರಾಮದ ತಮ್ಮ ಸಂಬಂಧಿಕರಲ್ಲಿಯೇ ಮದುವೆ ಮಾಡಿಕೊಟ್ಟಿದ್ದಾರೆ. ಇವರಿಗೆ ಮದುವೆಯಾಗಿ ಎರಡು ವರ್ಷಕ್ಕೆ ಪತಿ ಮರಣಿಸಿದ್ದಾನೆ. ಹಾಗಾಗಿ ಗಂಡನ ಮನೆಯಲ್ಲಿ ಹಲವು ಬಗೆಯಲ್ಲಿ ಕಿರುಕುಳಗಳನ್ನು ಎದುರಿಸಿದ್ದಾರೆ. ಮತ್ತೆ ಗಂಡನ ಪಾಲಿಗೆ ಬರುವ ಆಸ್ತಿಯನ್ನು ಪಡೆಯಲು ಹೋಗಿ ಇನ್ನು ಹಲವಾರು ಕಿರುಕುಳಕ್ಕೆ ಒಳಗಾಗಿದ್ದಾರೆ. ಈ ಕುರಿತಂತೆ ಮಾಸವ್ವನವರು ಹೇಳಿದಂತೆ "ನಂದು ತವ್ರು ಮನಿ ಕಂಪ್ಲಿ. ನನಗ ಒಬ್ಬ ಅಣ್ಣ ಐದಾನ, ನನ್ ಮದ್ವಿನಾ ಮಾಡಬೇಕಂದ್ರ ಇರೋ ಜಮೀನನ್ನ ಅಡ ಇಟ್ಟು ಮಾಡಿಕೊಟ್ಟಾರ. ಆದ್ರ ನನ್ ಹಣೇಬರ ನೋಡ್ರಿ ಹೆಂಗೈತಿ. ಮದುವಿಯಾಗಿ ಎರಡು ವರ್ಷಕ್ಕ ಗಂಡ ತೀರಿಕೆಂಡುಬಿಟ್ಟ, ಆಗ ಗಂಡನ ಮನೆಯವ್ರು ಅಂದ್ರೆ ನಮ್ ಅತ್ತಿ, 'ಈಕಿ ಕಾಲ್ಗುಣಾನೇ ಸರಿಗಿಲ್ಲ', ಮಗ ಸಾಯೋದಕ್ಕ ಈಕಿನೇ ಕಾರಣ ಅಂತ ನನ್ನ ಬೈದಾಡಾಕ ಶುರು ಮಾಡಿದ್ರು. ನಮ್ ಮಾವಂತೂ ಬಾಳ ಕಾಟ ಕೊಟ್ಟಾನ. ಸುಮ್ ಸುಮ್ನೆ ಆ ಕೆಲ್ಸ ಸರಿಗಿ ಮಾಡಿಲ್ಲ, ಈ ಕೆಲ್ಸ ಸರಿಗಿ ಮಾಡಿಲ್ಲಾಂತ ತವ್ರ ಮನಿನ ಹಿಡದು ಬೈಯೋರು. ನನಗ ಸಾಕಾಗಿ ಹೋಗಿತ್ತು. ನನ್ನ ಎಷ್ಟೋ ದಿನಗಳ ಕಾಲ ರಾತ್ರಿ ಮನಿ ಹೊರಗ ಜಗುಲಿ ಮ್ಯಾಲ ಮಲಗಿಸ್ಯಾರ. ಈ ಕಾಟ ತಾಳಕಾಗ್ದೇ ತವರು ಮನಿಗಿ ಹೋಗಾನು ಅಂತ ನಿರ್ಧಾರ ಮಾಡಿದೆ. ಆದ್ರ ನನ್ನ ಮದುವಿಗಿ ಅವ್ರು ಇರೋ ಆಸ್ತಿನ ಅಡ ಇಟ್ಟಾರ. ಅದೇ ಅವ್ರಿಗೆ ವಜ್ಜಿ ಆಗಿರ್ತದ. ಇಂತ ಟೈಮ್ನಾಗ ಮತ್ತೆ ಅಲ್ಲಿಗೆ ಹೋಗಿ ಅವ್ರಿಗಿ ಭಾರ ಆಗಬೇಕಾ ಅಂತ ಅನಸ್ತು. ಅದಕ್ಕ ಅಲ್ಲಿಗಿ ಹೋಗಾಕ ಹಿಂದೇಟು ಹಾಕಿದೆ. ಆದ್ರೂನೂ ಇಲ್ಲಿ ಕೊಡೋ ಕಷ್ಟಗಳನ್ನ ನೆನಿಸಿಕೊಂಡ್ರ ಅಲ್ಲಿಗೇ ಹೋಗೋದು ಸರಿ ಅನ್ನಿಸ್ತು. ಹಂಗಾಗಿ ಒಂದಿನ ಅವ್ರ್ಯಾರಿಗೂ ಹೇಳ್ದಂಗ ತವ್ರ ಮನಿಗಿ ಬಂದು ಬಿಟ್ಟೆ. ಇಲ್ಲಿ ನಮ್ ಅಪ್ಪ, ಅಮ್ಮ ಚೆನ್ನಾಗೇ ನೋಡ್ಕೆಂತಾರ.

ಅಲ್ಲಿ ಗಂಡನ ಮನ್ಯಾಗ ನಮ್ ಮಾವ ತೀರಿಕೆಂಡ್ರು, ಆಗ ಅವ್ರು ಮಾಡಿಟ್ಟಿದ್ದ ಆಸ್ತಿ ೧೨ ಎಕ್ರೆ ಜಮೀನು ಮತ್ತೆ ಎರಡು ಮನಿ ಐತಿ. ಇವ್ರುನ್ನ ಭಾಗ ಮಾಡ್ಕೆಬೇಕು ಅಂತೇಳಿ ಯೋಚ್ನೆ ಮಾಡ್ತಿದ್ರು, ನಮ್ ಮಾವಗ ನಾಕು ಜನ ಗಂಡು ಮಕ್ಕಳು. ನನ್ ಗಂಡನೇ ಎಲ್ಲಾರ್ಗಿಂತ ದೊಡ್ಡೋರು. ಹಂಗಾಗಿ ಅವ್ರನ್ನ ಬಿಟ್ಟು ಭಾಗ ಮಾಡಿಕೆಳ್ಳಾಕ ಬರಂಗಿಲ್ಲ. ಅವ್ರು ಇಲ್ಲ ಹಂಗಾಗಿ ಅವ್ರಿಗಿ ಬರೋ ಆಸ್ತಿ ನನಗ ಸೇರಬೇಕಿತ್ತು. ಇದನ್ನ ಯೋಚ್ನೆ ಮಾಡಿದ ನಮ್ ಅತ್ತಿ ಮತ್ತ ಭಾಮಾದನೋರು. ನನಗ ಆಸ್ತಿ ಸಿಗಲಾರ್ದಂಗ ಮಾಡೋದು ಹೆಂಗ ಅಂತ ಯೋಚ್ನೆ ಮಾಡ್ತಿದ್ರು.

ಒಂದಿನ ನಮ್ ಅಪ್ಪಗ ಫೋನ್ ಮಾಡಿ ನಿಮ್ಮ ಮಗಳು ಮನ್ಯಾಗಿನ ಬಂಗಾರನಾ ಕಳು ಮಾಡ್ಕೆಂಡು ಬಂದಾಳ, ನೀವು ಅದನ್ನೆಲ್ಲಾ ತರ್ಸಿಕೊಟ್ರ ಚಲೋ ಆತು ಇಲ್ಲಾಂದ್ರ ಕಂಪ್ಲೇಂಟ್ ಕೊಡಬೇಕಾಗತೈತಿ ಅಂತ ಹೆದ್ರಿಸ್ಯಾರ. ಒಂದಿನ ನಮ್ ಅತ್ತಿ ಮತ್ತೆ ಬಾಮೈದ (ಗಂಡನ ತಮ್ಮ) ನಮ್ ಮನಿಗಿ ಒಂದು ಪೇಪರ್ ಹಿಡ್ಕಂಡು ಬಂದಿದ್ದ. ಅದಕ್ಕ ಸೈನ್ ಮಾಡ್ರಿ ಅಂತಂದ. ಅದನ್ನ ನಾನು ಓದಿದೆ. ಅದ್ರಾಗ ನಮ್ ಮಾವನೋರ ಆಸ್ತಿ ಭಾಗ ಮಾಡಿಕೆಳ್ಳಕತ್ತಾರ. ಅದಕ್ಕ ನಂದೇನೂ ತಕರಾರು ಇಲ್ಲ. ನನಗೂ ಈ ಆಸ್ತಿಗೂ ಸಂಬಂಧ ಇಲ್ಲ ಅಂತ ಬರಿಸಿದ್ರು. ಇದನ್ನ ಓದಿ ನಾನು ನಮ್ ಅಪ್ಪಗ ಹೇಳಿದೆ. ಅವ್ರಿದ್ದು ಅದು ಹೆಂಗ ಆಗತೈತಿ ನನ್ ಮಗಳೀಗೂ ತನ್ನ ಗಂಡನ ಆಸ್ತಿನಾಗ ಪಾಲು ಸಿಗಬೇಕು ನೀನು ಸಹಿ ಮಾಡ್ಬೇಡ ಅಂತಂದ್ರು. ಅದಕ್ಕ ಅತ್ತಿ ಒಮ್ಮಲೆ ಸಿಟ್ಟಾಗಿ, ಇರೋದು ಒಬ್ಳೇ, ಅದೂ ಗೊಡ್ಡೆಮ್ಮಿ ಆಗ್ಯಾಳ ಆಕಿಗ್ಯಾಕ ಆಸ್ತಿ. ಅದನ್ನ ತಗಂಡು ಏನ್ ಮಾಡ್ತಾಳ. ನೀವು ಹಿಂಗೆಲ್ಲಾ ಆಡಿದ್ರ ಬಾಳ ಕಷ್ಟ ಆಗತೈತಿ ನೋಡ್ರಿ ಅಂತೇಳಿ ಹೆದ್ರಿಸಿದ್ರು. ನಮ್ ಅಪ್ಪ ಸುಮ್ನಿರ್ಲಿಲ್ಲ. ಅಕಿಗಿ ಮಕ್ಳು ಇಲ್ದಿದ್ರೆ ಏನಂತೆ ಅವ್ಳ ಜೀವ್ನಕ್ಕ ಬೇಕಲ್ಲ ಅಂತ ಹಠ ಹಿಡ್ದ. ಆದ್ರ ಅವ್ರು ಈಕಿ ನಮ್ಗೆ ಯಾರ್ಗೂ ಹೇಳ್ಲಾರ್ದಂಗ ಆ ಮನಿ ಬಿಟ್ಟು ಯಾವಾಗ ಬಂದ್ಲೋ ಆವಾಗ್ಲೇ ಆ ಮನಿ ಸಂಬಂಧ ಕಡ್ಕಂಡಂಗ. ಈಗ ಈಕಿಗಿ ಮತ್ತೆ ನಮಿಗೆ ಏನೂ ಸಂಬಂಧ ಇಲ್ಲ ಎಂದರು. ಇದನ್ನ ಹಿಂಗ ಬಿಟ್ರೆ ಬಾಳ ದೂರ ಎಳ್ಕಂಡು ಹೋಗ್ತೈತಿ ಅಂತ ತಿಳ್ದು ಆ ಪತ್ರಕ್ಕ ಸಹಿ ಮಾಡ್ದೆ. ಯಾಕಂದ್ರ ಆಸ್ತಿ ಕಾಲಾಗಾ ಇಷ್ಟೊಂದು ಜಗಳ ಮಾಡ್ಯಾರ. ಮತ್ತೆ ನನಿಗೆ ಇಲ್ದಿದ್ ಮಾತುಗಳ್ನ ಆಡ್ಯಾರ, ನನಿಗೆ ಮತ್ತೆ ಆ ಮನಿಗೆ ಸಂಬಂಧಾನೇ ಇಲ್ಲ ಅಂತ ಹೇಳ್ತಾರ. ಇನ್ನ ಆಸ್ತಿನಾಗ ಭಾಗ ತಗಂಡ್ರೆ ಸುಮ್ನಿರ್ತಾರೇನು? ಅಂತ ತಿಳ್ಕಂಡು ಸೈನ್ ಮಾಡ್ಬಿಟ್ಟೆ.

ನೀವು ಕೋರ್ಟಿಗೆ ಹೋಗಬಹುದಿತ್ತಲ್ಲಾ? ನಿಮ್ಮ ಗಂಡನ ಪಾಲಿನ ಆಸ್ತಿ ಸಿಕ್ಕಿದ್ರೆ ನಿಮ್ಮ ಜೀವನಕ್ಕೆ ಆಧಾರ ಆಗ್ತಿತ್ತಲ್ಲಾ ಎಂದು ಕೇಳಿದಾಗ.

ಹೌದು, ಕೋರ್ಟಿಗೆ ಹೋಗ್ಬಹುದಿತ್ತು. ಆಸ್ತಿ ಬಂದಿದ್ರೆ ನನ್ ಜೀವ್ನಕ್ಕ ಆಸ್ತಿ ಆಗತಿತ್ತು. ಆದ್ರ ನಾನು ಕೋರ್ಟಿಗಿ ಹೋಗಿ ಕೇಸ್ ಮಾಡಿದ್ರೆ ಅದರ ಖರ್ಚು ಯಾರು ನೋಡ್ಬೇಕಿತ್ತು. ಅದು ನಮ್ ಅಪ್ಪನ ತಲಿಮ್ಯಾಲೇನೇ ಬೀಳ್ತಿತ್ತು. ಕೇಸ್ ಮುಗಿಯೋವರ್ಗೂ ಮತ್ತೆ ನಾನು ಅವ್ರಿಗಿ ಭಾರ ಆಗತಿದ್ದೆ. ಈಗ ಇರೋ ಕಷ್ಟಗಳನ್ನ ಬಗಿಹರ್ಸೋದೇ ಕಷ್ಟ ಆಗ್ಯಾದ ಅಂತದ್ರಾಗ ಮತ್ತೆ ಇನ್ನೊಂದು ಕಷ್ಟ ತಂದಿಡೋದು ನನಗ ಇಷ್ಟ ಇರ್ಲಿಲ್ಲ. ಆ ಆಸ್ತಿ ತಗಂಡು ಏನ್ ಮಾಡೋದು, ಇಲ್ಲೆ ಕೂಲಿ ಮಾಡ್ಕಂಡು ಜೀವ್ನ ಮಾಡಬಹುದು. ಮನಿಶ್ಯಾನಿಗಿ ಏನೇ ಕಷ್ಟ ಇದ್ರು ನೆಮ್ಮದಿ ಮಾತ್ರ ಇರ್ಲೇಬೇಕು. ಮನ್ಸಿಗಿ ನೆಮ್ಮದಿ ಇಲ್ಲಾಂದ್ರೆ ನಮ್ ಹತ್ರ ಏನೇ ಆಸ್ತಿ ಇದ್ರು ಅದು ಇಲ್ದಂಗೇ ಲೆಕ್ಕ. ಅದಕ್ಕೆ ನಾನು ಮೊದ್ಲು ಆಸ್ತಿನ ಬ್ಯಾಡ ಅಂತ ಹೇಳಿದೆ" ಎಂದರು.

ವಿವಾಹದ ನಂತರ ಗಂಡನ ಮನೆಯನ್ನು ಸೇರುವ ಮಹಿಳೆಯರು ಆ ಕುಟುಂಬದಲ್ಲಿ ಅತ್ತೆ ಮಾವನವರ ಹಿಡಿತದಲ್ಲಿರಬೇಕು ಎಂಬುದು ಸಮಾಜ ನಿರ್ಮಿಸಿದ ನಿಯಮ. ಹಾಗಾಗಿ ಆ ಕುಟುಂಬದಲ್ಲಿ ಅತ್ತೆ ಮಾವನವರು ತಮ್ಮ ಸೊಸೆಯಂದಿರಿಂದ ಇದನ್ನು ನಿರೀಕ್ಷಿಸುತ್ತಿರುತ್ತಾರೆ.

ಇದನ್ನು ಮೀರಿದರೆ ಅಂತಹ ಸೊಸೆಯಂದಿರು ಆ ಕುಟುಂಬದಲ್ಲಿ ನಿಂದನೆಗೆ ಒಳಗಾಗುತ್ತಾರೆ. ಮುಖ್ಯವಾಗಿ ಮಹಿಳೆಗೆ ಗಂಡನಿಲ್ಲದಿದ್ದಾಗಲಂತೂ ಅವರು ಎದುರಿಸುವ ಹಿಂಸೆಗಳು ತುಂಬಾನೇ ಭಿನ್ನವಾಗಿರುತ್ತವೆ. ಮುಖ್ಯವಾಗಿ ಆ ಕುಟುಂಬದಲ್ಲಿ ಅವರಿಗೆ ಸೇರುವ ಹಕ್ಕುಗಳಿಂದ ವಿಮುಖರನ್ನಾಗಿ ಮಾಡಲು ಹಲವಾರು ತಂತ್ರಗಳನ್ನು ರೂಪಿಸಲಾಗುತ್ತದೆ. ಇಂತಹದ್ದೇ ಸನ್ನಿವೇಶವನ್ನು ಮಾಸವ್ವನವರು ಎದುರಿಸಿದ್ದಾರೆ. ಇವರು ತಮ್ಮ ಗಂಡನ ಆಸ್ತಿಯನ್ನು ಪಡೆಯಲು ಮುಂದಾದಾಗ ಅವರು ಎದುರಿಸಿದ ಸಂಕಷ್ಟಗಳು, ಗಂಡನ ಮನೆಯಲ್ಲಿ ಮಹಿಳೆಯನ್ನು ನೋಡುವ ಕ್ರಮ ಹೇಗಿರುತ್ತದೆ ಎಂಬುದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಆಸ್ತಿಯ ವಿಷಯಕ್ಕೆ ಬಂದರೆ ಅದು ಗಂಡನ ಮನೆಯಾಗಿರಬಹುದು ಅಥವಾ ತವರು ಮನೆಯಾಗಿರಬಹುದು ಅಲ್ಲಿ ಪಿತೃಪ್ರಧಾನ ಮೌಲ್ಯಗಳು ಮಹಿಳೆಯರನ್ನು ಆಳುತ್ತಲೇ ಇರುತ್ತವೆ ಮತ್ತು ಮಹಿಳೆಯರು ಆರ್ಥಿಕವಾಗಿ ಬಲಗೊಳ್ಳಲು ಇರುವ ಅವಕಾಶಗಳನ್ನೂ ಸಹ ಕಿತ್ತುಕೊಳ್ಳುತ್ತವೆ.

**ಇ. ಮದುವೆಯಾದ ಮಹಿಳೆಗೆ ಮಕ್ಕಳಾಗದೇ ಇದ್ದರೆ ಆ ಮಹಿಳೆಯರನ್ನು ಹಕ್ಕಿನ ವ್ಯಾಪ್ತಿಗೆ ತರದೇ ಇರುವುದು :** ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮೇಲಿನ ಅಂಶವೂ ಕೂಡ ಒಂದು ತೊಡಕಾಗಿ ಮಾರ್ಪಟ್ಟಿರುವುದು ಕಂಡುಬರುತ್ತದೆ. ವ್ಯವಸ್ಥೆಯಲ್ಲಿ ಮಹಿಳೆಗೆ ವಿವಾಹ ಎಂಬುದು ಒಂದು ಬಗೆಯ ಪಂಜರದಂತೆ ರೂಪುಗೊಂಡಿದೆ. ಏಕೆಂದರೆ ವಿವಾಹ ಎಂಬುದು ಸ್ತ್ರೀ ಪುರುಷರಿಬ್ಬರೂ ಕಡ್ಡಾಯವಾಗಿ ಒಳಗಾಗುವಂತಹ ಒಂದು ಪ್ರಕ್ರಿಯೆಯಾಗಿದೆ. ಈ ವಿವಾಹ ಬಂಧನಕ್ಕೆ ಒಳಗಾದರೆ ಸಾಲದು, ಮಕ್ಕಳನ್ನು ಹೆರುವುದೂ ಸಹ ಮಹಿಳೆಯರ ಕರ್ತವ್ಯ ಎಂಬುದು ವ್ಯವಸ್ಥೆಯ ನಿಯಮ. ಈ ನಿಯಮ ಮಹಿಳೆಯರ ಪಾಲಿಗೆ ಇನ್ನಿಲ್ಲದಂತೆ ಹಿಂಸೆಯನ್ನು ನೀಡುತ್ತಿದೆ. ಮಕ್ಕಳಿಲ್ಲದ ಮಹಿಳೆಯರ ಜೀವನ ತುಂಬಾ ಶೋಚನೀಯವಾಗಿರುತ್ತದೆ. ಇದೇ ಕಾರಣಕ್ಕೆ ಹಲವು ಸಮಸ್ಯೆಗಳನ್ನು ಎದುರಿಸುತ್ತಾರೆ. ಅಂದರೆ ಸಮಾರಂಭಗಳಲ್ಲಿ ಇವರಿಗೆ ಕೆಲವು ನಿಷೇಧಗಳಿರುತ್ತವೆ. ಕುಟುಂಬದಲ್ಲಿನ ಹಲವು ಸಮಸ್ಯೆಗಳು. ಹಾಗೆಯೇ ವ್ಯವಸ್ಥೆಯು ಇಂತಹ ಮಹಿಳೆಯರನ್ನು ಬಂಜೆ ಎಂತಲೋ, ಗೊಡ್ಡಿ ಎಂತಲೋ ಕರೆಯುತ್ತದೆ. ಇಂತಹ ಮಾತುಗಳನ್ನಾಡಿಸಿಕೊಂಡು ನೋವನ್ನು ನುಂಗಿಕೊಳ್ಳುವುದು ಮಹಿಳೆಯರಿಗೆ ಅನಿವಾರ್ಯವಾಗಿರುತ್ತದೆ. ಹೀಗೆ ಇದೇ ಕಾರಣವನ್ನು ಮುಂದು ಮಾಡಿಕೊಂಡು ಮಹಿಳೆಯರಿಗೆ ಆಸ್ತಿ ಹಕ್ಕು ದೊರೆಯದಂತೆ ಮಾಡಲಾಗುತ್ತಿದೆ. ಈ ಬಗೆಯ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಇವುಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ವಕ್ತೃಗಳ ಮಾತಿನಲ್ಲಿಯೇ ಮುಂದಿನಂತೆ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ವಣೇನೂರು ಗ್ರಾಮದ ಹಂಪಮ್ಮ ಎಂಬುವವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ನ್ಯಾಯಾಲಯದ ಮೆಟ್ಟಿಲೇರಿದ್ದರು. ಆದರೆ ಇವರು ನ್ಯಾಯಾಲಯಕ್ಕೆ ತೆರಳುವ ಮುನ್ನ ಮತ್ತು ನ್ಯಾಯಾಲಯದ ಮೆಟ್ಟಿಲೇರಿದ ನಂತರ ತಮ್ಮ

ಕುಟುಂಬದಲ್ಲಿ ಹಲವು ಸಮಸ್ಯೆಗಳನ್ನು ಎದುರಿಸಿದ್ದಾರೆ. ಇವರು ಹೇಳುವಂತೆ " ನಮ್ ಅಪ್ಪಗ ನಾಕು ಜನ ಮಕ್ಳು. ಅದರಾಗ ನಾನೇ ಸಣ್ಣೋಳು. ಇನ್ನ ಮೂವರು ಅಣ್ಣಂದ್ರು. ನಮ್ ಅಪ್ಪಗ ೫ ಎಕ್ರೆ ಜಮೀನು ಮತ್ತೆ ಒಂದು ಮನಿ, ಒಂದು ಬಂಡಿ ಐತಿ. ನನಿಗೆ ಇದೇ ಊರಾಗ ಮದ್ವಿ ಮಾಡಿ ಕೊಟ್ಟಾರ. ಇಲ್ಲಿಗೆ ನಾಕು ವರ್ಷ ಆತು. ಇಲ್ಲಿವರ್ಗೂ ಮಕ್ಳೇ ಆಗಿಲ್ಲ. ಅಲ್ಲಿ ಇಲ್ಲಿ ಅಂತ ಬಾಳ ಕಡಿ ತೋರಿಸಿದ್ವಿ, ಆದ್ರೆ ಏನೂ ಪ್ರಯೋಜ್ನ ಆಗ್ಲಿಲ್ಲ. ಅದಕ್ಕೆ ತೊರ್ಸಾದೇ ಬ್ಯಾಡಂತ ಸುಮ್ನಾಗಿಬಿಟ್ವಿ. ನನ ಗಂಡ ಗದ್ದಿ ಕೆಲ್ಸ ಮಾಡ್ತಾನ. ಇಲ್ಲಿ ಇವ್ರಿಗೆ ತಂದಿ ಆಸ್ತಿನಾಗ ೧ ಎಕ್ರೆ ಜಮೀನು ಬಂದೇತಿ. ಅದ್ರಾಗ ನೋಡಿದ್ರ ಏನೂ ಬೆಳಿಯಂಗಿಲ್ಲ ಹಂಗೈತಿ ಭೂಮಿ. ಯಾಕಂದ್ರ ನೀರು ಸತೆ ಬರಂಗಿಲ್ಲ. ಅಂತ ಭೂಮಿ ಕೊಟ್ಟಾರ. ನಮ್ ತವ್ರ ಮನ್ಯಾಗ ನಮ್ ಅಣ್ಣಂದ್ರು ಜಗಳ ಮಾಡಿಕೆಂಡು ಬ್ಯಾರೆ ಆಗ್ಬೇಕಂತ ಮಾತುಕತಿ ನಡಿಸಿದ್ರು. ಹಂಗೆ ಆಸ್ತಿನ ಪಾಲು ಮಾಡ್ಬೇಕು ಅಂತಾನೂ ಮಾತಾಡಿಕೆಂಡಿದ್ರಂತೆ. ಇದು ನನಗ ಗೊತ್ತಾಗಿ. ನಾನೂ ಸತೆ ನಿಮ್ ಮಗಳು ನನಗೂ ಆಸ್ತಿನಾಗ ಪಾಲು ಕೊಡ್ರಿ ಅಂತ ಕೇಳಿದ್ದೆ. ಆದ್ರೆ ಅವ್ರು ಕೊಡಾಕ ಒಪ್ಲಿಲ್ಲ. ಸದ್ಯ ನಮ್ ಅಪ್ಪಾನೇ ಒಪ್ಲಿಲ್ಲ. ಯಾಕಂತ ಕೇಳಿದ್ರೆ ನಿನಗ ಏನ್ ಕಡಿಮಿ ಆಗೇತಿ, ಮಕ್ಳಿಲ್ಲ ಮರಿಗಳಿಲ್ಲ. ಗಂಡ ಹೆಡ್ತಿ ಇಬ್ರೆ ಇರೋದು. ಆಸ್ತಿ ತಗಂಡು ಏನ್ ಮಾಡ್ತಿ ಅಂತಂದ್ರು. ನಾವು ಇರೋದು ಇಬ್ರೆ ಆದ್ರೆ ನಮಿಗೆ ಇಲ್ಲಿ ಬದುಕಾಕೇ ಬಾಳ ಕಷ್ಟ ಆಗೇತಿ. ದಿನಾ ದುಡ್ಕಂಡು ಬಂದು ಜೀವ್ನ ಮಾಡ್ಬೇಕು. ಒಂದೊಂದ್ಸಾರಿ ಕೆಲ್ಸಾನೂ ಇರಂಗಿಲ್ಲ. ಹಂಗಾಗಿ ಆಸ್ತಿನಾಗ ನನಗೂ ಪಾಲು ಸಿಗ್ಬೇಕು. ಇಲ್ಲಾಂದ್ರೆ ನಾನು ಕೋರ್ಟಿಗೆ ಹೋಗ್ತೀನಿ ಅಂತಂದೆ. ಹಿಂಗ ಅಂದಿದ್ದು ಒಂದೇ ತಡ ನಮ್ ದೊಡ್ಡಣ್ಣ ಈರಪ್ಪ ಒಂದೇ ಸಾರಿ ಸಿಟ್ಟಿಗೆ ಬಂದುಬಿಟ್ಟ, ನಿನಿಗೆ ಏನಾರಾ ತಲಿಗಿಲಿ ಕೆಟ್ಟೈತೇನು? ಕೋರ್ಟಿಗಿ ಹೋಗ್ತೀನಿ ಅಂತೀಯಲ್ಲ. ನೀವು ಇಬ್ರು ಬದುಕಾಕ ಆಸ್ತಿ ಯಾಕ ಬೇಕು? ಅಪ್ಪ ಕೊಡಾಕ ಒಪ್ಪಿಕೆಂಡ್ರು ಸತೆ ನಾವು ಮಾತ್ರ ಆಸ್ತಿನಾಗ ಭಾಗ ಕೊಡಂಗಿಲ್ಲ. ಏನಾದ್ರು ಮಾಡ್ಕ. ಅಂತಂದ. ಮತ್ತೆ ಅಪ್ಪ ನಡುಕ ಭಾಯಿ ಹಾಕಿ, ನಿಮ್ ಅಣ್ಣಂದ್ರಿಗಾದ್ರೆ ಮಕ್ಳು ಐದಾರ. ಅವ್ರ ಓದು, ಮದುವಿ ಅಂತ ರೊಕ್ಕ ಬಾಳ ಬೇಕಾಗತ್ಯೆತಿ. ಮತ್ತೆ ನಿನಗ ಮದುವಿ ಮಾಡಿ ಕೊಟ್ಮೇಲೆ ನೀನು ಏನಿದ್ರೂ ಗಂಡನ ಮನ್ಯಾಗ ಅಧಿಕಾರ ನಡಿಸ್ಬೇಕು. ಇಲ್ಲಿ ತವ್ರ ಮನ್ಯಾಗಿನ ಆಸ್ತಿನಾಗ ಪಾಲು ಕೇಳ್ಬಾರ್ದು. ನಾನು ಆಸ್ತಿನ್ಯಾಗ ಪಾಲು ಕೊಡಂಗಿಲ್ಲ. ಅಂತಂದ್ರು. ಆದ್ರ ನಾನು ಸುಮ್ನಿರ್ಲಿಲ್ಲ. ನಾನು ಸತೆ ನಿಮ್ ಮಗಳೇ. ಹಂಗಾಗಿ ಆಸ್ತಿನಾಗ ಅವ್ರಿಗೆಲ್ಲಾ ಎಷ್ಟು ಪಾಲು ಸಿಗತ್ಯೆತೋ ಅಷ್ಟು ನನಗೂ ಬರಬೇಕು ಅಂತಂದೆ. ಆದ್ರೆ ಅವ್ರು ಒಪ್ಲಿಲ್ಲ. ನನಿಗೆ ತಿಳಿಲಾರ್ದಂಗ ಆಸ್ತಿನ ನಮ್ ಅಣ್ಣಂದ್ರೆಲ್ಲಾ ಹಂಚಿಕೆಂಡಿದ್ರು. ಇದು ನನಿಗೆ ಗೊತ್ತಾಗಿ, ನಾನು ನನ್ ಗಂಡಗ ಹೇಳಿ ಕೋರ್ಟಿಗೆ ಕೇಸ್ ಮಾಡಿದೆ. ನನ ಗಂಡ ಬಿ.ಎ. ಓದ್ಯಾನ. ಆತಗ ಕಾನೂನು ಸ್ವಲ್ಪ ಗೊತ್ತೈತಿ. ಹಂಗಾಗಿ ನಾನು ಕೋರ್ಟಿಗೆ ಕೇಸ್ ಮಾಡ್ದೆ. ಆಮ್ಯಾಲೆ ಕೋರ್ಟಿನ್ಯಾಗ ಬಾಳ ದಿನ ಕೇಸ್ ನಡೀತು. ಆದ್ರೆ ಕೋರ್ಟಿನ್ಯಾಗ ಕೇಸ್ ಇನ್ನು ನಡೀತಿತ್ತು ನಮ್ ಅಪ್ಪ ತೀರಿಕೆಂಡು ಬಿಟ್ಟ. ಇದಕ್ಕ ನಾನೇ ಕಾರಣ ಅಂತ ನಮ್ ಅಣ್ಣಂದ್ರು ಊರಾಗೆಲ್ಲಾ ಹುಟ್ಟಿಸಿಬಿಟ್ಟಿದ್ರು. ಅಂದ್ರೆ ನಾನು ಆಸ್ತಿನಾಗ ಭಾಗ ಕೇಳಿ ಕೋರ್ಟಿಗೆ ಹೋಗಿದ್ಕ ಅದೇ ಚಿಂತಿನಾಗ ನಮ್ ಅಪ್ಪ ತೀರಿಕೆಂಡ್ರು ಅಂತ ಹೇಳ್ತಿದ್ರು. ಆವಾಗ ನಮ್

ಊರಾಗಿನ ಮಂದಿಯೆಲ್ಲಾ ನನ್ನನ್ನೇ ಬೈಯೋರು. ಆದ್ರೆ ಇದ್ಯಾವದನ್ನೂ ಲೆಕ್ಕಕ್ಕ ತಗಳ್ಳಿಲ್ಲ. ಕೋರ್ಟಿನಾಗ ಕೇಸ್ ಹಂಗೇ ನಡೀತಿತ್ತು. ಕೊನಿಗೆ ಒಂದಿನ ನಮ್ ಅಪ್ಪನ ಆಸ್ತಿನಾಗ ನನಗೂ ಆಸ್ತಿನಾಗ ಪಾಲು ಸಿಗಬೇಕು ಅಂತ ಕೋರ್ಟ್ ಹೇಳ್ತು. ಆವಾಗ ನಮ್ ಅಣ್ಣಂದ್ರು ನನ್ ಮ್ಯಾಲೆ ಬಾಳ ಸಿಟ್ಟಾಗಿದ್ರು. ಈವತ್ತಿಗೂ ನಮ್ ಅಣ್ಣಂದ್ರು ನಂತಾಗ ಮಾತಾಡಂಗಿಲ್ಲ. ಯಾಕ ಮಕ್ಳಿದ್ರೆ ಮಾತ್ರ ಆಸ್ತಿ ತಗಬೇಕೇನು? ನಮ್ದು ಒಂದು ಜೀವ್ನ ಐತಲ್ಲ? ಇದೆಲ್ಲಾ ಅವ್ರಿಗೆಲ್ಲಿ ಗೊತ್ತಾಗಬೇಕು. ಮದುವಿ ಮಾಡಿ ಕೊಟ್ಟಿಟ್ರೆ ಆತು ಅಂತ ತಿಳ್ಕಂಡಾರ. ಇಲ್ಲಿ ನಾವು ಯಂಗ ಜೀವ್ನ ನಡಿಸ್ತೀವಿ ಅಂತ ಅವ್ರಿಗೇನು ಗೊತ್ತು. ನಮ್ ಅಪ್ಪನೇ ಹಿಂಗ ಮಾತಾಡ್ದಲ್ಲ ಅಂತ ಬಾಳ ಬೇಜಾರಾಯ್ತು. ಯಾಕಂತಂದ್ರೆ ಮಕ್ಳು ಅಂದ್ರೆ ಎಲ್ಲಾರೂ ಒಂದೇ. ಆದ್ರೂನೂ ನಮ್ ಅಪ್ಪಗ ಅವರ ಮಾತ್ರ ಮಕ್ಳಾಗಿದ್ರು. ಹಂಗಾಗಿ ನಾನು ಗಟ್ಟಿ ಧೈರ್ಯ ಮಾಡಿ ಕೋರ್ಟಿಗೆ ಹೋಗಿದ್ದೆ. ಅದಕ್ಕ ನನಗ ಆಸ್ತಿನಾಗ ಪಾಲು ಸಿಕ್ತು ಎಂದರು. ಅದೇ ರೀತಿಯಲ್ಲಿ ಇನ್ನೊಂದು ಪ್ರಕರಣವನ್ನು ನೋಡುವುದಾದರೆ,

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದ ಯಂಕಮ್ಮ ತನ್ನ ತಂದೆಯ ಆಸ್ತಿಯಿಂದ ವಂಚಿತಳಾಗಿದ್ದಾಳೆ. ಯಂಕಮ್ಮನವರಿಗೂ ಸಹ ಮದುವೆಯಾಗಿ ಮೂರು ವರ್ಷಗಳಾದರೂ ಮಕ್ಕಳೇ ಆಗಿರಲಿಲ್ಲ. ಹಾಗಾಗಿ ಇವರು ತವರು ಮನೆ ಮತ್ತು ಗಂಡನ ಮನೆ ಎರಡೂ ಕಡೆಯಿಂದ ನಿರ್ಲಕ್ಷಕ್ಕೆ ಒಳಗಾಗಿದ್ದಾರೆ. ಜೊತೆಗೆ ಯಂಕಮ್ಮನವರಿಗೆ ಮಕ್ಕಳಾಗದಿರುವುದಕ್ಕೆ ದಿನವೂ ಗಂಡನ ಮನೆಯಲ್ಲಿ ಹಿಂಸೆಯನ್ನು ಅನುಭವಿಸುತ್ತಿದ್ದರು. ಇವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ಕೋರ್ಟ್ ಮೆಟ್ಟಿಲೇರಿ ನಂತರದಲ್ಲಿ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ಕೇಸನ್ನು ಕುಲಾಸೆ ಮಾಡಿಕೊಂಡಿದ್ದಾರೆ. ಇವರು ಹೇಳುವಂತೆ "ನಮ್ ಅಪ್ಪಗ ಇಬ್ರೆ ಮಕ್ಳು. ಅದರಾಗ ನಾನು ಸಣ್ಣೋಳು. ನನಿಗಿಂತ ದೊಡ್ಡೋನು ನಮ್ ಅಣ್ಣ ಐದಾನ. ಅಪ್ಪಂದು ಅಂತ ಇರೋದು ಎರಡುವರೆ ಎಕ್ರೆ ಜಮೀನು. ಅದನ್ನ ನಮ್ ಅಣ್ಣನೇ ಮಾಡ್ತಿದ್ದ. ನಮ್ ಅಪ್ಪ ತೀರಿಕೆಂಡ್ ಮ್ಯಾಲೆ. ಆ ಆಸ್ತಿನೆಲ್ಲಾ ತನ್ನ ಹೆಸ್ರಿಗೆ ಮಾಡ್ಸಿಕೆಳ್ಳಾಕ ನೋಡ್ದ, ಆದ್ರೆ ಈ ವಿಚಾರ ನನ ಗಂಡಗ ಗೊತ್ತಾಗಿ ಆಸ್ತಿನಾಗ ನಿನಗೂ ಪಾಲು ಸಿಗತೈತಿ ನಿಮ್ ಅಣ್ಣಗ ಕೇಳು ಅಂತ ಹೇಳಿಕಳಿಸಿದ್ರು. ಮತ್ತೆ ನನಿಗೆ ಮಕ್ಳು ಆಗಿಲ್ಲ ಅಂತೇಳಿ ನಮ್ ಅತ್ತಿ ಮಾವನವ್ರು ಮತ್ತೆ ನಮ್ ತವ್ರ ಮನೇರು ಬಾಳಾ ಬೇಜಾರಾಗಿದ್ರು. ಮಕ್ಳು ಇಲ್ದಂಗಾಗಿ ನನಿಗಂತೂ ಜೀವ್ನನೇ ಬೇಜಾರಾಗ್ತಿತ್ತು. ಏನ್ ಮಾಡೋದು ದೇವ್ರು ನನಿಗೆ ಅಂತ ಒಂದು ಕುಡಿ ಕೊಟ್ಟಿದ್ರೆ ಸಾಕಾಗಿತ್ತು. ಆದ್ರೆ ಹಂಗಾಗ್ಲಿಲ್ಲ. ಇದೇ ನೆಪ ಮಾಡ್ಕೆಂಡು ತವ್ರ ಮನಿದು ಆಸ್ತಿನಾಗ ಭಾಗ ತಗಂಡು ಬಾ ಅಂತ ನನ ಗಂಡನ ಮನೇವ್ರು ಹೇಳ್ತಾನೇ ಇದ್ರು. ಆದ್ರೆ ಎಲ್ಲಿಂದ ತರೋದು. ಇರೋದು ಎರಡುವರೆ ಎಕ್ರೆ. ಅದ್ರಾಗ ಅರ್ದ ತಗಂಡು ನಾನೇನು ಮಾಡಾಕಾಗ್ತೈತಿ. ಅಂತೇಳಿ ಸುಮ್ನಾಗಿದ್ದೆ. ಆದ್ರೆ ನನ ಗಂಡ ಸುಮ್ನಾಗ್ಲಿಲ್ಲ. ಮನ್ಯಾಗ ಏನಾರಾ ನೆವ ಮಾಡ್ಕೆಂಡು ಚುಚ್ಚು ಮಾತಾಡ್ತಿದ್ರು. ಇದನ್ನೆಲ್ಲಾ ಸಹಿಸ್ಕೆಳ್ಳಾಕ ಆಗ್ಲಿಲ್ಲ. ಒಂದಿನ ನಮ್ ಅಪ್ಪನ ಆಸ್ತಿನಾಗ ಭಾಗ

ಕೇಳಾನು ಅಂತ ತವ್ರ ಮನಿಗೆ ಹೋಗಿದ್ದೆ. ಅಲ್ಲಿ ನಮ್ ಅಣ್ಣಂತಾಗ ಆಸ್ತಿ ವಿಚಾರಾನ ಮಾತಾಡ್ಬೇಕಂದ್ರೆ ಬಾಳ ಹೆದ್ರಿಕಿ ಆತು. ಏನ್ ಮಾಡೋದು ಇಲ್ಲಿಂದ ಹಂಗೆ ಸುಮ್ನೆ ಹೋದ್ರೆ ಗಂಡನ ಮನ್ಯಾಗ ಬ್ಯಾರೆ ಕಷ್ಟ. ಹಂಗಾಗಿ ಗಟ್ಟಿ ಧೈರ್ಯ ಮಾಡಿ ಕೇಳೇ ಬಿಟ್ಟೆ. ಆದ್ರೆ ನಮ್ ಅಣ್ಣ ಕೊಡಾಕ ಆಗಲ್ಲ ಅಂತಂದ. ಆದ್ರೆ ನನ ಗಂಡ ಸುಮ್ನಿರ್ಲಾರ್ದೆ ಕೋರ್ಟಿಗೆ ಕೇಸ್ ಹಾಕು ಅಂತೇಳಿ ನನ್ ಕಡಿಯಿಂದ ಕೇಸ್ ಹಾಕ್ಸಿಬಿಟ್ಟ. ನಾನಿಗೇನೂ ಇಷ್ಟ ಇರ್ಲಿಲ್ಲ. ಆದ್ರೆ ನಮ್ ಅಣ್ಣ ಅಂದಿದ್ ಮಾತುಗಳ್ನ ನೆನಿಸಿಕೆಂಡ್ರೆ ನಾನು ಮಾಡಿದ್ದು ಏನೂ ತಪ್ಪಿಲ್ಲ ಅಂತೇಳಿ ಅನ್ಕಂಡೆ. ನಮ್ ಅಣ್ಣ ಏನ್ ಹೇಳಿದ್ದ ಅಂದ್ರೆ ನಿನಿಗೆ ಮಕ್ಳಿಲ್ಲ ಮರಿಗಳಿಲ್ಲ. ಆಸ್ತಿನ ತಗಂಡು ಏನ್ ಮಾಡ್ತಿ. ಅದನ್ನೆಲ್ಲಾ ತಗಂಡು ನಿನ ಗಂಡನ ಜೋಬಿ ತುಂಬಿಸ್ತಿಯೇನು? ಇಲ್ಲಿ ನಮಿಗೆ ಇರೋದು ಎರಡುವರೆ ಎಕ್ರೆ ಜಮೀನು. ಅದೇ ನಮ್ ಜೀವ್ನಕ್ಕ ಸಾಕಾಗುವಲ್ದು. ಅದ್ರಾಗ ನಿನಿಗೆ ಅರ್ದ ಬೇಕಂದ್ರೆ ನಾನೇಲ್ಲಿಗೆ ಹೋಗ್ಲಿ. ಸರಿ ನಿನಿಗೆ ಏನಾರ ಒಂದು ಹೆಣ್ಣೋ, ಗಂಡೋ ಅಂತ ಮಕ್ಳಿದ್ದಿದ್ರೆ, ಆವಾಗ ಏನಾರ ಯೋಚ್ನೆ ಮಾಡಬಹುದಿತ್ತು. ಆದ್ರೆ ನಿನಿಗೆ ಅದರ ಭಾಗ್ಯನೇ ಇಲ್ಲ. ಆಸ್ತಿ ತಗಂಡು ಯಾರ್ನ ಸಾಕ್‌ಬೇಕಾಗೇತಿ. ನಾನಂತೂ ಕೊಡಂಗಿಲ್ಲ ಅಂತಂದ. ಈ ವಿಚಾರ ನಮ್ ಅತ್ತಿ ಮಾವಗ ಗೊತ್ತಾತು. ಅವ್ರು ಮತ್ತೆ ನನಿಗೇ ಬೈಯೋದಕ್ಕ ಸುರು ಮಾಡಿದ್ರು, ನೀನು ಮಕ್ಕಳ್ನ ಹೆತ್ತಿದ್ರೆ ಎಲ್ಲಾನೂ ಸರಿ ಹೋಗ್ತಿತ್ತು. ಈಗ ನೋಡು ನಿಮ್ ಅಣ್ಣಂದ್ರು ಅದೇ ವಿಚಾರಕ್ಕ ಆಸ್ತಿನಾಗ ಪಾಲು ಕೊಡಾಂಗಿಲ್ಲ ಅಂತ ಹೇಳಾಕತ್ಯಾರ ಅಂತಂದ್ರು, ಅಯ್ಯೋ ಮಕ್ಕಳ ವಿಚಾರದಾಗ ಒಬ್ಬೊಬ್ರು ಒಂದೊಂದು ಮಾತಾಡ್ಯಾರ. ಮತ್ತೆ ನಮ್ ಸಂಬಂಧಿಕರ್ದಾಗ ಏನಾರ ಕಾರ್ಯೇವುಗಳು ಇದ್ರೆ ನನ್ನ ಬಾಳ ದೂರ ಇಡ್ತಿದ್ರು, ಮಕ್ಳು ಆಗ್ದೇ ಇರೋರಿಗೆ ಇದೊಮದು ರೀತಿ ಶಿಕ್ಷೆ. ಅದ್ನೆಲ್ಲಾ ನೆನಿಸಿಕೊಂಡ್ರೆ ಜೀವ್ನಾನೇ ಬ್ಯಾಡ ಅಂತ ಅನ್ನಿಸಿಬಿಡ್ತೈತಿ. ಇದನ್ನ ಕೇಳಿ ನನಿಗಂತೂ ಬಾಳ ಸಂಕಟ ಆಗಿತ್ತು. ಏನ್ ಮಾಡೋದು ನನ್ ಹಣೇಬರ ಅಂತೇಳಿ ಸುಮ್ನಾಗಿದ್ದೆ. ನನ ಗಂಡಾನೇ ನಮ್ ಅತ್ತಿ ಮಾವನೋರ್ನ ಸುಮ್ನಿರ್ಸಿದ್ರು, ಅಪ್ಪನ ಆಸ್ತಿನಾಗ ಭಾಗ ಬೇಕಂತೇಳಿ ಕೇಸ್ ಮಾಡಿದ್ ಮ್ಯಾಲೆ ನಮ್ ಅಣ್ಣಗ ಬಾಳ ಕಷ್ಟ ಆಗಿತ್ತು. ಹಂಗಾಗಿ ನಮ್ ಅಣ್ಣ ಊರಾಗಿನ ಹಿರೇರ್ನೆಲ್ಲಾ ಸೇರ್ಸಿ ಪಂಚಾಯ್ತಿ ಮಾಡ್ಸಿದ. ಅಲ್ಲಿ ಸತೆ ಊರಾಗಿನ ಹಿರೇರು ಮತ್ತೆ ನಮ್ ಸಂಬಂದಿಕ್ರು ಎಲ್ಲಾರೂ ಸೇರಿ ನನ್ನೇ ಬೈದ್ರು, ನನಿಗೇ ಬುದ್ದಿವಾದ ಹೇಳಿದ್ರು, ಬಾಳ ಹೇಳಿಸ್ಕ್ಯಾ ಬಾರ್ದು ಅಂತೇಳಿ, ನೀವು ಏನ್ ತೀರ್ಮಾನ ಮಾಡ್ತಿರೋ ಅದನ್ನ ನಾನು ಒಪ್ತಿನಿ ಅಂತಂದೆ. ಊರಾಗಿನ ಹಿರೇರು ಮಾತಾಡಿ ನಿನಗ ಆಸ್ತಿನಾಗ ಅರ್ದ ಪಾಲು ಬೇಕಂದ್ರೆ ಆಗಲ್ಲ. ನಿಮ್ ಅಣ್ಣಗ ಮಕ್ಳು ಮರಿಗಳು ಐದಾರ. ಅವ್ರ ಓದು, ಮದುವಿ ಅಂತ ಬಾಳ ಖರ್ಚು ಐದಾವ. ನಿನಿಗೆ ಇವು ಯಾವ ತೊಂದ್ರಿನೂ ಇಲ್ಲ. ಹಂಗಾಗಿ ಇರೋ ಎರಡೂವರೆ ಎಕ್ರೆ ಜಮೀನ್‌ನಾಗ ಅರ್ದ ಎಕ್ರೆ ನೀನು ತಗ, ಎರಡು ಎಕ್ರೆನ ನಿಮ್ ಅಣ್ಣ ತಗಳ್ಳಿ, ಆವಾಗ ಸರಿ ಹೋಗ್ತದ ಅಂದ್ರು, ಅದಕ್ಕ ನಾನಿಗೇನೋ ಒಪ್ಪಿಗೆ ಇತ್ತು. ಆದ್ರೆ ನನ ಗಂಡ ಒಪ್ಪಬೇಕಲ್ಲಾ ಅಂತ ಚಿಂತಿ ಆತು. ಆಮ್ಯಾಲೆ ಊರಾಗಿನ ಹಿರೇರೇ ನನ ಗಂಡಗ ಬುದ್ದಿ ಹೇಳಿ ಕಳಿಸಿದ್ರು, ಆಗ ನಾನು

ಮತ್ತೆ ನನ ಗಂಡ ಇಬ್ರು ಸತೆ ಒಪ್ಪಿದ್ವಿ ಆಮ್ಯಾಲೆ ಕೋರ್ಟನಾಗ ಹಾಕಿದ್ದ ಕೇಸ್ನ ಕುಲಾಸೆ ಮಾಡಿಸಿದ್ವಿ" ಎಂದರು.

ಮೇಲಿನ ಎರಡು ಪ್ರಕರಣಗಳಲ್ಲಿ ತಮ್ಮ ತಂದೆಯ ಆಸ್ತಿಗಾಗಿ ಮಹಿಳೆಯರು ಹಲವು ಸಮಸ್ಯೆಗಳನ್ನು ಎದುರಿಸಿದ್ದಾರೆ. ಈ ಎರಡೂ ಪ್ರಕರಣಗಳಲ್ಲಿನ ಮಹಿಳೆಯರು ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳಿಗೆ/ಸಂಚುಗಳಿಗೆ ಗುರಿಯಾಗಿ ಹಲವು ಸಮಸ್ಯೆಗಳನ್ನು ಎದುರಿಸಿದ್ದಾರೆ. ಅಂದರೆ ಸಮಾಜವು ಹಿಂದಿನಿಂದಲೂ ಕೆಲವು ರೂಢಿ ಮತ್ತು ನಂಬಿಕೆಗಳನ್ನು ಮಹಿಳೆಯರ ಮೇಲೆ ಹೇರುತ್ತಲೇ ಬಂದಿದೆ. ಈ ನಂಬಿಕೆಗಳನ್ನು ಮಹಿಳೆಯರು ಪಾಲಿಸಲೇಬೇಕಾದ ಅನಿವಾರ್ಯತೆಗೆ ಒಳಗಾಗಿರುತ್ತಾರೆ. ಮುಖ್ಯವಾಗಿ ಮೇಲಿನ ಎರಡು ಪ್ರಕರಣಗಳಲ್ಲಿ ಮೊದಲನೆಯ ಪ್ರಕರಣ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ಹಂಪಮ್ಮ ಹಲವಾರು ಸಮಸ್ಯೆಗಳನ್ನು ಎದುರಿಸಿದ್ದಾರೆ. ಮಕ್ಕಳಾಗಿಲ್ಲದಿರುವುದೇ ಒಂದು ಪ್ರಮುಖ ಕಾರಣವನ್ನಾಗಿ ಪರಿಗಣಿಸಿ ಆಸ್ತಿಯಲ್ಲಿ ಪಾಲನ್ನು ಕೊಡದಿರುವುದು ಮತ್ತು ತನ್ನ ಪಾಲಿನ ಆಸ್ತಿಗಾಗಿ ಹಂಪಮ್ಮ ನ್ಯಾಯಾಲಯದ ಮೆಟ್ಟಿಲೇರಿರುವುದು ಕಂಡುಬರುತ್ತದೆ. ಹಂಪಮ್ಮ ತಮ್ಮ ತಂದೆಯ ಆಸ್ತಿಯಲ್ಲಿ ಪಾಲು ಪಡೆಯುವುದರಲ್ಲಿ ಯಶಸ್ವಿಯಾದರು ನಿಜ. ಆದರೆ ಇದನ್ನು ಪಡೆಯಲು ಹಂಪಮ್ಮ ತನ್ನ ತವರು ಮನೆಯಿಂದ ಹಲವು ಸಂಕಷ್ಟಗಳನ್ನು ಎದುರಿಸಿರುವುದೂ ಕೂಡ ಅಷ್ಟೇ ಸತ್ಯ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಯಂಕಮ್ಮಳು ತನಗೆ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ತವರು ಮನೆಯಿಂದ ಮತ್ತು ಗಂಡನ ಮನೆಯಿಂದ ಎರಡೂ ಕಡೆಯಿಂದ ನೋವನ್ನು ಅನುಭವಿಸಿದ್ದಾಳೆ. ಹಾಗೆಯೇ ತನ್ನ ತಂದೆಯ ಆಸ್ತಿಯಲ್ಲಿನ ಸಮ ಪಾಲನ್ನು ಕಳೆದುಕೊಂಡಿದ್ದಾಳೆ. ಈ ಹಿಂದೆ ಉಲ್ಲೇಖಿಸಿದ ಕಬ್ಬರಗಿ ಮಾಸವ್ವನ ಪ್ರಕರಣವನ್ನು ಗಮನಿಸಬಹುದು. ಈ ಪ್ರಕರಣದಲ್ಲಿ ಮಕ್ಕಳಿಲ್ಲವೆಂದು ಗಂಡನ ಮನೆಯವರು ಆಸ್ತಿ ಕೊಡಲು ನಿರಾಕರಿಸುತ್ತಾರೆ. ಮುಖ್ಯವಾಗಿ ಮಹಿಳೆಗೆ ಆರ್ಥಿಕ ಭದ್ರತೆ ಎಂಬುದು ಯಾವುದೇ ಮೂಲದಿಂದ ಬಂದರೂ ಸಹ ಅದನ್ನು ಸಹಿಸದ ಪುರುಷ ಪ್ರಧಾನ ವ್ಯವಸ್ಥೆ ಅದನ್ನು ತಡೆಯುವುದಕ್ಕಾಗಿ ಹಲವು ಉಪಾಯಗಳನ್ನು ಮಾಡುತ್ತಲೇ ಇರುತ್ತದೆ. ಮುಖ್ಯವಾಗಿ ಮಕ್ಕಳಿಲ್ಲದ ಮಹಿಳೆಯರನ್ನು ವ್ಯವಸ್ಥೆಯು ನೋಡುವ ಬಗೆಯೇ ಬೇರೆ. ಅಂದರೆ ಅವಳನ್ನು ಅವಮಾನಿಸುವ ನೆಲೆಯಲ್ಲಿ ನೋಡಿಕೊಳ್ಳುತ್ತದೆ. ಹಾಗೆಯೇ ಮಕ್ಕಳಿಲ್ಲದ ಮಹಿಳೆಗೆ ಬಂಜೆ, ಗೊಡ್ಡಿ ಎಂಬ ಹಣೆ ಪಟ್ಟಿಯನ್ನು ಕಟ್ಟಿಬಿಡುತ್ತದೆ. ಇದರಿಂದ ಹೊರ ಬರಲಾಗದೇ ಮಹಿಳೆಯರು ತೊಳಲಾಡುವಂತಹ ಸ್ಥಿತಿಯನ್ನು ನಿರ್ಮಿಸಲಾಗುತ್ತದೆ. ಮಕ್ಕಳಾಗದೇ ಇರುವ ಸಂದರ್ಭದಲ್ಲಿ ಮಹಿಳೆಯರು ಎದುರಿಸುವ ಸಮಸ್ಯೆಗಳ ಕಾರಣವಾಗಿ ಹಲವು ಜನಪದ ಹಾಡುಗಳು ಹುಟ್ಟಿಕೊಂಡಿವೆ. ಮುಖ್ಯವಾಗಿ ಬಂಜೆ ಎಂಬ ಶಬ್ದವೇ ಮಹಿಳೆಯರನ್ನು ಇನ್ನಿಲ್ಲದಂತೆ ಹಿಂಸೆಯನ್ನು ನೀಡಲಾರಂಬಿಸುತ್ತದೆ. ಏಕೆಂದರೆ ವಿವಾಹವಾದ ಮಹಿಳೆಯರಿಗೆ ಮಕ್ಕಳಾಗಲೇ ಬೇಕು ಎಂಬುದು ಸಮಾಜ ಒಪ್ಪಿತ ನಿಯಮ. ಅದನ್ನು ಮೀರಿದರೆ ಅಥವಾ ಮಕ್ಕಳಾಗದೇ ಇದ್ದರೆ ಮಹಿಳೆಗೆ ಸಂಕಷ್ಟಗಳು ಕಟ್ಟಿಟ್ಟ ಬುತ್ತಿ. ಆ

ಕಾರಣಕ್ಕಾಗಿ ವ್ಯವಸ್ಥೆಯಲ್ಲಿ ಮಕ್ಕಳಾಗದಿರುವ ವಿವಾಹವಾದ ಮಹಿಳೆಯರಿಗೆ ಮಕ್ಕಲಾಗದೇ ಇದ್ದರೆ ಅಂತಹವರನ್ನು ಬಂಜೆ ಎಂದು ವ್ಯವಸ್ಥೆ ಕರೆಯುತ್ತದೆ. ಜನಪದರು ಈ ಬಂಜೆ ಎಂಬ ಶಬ್ದದಿಂದ ಹೊರಬರಲು ಹಲವು ರೀತಿಯಲ್ಲಿ ಪ್ರಯತ್ನಿಸುತ್ತಿರುತ್ತಾರೆ ಎಂಬುದಕ್ಕೆ ಅವರಲ್ಲಿರುವ ಹಾಡುಗಳೇ ಸೂಚಿಸುತ್ತವೆ.

ಕಂದನ ಕುಡು ಶಿವನೆ ಬಂಧನ ಬಿಡಲಾರೆ ।
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ ।
ಬಂಜೆಂಬ ಶಬುದ ಹೊರಲಾರೆ ॥

ಹೀಗೆ ಜನಪದರಲ್ಲಿ ಬಂಜೆ ಎಂಬ ಶಬ್ದದಿಂದ ಹೊರಬರಲು ದೇವರಲ್ಲಿ ಮೊರೆ ಹೋಗುವಂತಹ ಹಲವಾರು ಸನ್ನಿವೇಶಗಳನ್ನು ಹಾಡುಗಳ ಮೂಲಕ ವ್ಯಕ್ತಪಡಿಸಿರುವುದನ್ನು ಕಾಣಬಹುದು. ಮುಖ್ಯವಾಗಿ ಮಕ್ಕಳಿಲ್ಲದಿರುವುದೇ ಮಹಿಳೆಯರಿಗೆ ಒಂದು ಶಾಪವಾಗಿ ಪರಿಣಮಿಸಿರುವುದನ್ನು ನೋಡಿದರೆ ವ್ಯವಸ್ಥೆ ಮಹಿಳೆಯರನ್ನು ಯಾವ ಸ್ಥಿತಿಯಲ್ಲಿಟ್ಟಿದೆ ಎಂಬುದನ್ನು ಗುರುತಿಸಬಹುದಾಗಿದೆ. ಈ ಕಾರಣವನ್ನೇ ಮುಂದಿರಿಸಿಕೊಂಡು ಮಹಿಳೆಯರಿಗೆ ಆಸ್ತಿಯಲ್ಲಿ ಪಾಲನ್ನು ಪಡೆಯುವ ಹಕ್ಕಿನಿಂದ ವಂಚಿತರನ್ನಾಗಿ ಮಾಡುತ್ತಿರುವಂತಹ ಹಲವು ಉದಾಹರಣೆಗಳು ದೊರೆಯುತ್ತವೆ. ಮುಖ್ಯವಾಗಿ ಮೇಲಿನ ಎರಡೂ ಪ್ರಕರಣಗಳನ್ನು ಗಮನಿಸಿದರೆ ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಕೇಳುತ್ತಿರುವುದು ತಮ್ಮ ಹಕ್ಕಿನಿಂದಾಗಿ ನಿಜ. ಇದು ಒಂದು ಹಂತದವರೆಗೆ ಸತ್ಯ. ಆದರೆ ಅವರು ಹಾಗೆ ಕೇಳುವುದರ ಹಿಂದಿನ ಒತ್ತಡಗಳನ್ನು ಗಮನಿಸಿದರೆ ಪುರುಷಶಾಹಿ ಚಿಂತನೆಗಳು ಮಹಿಳೆಯರನ್ನು ಬಳಸಿಕೊಳ್ಳುವ ಬಗೆಯನ್ನು ಗುರುತಿಸಬೇಕಾಗುತ್ತದೆ. ಇಲ್ಲಿ ಮಹಿಳೆಯರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಬಗೆ ಹೇಗಿದೆಯೆಂದರೆ ಒಂದು ಕಡೆ ತವರು ಮನೆಯವರು ತನಗೆ ಮಕ್ಕಳಾಗದಿರುವುದಕ್ಕೆ ಆಸ್ತಿಯಲ್ಲಿ ಪಾಲನ್ನು ಕೊಡಲು ನಿರಾಕರಿಸಿದರೆ, ಇನ್ನೊಂದು ಕಡೆ ಗಂಡನ ಮನೆಯವರು ಮಕ್ಕಳಾಗದಿರುವುದನ್ನೇ ಬಂಡವಾಳವನ್ನಾಗಿಸಿಕೊಂಡು ಲಾಭದ ಉದ್ದೇಶದಿಂದ ಮಹಿಳೆಗೆ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ತರುವಂತೆ ಒತ್ತಾಯಿಸುತ್ತದೆ. ಮೇಲ್ನೋಟಕ್ಕೆ ಗಂಡನ ಮನೆಯವರು ಮಹಿಳೆಯ ಭದ್ರತೆಗೆ ಸಹಕರಿಸುತ್ತಿದ್ದಾರೆ ಎಂದು ಕಂಡುಬಂದರೂ ಅದರ ಹಿಂದಿನ ಉದ್ದೇಶ ಆಸ್ತಿಯ ಮೇಲಿನ ಅಧಿಕಾರವನ್ನು ಚಲಾಯಿಸುವುದೇ ಆಗಿರುತ್ತದೆ. ಒಟ್ಟಾರೆಯಾಗಿ ಮಹಿಳೆಯರು ಒಂದು ಕಡೆ ವ್ಯವಸ್ಥೆಯು ಅಪೇಕ್ಷಿಸುವ ಸಂತಾನವನ್ನು ಪಡೆಯಲಿಲ್ಲ ಎಂಬ ನೋವನ್ನು ಅನುಭವಿಸುವುದರ ಜೊತೆಗೆ ಇನ್ನೊಂದೆಡೆ ಅದೇ ಕಾರಣಕ್ಕೆ ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಆದರೂ ಸಹ ಮೊದಲನೇ ಪ್ರಕರಣದಲ್ಲಿ ಹಂಪಮ್ಮ ತಮ್ಮ ತವರು ಮನೆಯವರು ನೀಡಿದ್ದ ಹಲವು ತೊಂದರೆಗಳನ್ನು ಎದುರಿಸಿಯೂ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಅದೇ ರೀತಿಯಲ್ಲಿ

ಯಂಕಮ್ಮನವರು ತಂದೆಯ ಆಸ್ತಿಯಲ್ಲಿ ಸಮ ಪಾಲನ್ನು ಪಡೆಯದೇ ಇದ್ದರೂ ಸಹ ಸ್ವಲ್ಪ ಪ್ರಮಾಣದ ಆಸ್ತಿ ಭಾಗವನ್ನು ಪಡೆದಿದ್ದಾರೆ. ಇದೆಲ್ಲಕ್ಕೂ ಮಿಗಿಲಾಗಿ ತಮಗೆ ಮಕ್ಕಳಾಗದಿರುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ. ಆಸ್ತಿಯಲ್ಲಿ ಪಾಲನ್ನು ಪಡೆದಿದ್ದಾರೆ ನಿಜ, ಆದರೆ ಬಂಜೆಂಬ ಶಬ್ದದ ಕಾರಣವಾಗಿ ಇಂದಿಗೂ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾರೆ ಎಂಬುದನ್ನು ಗುರುತಿಸಬಹುದಾಗಿದೆ. ಹೀಗೆ ಹಲವು ಪ್ರಕರಣಗಳು ಈ ಬಗೆಯಲ್ಲಿ ಅಂದರೆ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕಾಗಿ ಹಲವು ತೊಂದರೆಗಳನ್ನು ಎದುರಿಸುತ್ತಿದ್ದಾರೆ.

**ಈ. ವಿವಾಹಿತ ಮಹಿಳೆಗೆ ಕೇವಲ ಹೆಣ್ಣು ಮಕ್ಕಳಾದರೆ ಅವರನ್ನು ಆಸ್ತಿ ಹಕ್ಕಿನ ವ್ಯಾಪ್ತಿಯಿಂದ ಹೊರಗಿಡುವುದು** : ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪುರುಷನಿಗೇ ಹೆಚ್ಚು ಮಾನ್ಯತೆ. ಇಂತಹ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಪುರುಷನಿಗೆ ಸಮಾನವಾದ ಮಾನ್ಯತೆ ದೊರೆಯುವುದು ಕಷ್ಟಸಾಧ್ಯ. ಮಹಿಳೆಗೆ ಮಕ್ಕಳಾಗದಿರುವುದು ಒಂದು ಶಾಪವಾದರೆ, ಬರೀ ಹೆಣ್ಣುಮಕ್ಕಳಾಗುವುದೂ ಸಹ ಒಂದು ಶಾಪವಾಗಿ ಮಾರ್ಪಡುತ್ತದೆ. ಏಕೆಂದರೆ ಮಹಿಳೆ ಗಂಡು ಮಕ್ಕಳನ್ನು ಹೆತ್ತರೆ ಕುಟುಂಬದಲ್ಲಿ ಒಳ್ಳೆಯ ಸ್ಥಾನಮಾನಗಳು ದೊರೆಯುತ್ತವೆ. ಹಾಗೆಂದ ಕೂಡಲೇ ಆ ಮಹಿಳೆಗೆ ಆರ್ಥಿಕ ಭದ್ರತೆ ದೊರೆಯುತ್ತದೆ ಎಂದಲ್ಲ. ಬದಲಾಗಿ ವಂಶೋದ್ಧಾರಕನ್ನು ಹೆತ್ತ ಕಾರಣಕ್ಕೆ ಕುಟುಂಬದ ಸದಸ್ಯರ ಪ್ರೀತಿಗೆ ಪಾತ್ರಳಾಗುತ್ತಾಳಷ್ಟೇ. ಅವಳ ಸ್ಥಾನಮಾನದಲ್ಲೇನೂ ಬದಲಾವಣೆಗಳು ಆಗುವುದಿಲ್ಲ. ಆದರೆ ಬರೀ ಹೆಣ್ಣು ಮಕ್ಕಳನ್ನು ಹೆತ್ತ ಮಹಿಳೆ ಕುಟುಂಬದವರ ಕೋಪಕ್ಕೆ ಬಲಿಯಾಗಬೇಕಾಗುತ್ತದೆ. ಮತ್ತು ಹಿಂಸೆಯಲ್ಲಿಯೇ ಜೀವನವನ್ನು ಕಳೆಯ ಬೇಕಾಗುತ್ತದೆ. ಮುಖ್ಯವಾಗಿ ಇಂತಹ ಮಹಿಳೆಯರನ್ನು ಕುಟುಂಬದ ಸದಸ್ಯರು ಎಂದು ಪರಿಗಣಿಸದೇ, ಇವರು ಕುಟುಂಬಕ್ಕೆ ಹೊರೆ ಎಂದು ಬಾವಿಸುತ್ತಾರೆ. ಹೀಗೆ ಪರಿಭಾವಿಸು ವುದರಿಂದಾಗಿ ಈ ಮಹಿಳೆಯರು ಎಲ್ಲ ಸೌಲಭ್ಯಗಳಿಂದ ವಂಚಿತರಾಗುತ್ತಾರೆ. ಮುಖ್ಯವಾಗಿ ಆಸ್ತಿ ಹಕ್ಕಿನ ವಿಷಯದಲ್ಲಿಯೂ ಸಹ ತನ್ನ ತಂದೆಯ ಆಸ್ತಯಿಂದ ನಿರಾಕರಿಸಲ್ಪಡುತ್ತಾಳೆ. ಹಾಗೆಯೇ ತನ್ನ ಗಂಡನ ಆಸ್ತಿಯನ್ನು ಪಡೆಯುವುದರಿಂದಲೂ ವಂಚಿತಳಾಗುತ್ತಾಳೆ. ಈ ಬಗೆಯ ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಇವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಸೋಮಲಾಪುರ ಗ್ರಾಮದ ಗಂಗಮ್ಮ ತನ್ನ ಗಂಡನಿಗೆ ಸೇರಬೇಕಾದ ಆಸ್ತಿಯಿಂದ ವಂಚಿತಳಾಗಿದ್ದಾರೆ. ಮುಖ್ಯವಾಗಿ ಇವರು ಮೂಲತಃ ಕಂಪ್ಲಿಯವರು. ಇವರಿಗೆ ಮದುವೆಯಾದ ನಾಲ್ಕು ವರ್ಷಕ್ಕೆ ಪತಿ ಮರಣಿಸಿದ್ದಾನೆ. ಇವರಿಗೆ ಇಬ್ಬರು ಹೆಣ್ಣು ಮಕ್ಕಳು. ಹಾಗಾಗಿ ಇವರಿಗೆ ಗಂಡನ ಮನೆಯಲ್ಲಿ ಹಲವು ಬಗೆಯಲ್ಲಿ ಕಿರುಕುಳಗಳನ್ನು ಎದುರಿ ಸಿದ್ದಾರೆ. ಮತ್ತೆ ಗಂಡನ ಪಾಲಿಗೆ ಬರುವ ಆಸ್ತಿಯನ್ನು ಪಡೆಯಲು ಹೋಗಿ ಇನ್ನು ಹಲವಾರು ಕಿರುಕುಳಕ್ಕೆ ಒಳಗಾಗಿದ್ದಾರೆ. ಈ ಕುರಿತಂತೆ ಗಂಗಮ್ಮನವರನ್ನು ಕೇಳಿದಾಗ, "ನಂದು ತವ್ರು ಮನಿ ಕಂಪ್ಲಿ. ನನಗ ಒಬ್ಬ ಅಣ್ಣ ಐದಾನ, ನನ್ ಮದ್ವಿನಾ

ಮಾಡಬೇಕಂದ್ರ ಇರೋ ಜಮೀನನ್ನ ಅಡ ಇಟ್ಟು ಮಾಡಿಕೊಟ್ಟಾರ. ಮದುವಿಯಾಗಿ ನಾಕು ವರ್ಸಕ್ಕ ನನ ಗಂಡ ತೀರ್ಕೆಂಡ. ಈಗ ನನಿಗೆ ಇಬ್ರು ಹೆಣ್ಮಕ್ಳು ಈದಾರ. ನನಿಗೆ ಹೆಣ್ಮಕ್ಳು ಹುಟ್ಟಿದ್ ಮ್ಯಾಲಂತೂ ನಮ್ ಅತ್ತಿ ಬಾಮ್ಮೈದನೋರ ಕಾಟ ಜಾಸ್ತಿ ಆತು. ಗಂಡ ಬದುಕಿದ್ದಾಗ ಸ್ವಲ್ಪ ಕಡಿಮಿ ಕಾಟ ಇತ್ತು. ಅವ್ರು ಹೋದ್ ಮ್ಯಾಲೆ ಮನ್ಯಾಗಿನ ಕಾಟಗೋಳು ಜಾಸ್ತಿ ಆದ್ವು, ಮಕ್ಕಳಿಗಿ ಸರಿಯಾಗಿ ಊಟಕ್ಕ ಸತೆ ನೀಡ್ತಿದ್ದಿಲ್ಲ. ಸ್ವಲ್ಪ ದಿನಕ್ಕ ನೀನು ಕೆಲ್ಸಕ್ಕ ಹೋಗು ಅಂತ ಪೀಡ್ಸಾಕತ್ತಿದ್ರು. ನಾನ್ಯಾಕ ಹೋಗ್ಲಿ ಅಂತ ಕೇಳಿದ್ಕ, ಇಲ್ಲಿ ಕುಂತು ತಿಂನ್ನಾಕ ನಿಮ್ ಅಪ್ಪನ ಆಸ್ತಿ ಇಲ್ಲ. ನಿನ್ನ ನೋಡ್ಕಳಾದು ಅಷ್ಟೇ ಅಲ್ದೇ ನಿನ್ ಮಕ್ಕಳ್ನು ಮದುವಿ ಮಾಡಿ ಕೊಡ್ಬೇಕು. ಅದಕ್ಕೆಲ್ಲಾ ದುಡ್ಡು ಎಲ್ಲಿಂದ ಬರ್ಬೇಕು ಅಂತ ಅತ್ತಿ ಗದಿರ್ಸಿದ್ಲು. ಅದಕ್ಕೆ ಇವ್ರ ಸಾವಾಸ ಬ್ಯಾಡ, ಬ್ಯಾರೆ ಮನಿ ಮಾಡ್ಕೆಂಡು ಇರಾನು ಅಂತೇಳಿ ನಮ್ ಅತ್ತಿಗೆ ಕೇಳಿದ್ರೆ, ಅವ್ರು ಸುಮ್ನೆ ಒಪ್ಪಿದ್ರು, ಆದ್ರೆ ನಾನು ಬ್ಯಾರೆ ಮನಿ ಮಾಡ್ಬೇಕಂದ್ರೆ ದುಡ್ಡು ಬೇಕಲ್ಲ. ಹಂಗಾಗಿ ನನ ಗಂಡಗ ಸೇರಬೇಕಾದ ಆಸ್ತಿನ ಕೊಡಾಕ ಕೇಳ್ದೆ. ಆದ್ರೆ ಅವ್ರು ಕೊಡಾಕ ಒಪ್ಲಿಲ್ಲ. ಈ ವಿಚಾರ ನಮ್ ಭಾಮ್ಮೈದಗ ಗೊತ್ತಾಗಿ ಅವ್ನು ಯಾರ್ಗೂ ಗೊತ್ತಾಗ್ಲಾರ್ದಂಗ ಆಸ್ತಿನೆಲ್ಲಾ ತನ್ ಹೆಸ್ರಿಗೆ ಮಾಡ್ಸಿಕೆಂಡು ಬಿಟ್ಟ. ಹಿಂಗ ಮಾಡದ್ಕ ನಮ್ ಅತ್ತಿನೂ ಜೊತಿಯಾಗಿದ್ಲು. ನನ ಗಂಡಗ ಸೇರ್ಬೇಕಾದ ಆಸ್ತಿ ನನಿಗೆ ಬೇಕೇ ಬೇಕು ಅಂತ ಪಟ್ಟು ಹಿಡ್ಕಂಡು ಕೇಳಿದ್ಕ, ನಮ್ ಅತ್ತಿ ಇದ್ದು, ನಿನಿಗೆ ಇರೋದು ಇಬ್ರು ಹೆಣ್ಮಕ್ಳು, ಅವ್ರು ಸತೆ ಮದುವಿಯಾಗಿ ಬ್ಯಾರೇರ ಮನಿಗೆ ಹೋಗ್ತಾರ. ನೀನು ಆಸ್ತಿನ ತಗಂಡು ಏನ್ ಮಾಡ್ತೀ. ನಿನ್ ಮಕ್ಕಳಿಗಿ ಮದುವಿ ಮಾಡಿ ಕೊಡ್ತೀವಿ ಇಲ್ಲೇ ಇದ್ದು ಬಿಡು ಎಂದರು. ಆದರೆ ನಾನು ಅಲ್ಲೇ ಇದ್ದಿದ್ದರೆ ಬಾಳ ಕಷ್ಟ ಕೊಡ್ತಾರ ಅಂತ ತಿಳ್ಕಂಡು ನಮ್ ಊರಿಗೆ ಬಂದು ಬ್ಯಾರೆ ಮನಿ ಮಾಡ್ಬಿಟ್ಟೆ. ಇಲ್ಲಿ ನಮ್ ತಮ್ಮನೋರು ಜತಿಗೆ ಆರಾಮಾಗಿ ಐದೀನಿ ಎಂದರು.

ನೀವು ಕೋರ್ಟಗೆ ಹೋಗಬೇಕಿತ್ತು. ನಿಮ್ಮ ಗಂಡನ ಪಾಲಿನ ಆಸ್ತಿ ಸಿಕ್ಕಿದ್ರೆ ನಿಮ್ಮ ಜೀವನಕ್ಕೆ ಆಧಾರ ಆಗತಿತ್ತು ಎಂದಾಗ.

ಹೌದು ಆಸ್ತಿ ಬಂದಿದ್ರೆ ನನ್ ಜೀವ್ನಕ್ಕ ಆಸ್ರ ಆಗತಿತ್ತು. ಆದ್ರ ನಾನು ಕೋರ್ಟಗಿ ಹೋಗಿ ಕೇಸ್ ಮಾಡಿದ್ರೆ ಅದರ ಖರ್ಚು ಯಾರು ನೋಡ್ಬೇಕಿತ್ತು. ಅದು ನಮ್ ತವ್ರಮನ್ಯಾರ ಮೇಲೆ ಬೀಳ್ತಿತ್ತು. ಮತ್ತೆ ನಾನು ಅವ್ರಿಗೆ ಯಾಕ ವಜ್ಜಿ ಆಗಾದು, ಇಲ್ಲೆ ಕೂಲಿ ಮಾಡ್ಕಂಡು ಜೀವ್ನ ಮಾಡಬಹುದು ಅಂತೇಳಿ ನಾನು ಯಾವ ಕೋರ್ಟಗೂ ಹೋಗ್ದಂಗ ಸುಮ್ನಾಗಿ ಬಿಟ್ಟೆ ಎಂದರು.

"ನಮ್ಮದು ಒಂದು ದೊಡ್ಡ ಮನಿ, ಮನ್ಯಾಗ ಏನಿಲ್ಲಾಂದ್ರು ಇಪ್ಪತ್ತು ಮಂದಿ ಐರ್ತಿದ್ವಿ ಈವಾಗ್ಲೂ ಆ ಮನ್ಯಾಗ ಅಷ್ಟ ಮಂದಿ ಐದಾರ. ನಮ್ ಅಪ್ಪಗ ನಾನು ಮೊದಲ್ನೇ ಮಗ್ಳು. ನನ್ನ ಇಲ್ಲೇ ನಮ್ಮೂರಿಗಿ ಹತ್ರ ವ್ಯಾಸನಕೇರಿಗಿ ಮದುವಿ ಮಾಡಿಕೊಟ್ಟಾರ. ನನ ಗಂಡ ತೀರಿಕೆಂಡು ಬಾಳ ವರ್ಷ ಆತು. ಇಲ್ಲಿ ನನ ಗಂಡನ ಮನ್ಯಾಗ ನಮ್ ಅತ್ತಿ ಮಾವಗ ಎಂಟು ಜನ ಮಕ್ಳು. ಅದರಾಗ ಮೂವರು ಹೆಣ್ಮಕ್ಳು, ಐದು ಜನ ಗಣ್ಮಕ್ಳು, ಎಲ್ಲಾರ್ಗೂ ಮದುವಿ ಮಾಡ್ಯಾರ. ನನ ಗಂಡ ಎರಡ್ನೇವ್ರು. ನಾನು ಪಿಯುಸಿ ಓದೀನಿ. ನನ ಗಂಡ ಬಿ.ಎ. ಪಾಸಾಗಿದ್ದ. ಅವ್ರು ಇಲ್ಲೆ

ಫ್ಯಾಕ್ಟ್ರಿನಾಗ ಕೆಲ್ಸಕ್ಕ ಹೋಗ್ತಿದ್ದ. ಮದುವಿ ಆಗಿ ಆರೇಳು ವರ್ಸಕ್ಕ ನನ ಗಂಡ ತೀರಿಕೆಂಡ. ಈಗ ನನಗ ಮೂರು ಜನ ಹೆಣ್ಮಕ್ಕಳು ಐದಾರ. ನಮ್ ಮಾವಗ ೧೮ ಎಕ್ರಿ ಹೊಲ ಮತ್ತೆ ಎರಡು ಮನಿಗಳು ಐದಾವ. ಯಾವಾಗ ನನ ಗಂಡ ತೀರಿಕೆಂಡ್ರೋ ಆವಾಗಿಂದ ಮನ್ಯಾಗ ನನ್ನ ಹೊರಗಿಟ್ಟಂಗ ನೋಡಾಕತ್ತಿದ್ರು. ನನಗೆ ಕಿರಿ ಕಿರಿ ಅನ್ಸಾಕತ್ತಿತ್ತು. ಅದಕ್ಕ ನಾನು ನನ್ನ ಮೂವರು ಮಕ್ಕಳ್ನ ಕರಕಂಡು ತವ್ರ ಮನಿಗಿ ಬಂದುಬಿಟ್ಟೆ. ನಾನು ಇಲ್ಲಿಗೆ ಬಂದು ಎರಡು ತಿಂಗ್ಳಮ್ಯಾಲೆ ಗಂಡನ ಮನ್ಯಾಗ ಆಸ್ತಿನ ಭಾಗ ಮಾಡಿಕೆಂಡ್ರು ಅಂತೇಳಿ ಸುದ್ದಿ ತಿಳೀತು. ಅದಕ್ಕ ನನಿಗೆ ಬಾಳ ಸಿಟ್ಟು ಬಂದಿತ್ತು. ಯಾಕಂದ್ರ ನನ ಗಂಡಗ ಸತೆ ಆಸ್ತಿನಾಗ ಭಾಗ ಬರಬೇಕಿತ್ತು. ಆದ್ರ ಅದನ್ನ ಬಿಟ್ಟು ಆಸ್ತಿನ ಭಾಗ ಮಾಡಿಕೆಂಡಿದ್ರು. ಅದಕ್ಕ ನಾನು ಅಲ್ಲಿಗೇ ಸೀದಾ ಹೋಗಿ ನನ ಗಂಡಗ ಬರಬೇಕಿದ್ದ ಆಸ್ತಿನ ಭಾಗ ಮಾಡಿ ಕೊಡ್ರಿ ಇಲ್ಲಾಂದ್ರೆ ಕೇಸ್ ಮಡ್ತೀನಿ ಅಂತ ಹೇಳಿದೆ. ನಿನಗ ಆಸ್ತಿನ ಯಾಕ ಕೊಡಬೇಕು, ನಿನಿಗೇನಾದ್ರು ಗಂಡು ಮಕ್ಳು ಐದಾವ. ಆಸ್ತಿನ ನೋಡ್ಕಳ್ಳಾಕ. ಇರೋದು ಹೆಣ್ಮಕ್ಕಳು. ಅವ್ರು ಸತೆ ನಿನ್ ಜೊತಿಗೆ ಇರಂಗಿಲ್ಲ. ಮದುವಿ ಆದ್ ಮ್ಯಾಲೆ ಬ್ಯಾರೇರ ಮನಿಗೆ ಹೋಗ್ತಾರ. ನೀನು ಹೆಣ್ಣೆಂಗ್ಸು, ಆಸ್ತಿ ತಗಂಡು ಏನು ಮಾಡ್ತಿ ಅಂದ್ರು, ಅದಕ್ಕ ನಾನು ಸುಮ್ನಿರ್ಲಿಲ್ಲ. ಕೋರ್ಟಿಗೆ ಹೋಗ್ತೀನಿ ಅಂತ ಎಲ್ಲಾ ರೆಡಿ ಮಾಡ್ಕೆಂಡಿದ್ದೆ. ಆದ್ರೆ ನಮ್ ಅಪ್ಪ ಮತ್ತೆ ತಮ್ಮ ಇಬ್ರೂ ಸೇರಿ ಕೋರ್ಟಿಗಿ ಹೋಗೋದು ಬ್ಯಾಡ ಅಂತೇಳಿ ಸುಮ್ನಿರ್ಸಿದ್ರು. ಯಾಕ ಹೋಗ್ಬಾರ್ದು ಅಂತ ಕೇಳಿದ್ಕ, ನಮ್ ಮನಿತನದಾಗ ಇಲ್ಲಿವರ್ಗೂ ಯಾರು ಕೋರ್ಟು ಗೀರ್ಟು ಅಂತ ಹೋಗಿಲ್ಲ. ನೀನು ಹೋದ್ರ ನಮ್ಮನ್ನ ಊರಾಗಿನ ಮಂದಿ ಒಂಥರಾ ನೋಡ್ತಾರ. ಯಾಕ ಬೇಕು ಅದೆಲ್ಲಾ. ನೀನು ಸುಮ್ನಿದ್ದು ಬಿಡು. ಆ ಆಸ್ತಿ ತಗಂಡು ಏನ್ ಮಾಡ್ತಿ, ಇರೋದು ಮೂವರು ಹೆಣ್ಮಕ್ಕಳ್ನ ಏನಾರ ಮಾಡಿ ಮದುವಿ ಮಾಡ್ಬಿಟ್ರೆ ಮುಗೀತು. ಉಳ್ಕಳೋದು ನೀನೊಬ್ಬೆ ಅಂತ ಅಪ್ಪ ಹೇಳಿದ್ರು, ಅದಕ್ಕ ನಾನು ಕೋರ್ಟಿಗೆ ಸತೆ ಹೋಗ್ಲಿಲ್ಲ. ಹಂಗೆ ಸುಮ್ನಾಗಿಬಿಟ್ಟೆ" ಎಂದು ಶಾರದಮ್ಮ ಹೇಳಿದರು.

ಈ ಎರಡೂ ಪ್ರಕರಣಗಳಲ್ಲಿ ಗಂಗಮ್ಮ ಮತ್ತು ಶಾರದಮ್ಮ ಇಬ್ಬರೂ ತಮಗೆ ಗಂಡು ಮಕ್ಕಳಾಗಲಿಲ್ಲ ಎಂಬ ಕಾರಣಕ್ಕಾಗಿ ತಮ್ಮ ತಂಡನ ಆಸ್ತಿಯಿಂದ ವಂಚಿತರಾಗಿದ್ದಾರೆ. ಮುಖ್ಯವಾಗಿ ಸಮಾಜದಲ್ಲಿ ಗಂಡಿಗೆ ಇರುವ ಪ್ರಾಶಸ್ತ್ಯ ಹೆಣ್ಣಿಗಿಲ್ಲ. "ನಮುತ್ರಸ್ಯ ಗತಿರ್ನಾಸ್ತಿ" ಅಂದರೆ ಗಂಡು ಸಂತಾನವಾಗದಿರುವವರಿಗೆ ಮೋಕ್ಷವಿಲ್ಲ. ಸತ್ತ ತಂದೆ-ತಾಯಿಯಂದಿರಿಗೆ ಮೋಕ್ಷ ದೊರೆಯಬೇಕಾದರೆ ಗಂಡು ಸಂತಾನ ಬೇಕೇಬೇಕು. ಹಾಗಾಗಿ ಗಂಡು ಸಂತಾನವನ್ನು ಬಯಸುವಂತಹದ್ದು ಪ್ರಮುಖವಾಗಿಬಿಟ್ಟಿದೆ. ಆದರೆ ಹೆಣ್ಣು ಮಕ್ಕಳನ್ನು ನೋಡುವ ಕ್ರಮದಲ್ಲಿ ಯಾವುದೇ ಬದಲಾವಣೆಗಳು ಸಂಭವಿಸಿಲ್ಲ. ಕುಟುಂಬದ ಸದಸ್ಯರಲ್ಲಿ ಇರುವಂತಹ ಆಲೋಚನೆಯೆಂದರೆ ಹೆಣ್ಣು ಮನೆಯಿಂದ ಆಚೆ ಹೋಗುವವಳು ಎಂಬುದು. ಅಂದರೆ, ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬ ಮಾತಿನಂತೆ ಹೆಣ್ಣು ಹುಟ್ಟಿನಿಂದಲೇ ಹೊರಗಿನವಳಾಗಿಯೇ ಬೆಳೆಯತೊಡಗುತ್ತಾಳೆ. ಈ ಆಲೋಚನೆಯ ಕಾರಣದಿಂದ ಗಂಗಮ್ಮ ಮತ್ತು ಶಾರದಮ್ಮ ಇಬ್ಬರೂ

ತಮ್ಮ ಪತಿಯ ಆಸ್ತಿಯಿಂದ ವಂಚಿತರಾಗಿದ್ದಾರೆ. ಅಂದರೆ ಗಂಗಮ್ಮನವರ ಕುಟುಂಬದಲ್ಲಿ ಅವರ ಅತ್ತೆ ಹೇಳುವ "ನಿನಿಗೆ ಇರೋದು ಇಬ್ರು ಹೆಣ್ಮಕ್ಳು. ಅವ್ರು ಸತೆ ಮದುವಿಯಾಗಿ ಬ್ಯಾರೇರ ಮನಿಗೆ ಹೋಗ್ತಾರ. ನೀನು ಆಸ್ತಿನ ತಗಂಡು ಏನ್ ಮಾಡ್ತೀ" ಎನ್ನುವ  ಮಾತುಗಳು ಮತ್ತು ಶಾರದಮ್ಮನವರ ಭಾವ ಹೇಳುವ "ನಿನಗ ಆಸ್ತಿನ ಯಾಕ ಕೊಡಬೇಕು, ನಿನಿಗೇನಾದ್ರು ಗಂಡು ಮಕ್ಳು ಐದಾವ. ಆಸ್ತಿನ ನೋಡ್ಕಳ್ಳಾಕ. ಇರೋದು ಹೆಣ್ಮಕ್ಕಳು. ಅವ್ರು ಸತೆ ನಿನ್ ಜೊತಿಗೆ ಇರಂಗಿಲ್ಲ. ಮದುವಿ ಆದ್ ಮ್ಯಾಲೆ ಬ್ಯಾರೇರ ಮನಿಗೆ ಹೋಗ್ತಾರ. ನೀನು ಹೆಣ್ಣೆಂಗ್ಸು, ಆಸ್ತಿ ತಗಂಡು ನೀನೇನು ಮಾಡ್ತಿ" ಎನ್ನುವ ಮಾತುಗಳು ಹೆಣ್ಣಿನ ಬಗೆಗೆ ಇರುವಂತಹ ಮನೋಭಾವ ಎಂಥಹದ್ದು ಎಂಬುದು ತಿಳಿಯುತ್ತದೆ. ಮುಖ್ಯವಾಗಿ ಹೆಣ್ಣು ಮದುವೆಯಾಗಿ ಬೇರೆಯವರ ಮನೆಗೆ ಸೇರುವವಳು, ಅಂದರೆ ಪರರ ಮನೆಯ ಆಸ್ತಿ. ಹಾಗಾಗಿ ಅವರಿಗೇಕೆ ಆಸ್ತಿ ಸಿಗಬೇಕು ಎಂತಲೇ ಭಾವಿಸಲಾಗುತ್ತದೆ. ಈ ಮನೋಭಾವ ವ್ಯವಸ್ಥೆಯಲ್ಲಿ ತುಂಬಾ ಗಟ್ಟಿಯಾಗಿ ಬೇರೂರಿಬಿಟ್ಟಿದೆ. ಆ ಕಾರಣಕ್ಕಾಗಿ ಗಂಗಮ್ಮ ಮತ್ತು ಶಾರದಮ್ಮ ಇಬ್ಬರೂ ಸಹ ತಮ್ಮ ಗಂಡನಿಗೆ ಬರಬೇಕಾದ ಆಸ್ತಿಯಿಂದ ವಂಚಿತರಾಗಿದ್ದಾರೆ. ಇನ್ನು ಮುಖ್ಯವಾಗಿ ಶಾರದಮ್ಮನವರ ತಂದೆ ಹೇಳುವ ಮಾತುಗಳು ಅವರು ಕಾನೂನು ಮೆಟ್ಟಿಲೇರುವುದನ್ನು ತಡೆಯುತ್ತದೆ. ಅವರು ಮನೆಯ ಗೌರವದ ಪ್ರಶ್ನೆಯನ್ನು ಎತ್ತುತ್ತಾರೆ. ಅಂದರೆ ಅವರ ಕುಟುಂಬದಲ್ಲಿ ಇದುವರೆಗೂ ಯಾರೂ ಕೂಡ ಕೋರ್ಟ್ ಮೆಟ್ಟಿಲೇರಿಲ್ಲ ಹಾಗಾಗಿ ನೀನೂ ಕೂಡ ಹೋಗಬಾರದು ಎಂದು ತಡೆಯೊಡ್ಡುತ್ತಾರೆ. ಇದು ಶಾರದಮ್ಮನವರಿಗೆ ಬಹು ದೊಡ್ಡ ಹಿನ್ನಡೆಯನ್ನು ತರುತ್ತದೆ. ಅಂದರೆ ಒಂದು ಕಡೆ ಗಂಡನ ಮನೆಯವರು ಮಾಡಿದಂತಹ ಮೋಸ, ಇನ್ನೊಂದು ಕಡೆ ಸ್ವತಃ ತಮ್ಮ ತಂದೆಯೇ ನ್ಯಾಯಾಲಯದ ಮೆಟ್ಟಿಲೇರಲು ಬಿಡದೇ ಇರುವಂತಹದ್ದು ಮಹಿಳೆಯರ ಸಬಲತೆಗೆ ಹಿನ್ನಡೆಯನ್ನು ತಂದೊಡ್ಡುತ್ತವೆ. ತವರು ಮನೆ ಮತ್ತು ಗಂಡನ ಮನೆ ಈ ಎರಡೂ ಕುಟುಂಬಗಳಲ್ಲಿ ಮಹಿಳೆ ಅನ್ಯಳಾಗಿಯೇ ಬದುಕುತ್ತಾಳೆ, ಅಷ್ಟೇ ಅಲ್ಲದೇ ಎಲ್ಲಾ ಹಕ್ಕುಗಳಿಂದಲೂ ವಂಚಿತಳಾಗುತ್ತಾಳೆ. ಮುಖ್ಯವಾಗಿ ಗಂಡನ ಮನೆಯಲ್ಲಿ ಗಂಡು ಸಂತಾನಕ್ಕಿರುವ ಆದ್ಯತೆ ಹೆಣ್ಣು ಸಂತಾನಕ್ಕೆ ಇರುವುದಿಲ್ಲ. ಹಾಗಾಗಿ ಎಷ್ಟೋ ಮಹಿಳೆಯರು ತಮಗೆ ಗಂಡು ಮಕ್ಕಳಾಗಲಿಲ್ಲವಲ್ಲಾ ಎಂಬ ಕೊರಗನ್ನು ಹೊಂದಿರುತ್ತಾರೆ. ಗಂಡು ಸಂತಾನದ ಬಯಕೆ ಎಷ್ಟೊಂದು ಮಹತ್ವವನ್ನು ಪಡೆದಿರುತ್ತದೆ ಎಂಬುದಕ್ಕೆ ಒಂದು ಉದಾಹರಣೆಯೆಂದರೆ, ನಮ್ಮ ಊರಿನಲ್ಲಿಯೇ ಒಂದು ಕುಟುಂಬದಲ್ಲಿ ಆರು ಜನ ಹೆಣ್ಣು ಮಕ್ಕಳನ್ನು ಹೆತ್ತ ಕುಟುಂಬ ಇದೆ. ಅವರನ್ನು ಕುತೂಹಲಕ್ಕೆ 'ನೀವು ಮಕ್ಕಳಾಗದಂತೆ ಆಪರೇಷನ್ ಮಾಡಿಸಿಕೊಂಡಿದ್ದೀರಾ' ಎಂದು ಒಂದು ಪ್ರಶ್ನೆ ಕೇಳಿದೆ. ಅದಕ್ಕೆ ಅವರು ಇಲ್ಲ, ನಮಿಗೆ ಒಂದು ಗಂಡು ಮಗ ಬೇಕು, ಅದು ಆಗೋವರ್‍ಗೂ ಯಾವ ಆಪರೇಷನ್ ಇಲ್ಲ. ಮೊದ್ಲು ಒಂದು ಹೆಣ್ಣು ಹುಟ್ತು, ಆಗ ನಮ್ ಯಜಮಾನ್ರು ಏನೂ

ಅನ್ನಲಾರ್ದಂಗ ಸುಮ್ನಿದ್ರು, ಆಮ್ಯಾಲೆ ಎರಡನೇದೂ ಹೆಣ್ಣಾತು. ಆಗ ಸ್ವಲ್ಪ ಕಿರಿಕಿರಿ ಆತು. ಎರಡು ಹೆಣ್ಣು ಹುಟ್ಟಿದ್ ಮ್ಯಾಲೆ ಮೂರನೇದು ಗಂಡು ಮಗು ಆಗೇ ಆಗತ್ತೈತಿ ಅಂತ ನಮ್ ಅತ್ತಿ, ಮಾವ, ಮನಿ ಪಕ್ಕದೋರು ಎಲ್ಲಾರೂ ಹೇಳಿದ್ರು, ಆದ್ರೆ ಮತ್ತೆ ಹೆಣ್ಮಗು ಆತು. ಹಂಗೆ ಗಂಡು ಮಗ ಹುಟ್ಲಿ ಅಂತೇಳಿ ಇಲ್ಲವರ್ರೂ ಬಿಟ್ಕಂಡು ಬಂದೀವಿ ಆದ್ರೆ ಆರು ಹೆಣ್ಮಕ್ಕಳು ಆದ್ವೇ ಹೊರ್ತು ಗಂಡು ಮಗ ಹುಟ್ಲೇ ಇಲ್ಲ ಎಂದರು. ಇವು ಸಹಿತ ನಿಮ್ಮ ಮಕ್ಕಳೇ ಅಲ್ಲವೇ ಎಂದು ಪ್ರಶ್ನಿಸಿದ್ದಕ್ಕೆ, ಇವು ನಮ್ ಮಕ್ಕಳೇ, ಆದ್ರೆ ನಾವು ಸಾಯೋವರ್ರೂ ಇವು ನಮ್ಮನ್ನೇನು ನೋಡ್ತಾರೇನು. ಮದುವಿ ಮಾಡಿಕೊಟ್ರೆ ಬ್ಯಾರೆ ಮನಿಗಿ ಹೋಗ್ತಾರ. ಇಲ್ಲಿ ನಮ್ಮನ್ನ ನೋಡಿಕೆಳ್ಳಾರು ಯಾರು. ಅದೇ ಗಂಡ್ಮಗ ಇದ್ದಿದ್ರೆ ನಮ್ಮನ್ನ ನೋಡ್ಕೆಂತಿದ್ದ ಎಂದರು. ಹೀಗೆ ಗಂಡು ಮಗುವಿಗೆ ಇರುವಂತಹ ಪ್ರಾಶಸ್ತ್ಯ ಹೆಣ್ಣು ಮಗುವಿಗೆ ಇಲ್ಲದಾಗಿದೆ. ಈ ಕಾರಣಕ್ಕಾಗಿಯೇ ಮಹಿಳೆಯರು ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಮುಖ್ಯವಾಗಿ ಗಂಡನಿಗೆ ಸೇರಬೇಕಾದ ಆಸ್ತಿ ಹೆಂಡತಿಗೂ ಸೇರಲ್ಪಡುತ್ತದೆ ಎಂಬ ಕಾನೂನಿನ ನಿಯಮ ಇದ್ದರೂ ಸಹ, ಮಹಿಳೆಯರು ಇದರ ಲಾಭವನ್ನು ಪಡೆಯುವಲ್ಲಿ ಹಿಂದುಳಿಯುವಂತೆ ವ್ಯವಸ್ಥೆ ಮಾಡುತ್ತಿದೆ. ಸಾಮಾಜೀಕರಣದಲ್ಲಿನ ತಾರತಮ್ಯದ ಪ್ರಕ್ರಿಯೆಯಿಂದಾಗಿ ಸ್ತ್ರೀಪುರುಷರಲ್ಲಿ ಅಗಾಧವಾದ ಕಂದಕ ಏರ್ಪಟ್ಟಿದೆ ಮತ್ತು ಅದು ಜೀವನ ಪರ್ಯಂತ ಮಹಿಳೆಯರನ್ನು ಶೋಷಿಸುತ್ತಲೇ ಇದೆ.

ಹಾಗೆಯೇ ಈ ಸಮಸ್ಯೆಗಳ ಕಾರಣವಾಗಿ ಕೆಲವು ಮಹಿಳೆಯರು ತಮ್ಮ ತಂದೆಯ ಅಥವಾ ಗಂಡನ ಆಸ್ತಿಯಲ್ಲಿನ ಪಾಲನ್ನು ಪಡೆಯಲೂ ಸಹ ನಿರಾಕರಿಸಿರುವಂತಹದ್ದನ್ನು ನೋಡಬಹುದಾಗಿದೆ. ಇಲ್ಲಿ ನಿರಾಕರಣೆ ಎಂಬುದು ಎರಡು ಬಗೆಯಲ್ಲಿ ನಡೆಯುತ್ತದೆ. ಒಂದು ಸ್ವ ಇಚ್ಛೆಯಿಂದ ಆಸ್ತಿಯಲ್ಲಿನ ಪಾಲನ್ನು ನಿರಾಕರಿಸುವುದು, ಎರಡನೆಯದಾಗಿ ಸಾಮಾಜಿಕ ಮೌಲ್ಯಗಳು ಅಥವಾ ಒತ್ತಡಗಳ ಕಾರಣವಾಗಿ ನಿರಾಕರಿಸಲ್ಪಡುವುದು. ಈ ಎರಡೂ ಕಾರಣಗಳಿಗಾಗಿ ಕೆಲವು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯುವುದರಿಂದ ಹಿಂದೆ ಸರಿದಿರುವುದು ಕಂಡುಬರುತ್ತದೆ. ಇನ್ನು ಕೆಲವು ಮಹಿಳೆಯರು ಪುರುಷಪ್ರಧಾನ ವ್ಯವಸ್ಥೆಯು ನೀಡುವ ಎಲ್ಲ ತೊಂದರೆಗಳನ್ನು ಎದುರಿಸಿಯೂ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ. ಆದರೆ ಹೀಗೆ ಆಸ್ತಿಯನ್ನು ಪಡೆದುಕೊಂಡ ಮಹಿಳೆಯರ ಹಿಂದೆ ಮತ್ತೆ ತಮ್ಮ ಗಂಡನ ಅಥವಾ ತವರು ಮನೆಯವರ ಸಹಕಾರವಿರುವುದನ್ನು ಕಾಣಬಹುದಾಗಿದೆ. ಏನೇ ಇದ್ದರೂ ಸಹ ಮಹಿಳೆಯರು ತಮ್ಮ ಹಕ್ಕಿನ ರೂಪದಲ್ಲಿ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮುಂದಾಗಿರುವುದು ಒಂದು ಸಂಚಲನವೇ ಸರಿ.

## ಕೋಷ್ಟಕ –೬.೧.೧

### ಕೌಟುಂಬಿಕ ಕಾರಣಗಳು ವಿವರ

| ಕೌಟುಂಬಿಕ ಕಾರಣಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ಹೆಣ್ಣು ಮಕ್ಕಳನ್ನು ಮನೆಯ ಸದಸ್ಯರು ಎಂದು ಪರಿಗಣಿಸದೇ ಇರುವುದು | ೧೦೮ | ೩೬% | ೭೪ | ೨೪.೬೬% | ೧೧೮ | ೩೯.೩೩% |
| ಸೊಸೆಯನ್ನು ಅನ್ಯವೆಂದು ಭಾವಿಸುವುದು | ೯೮ | ೩೨.೬೬% | ೬೦ | ೨೦% | ೧೪೨ | ೪೭.೩೩% |
| ಮದುವೆಯಾದ ಮಹಿಳೆಗೆ ಮಕ್ಕಳಾಗದೇ ಇದ್ದರೆ ಆ ಮಹಿಳೆಯರನ್ನು ಆಸ್ತಿ ಹಕ್ಕಿನ ವ್ಯಾಪ್ತಿಗೆ ತರದೇ ಇರುವುದು | ೫೪ | ೧೮% | ೩೦ | ೧೦% | ೨೧೬ | ೭೨% |
| ವಿವಾಹಿತ ಮಹಿಳೆಯರಿಗೆ ಕೇವಲ ಹೆಣ್ಣುಮಕ್ಕಳಾದರೆ ಅವರನ್ನು ಆಸ್ತಿ ಹಕ್ಕಿನ ವ್ಯಾಪ್ತಿಯಿಂದ ಹೊರಗಿಡುವುದು | ೭೮ | ೨೬% | ೪೦ | ೧೩.೩೩% | ೧೮೨ | ೬೦.೬೬% |




**ರೇಖಾ ಚಿತ್ರ ೬.೧.೧ ಕೌಟುಂಬಿಕ ಕಾರಣಗಳು ವಿವರ**

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಸಂಶೋಧನೆಗಾಗಿ ಕ್ಷೇತ್ರಕಾರ್ಯ ಮಾಡಿದ ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಸಂದರ್ಶಿಸಿದ ಒಟ್ಟು ಸಾವಿರ ಪ್ರಕರಣಗಳಲ್ಲಿ ವಿಶೇಷ ಎಂದು ೩೦೦ ಪ್ರಕರಣಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಒಟ್ಟು ೧೦೮ ಜನ

ಮಹಿಳೆಯರು ತಮ್ಮನ್ನು ಮನೆಯ ಸದಸ್ಯರು ಎಂದು ಪರಿಗಣಿಸದೇ ಇರುವುದನ್ನು ತಿಳಿಸಿದ್ದಾರೆ. ಇವರ ಶೇಕಡಾ ಪ್ರಮಾಣ ೩೬% ರಷ್ಟಿದೆ. ಹಾಗೆಯೇ ಇದನ್ನು ಅಲ್ಲಗಳೆದವರ ಸಂಖ್ಯೆ ೭೪ರಷ್ಟಿದ್ದು ಶೇ.೨೪.೬೬ರ ಪ್ರಮಾಣದಲ್ಲಿದ್ದಾರೆ. ಈ ಪ್ರಶ್ನೆಗೆ ಮೌನವಹಿಸಿದವರ ಸಂಖ್ಯೆ ೧೧೮ರಷ್ಟಿದೆ. ಅಂದರೆ ಶೇ.೩೯.೩೩ರ ಪ್ರಮಾಣದಲ್ಲಿದ್ದಾರೆ. ಮುಖ್ಯವಾಗಿ ಇಲ್ಲಿ ಮಹಿಳೆಯರನ್ನು ಅನ್ಯರೆಂದು ಭಾವಿಸುತ್ತಾರೆ ಎಂಬ ಪ್ರಶ್ನೆಗೆ ಮೌನವಹಿಸಿದವರ ಪ್ರಮಾಣ ಅಧಿಕವಾಗಿದೆಯಾದರೂ, ಈ ಮೌನಕ್ಕೆ ಕಾರಣ ಅವರಲ್ಲಿನ ಪುರುಷಶಾಹಿ ವ್ಯವಸ್ಥೆಯು ರೂಪಿಸಿರುವ ಮೌಲ್ಯಗಳೇ ಕಾರಣವಾಗಿವೆ. ಇದನ್ನು ಒಪ್ಪಿಕೊಂಡರೆ ಜೀವಿತದ ಕೊನೆಯವರೆಗೂ ಅನ್ಯಳಾಗಿಯೇ ಇರಬೇಕಾದ ಪರಿಸ್ಥಿತಿಯನ್ನು ಎದುರಿಸಬಹುದೇನೋ ಎಂಬ ಭಯ ಅವರಲ್ಲಿ ಕಾಡಿದೆ ಎಂದು ಹೇಳಬಹುದು. ಮುಖ್ಯವಾಗಿ ಅವರಲ್ಲಿನ ಪರಾವಲಂಬಿತನ ಈ ಮೌನಕ್ಕೆ ಕಾರಣ ಎಂದು ಹೇಳಬಹುದು. ಹಾಗೆಯೇ ಗಂಡನ ಮನೆಯಲ್ಲಿನ ಅನ್ಯತ್ವಕ್ಕೆ ಒಳಗಾಗಿರುವುದನ್ನು ಒಪ್ಪಿಕೊಂಡಂತಹ ಮಹಿಳೆಯರ ಸಂಖ್ಯೆ ೯೮ರಷ್ಟಿದೆ, ಅಂದರೆ ಶೇ.೩೨.೬೬ರ ಪ್ರಮಾಣದಲ್ಲಿದೆ. ಹಾಗೆಯೇ ಇದನ್ನು ತಿರಸ್ಕರಿಸಿದವರ ಸಂಖ್ಯೆ ೬೦ರಷ್ಟಿದೆ. ಆದರೆ ಈ ಪ್ರಶ್ನೆಗೂ ಸಹ ಮಹಿಳೆಯರು ಮೌನಿಗಳಾಗಿದ್ದಾರೆ. ಅದರ ಶೇಕಡಾವಾರು ಪ್ರಮಾಣ ೪೨.೩೩%ರಷ್ಟಿದೆ. ಹಾಗೆಯೇ ೫೪ ಪ್ರಕರಣಗಳು ತಮಗೆ ಮಕ್ಕಳಾಗಲಿಲ್ಲ ಎಂಬ ಕಾರಣವು ಹೇಗೆ ಆಸ್ತಿಯನ್ನು ಪಡೆಯಲು ತೊಡಕಾಗಿ ಮಾರ್ಪಟ್ಟಿವೆ ಎಂಬುದನ್ನು ವಿವರಿಸಿದ್ದಾರೆ. ಅಂದರೆ ಶೇ.೧೮ರಷ್ಟು ಮಹಿಳೆಯರು ಈ ಬಗೆಯ ತೊಡಕನ್ನು ಅನುಭವಿಸಿರುವುದು ಕಂಡುಬರುತ್ತದೆ. ಶೇಕಡಾ ೧೦ ರಷ್ಟು ಮಹಿಳೆಯರು ಈ ಹೇಳಿಕೆಯ ವಿರುದ್ಧವಾದ ಉತ್ತರವನ್ನು ನೀಡಿದ್ದಾರೆ. ಜೊತೆಗೆ ಈ ಪ್ರಶ್ನೆಗೆ ಮೌನ ವಹಿಸಿದವರ ಪ್ರಮಾಣ ಶೇ. ೭೨ರಷ್ಟಿದೆ. ಆಸ್ತಿ ವಾರಸುದಾರಿಕೆಗೆ ಅಗತ್ಯವಾಗಿ ವಂಶವನ್ನು ಮುಂದುವರೆಸಿಕೊಂಡು ಹೋಗುವ ಉತ್ತರಾಧಿಕಾರಿಯ ಅವಶ್ಯಕತೆಯನ್ನು ಸಮಾಜ ಒಪ್ಪುತ್ತದೆ. ಹೀಗೆ ವಂಶ ಮುಂದುವರಿಕೆಯಾಗುವುದು ಕೇವಲ ಗಂಡು ಮಕ್ಕಳಿಂದ ಮಾತ್ರ ಎಂಬುದು ಪಿತೃಪ್ರಧಾನ ವ್ಯವಸ್ಥೆಯ ಧೋರಣೆ. ಹಾಗಾಗಿ ಮಕ್ಕಳು ಎಂದರೆ ಅದು ಕೇವಲ ಗಂಡು ಮಕ್ಕಳಾಗಿರಬೇಕು. ಒಂದುವೇಳೆ ಹೆಣ್ಣು ಮಕ್ಕಳಿದ್ದರೆ, ಮಕ್ಕಳಿಲ್ಲ ಎಂಬ ಸಾಮಾಜಿಕ ನಿಂದನೆಯಿಂದ ದೂರಾಗಬಹುದೇ ಹೊರತು, ಬೇರಾವ ಆರ್ಥಿಕ ಹೊಣೆಗಾರಿಕೆ ಅಥವಾ ಹಕ್ಕನ್ನು ಪಡೆಯುವುದರಿಂದ ಅಲ್ಲ. ಇಲ್ಲಿಯೂ ಆಸ್ತಿಯಿಂದ ನಿರಾಕರಿಸಲ್ಪಡುತ್ತಾರೆ. ಇನ್ನು ಮಕ್ಕಳೇ ಇಲ್ಲದಿರುವ ಮಹಿಳೆಯರದಂತೂ ಮತ್ತಷ್ಟು ಹೀನಾಯ ಸ್ಥಿತಿ. ಮಕ್ಕಳಾಗದಿರುವ ಮಹಿಳೆಯರು ಆಸ್ತಿಹಕ್ಕನ್ನು ಹೊಂದಲು ಅನುಭವಿಸಲು ಅರ್ಹರಲ್ಲ ಎಂಬ ಮನೋಭಾವ ಪಿತೃಪ್ರಧಾನ ವ್ಯವಸ್ಥೆಯದು. ಮಹಿಳೆ ಸಾಮಾಜಿಕ ನಿಯಮಗಳ ಚೌಕಟ್ಟಿಗೆ ಪಾತ್ರಳಾದಾಗ ಮಾತ್ರ ಅವಳಿಗೆ ಮನ್ನಣೆ ದೊರೆಯುತ್ತದೆಯೇ ಹೊರತು ಹೆಣ್ಣನ್ನು ವ್ಯಕ್ತಿಯನ್ನಾಗಿ ನೋಡಲಾಗಿಲ್ಲ. ತಮ್ಮ ಹಕ್ಕನ್ನು ಹೊಂದಲು ಈ ಬಗೆಯ ಮಹಿಳೆಯರು ಅನೇಕ ಸಮಸ್ಯೆಗಳಿಗೆ ಗುರಿಯಾಗಿದ್ದಾರೆ. ಹಾಗೆಯೇ ಕುಟುಂಬದಲ್ಲಿನ ಮಹಿಳೆಯರು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಬಹುದು ಎಂಬ ಕಾರಣಕ್ಕಾಗಿ ಪುರುಷರು ಮುಂಜಾಗೃತಾ ಕ್ರಮವನ್ನು ಅನುಸರಿಸಿ

ಇರುವಂತಹ ಸ್ಥಿರಾಸ್ತಿಯನ್ನು ಚರಾಸ್ತಿಯನ್ನಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಇದರ ಪ್ರಮಾಣ ಶೇ.೮.೬೬ರಷ್ಟಿದೆ. ಅಂದರೆ ಒಟ್ಟು ೩೦೦ ಪ್ರಕರಣಗಳಲ್ಲಿ ೨೬ ಪ್ರಕರಣಗಳು ಈ ಬಗೆಯ ತೊಡಕನ್ನು ಎದುರಿಸಿದ್ದಾರೆ. ಇನ್ನುಳಿದಂತೆ ೨೭೪ ಜನ ಮಹಿಳೆಯರು ಈ ಪ್ರಶ್ನೆಗೆ ಗೊತ್ತಿಲ್ಲ ಎಂಬ ಉತ್ತರವನ್ನು ನೀಡಿದ್ದಾರೆ. ಇನ್ನು ವಿವಾಹಿತ ಮಹಿಳೆಯರಿಗೆ ಬರೀ ಹೆಣ್ಣು ಮಕ್ಕಳಾದರೆ ಅಂತಹ ಮಹಿಳೆಯರು ಆಸ್ತಿ ಹಕ್ಕಿನಿಂದ ಹೊರಗುಳಿಯುವುದನ್ನು ಒಪ್ಪುವ ಮಹಿಳೆಯರ ಸಂಖ್ಯೆ ೭೮ ರಷ್ಟಿದೆ. ಅಂದರೆ ಶೇ. ೨೬ರಷ್ಟು ಮಹಿಳೆಯರು ಇದನ್ನು ಒಂದು ತೊಡಕಾಗಿ ಪರಿಗಣಿಸಿದ್ದಾರೆ. ಹಾಗೆಯೇ ಇಲ್ಲವೆಂದು ಹೇಳಿದ ಮಹಿಳೆಯರ ಸಂಖ್ಯೆ ೪೦ರಷ್ಟಿದೆ. ಆದರೆ ಈ ಪ್ರಶ್ನೆಯ ಕುರಿತು ಯಾವುದೇ ಉತ್ತರವನ್ನು ನೀಡದೇ ಮೌನ ವಹಿಸಿದವರ ಸಂಖ್ಯೆ ೧೮೨ರಷ್ಟಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವು ಬಹುಮುಖ್ಯ ಘಟಕ. ಇಲ್ಲಿ ಮಹಿಳೆ ಮಗಳಾಗಿ, ಸೊಸೆಯಾಗಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಾಳೆ. ಆದರೆ ಹೆಣ್ಣಿಗೆ ಕುಟುಂಬ ಎಂಬುದು ಎರಡು ನೆಲೆಯಲ್ಲಿ ಗುರುತಿಸಲ್ಪಡುತ್ತದೆ. ಒಂದು ತಾನು ಹುಟ್ಟಿ ಬೆಳೆದ ಕುಟುಂಬವಾದರೆ, ಇನ್ನೊಂದು ವಿವಾಹದ ನಂತರ ಆಕೆ ಇನ್ನೊಂದು ಮನೆಯನ್ನು ಸೇರುತ್ತಾಳೆ. ಅದು ಗಂಡನ ಮನೆ. ಆದರೆ ಈ ಎರಡೂ ಕುಟುಂಬಗಳಲ್ಲಿ ಹೆಣ್ಣು ಅನ್ಯಳಾಗಿಯೇ ಗುರುತಿಸ್ಪಡುತ್ತಾಳೆ. ಅಂದರೆ ಹೆಣ್ಣು ಹುಟ್ಟಿದ ಕೂಡಲೇ ಇವಳು ಪರರ ಮನೆಯನ್ನು ಸೇರಬೇಕಾದವಳು ಎಂದು ಅವಳನ್ನು ಕುಟುಂಬದ ಹೊರಗಿನವಳೆಂದೇ ಬೆಳೆಸಲಾಗುತ್ತದೆ. ಹಾಗೆಯೇ ವಿವಾಹದ ನಂತರ ಗಂಡನ ಮನೆಯಲ್ಲಿ ಹೆಣ್ಣು ಬೇರೊಂದು ಮನೆಯಿಂದ ಬಂದವಳು ಅಂದರೆ ಹೊರಗಿನವಳು ಎಂದು ನೋಡಲಾಗುತ್ತದೆ. ಹಾಗಾಗಿ ಹೆಣ್ಣು ಮಕ್ಕಳು ತವರಿನ ಮತ್ತು ಗಂಡನ ಮನೆ ಎರಡರಲ್ಲೂ ಅನ್ಯವೆಂದೇ ಪರಿಗಣಿಸಲ್ಪಡುತ್ತಾರೆ. ಈ ಅನ್ಯ ಮನಸ್ಥಿತಿ ಕಾರಣವಾಗಿ ಹೆಣ್ಣನ್ನು ಎಲ್ಲಾ ಆರ್ಥಿಕ ಚಟುವಟಿಕೆಗಳಿಂದ ದೂರವಿರಿಸಲಾಗುತ್ತದೆ. ಮುಖ್ಯವಾಗಿ ಮೇಲಿನ ಕೋಷ್ಟಕವನ್ನು ಗಮನಿಸಿದರೆ ಈ ಅನ್ಯ ಮನಸ್ಥಿತಿಯ ಕಾರಣದಿಂದ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿಸಲ್ಪಡುತ್ತಿದ್ದಾರೆ ಎಂಬುದು ಧೃಡಪಡುತ್ತದೆ. ಎರಡೂ ನೆಲೆಯ ಕುಟುಂಬಗಳಲ್ಲಿ ಮಗಳಾಗಿ ಮತ್ತು ಸೊಸೆಯಾಗಿದ್ದರೂ ಸಹ ಅನ್ಯಳಾಗಿ ಗುರುತಿಸಲ್ಪಡುತ್ತಿದ್ದರಿಂದ ಆಸ್ತಿಯ ವಿಷಯದಲ್ಲಿಯೂ ಅನ್ಯಳಾಗಿಯೇ ಇರುವುದರ ಜೊತೆಗೆ ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. "ಗಂಡನ ಮನೆಯವರು ತಮ್ಮ ಜಾತಿ ಹಾಗೂ ವರ್ಗದ ಯಜಮಾನಿಕೆಯ ನೆಲೆಗಳನ್ನು ಮುನ್ನೆಲೆಗೆ ತಂದು ಆಕೆ ಸೃಷ್ಟಿಸಿಕೊಂಡ ಬದುಕುವ ಅವಕಾಶಗಳನ್ನು ಕಿತ್ತುಕೊಳ್ಳುತ್ತಿದ್ದಾರೆ. ತವರಿನವರು ಆಕೆಯ ಬೆಂಬಲಕ್ಕಿಲ್ಲ. ಜಾತಿಯೊಳಗಿನ ಪಿತೃಪ್ರಧಾನತೆಯು ಮದುವೆಯಾದ ನಂತರ ಮಗಳ ತವರಿನ ಆಶ್ರಯವನ್ನು ಕಿತ್ತುಕೊಂಡಿದೆ; ಹಾಗೆಯೇ ಮಗಳಿಗೆ ಆಶ್ರಯ ಕೊಡಕೂಡದು ಎನ್ನುವ ಬೆದರಿಕೆಯನ್ನು ಗಂಡನ ಮನೆಯವರು ಹಾಕಿದ್ದಾರೆ. ಹಾಗಾಗಿ ಪದೇ ಪದೇ ತವರಿಗೆ ಬರುವ ಮಗಳನ್ನು ತವರಿನವರು ಒಮ್ಮೊಮ್ಮೆ

ನಿಸ್ಸಾಹಾಯಕರಾಗಿ, ಮತ್ತೊಮ್ಮೆ ಪೀಡೆಯಾಗಿ ನೋಡುತ್ತಾರೆ. ನಿಸ್ಸಾಹಾಯಕರಾಗಿ ನೋಡುವಾಗ ವರ್ಗ, ಪ್ರದೇಶ ಹಾಗೂ ಜಾತಿಯೊಳಗಿನ ಪಿತೃಪ್ರಧಾನತೆಯ ಬಿಗಿಬಂಧನಕ್ಕೆ ಒಳಗಾದವರಂತೆ ಕಂಡುಬರುತ್ತಾರೆ; ಪೀಡೆಯಾಗಿ ನೋಡುವಾಗ ಪ್ರದೇಶ ಹಾಗೂ ಜಾತಿಯೊಳಗಿನ ಪಿತೃಪ್ರಧಾನತೆಯ ವಕ್ತಾರರಂತೆ ಕಾಣುತ್ತಾರೆ. ಇನ್ನು ಗಂಡನ ಮನೆಯವರಿಗೆ ವೈವಾಹಿಕ ಚೌಕಟ್ಟು ವಿಶೇಷ ಅಧಿಕಾರವನ್ನು ನೀಡಿದೆ. ಇದರ ಜೊತೆಗೆ ಜಾತಿ, ವರ್ಗ ಹಾಗೂ ಪ್ರದೇಶದೊಳಗಿನ ಪಿತೃಪ್ರಧಾನತೆಯ ಬೆಂಬಲವು ಇವರಿಗಿದೆ. ಈ ಎಲ್ಲಾ ಸಂಗತಿಗಳು ಇಂತಹ ಮಹಿಳೆಯರ ಮೇಲಿನ ಹಿಂಸೆಯನ್ನು ಮತ್ತಷ್ಟು ಕ್ರೂರಗೊಳಿಸುತ್ತದೆ. ಸೊಸೆಯನ್ನು ಮನೆಯ ಸದಸ್ಯಳಾಗಿ ನೋಡದೆ 'ಅವಳು ನಮ್ಮ ಜೀತದಾಳು' ಎಂದೇ ಪರಿಗಣಿಸುವ ಗಂಡನ ಮನೆಯ ಯಜಮಾನಿಕೆಯ ದೃಷ್ಟಿಕೋನ; 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎನ್ನುವ ತವರಿನ ನಿರ್ದಯ ಧೋರಣೆ ಮೇಲ್ವರ್ಗದ ಕುಟುಂಬದ ಮಹಿಳೆಯರನ್ನು ಅತ್ಯಂತ ನಿಸ್ಸಾಹಯಕರನ್ನಾಗಿಸುತ್ತವೆ; ಅವರನ್ನು ಪಾತಾಳಕ್ಕೆ ತಳ್ಳುತ್ತವೆ. ಹೀಗಾಗಿಯೇ ಮೇಲ್ಜಾತಿ ಹಾಗೂ ಮೇಲ್ವರ್ಗಕ್ಕೆ ಸೇರಿದ ವಿವಾಹಿತ ಮಹಿಳೆಯರ ಮೇಲಿನ ಕೌಟುಂಬಿಕ ದೌರ್ಜನ್ಯವು ವಿವರಣೆಗೆ ಸಿಕ್ಕಲಾರದಷ್ಟು, ವಿಶ್ಲೇಷಣೆಗೆ ಒಳಪಡಲಾರದಷ್ಟು ಸಂಕೀರ್ಣವಾಗಿರುತ್ತದೆ".[೧೪]

ವಿವಾಹದ ನಂತರ ಹೆಣ್ಣಿಗೆ ಗಂಡನ ಮನೆಯಲ್ಲಿ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕಾದರೆ, ಆಕೆ ಗಂಡು ಮಗುವನ್ನು ಹೆರಲೇಬೇಕು. ಇಲ್ಲದಿದ್ದರೆ ಕುಟುಂಬದಲ್ಲಿ ಆಕೆಯ ಸ್ಥಿತಿ ಚಿಂತಾಜನಕವಾಗಿರುತ್ತದೆ. ಮುಖ್ಯವಾಗಿ ಗಂಡು ಮಕ್ಕಳಾಗದೇ ಕೇವಲ ಹೆಣ್ಣು ಮಕ್ಕಳು ಜನಿಸಿದರೆ ಆ ಕುಟುಂಬದಲ್ಲಿ ಆಕೆಗೆ ವಾಸಿಸುವ ಅವಕಾಶಗಳು ಕೇವಲ ದಾಕ್ಷಿಣ್ಯಕ್ಕೆ ಹೊರತು ಹಕ್ಕಾಗಿಯಲ್ಲ. ಪುರುಷ ಪ್ರಧಾನ ವ್ಯವಸ್ಥೆಯು ತನ್ನ ವಂಶೋದ್ಧಾರವೆಂಬ ಚಿಂತನೆಗೆ ಹೆಣ್ಣಿನ ದೇಹವನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳುವ ಮೂಲಕ ಅವಳಿಗೆ ಕೆಲವು ಅವಕಾಶಗಳನ್ನು ಒದಗಿಸುತ್ತದೆಯೇ ವಿನಃ ಯಾವುದೇ ರೀತಿಯ ಹಕ್ಕುಗಳನ್ನು ಮಹಿಳೆಗೆ ನೀಡಲು ಸಿದ್ಧವಿರುವುದಿಲ್ಲ. ಮಹಿಳೆಯರಿಗೆ ತಮ್ಮ ಹಕ್ಕುಗಳನ್ನು ಪಡೆಯಲು ತೊಡಕುಗಳಾಗಿರುವುದನ್ನು ಮೇಲಿನ ಪ್ರಕರಣಗಳು ಮತ್ತು ಕೋಷ್ಟಕದಲ್ಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ತಿಳಿದುಬರುತ್ತದೆ. ಒಟ್ಟಾರೆಯಾಗಿ ಕೌಟುಂಬಿಕ ವ್ಯವಸ್ಥೆಯಲ್ಲಿ ಈ ಬಗೆಯ ಕಾರಣಗಳು ಮಹಿಳೆಯರು ತಮಗೆ ಸೇರಬೇಕಾದ ಆಸ್ತಿಯನ್ನು ಹಕ್ಕಾಗಿ ಪಡೆಯಲು ಬಹುದೊಡ್ಡ ತೊಡಕುಗಳಾಗಿವೆ.

**೬.೨.೨. ಭಾವನಾತ್ಮಕ ಕಾರಣಗಳು**

ಭಾವನಾತ್ಮಕತೆ ಎಂಬುದು ಮನುಷ್ಯರಲ್ಲಿ ಸಹಜವಾಗಿಯೇ ಒಡಮೂಡಿರುತ್ತದೆ. ಆದರೆ ಇದನ್ನು ಪಿತೃಪ್ರಧಾನ ವ್ಯವಸ್ಥೆ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿರುವುದು

ಕಂಡುಬರುತ್ತದೆ. ಹಾಗಾಗಿ ಭಾವನಾತ್ಮಕತೆಯನ್ನು ಮಹಿಳೆಯರಲ್ಲಿ ಗಟ್ಟಿಗೊಳಿಸಲು ವ್ಯವಸ್ಥೆ ಹಲವು ಸಾಮಾಜಿಕ ಸಂಸ್ಥೆಗಳ ಮೂಲಕ ಮಹಿಳೆಯರನ್ನು ಇನ್ನೊಂದು ಬಗೆಯಲ್ಲಿ ಸಾಮಾಜಿಕರಣದ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುತ್ತದೆ. ಮುಖ್ಯವಾಗಿ ಅಣ್ಣ, ತಮ್ಮ, ತಂದೆ, ತಾಯಿ, ಅಕ್ಕ, ತಂಗಿ, ಪತಿ, ಮಕ್ಕಳು ಹೀಗೆ ಅನೇಕ ಬಗೆಯ ಸಂಬಂಧಗಳು ಮಹಿಳೆಯರನ್ನು ಕುಟುಂಬದ ಆಚೆ ಬಂದು ಆಲೋಚಿಸಲು ಬಿಡುತ್ತಿಲ್ಲ. ಹಾಗೆಯೇ ಹಕ್ಕಿನ ನೆಲೆಯಲ್ಲಿ ಸಮಾನ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಇವುಗಳು ಒಂದಕ್ಕೊಂದು ಬಂಧಿಸಲ್ಪಟ್ಟಿವೆ. ಈ ಬಗೆಯ ಸಂಬಂಧಗಳ ಭಾವನಾತ್ಮಕತೆಗೆ ಮಹಿಳೆಯರು ಒಳಗಾಗಿ ತಮ್ಮ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಈ ಭಾವನಾತ್ಮಕತೆಯನ್ನು ಮುಂದಿಟ್ಟುಕೊಂಡು ಪುರುಷಶಾಹಿ ವ್ಯವಸ್ಥೆ ಮಹಿಳೆಯರನ್ನು ವಂಚಿಸುತ್ತಿದೆ. ಇದು ಆಸ್ತಿಹಕ್ಕಿನ ವಿಷಯದಲ್ಲಿ ವ್ಯವಸ್ಥೆಯು ಮಹಿಳೆಯರನ್ನು ಭಾವನಾತ್ಮಕತೆಯ ಒಳಗಡೆ ಬಂಧಿಸಿಟ್ಟು ಅದರ ಮೇಲಿನ ಅಧಿಕಾರವನ್ನು ಹೆಚ್ಚಿಸಿಕೊಳ್ಳುತ್ತಿದೆ. ಮಹಿಳೆಯರಿಗೆ ತಾವು ಹುಟ್ಟಿದ ಮನೆ ಅಥವಾ ಮದುವೆಗೆ ಮುಂಚೆ ತಾವು ವಾಸಿಸುವ ಮನೆ ತವರು ಮನೆಯಾದರೆ, ಮದುವೆಯ ನಂತರ ವಾಸಿಸುವ ಮನೆ ಗಂಡನ ಮನೆಯಾಗಿರುತ್ತದೆ. ಈ ಎರಡೂ ಕುಟುಂಬಗಳ ಸಂದರ್ಭಗಳಲ್ಲಿಯೂ ಸಂಬಂಧಗಳನ್ನು ಉಳಿಸಿಕೊಂಡು ಹೋಗುವ ಮತ್ತು ಬೆಳೆಸಿಕೊಂಡು ಹೋಗುವ ಜವಾಬ್ದಾರಿ ಮಹಿಳೆಯರ ಮೇಲಿರುತ್ತದೆ ಎಂಬ ಭ್ರಮೆಯನ್ನು ಸೃಷ್ಟಿಸಲಾಗಿದೆ. ಮತ್ತು ಹಾಗೆ ನಂಬಿಸಲಾಗಿದೆ. ಹಾಗಾಗಿ ಮಹಿಳೆಯರು ಕುಟುಂಬದಲ್ಲಿರುವ ಈ ಸಂಬಂಧಗಳನ್ನು ಉಳಿಸಿಕೊಳ್ಳಲು ಜೀವನದುದ್ದಕ್ಕೂ ಹೋರಾಡುತ್ತಿರುತ್ತಾರೆ. ಈ ಬಗೆಯ ಭಾವನಾತ್ಮಕ ಸಂಬಂಧಗಳಿಗೆ ಒಳಪಟ್ಟು ಅನೇಕ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯದೇ ನಿರಾಕರಿಸಿರುವುದು ಕಂಡುಬರುತ್ತದೆ. ಮಹಿಳೆಯರು ಮದುವೆಯ ನಂತರ ಗಂಡನ ಮನೆಯನ್ನು ಸೇರಿದಾಗಲೂ ಸಹ ತವರು ಮನೆಯ ಸಂಬಂಧವನ್ನು ಉಳಿಸಿಕೊಳ್ಳುವುದು ಒಂದು ದೊಡ್ಡ ಸವಾಲಿನ ಸಂಗತಿ ಯಾಗಿರುತ್ತದೆ. ಈ ಕಾರಣವಾಗಿಯೇ ಕೆಲವು ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿನ ಪಾಲನ್ನು ಪಡೆಯಲು ನಿರಾಕರಿಸುತ್ತಾರೆ. ಆದರೆ ಭಾವನಾತ್ಮಕತೆಯ ಸ್ವರೂಪ ಒಂದೇ ಬಗೆಯದ್ದಾಗಿರುವುದಿಲ್ಲ. ಬದಲಾಗಿ ಬೇರೆ ಬೇರೆ ನೆಲೆಗಳಲ್ಲಿ ಗೋಚರಿಸುತ್ತದೆ. ಹಾಗೆಯೇ ಪುರುಷಶಾಹಿ ವ್ಯವಸ್ಥೆ ಸೃಷ್ಟಿಸಿರುವ ಭಾವನಾತ್ಮಕ ಸಂಬಂಧಗಳನ್ನು ಮಹಿಳೆಯರು ಮೀರಿದ್ದೇ ಆದಲ್ಲಿ ಅವರನ್ನು ಬೆದರಿಸುವ ಕಾರ್ಯಗಳನ್ನೂ ಸಹ ಮಾಡಲಾಗುತ್ತದೆ. ಈ ಎಲ್ಲಾ ನೆಲೆಗಳಿಂದ ಯಾವ ಯಾವ ನೆಲೆಗಳಿಂದ ಭಾವನಾತ್ಮಕತೆಗೆ ಒಳಪಡಿಸಲಾಗುತ್ತಿದೆ ಮತ್ತು ಈ ನೆಲೆಗಳು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಯಾವ ರೀತಿಯಲ್ಲಿ ತೊಡಕುಗಳಾಗಿ ಪರಿಣಮಿಸಿವೆ ಎಂಬುದನ್ನು ವಿವರಿಸಿಕೊಳ್ಳಬೇಕಾಗಿದೆ. ಈ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಭಾವನಾತ್ಮಕ ನೆಲೆಗಳನ್ನು ಕೆಳಗಿನಂತೆ ವಿಂಗಡಿಸಿಕೊಳ್ಳಲಾಗಿದೆ. ಅ) ತವರಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ ಆ) ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಯನ್ನು ಹಾಕುವುದು ಇ)

ಕುಟುಂಬ ಗೌರವವನ್ನು ಕಾಪಾಡುವುದು. ಈ ಅಂಶಗಳು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯುವುದಕ್ಕೆ ತೊಡಕುಗಳಾಗಿ ಮಾರ್ಪಟ್ಟಿವೆ. ಇವುಗಳನ್ನು ಮುಂದಿನಂತೆ ಒಂದೊಂದಾಗಿ ವಿಶ್ಲೇಷಿಸಲಾಗಿದೆ.

**ಅ. ತವರಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ :** ತವರು ಮನೆಯ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ ಮಹಿಳೆಯರದೇ ಆಗಿರುತ್ತದೆ ಎಂಬ ನಿಯಮಗಳು ಅವರನ್ನು ಭಾವನಾತ್ಮಕವಾಗಿ ಹಿಡಿದಿಟ್ಟಿರುತ್ತವೆ. ಏಕೆಂದರೆ ಒಂದು ಮಗು ಹುಟ್ಟಿದಾಗಿನಿಂದ ಅದು ಕುಟುಂಬದ ಸಾಮಾಜೀಕರಣಕ್ಕೆ ಒಳಗಾಗಿ ಅಲ್ಲಿ ನಡೆಯುವ ಪ್ರಕ್ರಿಯೆಗಳಿಗೆ ತನ್ನನ್ನು ತಾನು ಒಡ್ಡಿಕೊಳ್ಳುತ್ತದೆ. ಹೀಗೆ ನಡೆಯುವ ಪ್ರಕ್ರಿಯೆಯಲ್ಲಿ ಹೆಣ್ಣುಮಗುವಿಗೆ ಮತ್ತು ಗಂಡು ಮಗುವಿಗೆ ಇಬ್ಬರಿಗೂ ಬೇರೆಯದೇ ಆದಂತಹ ಪಾಠ ಬೋಧನೆ ನಡೆಯುತ್ತದೆ. ಇದರ ಕಾರಣವಾಗಿ ಹೆಣ್ಣುಮಕ್ಕಳು ಬದುಕಿನುದ್ದಕ್ಕೂ ತಾನು ಹುಟ್ಟಿದ ಮನೆಯ ಸಂಬಂಧಗಳನ್ನು ಅತ್ಯಂತ ಜತನದಿಂದ ಕಾಪಾಡಿಕೊಂಡು ಬರುವಂತೆ ಮಾಡುತ್ತದೆ. ಅದು ಅವಳ ಕರ್ತವ್ಯವೆಂದೇ ಬೋಧಿಸಲಾಗಿರುತ್ತದೆ. ಆ ಕಾರಣಕ್ಕಾಗಿ ಮಹಿಳೆಯರು ತಮಗೆ ಮದುವೆಯಾಗಿ ಗಂಡನ ಮನೆಯನ್ನು ಸೇರಿದ ಮೇಲೂ ಹುಟ್ಟಿದ ಮನೆಯ ಸಂಬಂಧಗಳನ್ನು ಕಡಿದುಕೊಳ್ಳದಂತೆ ಮತ್ತು ಆ ಮನೆಯ ಗೌರವಕ್ಕೆ ಯಾವುದೇ ಬಗೆಯ ಧಕ್ಕೆ ತರದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊತ್ತುಕೊಂಡಿರುತ್ತಾರೆ. ಹಾಗಾಗಿ ತವರಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಕಾರಣಕ್ಕಾಗಿ ಬಹಳಷ್ಟು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸಿರುವ ಸಂದರ್ಭಗಳು ಕಂಡುಬರುತ್ತವೆ. ಈ ಅಂಶ ಮಹಿಳೆಯರ ಪಾಲಿಗೆ ಬಹುದೊಡ್ಡ ತೊಡಕುಗಳಾಗಿರುವುದನ್ನು ಪ್ರಕರಣಗಳ ಮೂಲಕ ಮುಂದಿನಂತೆ ವಿಶ್ಲೇಷಿಸಲಾಗುವುದು.

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಡಣಾಯಕನ ಕೆರೆ ಗ್ರಾಮದ ಚಂದ್ರಮ್ಮ ತನ್ನ ತಂದೆಯ ಆಸ್ತಿಯಲ್ಲಿ ಭಾಗ ಕೇಳಲು ಹೋಗಿ ತನ್ನ ತವರು ಮನೆಯ ಸಂಬಂಧಕ್ಕೆ ಕಟ್ಟುಬಿದ್ದು ಕೊನೆಗೆ ಆಸ್ತಿಯನ್ನು ನಿರಾಕರಿಸಿದ್ದಾರೆ. ಇವರು ಆಸ್ತಿಯಲ್ಲಿ ಪಾಲನ್ನು ಕೇಳಿದಾಗ ಅವರ ತಮ್ಮನೇ ಮೊದಲು ವಿರೋದಿಸಿದ್ದಾನೆ. ಅವರೇ ಹೇಳುವಂತೆ "ನಾನು ತಂದಿ ಆಸ್ತಿನಾಗ ಪಾಲು ಕೇಳಿದ್ ಮ್ಯಾಲೆ ನಮ್ ತಮ್ಮ ನನ್ನ ಗದ್ರಿಸಿದ, ಅವ್ನಿದ್ದು, ಯಾವ ಆಸ್ತಿಭೆ, ತಂದಿ ಆಸ್ತಿನಾಗ ನಿನಗ ಪಾಲು ಸಿಗಂಗಿಲ್ಲ. ಯಾಕಂದ್ರ ನಿಂಗೆ ಮದುವಿ ಅಂತ ಮಾಡಿ ಕೊಟ್ಟೇವಿ, ಮದುವ್ಯಾಗ ಖರ್ಚು ಆಗಿರಾದನ್ನೆಲ್ಲಾ ಲೆಕ್ಕ ಹಾಕಾಕ ಆಗ್ತೈತೇನು?. ಅದೆಲ್ಲಾ ಸುಮ್ನೆ ಬರ್ತೈತೇನು?, ತವ್ರ ಮನಿದು ಅಂತ ನಿನಿಗ ಏನೂ ಇಲ್ಲ. ಹಂಗಾಗಿ ನೀನು ಏನೂ ಕೇಳ್ಬೇಡ ಅಂತಂದ. ಆದ್ರೆ ನಾನು ಆಸ್ತಿನಾಗ ಪಾಲು ಬೇಕು ಅಂತೇಳಿ ಪಟ್ಟು ಹಿಡ್ದು ಕುಂತೆ. ನಮ್ ತಮ್ಮನೋರು ಬಾಳ ಸಿಟ್ಟಿಗೆ ಬಂದಿದ್ರು, ಆದ್ರ ಒಂದಿನ ನಮ್ ಅಮ್ಮ ನಮ್ ಮನಿಗಿ ಇದೇ ವಿಚಾರನ ಮಾತಾಡಾಕ ಬಂದಿದ್ಲು. ನಿಮ್ ತಮ್ಮನೋರು ಬಾಳಾ ಕಷ್ಟದಾಗ ಐದಾರ, ನೀನು ಹಿರೇಳು ದೊಡ್ಡ ಮನಸು ಮಾಡಿ ಆಸ್ತಿನಾಗ

ಭಾಗ ಕೇಳೋದನ್ನ ಬಿಡು, ಯಾಕ ಬೇಕು ತವ್ರು ಮನಿ ಆಸ್ತಿ. ಹೆಣ್ಮಕ್ಕಳು ಮದುವಿಯಾಗಿ ಯಾವಾಗ ತವ್ರ ಮನಿಂದ ಗಂಡನ ಮನಿಗಿ ಬರ್ತಾರೋ ಆವಾಗ್ಲಿಂದ ತವ್ರ ಮನಿಂದ ಏನೂ ಕೇಳಬಾರ್ದು, ಯಾಕಂದ್ರ ನಿಮ್ ಮದುವ್ಯಾಗ ಬಾಳಾ ಖರ್ಚು ಮಾಡಿರ್ತಾರ. ಅದೆಲ್ಲಾ ಎಲ್ಲಿಂದ ಬರ್ಬೇಕು. ನಿಮ್ ಅಪ್ಪ ಮಾಡಿದ ಆಸ್ತಿಲಿಂದ ಮಾಡಿದ್ದು. ಅಂತದ್ರಾಗ ನೀನು ಆಸ್ತಿನಾಗ ಪಾಲು ಬೇಕಂದ್ರ ಹೆಂಗ, ನೀನು ಮದುವಿ ಮಾಡ್ಕೆಂಡು ಬಂದು ಇಷ್ಟು ವರ್ಸ ಆತು ನಿನಿಗೆ ಏನಾದ್ರೂ ಕಡಿಮಿ ಮಾಡ್ಯಾರ ನಿಮ್ ತಮ್ಮನೋರು. ನೀನು ಯಾವಾಗ್ ಬಂದ್ರೂ ಆವಾಗ ಉಡಿ ತುಂಬ್ಸಿ ಕಳಿಸ್ಯಾರ, ನಿನಿಗೆ ಯಾವ್ದು ತೊಂದ್ರಿ ಆಗದಂಗ ನೋಡಿಕೆಂಡಾರ. ತವ್ರ ಮನಿ ಸಂಬಂಧ ಹಂಗೆ ಉಳಿಬೇಕು ಅಂದ್ರ ನೀನು ಆಸ್ತಿನಾಗ ಪಾಲು ಕೇಳಬಾರ್ದು. ಇಲ್ಲಾಂದ್ರ ನಿನ್ನ ತಮ್ಮನೋರ ಉಸ್ರು ತಟ್ಟತೈತಿ. ನೋಡು ಯೋಚ್ನೆ ಮಾಡು ಅಂತ ಹೇಳಿದ್ಲು.

ನಮ್ ತಮ್ಮನೋರು ನನ್ ಮ್ಯಾಲೆ ಸಿಟ್ಟಾಗಿ ಮೂರು ವರ್ಸಕ್ಕ ಒಂದಸಾರಿ ನಡಿಯೋ ಊರಮ್ಮನ ಜಾತ್ರಿಗಿ ಹೇಳಿ ಕಳಿಸ್ಲಿಲ್ಲ. ಮತ್ತ ಕರ್ಕಂಡು ಹೋಗಾಕು ಬರ್ಲಿಲ್ಲ. ನಮ್ ಊರಾಗ ನೋಡಿದ್ರ ಊರಾಗ ಅಷ್ಟು ದೊಡ್ ಜಾತ್ರಿ ನಡೀತೈತಿ ನೀನು ಹೋಗೇ ಇಲ್ಲವಲ್ಲಾ? ಅಂತ ಪ್ರಶ್ನಿ ಮಾಡಾಕ್ಹತ್ತಿದ್ರು. ಅವ್ರಿಗಿ ಉತ್ರ ಕೊಟ್ಟು ಕೊಟ್ಟು ಸಾಕಾಗಿ ಹೋಗಿತ್ತು. ಪ್ರತೀ ಸಾರಿ ಹಬ್ಬದಾಗ ನನ್ನ ಕರ್ಕಂಡು ಹೋಗಾಕ ನಮ್ಮ ತಮ್ಮಂದ್ರು ಒಬ್ಬರಾದ್ರೂ ಬರ್ತಿದ್ರು. ಹಬ್ಬ ಎಲ್ಲಾ ಆದ ಮ್ಯಾಲ ಹೊಸ ಸೀರಿ ತಂದು ಉಡಿ ತುಂಬ್ಸಿ ಕಳಿಸ್ತಿದ್ರು. ಆದ್ರೆ ಈಗ ಈ ಹಾಳಾದ್ ಆಸ್ತಿ ಕಾಲಾಗ ನಮ್ ತವ್ರ ಮನಿ ಸಂಬಂಧನಾ ಕಡ್ಕಬೇಕಾತಲ್ಲಾ ಅಂತ ಬಾಳ ಸಂಕಟ ಆಯ್ತು. ಆದ್ರೆ ಜಾತ್ರಿ ಮೂರ್ನೆ ದಿನ ನನ್ನ ಸಣ್ಣ ತಮ್ಮ ಊರಿಗಿ ಕರ್ಕಂಡು ಹೋಗಾಕ ಬಂದ. ನಾನು ಬರಲ್ಲ ಅಂದೆ, ಆದ್ರೂ ಅವ್ನು ಬಿಡ್ಲಾರ್ದಂಗ ನನ್ನ ಕರ್ಕಂಡು ಹೋದ. ಆವತ್ತು ಎಲ್ಲಾ ತಮ್ಮನೋರು ಒಂದೊಂದು ಸೀರಿ ತಂದಿದ್ರು, ಹಬ್ಬ ಮುಗಿದ ಮ್ಯಾಲ ಎಲ್ರೂ ಸೀರಿ ಕೊಟ್ಟು ಅರಿಶಿನ ಕುಂಕುಮ ಕೊಟ್ಟು ಕಳಿಸಿದ್ರು. ನನಗೆ ಬಾಳ ದುಖಃ ಆತು. ಇಷ್ಟೊಂದು ಚೆನ್ನಾಗಿ ನೋಡಿಕೆಳ್ಳೊ ತಮ್ಮಂದ್ರು ಇರಬೇಕಾದ್ರ ನನಿಗೆ ಏನ್ ಬೇಕು ಅಂತೇಳಿ, ಆಸ್ತಿನಾಗ ಭಾಗ ಕೇಳೋದನ್ನ ಬಿಟ್ಟುಬಿಟ್ಟೆ" ಅಂದರು.

ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ಡಣಾಪುರ ಗ್ರಾಮದ ಅಯ್ಯಮ್ಮ ತನ್ನ ತಂದೆಯ ಆಸ್ತಿಯಲ್ಲಿ ಭಾಗ ಕೇಳಲು ಹೋಗಿ ತಮ್ಮ ಅಣ್ಣನವರ ಭಾವನಾತ್ಮಕ ಮಾತುಗಳಿಗೆ ಮರುಳಾಗಿ ಆಸ್ತಿಯಲ್ಲಿ ಪಾಲನ್ನು ಪಡೆಯದೇ ಸ್ವಲ್ಪ ಪ್ರಮಾಣದ ಹಣವನ್ನು ಪಡೆದಿದ್ದಾರೆ. ಅವರು ಹೇಳುವಂತೆ "ನಾನು, ಅಪ್ಪನ ಆಸ್ತಿನಾಗ ಪಾಲು ಬೇಕು ಅಂತ ಕೇಳಿದೆ. ನಮ್ ಅಣ್ಣ ಒಂದೇಸಮ ಸಿಟ್ಟಿಗಿ ಬಂದುಬಿಟ್ಟ, ನಿನ್ನ ಮದುವ್ಯಾಗ ಮಾಡಿದ ಸಾಲ ಇನ್ನೂ ತಿರವಲ್ದು ಇರೋ ಸ್ವಲ್ಪ ಭೂಮಿಯಾಗ ಒಂದೆಕ್ರೆ ಮಾರಿ ಆ ಸಾಲಾನ ತೀರಿಸ್ಬೇಕು ಅಂತ ಐದೀವಿ. ಹಂಗಾಗಿ ಈಗ ನೀನು ಆಸ್ತಿನಾಗ ಭಾಗ ಕೇಳಿದ್ರೆ ಹೆಂಗ. ನಿನಗ ಬೇಕೇ ಬೇಕು ಅಂದ್ರ, ಮನಿದು ಇರೋ ಸಾಲಾನೆಲ್ಲಾ ತೀರ್ಸಿಬಿಡ್ತೀನಿ ಅಂತ ಹೇಳು. ಆಗ ಆಸ್ತಿನಾಗ ಪಾಲು ಕೊಡ್ತೀನಿ ಎಂದ. ಮತ್ತೆ ನೀನು ಸಣ್ಣೋಳು ಇದ್ದಾಗಿಂದ ನಾನೇ ಸಾಕೀನಿ, ಬೆಳಿಸೇನಿ ಮದುವೀನೂ ಮಾಡೇನಿ, ನೀನು

ಗಂಡನ ಮನಿಗಿ ಹೋದ್ರೂ ನಾವು ಮಾತ್ರ ನಿನಗ ಯಾವುದೇ ಕೊರ್ತಿ ಬಾರದಂಗ ನೋಡಿಕೆಂಡೀವಿ. ನೀನು ನೋಡಿದ್ರ ಆಸ್ತಿನಾಗ ಭಾಗ ಕೇಳಾಕ ಬಂದಿ. ಒಂದ ಕಡೀ ಮಾತು ಹೇಳಬೇಕಂದ್ರ ನಿಮ್ ಅಣ್ಣೋರು ಚೆನ್ನಾಗಿರ್ಬೇಕು, ಅವ್ರ ಮಕ್ಕಳು ಚೆನ್ನಾಗಿರ್ಬೇಕು ಅಂತ ನಿನಗ ಅನ್ನಿಸಿದ್ರ ಆಸ್ತಿನಾಗ ಭಾಗ ಕೇಳೋದನ್ನ ಬಿಡು. ನೀನು ಯಾವಾಗಾದ್ರು ಇಲ್ಲಿಗಿ ಬಂದು ಹೋಗು ನಾವು ಏನೂ ಅನ್ನಂಗಿಲ್ಲ. ಆದ್ರ ಆಸ್ತಿನಾಗ ಭಾಗ ಬೇಕು ಅಂತಂದ್ರ ಈ ಅಣ್ಣಂದ್ರನ್ನ ಮರ್ತಬಿಡು, ನಾವು ನಿನ್ನ ಪಾಲಿಗಿ ಸತ್ತೋದ್ವಿ ಅಂತ ತಿಳ್ಕಂಡ್‌ಬಿಡು, ಈ ತವ್ರ ಮನಿ ದಾರೀನು ನೀನು ತುಳಿಬಾರ್ದು ಅಂದ. ಮತ್ತೆ ನಮ್ ತಾಯೀನೂ ಹಂಗೆ ಹೇಳಿದ್ರು, ನಾಳಿದಿನ ಗಂಡನ ಮನ್ಯಾಗ ಏನಾರ ತೊಂದ್ರಿ ಆತು ಅಂದ್ರ ಮತ್ತೆ ನೀನು ತವ್ರ ಮನೀನ ಹುಡಿಕೆಂಡು ಬರಬೇಕಾಗತೈತಿ. ಇಲ್ಲಿ ತವ್ರ ಮನಿ ಚೆನ್ನಾಗಿದ್ರ ನಿನ್ನ ಚೆನ್ನಾಗಿ ನೋಡ್ಕಂತಾರ. ಈಗ ಆಸ್ತಿನಾಗ ನೀನು ಭಾಗ ಕೇಳಿ ಪಡದ್ರ ನಾಳಿದಿನ ಈ ತವ್ರ ಮನೀನ ಮರಿಬೇಕಾಗತೈತಿ. ನಿನಗ ಏನಾರ ತೊಂದ್ರಿ ಆದ್ರ ಇಲ್ಲಿ ನೋಡೋರು ಯಾರೂ ಇರಂಗಿಲ್ಲ. ಆಸ್ತಿ ಏನಿದ್ರೂ ವಂಶನಾ ಮುಂದುವರ್ಸಿಕೆಂಡು ಹೋಗೋರ್ಗೇನೇ ಸೇರ್ಬೇಕು ಅಂತ. ನೀನು ಏನಿದ್ರು ನಿನ ಗಂಡನ ಮನೀನ ಬೆಳಗಿಸೋಳು ಮಾತ್ರ. ಹಂಗಾಗಿ ನೀನು ನಿಮ್ ಅಣ್ಣೋರು ಕೊಟ್ಟಷ್ಟು ತಗ, ಆದ್ರ ನನಗ ಇಷ್ಟೇಬೇಕು ಅಂತ ಜುಲ್ಮಿ ಮಾಡಬ್ಯಾಡ ಅದು ಹೆಣ್ಮಕ್ಕಳಿಗಿ ಶೋಬಿ ತರಂಗಿಲ್ಲ ಅಂತಂದ್ರು, ಹಂಗಾಗಿ ನಾನು ಆಸ್ತಿನಾಗ ಏನೂ ಕೇಳ್ಲಿಲ್ಲ. ಆದ್ರೂನೂ ಅಣ್ಣೋರು ಇಬ್ರೂ ಸೇರಿ ನನಗ ಐವತ್ತು ಸಾವಿರ ಕೊಡತೀನಿ ಅಂತ ಹೇಳಿದ್ರು, ನನಗ ಅಷ್ಟು ಸಾಕು ಅಂತಂದು ಸುಮ್ನಾದೆ" ಎಂದರು.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಬಂಡ್ರಿ ಗ್ರಾಮದ ಹನುಮಕ್ಕ ತನ್ನ ತಂದೆಯ ಆಸ್ತಿಯನ್ನು ನಿರಾಕರಿಸಿದ ಮಹಿಳೆಯಾಗಿದ್ದಾಳೆ. ಇವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಬಹುದಿತ್ತು. ಆದರೆ ಅದನ್ನು ಸುಲಭವಾಗಿ ನಿರಾಕರಿಸಿದ್ದಾರೆ. ಈ ನಿರಾಕರಣೆಗೆ ಕಾರಣವನ್ನು ಕೇಳಿದಾಗ, "ನಮ್ಮ ಅಪ್ಪ ಅಮ್ಮಗ ಮೂವರು ಮಕ್ಕಳು ಅದರಾಗ ನಾನೇ ಕೊನಿಯವಳು. ಇನ್ನಿಬ್ರು ಅಣ್ಣಂದ್ರು ಐದಾರ. ನಮ್ ಅಪ್ಪ ಇರೋವಾಗ್ಲೇನೇ ೫ ಎಕ್ರೆ ಜಮೀನು ಮತ್ತೆ ಒಂದು ಮನಿ ಮಾಡಿದ್ದ. ಆದ್ರೆ ಆಸ್ತಿನಾಗ ಭಾಗ ತಗಂಡು ಏನ್ ಮಾಡೋದು. ಒಂದುವ್ಯಾಳ ತವ್ರಮನಿ ಆಸ್ತಿನಾಗ ಬಾಗ ತಗಂಡ್ರೆ ನಮಗ ಒಳ್ಳೇದಾಗಲ್ಲ. ಯಾಕಂದ್ರ ಅವ್ರು ನಾನು ಸಣ್ಣೋಳಿದ್ದಾಗಿಂದ ನನ್ನ ಸಾಕ್ಯಾರ ಮತ್ತೆ ನನ್ನ ಓದಿಸ್ಯಾರ ಆಮ್ಯಾಲ ಒಳ್ಳೇ ಮನಿಗಿ ಕೊಟ್ಟು ಮದುವಿ ಮಾಡ್ಯಾರ ಇಷ್ಟೆಲ್ಲಾ ನನಗೇಂತ ಮಾಡ್ಯಾರ. ಅಂತಾದ್ರಾಗ ಮತ್ತೆ ನಾನು ಆಸ್ತಿ ಕೇಳಿದ್ರೆ ಆ ದೇವ್ರು ಸತೆ ಮೆಚ್ಚಂಗಿಲ್ಲ. ಇಷ್ಟೆಲ್ಲಾ ನಮಗೆ ಅಂತ ಖರ್ಚು ಮಾಡಿರ್ತಾರ ಹಂಗಾಗಿ ನಮಗ ತವ್ರ ಮನಿ ಆಸ್ತಿನಾ ಭಾಗ ಕೇಳಾಕ ಹಕ್ಕಿಲ್ಲ. ನಮ್ಮನ್ನೆಲ್ಲಾ ನೋಡಿಕೆಂಡೋರು ನಮ್ಮ ಅಣ್ಣಂದ್ರು, ಆ ಆಸ್ತಿ ಸತೆ ಅವ್ರಿಗೇ ಹೋಗ್ಬೇಕು. ಲೆಕ್ಕಕ್ಕ ನೋಡಿದ್ರೆ ಅಪ್ಪನ ಆಸ್ತಿ ಗಂಡು ಮಕ್ಕಳಿಗೇ ಸೇರಬೇಕು. ನಮಗ ಮದುವಿ ಆದ ಮ್ಯಾಲ ಗಂಡನ ಮನೀನೇ ಎಲ್ಲಾ. ಅದನ್ನ ಬಿಟ್ಟು ಹಿಂಡ್ಕೊಳು ತಿನ್ನಾಕಾಗ್ತೈತಾ? ಯಾವದಾದ್ರೂ ಹಬ್ಬಗೋಳು ಬಂದ್ರೆ ಅದೂ ನಮ್

ಅಣ್ಣಂದ್ರು ಕರ್ಕಂಡು ಹೋದ್ರೆ ಮಾತ್ರ ಹೋಗಿ ಬರ್ಬೇಕು ಇಲ್ಲಾಂದ್ರೆ ನಾವು ಸುಮ್ ಸುಮ್ನೆ ಪೀಡಿಸ್ಬಾರ್ದು. ತವ್ರ ಮನಿ ಎಷ್ಟು ಚೆನ್ನಾಗಿರ್ತೈತೋ ನಾವು ಸತೆ ಅಷ್ಟು ಚೆನ್ನಾಗಿರ್ತೀವಿ. ಆಸ್ತಿನಾಗ ಭಾಗ ತಗಂಡು ಅಣ್ಣಂದ್ರು ಕುಡ ಮಖ ಕೆಡಿಸಿಕೊಳ್ಳದು, ಮತ್ತೆ ತವ್ರ ಮನಿ ಸಂಬಂಧನಾ ಕಡ್ಕಳ್ಳಾದು ಚೆನ್ನಾಗಿರಲ್ಲ. ಹಂಗಾಗಿ ನಾನು ನಮ್ ಅಪ್ಪನ ಆಸ್ತಿನಾಗ ಭಾಗ ಕೇಳ್ಲಿಲ್ಲ" ಎಂದು ಹೇಳಿದರು.

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಡಣಾಯಕನಕೆರೆ ಗ್ರಾಮದ ಚಂದ್ರಮ್ಮ ಮತ್ತು ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ಡಣಾಪುರ ಗ್ರಾಮದ ಅಯ್ಯಮ್ಮ ಇವರು ತಮ್ಮ ತವರು ಮನೆಯ ಆಸ್ತಿಯನ್ನು ನಿರಾಕರಿಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ತವರು ಮನೆಯ ಸಂಬಂಧಗಳು. ಏಕೆಂದರೆ ತವರು ಮನೆಯೆಂಬುದು ಮಹಿಳೆಗೆ ಇನ್ನಿಲ್ಲದ ಸುರಕ್ಷಾ ತಾಣವಾಗಿದೆ. ಭಾವನಾತ್ಮಕವಾಗಿ ಬಹಳಷ್ಟು ಬೆಸೆದುಕೊಂಡಿರುತ್ತಾರೆ. ಆ ಕಾರಣಕ್ಕೆ ಮಹಿಳೆಯರು ತಮ್ಮ ವಿವಾಹದ ನಂತರವೂ ತವರು ಮನೆಯನ್ನು ಬಿಟ್ಟುಕೊಡುವುದಿಲ್ಲ. ತಾನು ಹುಟ್ಟಿ ಬೆಳೆದ ಮನೆಯಾಗಿರುತ್ತದೆ. ಹಾಗೆಯೇ ತಂದೆ, ತಾಯಿ, ಅಣ್ಣ, ತಮ್ಮ, ತಂಗಿ ಹೀಗೆ ಎಲ್ಲಾ ಸಂಬಂಧಗಳನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿಯನ್ನು ಮಹಿಳೆಯ ಮೇಲೆಯೇ ಇರುತ್ತದೆ. ಆ ಕಾರಣಕ್ಕಾಗಿ ಮಹಿಳೆಯರು ತುಂಬಾ ಜತನದಿಂದ ತಮ್ಮ ತವರು ಮನೆಯೊಂದಿಗೆ ಸಂಬಂಧವನ್ನು ಹೊಂದಿರುತ್ತಾರೆ. ಹಾಗೆಯೇ ಗಂಡನ ಮನೆಯಲ್ಲಿನ ಹಿಂಸೆ ಹೆಚ್ಚಾದರೆ ಆಗ ಅವರ ಆಶ್ರಯಕ್ಕೆ ನಿಲ್ಲುವುದು ತವರು ಮನೆಯೇ ಹೊರತು ಬೇರಾವುದೂ ಅಲ್ಲ ಎಂಬ ಭಾವನೆ ಮಹಿಳೆಯರಲ್ಲಿ ಇರುವ ಕಾರಣಕ್ಕೆ ತಮ್ಮ ತವರು ಮನೆಯ ಸಂಬಂಧವನ್ನು ಕಡಿದುಕೊಳ್ಳಲು ಇಚ್ಛಿಸದಿರುವುದು ಕಂಡುಬರುತ್ತದೆ. ಆದರೆ ಮಹಿಳೆಯರು ಇದನ್ನು ಭಾವನಾತ್ಮಕ ನೆಲೆಯಲ್ಲಿ ಸ್ವೀಕರಿಸಿದರೆ, ಪುರುಷ ವ್ಯವಸ್ಥೆ ಇದನ್ನೆ ತನ್ನ ಬಂಡವಾಳವನ್ನಾಗಿಸಿಕೊಂಡಿರುವುದು ಕಂಡುಬರುತ್ತದೆ. ಆ ಮೂಲಕ ಮಹಿಳೆಯರ ಪಾಲಿಗೆ ಸೇರಬೇಕಾದ ಆಸ್ತಿಯಿಂದ ವಂಚಿತರನ್ನಾಗಿಸಿರುವುದು ಮೇಲಿನ ಪ್ರಕರಣಗಳಿಂದ ತಿಳಿದುಬರುತ್ತದೆ.

ಕೆಲವು ಸಂದರ್ಭಗಳಲ್ಲಿ ಮಹಿಳೆಯರು ತಮ್ಮ ನಿಲುವಿಗೆ ಕಟಿಬದ್ಧರಾಗಿದ್ದರೆ, ಪುರುಷಶಾಹಿ ವ್ಯವಸ್ಥೆ ಅವರನ್ನು ಭಾವನಾತ್ಮಕವಾಗಿ ಸೆಳೆಯಲು ಮುಂದಾಗುತ್ತದೆ. ಹಬ್ಬಹರಿದಿನಗಳೂ ಸಹ ಪಿತೃಪ್ರಧಾನ ವ್ಯವಸ್ಥೆಗೆ ವಾಹಕಗಳಂತೆ ಕಾರ್ಯನಿರ್ವಹಿಸುತ್ತವೆ. ಮುಖ್ಯವಾಗಿ ಹನುಮಕ್ಕಳ ಪ್ರಕರಣವು ಇದಕ್ಕೆ ಉತ್ತಮ ಉದಾಹರಣೆ. ಮಹಿಳೆಯರಿಗೆ ತವರು ಮನೆಯು ಸುರಕ್ಷತೆಯ ತಾಣವಾಗಿರುತ್ತದೆ ಮತ್ತು ಅದನ್ನು ಕಡಿದುಕೊಳ್ಳದೆ ಕಾಪಾಡಿಕೊಂಡು ಬರಬೇಕು ಎಂಬ ಜವಾಬ್ದಾರಿಯ ಭ್ರಮೆಯನ್ನು ಸೃಷ್ಟಿಸುತ್ತದೆ. ಉಡಿತುಂಬುವುದರ ಮೂಲಕ ಮತ್ತು ತವರು ಮನೆಯ ಸಂಬಂಧವನ್ನು ಕಡಿದುಕೊಳ್ಳದ ಹಾಗೆ ಹನುಮಕ್ಕಳಲ್ಲಿ ಭಾವನಾತ್ಮಕ ಬೆಸುಗೆಯನ್ನು ಏರ್ಪಡಿಸಿಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಅಯ್ಯಮ್ಮಳಿಗೆ ತನ್ನ ಮದುವೆಯ ಸಂದರ್ಭದಲ್ಲಿ ಮಾಡಿದ ಸಾಲವನ್ನು ತೀರಿಸುವ ಜವಾಬ್ದಾರಿಯನ್ನು

ಹೊರಿಸಲಾಗಿದೆ. ಮತ್ತು ವಿವಾಹದ ಸಂದರ್ಭದಲ್ಲಿ ಮಾಡಿದ ವೆಚ್ಚ ತಂದೆಯ ಆಸ್ತಿಯಿಂದಲೇ ಎಂಬಂತಹ ವಾದವನ್ನು ಮುಂದಿಡುವುದರ ಮೂಲಕ ಅಯ್ಯಮ್ಮಳೇ ಆಸ್ತಿಯನ್ನು ನಿರಾಕರಿಸಿರುವಂತೆ ಮಾಡಲಾಗಿದೆ. ಈ ಭಾವನಾತ್ಮಕತೆಗೆ ಒಳಗಾಗಿ ಹನುಮಕ್ಕ ಮತ್ತು ಅಯ್ಯಮ್ಮ ಇಬ್ಬರೂ ಸಹ ತಮ್ಮ ತಂದೆಯ ಆಸ್ತಿಯನ್ನು ನಿರಾಕರಿಸಿರುವುದು ತಿಳಿದುಬರುತ್ತದೆ.

ಹನುಮಕ್ಕನವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯದೇ ಇರುವ ಸಂಗತಿ ಮತ್ತು ಅದಕ್ಕೆ ನೀಡುವ ಕಾರಣಗಳನ್ನು ಗಮನಿಸಿದರೆ ಚಂದ್ರಮ್ಮ ಮತ್ತು ಅಯ್ಯಮ್ಮಳಿಗಿಂತ ಭಿನ್ನವಾಗೇನೂ ಇಲ್ಲ. ಬದಲಾಗಿ ಇವರು ಸ್ವ ಇಚ್ಛೆಯಿಂದ (ಪುರುಷಶಾಹಿ ಮೌಲ್ಯಗಳ ಕಾರಣವಾಗಿ) ಆಸ್ತಿಯನ್ನು ನಿರಾಕರಿಸಿರುವುದು ಬಿಟ್ಟರೆ, ಉಳಿದಂತೆ ಇವರ ಮೇಲೂ ಪಿತೃಪ್ರಧಾನ ಮೌಲ್ಯಗಳು ಗಾಢವಾಗಿ ಪರಿಣಾಮವನ್ನು ಬೀರಿರುವುದು ಕಂಡುಬರುತ್ತದೆ. ಮುಖ್ಯವಾಗಿ ಗಂಡನ ಮನೆಗಿಂತ ತವರು ಮನೆಯೇ ಮಹಿಳೆಯರಿಗೆ ಸುರಕ್ಷಿತ ತಾಣ ಎನ್ನುವಂತೆ ಬಿಂಬಿಸಲಾಗಿದೆ. ಅಂದರೆ ಗಂಡನ ಮನೆಯಲ್ಲಿ ಹಿಂಸೆಗೆ ಒಳಗಾದರೆ ತವರು ಮನೆಯೇ ರಕ್ಷಣೆಯ ಕೇಂದ್ರವಾಗಿರುತ್ತದೆ ಎಂಬ ಅಂಶಗಳು ಮಹಿಳೆಯರನ್ನು ಭಾವನಾತ್ಮಕವಾಗಿ ಹಿಡಿದಿಟ್ಟುಕೊಳ್ಳುತ್ತದೆ. ಎಲ್ಲಿಯವರೆಗೆ ಮಹಿಳೆಯರು ತಮ್ಮ ತಂದೆಯ ಆಸ್ತಿಯಲ್ಲಿ ಭಾಗ ಕೇಳುವುದಿಲ್ಲವೋ ಅಲ್ಲಿಯವರೆಗೆ ತವರು ಮನೆಯೆಂಬುದು ಅವರಿಗೆ ರಕ್ಷಣೆಯ ತಾಣ ಮಾತ್ರವಲ್ಲದೆ ಅಲ್ಲಿನ ಸದಸ್ಯರೂ ಸಹ ಆಪ್ತರಾಗಿರುತ್ತಾರೆ. ಒಂದುವೇಳೆ ಮಹಿಳೆಯರು ಆಸ್ತಿಯಲ್ಲಿ ಭಾಗ ಪಡೆದರೆ ತವರು ಮನೆಯೂ ಕೂಡ ಸುರಕ್ಷಿತವಲ್ಲ. ಇನ್ನೊಂದು ಪ್ರಮುಖ ನಂಬಿಕೆಯೇನೆಂದರೆ ವಂಶವನ್ನು ಮುಂದುವರೆಸಿಕೊಂಡು ಹೋಗುವುದು ಪುರುಷನೇ ಹೊರತು ಮಹಿಳೆಯಲ್ಲ. ಮಹಿಳೆಯರು ಯಾವಾಗಲೂ ತಮ್ಮ ಗಂಡನ ಮನೆಯ ವಂಶವನ್ನು ಬೆಳೆಸುವವರು ಎಂಬುದು. ಇದೂ ಕೂಡ ಮಹಿಳೆಯರು ಆಸ್ತಿಯನ್ನು ನಿರಾಕರಿಸುವಂತೆ ಮಾಡಲು ಒಂದು ಕಾರಣಾವಾಗುತ್ತದೆ. ಇದನ್ನು ಅಯ್ಯಮ್ಮಳ ಪ್ರಕರಣದಲ್ಲಿ ಕಾಣಬಹುದು. ಹೀಗೆ ಹಲವಾರು ಕಾರಣಗಳಿಂದ ಮಹಿಳೆಯರನ್ನು ಭಾವನಾತ್ಮಕತೆಗೆ ಒಳಪಡಿಸಿ ಅವರು ತವರು ಮನೆಯ ಆಸ್ತಿಯನ್ನು ನಿರಾಕರಿಸುವಂತೆ ಮಾಡಲಾಗುತ್ತಿದೆ. ಈ ಮೇಲಿನ ಎಲ್ಲಾ ಪ್ರಕರಣಗಳಲ್ಲಿ ವಿವಾಹದ ಸಂದರ್ಭದಲ್ಲಿ ಕೊಟ್ಟಂತಹ ವರದಕ್ಷಿಣೆಯು ಅವರು ಆಸ್ತಿಹಕ್ಕನ್ನು ಪಡೆಯಲು ನಿರಾಕರಿಸಲ್ಪಡುವಂತೆ ಮಾಡಿತು. ಹಾಗೆಯೇ ತವರಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿಯನ್ನು ಮಹಿಳೆಯರ ಮೇಲೆಯೇ ಹೇರಿರುವ ಕಾರಣಕ್ಕಾಗಿ ಮಹಿಳೆಯರು ಆಸ್ತಿಯನ್ನು ನಿರಾಕರಿಸುವಂತೆ ಮಾಡಿದೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಿರುವುದೇನೆಂದರೆ ವಿವಾಹದ ಸಂದರ್ಭದಲ್ಲಿ ನೀಡುವ ವರದಕ್ಷಿಣೆಯನ್ನು ಸಮಾಜವು ಗುರುತಿಸುತ್ತದೆ. ಆದರೆ ಪಿತ್ರಾರ್ಜಿತ ಆಸ್ತಿಯ ಮೇಲಿರುವ ಹಕ್ಕನ್ನು ಗುರುತಿಸುವುದಿಲ್ಲ. ಈ ಬಗೆಯ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಆದರೆ ಇಲ್ಲಿ ಕೆಲವು ಪ್ರಕರಣಗಳನ್ನು ಮಾತ್ರ ಗುರುತಿಸಿಕೊಂಡು ವಿಶ್ಲೇಷಿಸಲಾಗಿದೆ.

**ಆ. ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಗಳು** : ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರು ಪಾಲನ್ನು ಪಡೆಯದ ಹಾಗೆ ಮಾಡಲು ಈ ಅಸ್ತ್ರವನ್ನು ಬಳಕೆ ಮಾಡುತ್ತದೆ. ಅಂದರೆ ಕುಟುಂಬದಲ್ಲಿನ ಸಹೋದರಿಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಿದರೆ ಅವರು ಅದರಿಂದ ದೂರವಿರುವಂತೆ ಮಾಡಲು ಪುರುಷ ವ್ಯವಸ್ಥೆ ಹಲವು ತಂತ್ರಗಳನ್ನು ರೂಪಿಸುತ್ತದೆ. ಅವುಗಳಿಗೆ ಬಲಿಯಾಗದಿದ್ದಾಗ, ಈ ಅಸ್ತ್ರವನ್ನು ಬಳಸುತ್ತದೆ. ಪುರುಷರು ತಮ್ಮನ್ನು ತಾವು ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಯನ್ನು ಹಾಕುವುದರ ಮೂಲಕ ಮಹಿಳೆಯರ ಮಾನಸಿಕವಾಗಿ ಹಿಂಸಿಸುತ್ತಾರೆ. ಈ ಹಿಂಸೆಯನ್ನು ತಾಳಲಾರದೇ ಮಹಿಳೆಯರು ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸುತ್ತಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಬಗೆಯ ಹಲವು ಪ್ರಕರಣಗಳು ದೊರೆತಿರುವುದು ಕಂಡುಬಂದಿದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಬಸಾಪುರ ಗ್ರಾಮದ ಉಮಾದೇವಿ ಎಂಬುವವರು ತಮ್ಮ ತಂದೆಯ ಆಸ್ತಿಯನ್ನು ನಿರಾಕರಿಸಿದ್ದು, ತಮ್ಮ ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಯನ್ನು ಹಾಕಿದ್ದರಿಂದ. ಇವರೇ ಹೇಳಿವಂತೆ " ನಮ್ ಅಪ್ಪಗ ಇಬ್ಬರೇ ಮಕ್ಕಳು. ನಾನು ಮತ್ತೆ ನಮ್ ತಮ್ಮ. ನಮ್ ಅಪ್ಪಂದು ಇರೋದು ಮೂರು ಎಕ್ರಿ ಜಮೀನು ಮತ್ತೆ ಒಂದು ಮನಿ ಐತಿ. ನಮ್ ಅಪ್ಪ ಇರೋವಾಗ್ಲೇ ನನಿಗೆ ಮದುವಿ ಮಾಡಿ ಕೊಟ್ಟಾರ. ನಮ್ ತಮ್ಮನಿಗೂ ಮದುವಿ ಆಗೇತಿ. ಅವ್ನಗೆ ಇಬ್ರು ಮಕ್ಳು. ನನಿಗೆ ಮೂರು ಜನ ಮಕ್ಳು. ನಮ್ ಮನ್ಯಾಗ ನನ ಗಂಡ ನಿಮ್ ತಂದಿ ಆಸ್ತಿನಾಗ ಭಾಗ ಕೇಳು. ಅದ್ರಾಗ ಬಂದ ದುಡ್ಡಿನಿಂದ ಏನಾರ ಬಿಜಿನೆಸ್ ಮಾಡ್ತೀನಿ ಅಂತ ಹೇಳಿದ್ದ. ಅದಕ್ಕ ನಾನು ನಮ್ ಅಪ್ಪನ ಆಸ್ತಿನಾಗ ಭಾಗ ಕೇಳಿದ್ದೆ. ಆದ್ರೆ ನಮ್ ತಮ್ಮ ಅಶೋಕ ಅದಕ್ಕ ಒಪ್ಲಿಲ್ಲ. ಇರೋ ಜಮೀನ್ನಾಗ ನಿನಗ ಅರ್ದ ಕೊಟ್ಟು ನಾನೇನು ಮಾಡ್ಲಿ. ನನಿಗೆ ಸಾಲ ಬಾಳ ಐತಿ. ಈ ಜಮೀನ್ನಾಗ ದುಡ್ಡದ್ರ ಸಾಲ ತಿರಂಗಿಲ್ಲ. ಹಂಗಾಗಿ ಬ್ಯಾರೇರ ಜಮೀನ್ನಾಗ ಒಂದೆಕ್ರಿ ಹೊಲಾನ್ನ ಗುತ್ತಿಗಿ ಹಿಡ್ಕಂಡೀನಿ. ಈಗ ನೀನು ಇದ್ರಾಗೆ ಅರ್ದ ಪಾಲು ಕೊಡು ಅಂತೀಯಲ್ಲಾ. ಹಿಂಗಾದ್ರೆ ನಾನು ಸಾಲ ತೀರ್ಸಾಕಾಗಲ್ಲ. ಸಾಯಗಬೇಕಷ್ಟೇ ಅಂದ. ಅದನ್ನ ನಾನು ನನ ಗಂಡಗ ಹೇಳಿದೆ. ಆದ್ರೆ ಆತ ಕೇಳ್ಲಿಲ್ಲ. ನಿಮ್ ತಮ್ಮ ಕೊಡಂಗಿಲ್ಲ ಅಂದ್ರೆ ಕೋರ್ಟಿಗೆ ಹೋಗಾನು ಅಂತೇಳಿ ಅಂದ. ಅದರಂಗ ನಾನು ಕೋರ್ಟಿಗೆ ಹೋದೆ. ಕೋರ್ಟಿಗೆ ಹೋಗಾದು ನನಿಗೆ ಇಷ್ಟ ಇರ್ಲಿಲ್ಲ. ಆದ್ರೂ ಏನ್ ಮಾಡೋದು, ಗಂಡಗ ಎದುರು ಮಾತಾಡಂಗಿಲ್ಲಲ. ಹಂಗಾಗಿ ಸುಮ್ನಾದೆ. ನಾವು ಯಾವಾಗ ಕೋರ್ಟಿಗೆ ಹೋದ್ವೋ ಆವಾಗಿಂದ ನಮ್ ತಮ್ಮ ಬಾಳ ಬೇಜಾರಾಗಿದ್ದ. ಹೊಲ್ದಾಗ ಕೆಲ್ಸ ಮಾಡೋದನ್ನೇ ಬಿಟ್ಬಿಟ್ಟಿದ್ನಂತೆ. ಒಂದಿನ ನಮ್ ತಮ್ಮನ ಹೆಂಡ್ತಿ ನಮ್ ಮನಿಗೆ ಬಂದು ಒಂದು ವಿಷ್ಯ ಹೇಳಿದ್ಲು. ಅದನ್ನ ಕೇಳಿ ನನಿಗೆ ಜೀವಾನೇ ಹೋದಂಗಾತು. ನಮ್ ತಮ್ಮ ವಿಷ ಕುಡ್ದು ಸಾಯಾಕ ಹೋಗಿದ್ದ. ಆದ್ರೆ ದೇವರ ದಯದಿಂದ ಬದುಕಿ ಉಳದಾನ. ಈ ಆಸ್ತಿ ಕಾಲಾಗ ನಮ್ ತಮ್ಮನ್ನ ಕಳ್ಕಂತಿದ್ದೆ. ಇದನ್ನೆಲ್ಲಾ ಯೋಚ್ನೆ ಮಾಡಿ ನನ ಗಂಡಗ ತಿಳಿಸಿ ಹೇಳಿ. ಕೇಸ್ನ ವಾಪಾಸ್ ತಕ್ಕಂಡೆ. ನಾನು ಹುಟ್ಟಿದ

ಮನ್ಯಾಗ ನಮ್ ತಮ್ಮ ಚೆನ್ನಾಗಿದ್ರೆ ಅಷ್ಟೇ ಸಾಕು ಅಂತೇಳಿ. ನಮ್ ಅಪ್ಪನ ಆಸ್ತಿನ ಬ್ಯಾಡ ಅಂದ್ಬಿಟ್ಟೆ. ಎಂದರು.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ದಿಬ್ಬದಹಳ್ಳಿ ಗ್ರಾಮದಲ್ಲಿನ ಮಂಜುಳ ಎನ್ನುವವರೂ ಕೂಡ ತಮ್ಮ ಅಣ್ಣ ಆತ್ಮಹತ್ಯೆ ಮಾಡಿಕೊಳ್ಳುವ ವಿಷಯದಿಂದ ಚಕಿತಳಾಗಿ ತನ್ನ ತಂದೆಯ ಆಸ್ತಿಯಿಂದ ವಂಚಿತರಾಗಿದ್ದಾರೆ. "ನಮ್ ತಂದಿಗೆ ನಾವಿಬ್ರೇ ಮಕ್ಳು. ನಾನು ಮತ್ತೆ ನಮ್ ಅಣ್ಣ. ನಾನು ಬಿ.ಎ. ಓದೀನಿ. ಆದ್ರೆ ನಮ್ ಅಣ್ಣ ಓದಿಲ್ಲ. ನಮ್ ಅಪ್ಪಂದು ಇರೋದು ಐದು ಎಕ್ರೆ ಜಮೀನು ಮಾತ್ರ. ಅದು ಈಗ ನಮ್ ಅಣ್ಣನ ಹೇಸ್ರನಾಗೇ ಐತಿ. ನಮ್ ತಂದಿ ತೀರ್ಕೆಂಡ್ ಮ್ಯಾಲೆ. ಆ ಆಸ್ತಿನ ತನ್ ಹೆಸ್ರಿಗೆ ಮಾಡ್ಕಬೇಕು ಅಂತೇಳಿ. ಒಂದು ಬಾಂಡ್ ಪೇಪರ್ ನಾಗ ನನ್ ಸಹಿ ತಗಳ್ಳಾಕ ಬಂದಿದ್ದ. ಆದ್ರೆ ತಂದಿ ಆಸ್ತಿನಾಗ ಹೆಣ್ಮಕ್ಕಳಿಗೂ ಸಮ ಪಾಲು ಬರ್ತೈತಿ ಅಂತ ನನಗ ಗೊತ್ತಿತ್ತು. ಹಂಗಾಗಿ ನಾನು ಸೈನ್ ಮಾಡಂಗಿಲ್ಲ. ಆಸ್ತಿನಾಗ ನನಗೂ ಪಾಲು ಬೇಕು ಅಂತ ಕೇಳಿದೆ. ಆದ್ರೆ ನಮ್ ಅಣ್ಣ ಒಪ್ಲಿಲ್ಲ. ಅದಕ್ಕ ನಾನು ಕೋರ್ಟಿಗೆ ಹೋದೆ. ಅದರಿಂದ ನಮ್ ಅಣ್ಣ ಬಾಳ ಹೆದ್ರಿಕೆಂಡಿದ್ದ. ಒಂದಿನ ನಮತಾಗ ಮಾತಾಡ್ದ. ನೀನಾರ ಓದಿಕೆಂಡೀಯಿ. ಕಾನೂನು ಬಾಳ ಚೆನ್ನಾಗಿ ಗೊತ್ತಿರತೈತಿ. ನಾನು ಓದಿಲ್ಲ. ಕೋರ್ಟಿನಾಗ ಏನ್ ಮಾತಾಡ್ಬೇಕು ಅಂತಾನೂ ನನಿಗೆ ಗೊತ್ತಿಲ್ಲ. ಹಂಗಾಗಿ ಈ ಆಸ್ತಿನೆಲ್ಲಾ ನಿನ್ ಹೆಸ್ರಿಗೇ ಬರ್ದು ಕೊಡ್ತೀನಿ. ಕೇಸ್ನ ವಾಪಾಸ್ ತಕ್ಕ. ನಾವು ಎಲ್ಲಾದ್ರೂ ಹೋಗಿ ಸಾಯ್ತೀವಿ. ನಿನ್ನ ಸಾಕಿ, ಓದ್ಸಿ ದೊಡ್ಡೋಳನ್ನಾಗಿ ಮಾಡಿ, ಮದುವಿ ಮಾಡಿ ಕೊಟ್ಟೆವಿ. ಅದಕ್ಕ ನೀನು ಸರಿಯಾದ ಶಿಕ್ಷೇನೇ ಕೊಟ್ಟೆ. ಅಂತೇಳಿ ಹೇಳಿದ. ಹಂಗೆ ಒಂದಿನ ಸಾಯ್ತೀನಿ ಅಂತೇಳಿ ಮನಿ ಬಿಟ್ಟು ಹೋಗಿದ್ನಂತೆ. ಅದನ್ನ ನಮ್ ಅಮ್ಮ ಹೇಳಿದ್ಲು. ಇಷ್ಟೆಲ್ಲ ಆದ ಮ್ಯಾಲೆ ಏನ್ ಮಾಡೋದು. ಆಸ್ತಿನಾಗ ಭಾಗ ತಗಂಡು ಅಣ್ಣನ್ನ ಕಷ್ಟಕ್ಕ ನೂಕಾದಕ್ಕಿಂತ, ಕೇಸ್ ವಾಪಾಸ್ ತಕ್ಕಳ್ಳಾದೇ ಬಸೆ ಅಂತೇಳಿ. ಕೇಸ್ನ ವಾಪಾಸ್ ತಕ್ಕಂಡೆ. ಈಗ ನಮ್ ಅಣ್ಣ ಆರಾಮಾಗಿ ಐದಾನ. ಎಂದರು.

ಈ ಎರಡೂ ಪ್ರಕರಣಗಳಲ್ಲಿನ ಉಮಾದೇವಿ ಮತ್ತು ಮಂಜುಳ ಇಬ್ಬರೂ ಸಹ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಕೇಳಿದ್ದಕ್ಕಾಗಿ ಅಣ್ಣ ತಮ್ಮಂದಿರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ ಎಂಬ ಮನೋಭಾವದಿಂದ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯದೇ ಸುಮ್ಮನಾಗಿದ್ದಾರೆ. ಇದು ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯರಿಗೆ ಮಾಡುವ ಜಾಣತನದ ಮೋಸವಾಗಿದೆ. ಆತ್ಮಹತ್ಯೆ ಮಾಡಿಕೊಳ್ಳುವ ನೆಪವನ್ನು ಒಡ್ಡಿ ತಮ್ಮ ತಂದೆಯ ಆಸ್ತಿಯ ಮೇಲೆ ಅಧಿಕಾರವನ್ನು ಚಲಾಯಿಸಿರುವುದು ಕಂಡುಬರುತ್ತದೆ. ಮುಖ್ಯವಾಗಿ ಪುರುಷರು ಮಹಿಳೆಯರ ಭಾವನಾತ್ಮಕತೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿರುವುದು ಕಂಡುಬರುತ್ತದೆ. ಹೀಗೆ ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಗಳನ್ನು ಹಾಕುವುದರ ಮೂಲಕ ಆಸ್ತಿಯ ಮೇಲೆ ಅಧಿಪತ್ಯವನ್ನು ಚಲಾಯಿಸಿರುವುದು ಮೇಲಿನ ಎರಡು ಪ್ರಕರಣಗಳಿಂದ ತಿಳಿದುಬರುತ್ತದೆ.

ವ್ಯವಸ್ಥೆಯಲ್ಲಿ ಸ್ತ್ರೀ ವಿಶಿಷ್ಟ ಗುಣಗಳು ಮತ್ತು ಪುರುಷ ವಿಶಿಷ್ಟ ಗುಣಗಳು ಎಂದು ಸ್ಪಷ್ಟವಾಗಿ ಬೇರ್ಪಡಿಸಲ್ಪಟ್ಟಿವೆ. ಅವುಗಳಲ್ಲಿ ಮಹಿಳೆಯರ ವಿಶಿಷ್ಟ ಗುಣಗಳಾದ ಮೃದುತನ, ಸಹನೆ, ಕ್ಷಮೆ, ಪ್ರೇಮ, ಭಾವುಕತೆ, ಸಂಗೋಪನೆ, ಪರಾವಲಂಬಿತನ, ವಿಧೇಯತೆ, ತಾಯ್ತನ, ತಾಳ್ಮೆ, ಕಷ್ಟಗಳನ್ನು ಸಹಿಸಿಕೊಳ್ಳುವುದು ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಈ ಎಲ್ಲ ಬಗೆಯ ಗುಣಗಳನ್ನು ಪುರುಷ ಪ್ರಧಾನ ವ್ಯವಸ್ಥೆಯು ಭಾವನಾತ್ಮಕ ನೆಲೆಯಲ್ಲಿಟ್ಟು ನೋಡುವುದರ ಮೂಲಕ ಅವುಗಳನ್ನು ಅವರ ದೌರ್ಭಲ್ಯವಾಗಿ ಪರಿಗಣಿಸುತ್ತದೆ. ಇವುಗಳು ಅನೇಕ ಸಾಂಸ್ಕೃತಿಕ ಆಚರಣೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಹಾಗೆಯೇ ಮಹಿಳೆಯರು ಪುರುಷರಿಗಿಂತ ಹೆಚ್ಚು ಭಾವನಾಶೀಲರು ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಆದರೆ ಇದೊಂದು ಸಾಮಾನ್ಯವಾಗಿ ಬಳಕೆಯಾಗದೆ, ಗಮನಾರ್ಹವಾದ ರಾಜಕೀಯ ಶಕ್ತಿಯುಳ್ಳ ಸಾಧನವೂ ಆಗಿದೆ. ಮಹಿಳೆಯರ ಸಾಮಾಜಿಕ ಸ್ಥಾನವನ್ನು ಸಮರ್ಥಿಸುವ, ವಿವರಿಸುವ ಕಾರ್ಯವನ್ನು ಈ ಸಾಧನ ಮಾಡುತ್ತದೆ. ಮಹಿಳೆಯರು ಭಾವನಾ ಪ್ರಧಾನರಾದ್ದರಿಂದ ಸಾರ್ವಜನಿಕ ಜೀವನದಲ್ಲಿ ಅವರು ಸರಿ ಹೊಂದುವುದಿಲ್ಲವೆಂಬ ವಿವರಣೆಗಳು ಪುರುಷ ಪ್ರಧಾನ ವ್ಯವಸ್ಥೆಯು ಸೃಷ್ಟಿಸಿರುವ ಭ್ರಮೆಯಾಗಿದೆ. ಹೀಗೆ ಸೃಷ್ಟಿಸಿರುವಂತಹ ಭ್ರಮೆಯನ್ನು ಮಹಿಳೆಯರು ಸತ್ಯವೆಂದು ಭಾವಿಸಿರುವ ಕಾರಣಕ್ಕಾಗಿ ಪ್ರತೀ ಹಂತದಲ್ಲೂ ಸೌಲಭ್ಯಗಳಿಂದ, ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಮುಖ್ಯವಾಗಿ ಆರ್ಥಿಕವಾಗಿ ಭದ್ರತೆಯನ್ನು ನೀಡುವಂತಹ ಪಿತ್ರಾರ್ಜಿತ ಆಸ್ತಿಯಲ್ಲಿನ ಪಾಲನ್ನು ಪಡೆಯುವುದರಿಂದಲೂ ಸಹ ಅವರನ್ನು ದೂರವಿರುವಂತೆ ಮಾಡಿರುವುದು ತಿಳಿದುಬರುತ್ತದೆ.

**ಇ. ಕುಟುಂಬ ಗೌರವವನ್ನು ಕಾಪಾಡುವುದು :** ಕುಟುಂಬದಲ್ಲಿ ಮಹಿಳೆಯರಿಗೆ ವಿಶಿಷ್ಟವಾದಂತಹ ಜವಾಬ್ದಾರಿಗಳನ್ನು ಹೊರಿಸಲಾಗಿದೆ. ಮುಖ್ಯವಾಗಿ ಮಹಿಳೆ ಸ್ಥಿರಮಾದರಿ ಪಾತ್ರಗಳನ್ನು ಅತ್ಯಂತ ನಿಷ್ಠೆಯಿಂದ ಪಾಲಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾಳೆ. ಅಂದರೆ ಕುಟುಂಬದಲ್ಲಿ ಮಹಿಳೆ ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ ತನ್ನ ಪಾತ್ರ ಕರ್ತವ್ಯಗಳನ್ನು, ಜವಾಬ್ದಾರಿಗಳನ್ನು ನಿರ್ವಹಿಸಲೇಬೇಕು. ಅವುಗಳ ಜೊತೆ ಜೊತೆಗೆ ಕುಟುಂಬದ ಗೌರವವನ್ನು ಕಾಪಾಡುವುದು ಅವಳ ಆದ್ಯ ಕರ್ತವ್ಯವಾಗಿರುತ್ತದೆ. ಅದು ತವರು ಮನೆಯಾಗಿರಬಹುದು ಅಥವಾ ಗಂಡನ ಮನೆಯಾಗಿರಬಹುದು. ಈ ಕಾರಣಕ್ಕಾಗಿ ಹಲವು ಮಹಿಳೆಯರು ಕುಟುಂಬದ ಗೌರವಕ್ಕೆ ಅಂಜಿ ತಮಗೆ ಸೇರಬೇಕಾದ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗಿದ್ದಾರೆ. ಇದೂ ಕೂಡ ಒಂದು ತೊಡಕಾಗಿ ಮಾರ್ಪಟ್ಟಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಂತಹ ಮಾಹಿತಿಯಿಂದ ತಿಳಿದು ಬಂದಿತು. ಇದನ್ನು ವಕ್ತೃಗಳ ಹೇಳಿಕೆಯ ಮೂಲಕ ಮುಂದಿನಂತೆ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ನರಸಿಂಗಾಪುರ ಗ್ರಾಮದಲ್ಲಿ ರೇಣುಕಾ ಎಂಬ ಮಹಿಳೆ ತನ್ನ ತವರು ಮನೆಯ ಮರ್ಯಾದೆಯನ್ನು ಕಾಪಾಡುವ ಜವಾಬ್ದಾರಿಯ ಕಾರಣದಿಂದ ತಂದೆಯ ಆಸ್ತಿಯಿಂದ ವಂಚಿತಳಾದ ಮಹಿಳೆಯಾಗಿದ್ದಾಳೆ. "ನಮ್ ಅಣ್ಣ ಎಷ್ಟಂದು ಕೆಟ್ರೋನು

ಅಂದ್ರೆ ಸ್ವಂತ ತಂಗಿ ಅಂತ ಸಮೇತ ನೋಡ್ದಂಗ ಹೊಡ್ದಾನ. ಅದು ಒಂದ್ಸಾರಿ ಎರ್ಡಸಾರಿ ಅಲ್ಲ ಬಾಳ ಸತೆ ನನ ಗಂಡನ ಎದುರಿಗೆ ಹೊಡ್ದಾನ. ನನ ಗಂಡ ಬಿಡಿಸಿಕೆಳ್ಳಾಕ ಬಂದ್ರ ಅತಗೂ ಹೊಡ್ದಾನ. ಇಷ್ಟಕ್ಕೆಲ್ಲಾ ಕಾರಣ ನಾನು ನಮ್ ತಂದಿ ಆಸ್ತಿನಾಗ ಭಾಗ ಕೇಳಿದ್ದು. ನಮ್ ತಂದಿ ಈಗ ಇಲ್ಲ. ಅವ್ರು ಮಾಡಿಟ್ಟ ಆಸ್ತಿ ಅಂದ್ರ ೫ ಎಕ್ರೆ ಭೂಮಿ ಮತ್ತ ಒಂದು ಮನಿ ಐತಿ. ನಾನು ಮತ್ತೆ ನಮ್ ಅಣ್ಣ ಗೋವಿಂದ ಇಬ್ರೆ ಮಕ್ಳು. ಅಮ್ ಅಪ್ಪ ಅಮ್ಮ ಇಬ್ರು ಸಾಯೋವರ್ಗೂ ನಮ್ ಅಣ್ಣನೇ ನೋಡ್ಕೆಂಡಾನ. ಹಂಗಾಗಿ ಆಸ್ತಿನೆಲ್ಲಾ ಅವ್ನ ಹೆಸ್ರಿಗೇ ಬರ್ಕಬೇಕಂತ ಯೋಚ್ನ ಮಾಡಿದ್ದ. ಆದ್ರ ನಾನು ಇಲ್ಲೆ ನಮ್ ಊರಾಗ ಸ್ತ್ರೀಶಕ್ತಿ ಸಂಘಕ್ಕ ಸೇರೇನಿ. ತಿಂಗಳ್ಗಾಗ ಒಂದ್ಸಾರಿ ಮೀಟಿಂಗ್ ಮಾಡ್ತೀವಿ. ಒಂದಿನ ಬಳ್ಳಾರಿಯಿಂದ ಕೋರ್ಟಿನಾಗಿರೋ ಲಾಯರ್‌ಗಳು ಎಲ್ಲಾ ಸೇರಿ ಒಂದು ಬಸ್ ಮಾಡ್ಕೆಂಡು ನಮ್ ಊರಿಗಿ ಬಂದಿದ್ರು. ನಮ್ ಊರಾಗಿನ ಗ್ರಾಮ ಪಂಚಾತಿಯಾಗ ಒಂದು ಮೀಟಿಂಗ್ ಮಾಡಿದ್ರು. ಅದಕ್ಕ ಊರಾಗಿನ ಸಂಘದೋರೆಲ್ಲಾ ಬರ್ಬೇಕು ಅಂತ ಹೇಳಿದ್ರು. ಹಂಗಾಗಿ ನಾವೂ ಹೋಗಿದ್ವಿ. ಅಲ್ಲಿ ಹೇಳಿದ್ರು ಅಪ್ಪನ ಆಸ್ತಿನಾಗ ಹೆಣ್ಮಕ್ಕಳಿಗೂ ಗಂಡು ಮಕ್ಕಳಿಗಿ ಬರೋವಷ್ಟು ಆಸ್ತಿ ಸಿಗತೈತಿ. ಅಂತದ್ದೊಂದು ಕಾನೂನು ಬಂದೈತಿ. ಅದನ್ನ ನೀವು ಬಳ್ಸಿಕೊಳ್ಳಬೇಕು ಅಂತ ಹೇಳಿದ್ರು. ಮತ್ತ ನಿಮ್ ಸಂಘಗಳ ಮೀಟಿಂಗ್ನಾಗ ಇಂತ ವಿಚಾರನ್ನೆಲ್ಲಾ ಮಾತಾಡ್ಬೇಕು. ಕಷ್ಟಗಳನ್ನ ಬಗಿಹರ್ಸಕೋಬೇಕು ಅಂತ ಹೇಳಿದ್ರು. ಆವಾಗ ನನಗೆ ಆಸ್ತಿ ವಿಚಾರಾ ಗೊತ್ತಾತು. ಆಮ್ಯಾಲ ಇದನ್ನ ನಾನು ನನ ಗಂಡಗ ಹೇಳಿದೆ, ಆತಗ ಮೊದ್ಲೇ ಗೊತ್ತಿತ್ತು. ಅದಕ್ಕ ನೀನು ನಿಮ್ ತಂದಿ ಆಸ್ತಿನಾಗ ಪಾಲು ಕೇಳು. ಕೊಡಂಗಿಲ್ಲಾಂದ್ರ ಕೋರ್ಟಿಗಿ ಹೋಗ್ತೀನಿ ಅಂತ ಹೇಳು ಅಂತ ಹೇಳಿ ಕಳ್ಸದ. ಹಂಗಾಗಿ ನಾನು ಈ ವಿಚಾರಾನ ಕೇಳಿದ್ನಲ್ಲ ಅದಕ್ಕ ನಮ್ ಅಪ್ಪನ ಆಸ್ತಿನಾಗ ನನಗೂ ಪಾಲು ಬೇಕು ಅಂತ ಅಣ್ಣಂತಾಗ ಕೇಳಿದೆ. ಅವ್ನು ಇದಕ್ಕ ಒಪ್ಪಲಿಲ್ಲ. ಅದಕ್ಕ ಅವ್ನು ನೀನು ಕೋರ್ಟ್‌ಗೆ ಹೋಗುವಷ್ಟು ಮಟ್ಟಕ್ಕ ಬಂದ್ಯಾ. ತವ್ರ ಮನಿ ಮಾನಾನ ಕಾಪಾಡೋದು ಬಿಟ್ಟು ಮಾನ ಕಳಿಯಾಕ ಹೊಂಟಿಯಲ್ಲ. ನಮ್ ಮನಿತನದಾಗ ಇಲ್ಲಿವರ್ಗೂ ಯಾರೂ ಕೋರ್ಟಿಗಿ ಆಗ್ಲೀ ಪೋಲೀಸ್ ಟೇಶನ್‌ಗೆ ಆಗ್ಲೀ ಹೋಗಿರೋದು ಇಲ್ಲ. ಆದ್ರೆ ಈವತ್ತು ನೀನು ಇದನ್ನೆಲ್ಲಾ ಮುರದು ಕೋರ್ಟಿಗಿ ಹೋಗ್ತೀನಿ ಅಂತೀಯ. ನಿನ್ ಹಿಂದೆ ಯರ್‍ಯಾರು ಐದಾರ ಅಂತ ಗೊತ್ತು. ನೀನು ಕೋರ್ಟಿಗಿ ಹೋದ್ರೂ ಅಷ್ಟೇ, ಎಲ್ಲಿಗೋದ್ರೂ ಅಷ್ಟೇ, ನಾನು ಮಾತ್ರ ಆಸ್ತಿನಾಗ ಭಾಗ ಕೊಡಂಗಿಲ್ಲ ಅಂತಂದ. ಮತ್ತೆ ನನ ಗಂಡನ್ ಕರ್ದು ಈಕಿನ ಮನಿ ಹೊರ್ಗ ಬಿಟ್ಟು ನೀನು ಮನ್ಯಾಗ ಕುಂತು ಏನ್ ಮಾಡಕತ್ತೀಯಿ. ಈಕಿಗಿ ಇಲ್ಲಿವರ್ಗೆ ಮಾತಾಡಾಕ ಕೊಟ್ಟಿದ್ದೇ ನಿನ್ ತಪ್ಪು. ಈಕಿ ತವ್ರಮನಿ, ಗಂಡನ ಮನಿ ಎರಡ್ರುದ್ರೂ ಮರ್ಯಾದಿ ತೆಗಿಯಾಕತ್ಯಾಳ. ನೀನೇನಾರಾ ಈಕಿನ್ನ ಹಿಂಗ ಬಿಟ್ರೆ ತಲಿಮ್ಯಾಲ ಕುಂತು ಮೆಣಸು ಅರಿತಾಳ. ನೀನು ಈಕಿಗಿ ಬುದ್ದಿವಾದ ಹೇಳು ಇಲ್ಲಾಂದ್ರ ನಿನಿಗೆ ನಾನು

ತೊಡಕುಗಳಿಗೆ ಸಂಬಂಧಿಸಿದಂತೆ ಕೆಲವು ಅಂಕಿ ಅಂಶಗಳನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ- ೬.೨.೨**

**ಭಾವನಾತ್ಮಕ ನೆಲೆಯ ತೊಡಕುಗಳು**

| ಭಾವನಾತ್ಮಕ ನೆಲೆಯ ತೊಡಕುಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ತವರಿನೊಂದಿಗಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ | ೧೮೦ | ೬೦% | ೮೬ | ೨೮.೬೬% | ೩೪ | ೧೧.೩೩% |
| ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಗಳು | ೧೩೨ | ೪೪% | ೮೦ | ೨೬.೬೬% | ೮೮ | ೨೯.೩೩% |
| ಕುಟುಂಬದ ಗೌರವ ಕಾಪಾಡುವುದು | ೯೮ | ೩೨.೬೬% | ೬೪ | ೨೧.೩೩% | ೧೩೮ | ೪೬% |




**ರೇಖಾ ಚಿತ್ರ ೬.೨.೨ ಭಾವನಾತ್ಮಕ ನೆಲೆಯ ತೊಡಕುಗಳು**

ಒಟ್ಟು ಮುನ್ನೂರು ಪ್ರಕರಣಗಳಲ್ಲಿ ತವರಿನೊಂದಿಗಿನ ಸಂಬಂಧಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿಯ ಕಾರಣವು ಆಸ್ತಿ ಹಕ್ಕನ್ನು ಪಡೆಯಲು ತೊಡಕಾಗಿರುವುದನ್ನು ೧೮೦ರಷ್ಟು ಅಂದರೆ ಶೇ.೬೦ರಷ್ಟು ಮಹಿಳೆಯರು ಈ ಕಾರಣವನ್ನು ನೀಡಿದ್ದಾರೆ. ಹಾಗೆಯೇ ಕೆಲವು

ಕುಟುಂಬಗಳಲ್ಲಿ ಪುರುಷರೇ ಆತ್ಮಹತ್ಯೆ ಮಾಡಿಕೊಳ್ಳುವ ಹುಸಿ ನೆಪವನ್ನು ಮುಂದಿಡುವ ಕಾರಣವನ್ನು ೧೩೨ ಅಂದರೆ ಶೇ.೪೪ರಷ್ಟು ಮಹಿಳೆಯರು ನೀಡಿದ್ದಾರೆ. ಆಸ್ತಿಯನ್ನು ಪಡೆಯಲು ಈ ಕಾರಣ ತೊಡಕಾಗಿರುವುದನ್ನು ತಿಳಿಸಿದ್ದಾರೆ. ಮತ್ತು ಕುಟುಂಬದ ಗೌರವವನ್ನು ಕಾಪಾಡುವ ಕಾರಣವು ಆಸ್ತಿ ಪಡೆಯಲು ತೊಡಕಾಗಿದೆ ಎಂಬುದನ್ನು ೯೮ ಜನ ಮಹಿಳೆಯರು ನೀಡಿದ್ದಾರೆ. ಇವರ ಪ್ರಮಾಣ ಶೇ. ೩೨.೬೬ರಷ್ಟಿದೆ. ಉಳಿದಂತೆ ಭಾನಾತ್ಮಕ ನೆಲೆಗಳಿಗೆ ಸಂಬಂಧಿಸಿದಂತೆ ಮೌನವಹಿಸಿದವರ ಸಂಖ್ಯೆ ೧೩೮(ಶೇ.೪೬)ರಷ್ಟಿದೆ.

ಒಟ್ಟಾರೆಯಾಗಿ ಭಾವನಾತ್ಮಕ ನೆಲೆಯು ಪಿತೃಪ್ರಧಾನ ವ್ಯವಸ್ಥೆಗೆ ಅಸ್ತ್ರವಾಗಿ ಬಳಕೆಯಾಗುತ್ತಿದೆ. ಕುಟುಂಬದ ಗೌರವವನ್ನು ಕಾಪಾಡುವ ಮತ್ತು ತವರು ಮನೆಯ ಸಂಬಂಧಗಳನ್ನು ಉಳಿಸಿಕೊಳ್ಳುವ ಪ್ರಕ್ರಿಯೆಗೆ ಮಹಿಳೆಯರನ್ನೇ ಒಳಗು ಮಾಡಲಾಗುತ್ತದೆ. ಹೆಣ್ಣು ಮಕ್ಕಳನ್ನು ಭಾವನಾ ಜೀವಿಗಳು ಸಂಬಂಧಗಳನ್ನು ಮುಂದುವರೆಸಿಕೊಂಡು ಹೋಗುವವರು, ಎರಡು ಕುಟುಂಬಗಳ ನಡುವೆ ಸೇತುವೆಯಂತೆ ಸಂಬಂಧಗಳನ್ನು ಬೆಸೆಯುವವರು, ಸಹನಾಮಯಿಗಳು ಹೀಗೆ ಹಲವು ಭಾವನೆಗಳ ರಾಯಭಾರಿಗಳೆಂಬಂತೆ ಬಿಂಬಿಸಲಾಗಿದೆ. ಆ ಮೂಲಕ ಮಹಿಳೆಯರು ಪ್ರಾಯೋಗಿಕವಾಗಿ ಚಿಂತಿಸುವ ಮತ್ತು ಬದುಕುವ ಹಂತಕ್ಕೆ ತಲುಪದಂತೆ ಅವರನ್ನು ಸೂಕ್ಷ್ಮಗೊಳಿಸಲಾಗುತ್ತದೆ. ಹಾಗೆ ಸೂಕ್ಷ್ಮತೆಯ ಮೇಲೆ ದೌರ್ಜನ್ಯವೆಸಗುವ ಮೂಲಕ ಹೆಣ್ಣುಮಕ್ಕಳನ್ನು ಅನಾಯಾಸವಾಗಿ ಭಾವನಾತ್ಮಕ ಬೆದರಿಕೆಗಳ ಮೂಲಕ ಮತ್ತು ಕುಟುಂಬದ ಎಲ್ಲಾ ಆಗುಹೋಗುಗಳಿಗೆ ಹೆಣ್ಣು ಮಕ್ಕಳೇ ಹೊಣೆಗಾರರೆಂಬಂತೆ ಅವರ ಹೆಗಲಿಗೆ ಅನಾವಶ್ಯಕ ಜವಾಬ್ದಾರಿಗಳನ್ನೇರಲಾಗುತ್ತದೆ. ಹೀಗೆ ಮಾಡುವುದರ ಮೂಲಕ ಎರಡೂ ಕುಟುಂಬಗಳ ಗೌರವವನ್ನು ಕಾಪಾಡಬೇಕೆಂಬ ಅಲಿಖಿತ ಹೇರಿಕೆ ಮತ್ತು ಆತ್ಮಹತ್ಯೆ ಮಾಡಿಕೊಳ್ಳುತ್ತೇವೆ ಎಂಬ ಬಾವನಾತ್ಮಕ ಬೆದರಿಕೆಗಳಿಗೆ ಹೆದರಿ ಆಸ್ತಿಯನ್ನು ಕೇಳದಿರುವಂತೆ ಮೌನಹಿಸುವ ಕಾರ್ಯವನ್ನು ಮಹಿಳೆಯರೇ ಮಾಡುವ ಅನಿವಾರ್ಯತೆ ಸೃಷ್ಟಿಯಾಗುತ್ತದೆ. ಈ ಎಲ್ಲಾ ಅಂಶಗಳು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪ್ರಕರಣಗಳಿಂದ ಮತ್ತು ಅಂಕಿಅಂಶಗಳಿಂದ ತಿಳಿಯುತ್ತದೆ. ಮೇಲಿನ ಕಾರಣಗಳು ಮಹಿಳೆಯರು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಬಹುದೊಡ್ಡ ತೊಡಕುಗಳಾಗಿ ಪರಿಣಮಿಸಿರುವುದು ಕಂಡುಬರುತ್ತದೆ.

**೬.೨.೩. ಸಾಮಾಜಿಕ ಮೂಢನಂಬಿಕೆಗಳು**

ವ್ಯವಸ್ಥೆಯಲ್ಲಿ ಸಾಂಪ್ರದಾಯಿಕವಾಗಿ ಜಾರಿಯಲ್ಲಿರುವಂತಹ ಆಚರಣೆಗಳು ತುಂಬಾ ಬಲಿಷ್ಠವಾಗಿರುತ್ತವೆ. ಹಾಗೆಯೇ ಇವುಗಳನ್ನು ಆಚರಿಸುವಂತಹದ್ದು ಕೂಡ ಅಷ್ಟೇ ಸಮಸ್ಯಾತ್ಮಕವಾಗಿರುವಂತಹದ್ದು ಏಕೆಂದರೆ ಜಾರಿಯಲ್ಲಿರುವ ಎಲ್ಲಾ ಆಚರಣೆಗಳು ಮಹಿಳೆಯರ ಮೇಲೆಯೇ ಹೇರಿರುವುದನ್ನು ಕಾಣಬಹುದಾಗಿದೆ. ಆದರೆ ಕೆಲವು ಆಚರಣೆಗಳಿಂದ ಹೆಣ್ಣನ್ನು ದೂರವೇ ಇರಿಸಲಾಗಿದೆ. ಇದರ ಹಿಂದಿನ ರಾಜಕಾರಣ ಬೇರೆಯದ್ದೇ ಇದೆ. ಮುಖ್ಯವಾಗಿ ಈ ಆಚರಣೆಗಳು ಮಹಿಳೆಯರ ಬದುಕಿನಲ್ಲಿ ರೂಢಿಗತಗೊಂಡಿವೆ. ಮಗು ಹುಟ್ಟಿದಾಗಿನಿಂದ ಹಿಡಿದು

ಸಾಯುವವರೆಗೆ ವ್ಯವಸ್ಥೆಯು ರೂಪಿಸಿರುವಂತಹ ಆಚರಣೆಗಳಿಗೆ ಒಳಗಾಗಲೇ ಬೇಕು. ಈ ಸಾಂಪ್ರದಾಯಗಳು ವಾರಸುದಾರಿಕೆಯ ಮುಂದುವರಿಕೆಗಾಗಿ, ಹಾಗೆಯೇ ಆಸ್ತಿ ಒಡೆತನದ ಹಕ್ಕಿಗಾಗಿ ರೂಪುಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ಕುಟುಂಬದಲ್ಲಿ ಮಹಿಳೆಗಿಂತ ಪುರುಷನಿಗೇ ಹೆಚ್ಚಿನ ಮಹತ್ವವಿರುತ್ತದೆ. ಏಕೆಂದರೆ ಅವನೇ ವಂಶೋಧ್ಧಾರಕ ಅಥವಾ ವಂಶವನ್ನು ಮುಂದುವರೆಸಿಕೊಂಡು ಹೋಗುವುದಕ್ಕೆ ಪುರುಷನೇ ಸೂಕ್ತ ವ್ಯಕ್ತಿ ಎಂಬ ಕಾರಣಕ್ಕಾಗಿ ಅವನಿಗೆ ಎಲ್ಲಿಲ್ಲದ ಗೌರವ ಆದರಗಳು ದೊರೆಯುತ್ತವೆ. ಆದರೆ ಮಹಿಳೆಯ ವಿಷಯದಲ್ಲಿ ಇದಕ್ಕೆ ತದ್ವಿರುದ್ಧವಾದ ಅಂಶಗಳು ಇರುವುದನ್ನು ಕಾಣಲಾಗುತ್ತದೆ. ಆ ಕಾರಣಕ್ಕಾಗಿ ಕುಟುಂಬದಲ್ಲಿ ಗಂಡು ಮಗುವನ್ನು ಪಡೆಯುವ ಹಂಬಲ ಹೆಚ್ಚಾಗಿರುತ್ತದೆ. ಹಾಗೆಯೇ ಪುರುಷನಿಗೆ ನಿರ್ದಿಷ್ಟವಾದ ಕೆಲವು ಆಚರಣೆಗಳನ್ನು ರೂಪಿಸಲಾಗಿದೆ. ಈ ಆಚರಣೆಗಳ ಕಾರಣವಾಗಿ ಪುರುಷರು ತಮ್ಮ ವಾರಸುದಾರಿಕೆಗೆ ಅಧಿಕೃತವಾದ ಮುದ್ರೆಯನ್ನು ಹಾಕಿಕೊಳ್ಳುತ್ತಾರೆ. ಹಾಗೆಯೇ ಕೆಲವು ನಂಬಿಕೆಗಳು ಮಹಿಳೆಯರನ್ನು ದಿಕ್ಕು ತಪ್ಪಿಸುವ ಕಾರ್ಯಕ್ಕೆ ಕೈ ಹಾಕುತ್ತವೆ. ಒಟ್ಟಾರೆಯಾಗಿ ಕೆಲವು ಸಾಂಪ್ರದಾಯಿಕ ಆಚರಣೆಗಳ ಕಾರಣವಾಗಿ ಮತ್ತು ಕೆಲವು ನಂಬಿಕೆ ಮತ್ತು ಮೂಢನಂಬಿಕೆಗಳ ಕಾರಣವಾಗಿ ಮಹಿಳೆಯರು ಆಸ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಈ ಹಿನ್ನಲೆಯಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಕೆಲವು ಪುರುಷ ನಿಷ್ಠ ಸಾಂಪ್ರದಾಯಿಕ ಆಚರಣೆಗಳು ಬಹುದೊಡ್ಡ ತೊಡಕುಗಳಾಗಿ ಮಾರ್ಪಟ್ಟಿರುವುದನ್ನು ಕಾಣಬಹುದು. ಈ ಹಿನ್ನಲೆಯಲ್ಲಿ ಇವುಗಳನ್ನು ಮುಖ್ಯವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅ) ಸಾವಿನ ಆಚರಣೆಗಳು ಮತ್ತು ತಿಥಿ ಆಚರಣೆಗಳು ಆ) ಮುತ್ತೈದೆತನವನ್ನು ಉಳಿಸಿಕೊಳ್ಳಲು ತವರು ಮನೆಯಿಂದ ಅರಿಶಿಣ ಕುಂಕುಮ ಪಡೆಯಬೇಕು ಎಂಬ ನಂಬಿಕೆಗಳು ಇ) ಮಹಿಳೆಯರು ತವರಿನ ಆಸ್ತಿ ಪಡೆದುಕೊಂಡರೆ ಗಂಡನ ಮನೆ ಸರ್ವನಾಶವಾಗುತ್ತದೆ ಎಂಬ ನಂಬಿಕೆ. ಈ ಕಾರಣಗಳು ಮಹಿಳೆಯರು ಆಸ್ತಿ ಹಕ್ಕನ್ನು ಪಡೆಯಲು ಬಹುದೊಡ್ಡ ತೊಡಕುಗಳಾಗಿವೆ. ಇವುಗಳನ್ನು ಪ್ರಕರಣಗಳ ಮೂಲಕ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಅ. ಸಾವಿನ ನಂತರದ ಆಚರಣೆಗಳು ಮತ್ತು ತಿಥಿ ಆಚರಣೆಗಳು :** ವ್ಯವಸ್ಥೆಯಲ್ಲಿ ಸಾವಿನ ನಂತರದ ಆಚರಣೆಗಳೆಲ್ಲವೂ ಪುರುಷನಿಗೆ ಪೂರಕವಾದಂತಹವುಗಳಾಗಿವೆ. ಕುಟುಂಬದಲ್ಲಿನ ಹಿರಿಯರು ಮರಣ ಹೊಂದಿದರೆ ಅವರ ಶವ ಸಂಸ್ಕಾರಕ್ಕೆ ಸಂಬಂಧಿಸಿದಂತೆ ಆಚರಿಸುವ ಆಚರಣೆಗಳೆಲ್ಲವನ್ನೂ ಪುರುಷರೇ ಮಾಡಬೇಕಾಗುತ್ತದೆ. ಇಲ್ಲಿ ಮಹಿಳೆಯರಿಗೆ ಪ್ರವೇಶವೇ ಇರುವುದಿಲ್ಲ. ಏಕೆಂದರೆ ಮರಣ ಹೊಂದಿದವರ ಆತ್ಮಕ್ಕೆ ಶಾಂತಿ ದೊರೆಯಬೇಕೆಂದರೆ ಅದು ಪುರುಷನಿಂದಲೇ ಮಾತ್ರ ಸಾಧ್ಯ ಎಂಬಂತಹ ನಿಯಮಗಳು ಜಾರಿಯಲ್ಲಿವೆ. ಮುಖ್ಯವಾಗಿ ಮಹಿಳೆಯರಿಂದ ಈ ಕಾರ್ಯ ನೆರವೇರಿಸಬಾರದು ಎಂಬುದು ಕಟ್ಟುನಿಟ್ಟಾದ ನಿಯಮ. ಮುಖ್ಯವಾಗಿ ತಂದೆ ಅಥವಾ ತಾಯಿ ಮರಣ ಹೊಂದಿದರೆ ಅವರ ಚಿತೆಗೆ ಬೆಂಕಿಯಿಡುವವನು

ಪುರುಷನೇ ಆಗಿರುತ್ತಾನೆ. ಏಕೆಂದರೆ ಕುಟುಂಬದ ಮುಂದಿನ ವಾರಸುದಾರಿಕೆ ಅವನಿಗೇ ಸೇರಬೇಕೆಂಬ ಉದ್ದೇಶವಿರುತ್ತದೆ. ಆ ಕಾರಣಕ್ಕಾಗಿ ಸಾವಿನ ಸಂದರ್ಭದಲ್ಲಿ ಆಚರಿಸುವ ಮತ್ತು ತಿಥಿ ಆಚರಣೆಗಳು ಪುರುಷನಿಂದಲೇ ನೆರವೇರುತ್ತವೆ. ಮಹಿಳೆಯರಿಗೆ ಇಲ್ಲಿ ಎಲ್ಲಿಯೂ ಅವಕಾಶವಿಲ್ಲ. ತಿಥಿ ಆಚರಣೆಗಳನ್ನು ಪ್ರತೀ ವರ್ಷವೂ ನೆರವೇರಿಸುವ ಮೂಲಕ ಕುಟುಂಬದಲ್ಲಿ ತಮ್ಮ ವಾರಸುದಾರಿಕೆಯನ್ನು ಮತ್ತು ಹಿರಿತನವನ್ನು ಪುನರಾವರ್ತನೆಗೊಳಿಸುವ ಪ್ರಕ್ರಿಯೆ ಯಾಗಿದೆ. ಆಸ್ತಿ ಹಕ್ಕಿನ ವಾರಸುದಾರಿಕೆಯ ವಿಷಯದಲ್ಲಿ ಈ ಆಚರಣೆಗಳು ಮಹಿಳೆಯರನ್ನು ಕಡೆಗಾಣಿಸಿರುವುದು ಮತ್ತು ಅವುಗಳಿಂದ ದೂರವೇ ಉಳಿಸಿರುವುದನ್ನು ಕಾಣಬಹುದು. ಅಂದರೆ ಈ ಆಚರಣೆಗಳು ಮಹಿಳೆಗೆ ಆಸ್ತಿ ಹಕ್ಕಿನಿಂದ ವಂಚಿತಳನ್ನಾಗಿಸಿವೆ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಪ್ರಕರಣಗಳು ದೊರೆತಿದ್ದು ಅವುಗಳನ್ನು ವಿಶ್ಲೇಷಿಸುವುದರ ಮೂಲಕ

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಹನಸಿ ಗ್ರಾಮದ ಸುಶೀಲಮ್ಮ ತನ್ನ ತಂದೆಯ ಆಸ್ತಿಯಿಂದ ವಂಚಿತಳಾದ ಮಹಿಳೆಯಾಗಿದ್ದಾಳೆ. ಇವರು ಹೇಳುವಂತೆ "ನನ ಗಂಡನ ಮನ್ಯಾಗ ಬಾಳ ಕಾಟ ಕೊಡ್ತಿದ್ರು. ತವರು ಮನಿ ಆಸ್ತಿನಾಗ ಭಾಗ ಕೇಳು ಅಂತೇಳಿ ದಿನಾಲು ಗಂಡ ಹೊಡಿತಿದ್ದ. ಹಂಗಾಗಿ ನಾನು ಈ ಕಾಟ ತಾಳಕಾಗ್ದೆ ತವ್ರ ಮನಿಗಿ ಬಂದು ಇರೋ ವಿಚಾರಾನೆಲ್ಲಾ ಹೇಳಿದೆ. ನಮ್ ಅಣ್ಣ ಬಾಳ ಬೇಜಾರಾದ. ಆಮ್ಯಾಲೆ ಇರೋ ಮೂರೆಕ್ರೆನಾಗ ನಿನಿಗೆ ಎಷ್ಟು ಬರತೈತೋ ಅಷ್ಟು ತಗ ಅಂತಂದ. ನಾನು ಏನೂ ಮಾತಾಡ್ಲಿಲ್ಲ. ನಮ್ ಅಮ್ಮ ಇದ್ದು ಇಲ್ಲಿ ನಿಮ್ ಅಣ್ಣಗ ಬಾಳ ತ್ರಾಸ ಆಗೇತಿ. ಅಂತಾದ್ರಾಗ ನೀನು ಹಿಂಗ ಆಸ್ತಿನಾಗ ಭಾಗ ಕೇಳಿದ್ರೆ ಹೆಂಗ. ಆ ಮೂರು ಎಕ್ರೆನಾಗ ಬೆಳಿಯೋದು ಅಷ್ಟಕಷ್ಟೆ ಐತಿ. ನಿನಿಗೆ ಮದುವಿ ಮಾಡಿ ಕೊಟ್ಟ್ ಮ್ಯಾಲೆ ಮುಗೀತು. ತವ್ರಮನಿ ಚೆನ್ನಾಗಿರ್ಬೇಕು ಅಂತ ಬಯ್ಸಬೇಕು. ಅದನ್ನ ಬಿಟ್ಟು ನೀನು ಈ ಮನೀನ ಹೊಡಿಯಾಕ್ಹತ್ತಿಯ. ನಿಮ್ ಅಣ್ಣ ನಿನಿಗೆ ಏನ್ ಕಡಿಮಿ ಮಾಡ್ಯಾನ. ನೀನು ಏನು ಕೇಳಿದ್ರು ಇಲ್ಲಾ ಅನ್ನಾರ್ದಂಗ ಕೊಟ್ಕಂತ ಬಂದಾನ .ಆದ್ರುನೂ ನೀನು ಹಿಂಗ ಮಾಡ್ತೀಯಲ್ಲ ಅಂತ ಚೆನ್ನಾಗಿ ಬೈದುಬಿಟ್ರು. ಅಲ್ಲೇ ನಮ್ ದೊಡ್ಡಪ್ಪ ಸತೆ ಇದ್ದ. ಆತನೂ ಒಂದೆರಡು ಮಾತು ಬೈದ. ನಿಮ್ ತಂದಿ ತಾಯಿಗಿ ಮುಕ್ತಿ ಸಿಗಬೇಕಂದ್ರ ಗಣಮಕ್ಕಳಿಂದ್ಲೆ. ಅದಕ್ಕಾ ಅವ್ರಿಗೆ ತಂದಿ ಆಸ್ತಿ ಸಿಗತೈತಿ. ನಿಮ್ ತಂದಿ ಸತ್ತಾಗ ನೀನೇನಾರ ಸಂಸ್ಕಾರ ಮಾಡ್ದ ಇಲ್ಲಲಾ. ನಿನಿಗೆ ಮಾಡಾಕ ಬರಲ್ಲ ಯಾಕಂದ್ರ ನೀನಿಗೆ ಯಾವಾಗ ಮದುವಿ ಆತೋ ಆವಾಗಿಂದ ನೀನು ಬ್ಯಾರೇರ ಮನಿ ಮಗಳು. ಮತ್ತೆ ಇಲ್ಲೇ ಇದ್ರೂನೂ ನೀನು ನಿಮ್ಮ ಅಪ್ಪಗ ಮುಡಿ ಕೊಡಾಕ ಬರಲ್ಲ. ಯಾಕಂದ್ರ ನಮ್ ಧರ್ಮದಾಗ ಹಂಗಿಲ್ಲ. ಏನೇ ಮಾಡಿದ್ರೂ ಅದನ್ನ ಗಣಮಕ್ಕಳೇ ಮಾಡ್ಬೇಕು. ಅಂದ್ರೆ ಮಾತ್ರ ಅವ್ರ ಆತ್ಮಕ್ಕ ಶಾಂತಿ ಸಿಗತೈತಿ. ಹಂಗೆ ಪ್ರತೀ ವರ್ಷ ಹೆರೇರ್ನ ಮಾಡ್ತೀವಲ್ಲಾ ಆವಾಗ ನೀವೇನಾರಾ ನಿಮ್ಮ ಅಪ್ಪಗ ಬಟ್ಟಿ ಗಿಟ್ಟಿ ಮಾಡ್ತೀರೇನು? ಇಲ್ಲಲಾ! ಇದನ್ನೆಲ್ಲಾ ನೀನೇನು ಮಾಡ್ದಂಗ ಆಸ್ತಿನಾಗ ಭಾಗ ಕೇಳಿದ್ರೆ ಏನ್ ಅರ್ಥ ಎಂದು ಹೇಳಿದ್ರು. ನನಿಗೆ ಏನ್ ಹೇಳ್ಬೇಕೋ

ಗೊತ್ತಾಗ್ಲಿಲ್ಲ. ಇದೆಲ್ಲಾ ಸರಿ ಅಂತ ನನಿಗೆ ಅನ್ನಸ್ತು. ಹಂಗಾಗಿ ನಾನು ಯಾವ ಆಸ್ತಿ ಕೇಳ್ದಂಗ ಗಂಡನ ಮನಿಗೆ ಬಂದುಬಿಟ್ಟೆ" ಎಂದರು.

ಈ ಪ್ರಕರಣದಲ್ಲಿ ಸುಶೀಲಮ್ಮಳಿಗೆ ತನ್ನ ತವರು ಮನೆಯಿಂದ ಆಸ್ತಿಯನ್ನು ಪಡೆಯುವುದು ಇಷ್ಟವಿರಲಿಲ್ಲ. ಆದರೂ ಗಂಡನ ಒತ್ತಾಯಕ್ಕೆ ಮಣಿದು ತವರು ಮನೆಯ ಆಸ್ತಿಯಲ್ಲಿ ಪಾಲನ್ನು ಕೇಳಿದ್ದಾರೆ. ಆದರೆ ಇಲ್ಲಿ ತಂದೆಯ ಆಸ್ತಿಯಲ್ಲಿ ಪಾಲನ್ನು ಕೊಡಲು ಅಣ್ಣನದೇನೂ ತಕರಾರಿಲ್ಲ. ಬದಲಾಗಿ ಸುಶೀಲಮ್ಮಳ ತಾಯಿ ಮತ್ತು ದೊಡ್ಡಪ್ಪ ಇಬ್ಬರೂ ಸೇರಿ ಆಕೆಯನ್ನು ನಿರಾಕರಿಸುವಂತೆ ಮಾಡಿದ್ದಾರೆ. ಮುಖ್ಯವಾಗಿ ಇವರು ನೀಡಿರುವ ಕಾರಣಗಳನ್ನು ಗಮನಿಸಿದರೆ ಸಾಂಪ್ರದಾಯಿಕ ನಂಬಿಕೆಗಳಂತೆ ಮದುವೆಯಾಗಿ ಗಂಡನ ಮನೆಗೆ ಹೋದ ಹೆಣ್ಣುಮಕ್ಕಳು ತವರು ಮನೆಯಿಂದ ಏನನ್ನೂ ಪಡೆಯಬಾರದು. ಹಾಗೆ ಪಡೆದರೆ ಆ ಮನೆಗೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆಯನ್ನು ಮತ್ತು ತವರು ಮನೆಯನ್ನು ಒಡೆದಂತಾಗುತ್ತದೆ ಎಂಬ ಮಾತುಗಳನ್ನು ತಾಯಿ ಹೇಳುತ್ತಾಳೆ. ತಾಯಿಯೇ ಮಗನ ಹಕ್ಕಿಗೆ ಬೆಂಬಲವನ್ನು ಸೂಚಿಸುತ್ತಾಳೆ. ಹಾಗೆಯೇ ದೊಡ್ಡಪ್ಪನ ಮಾತಿನಲ್ಲಿ ಬಂದಂತಹ ಮಾತು ಆ ಸಂದರ್ಭಕ್ಕೆ ಹುಟ್ಟಿಕೊಂಡಿದ್ದಲ್ಲ. ಬದಲಾಗಿ ಧರ್ಮಶಾಸ್ತ್ರಗಳು ಯಾವಾಗ ಹುಟ್ಟಿಕೊಂಡವೋ ಆವಾಗಿನಿಂದಲೂ ಈ ಮಾತುಗಳು ವ್ಯವಸ್ಥೆಯಲ್ಲಿ ಚಾಲ್ತಿಯಲ್ಲಿವೆ. ಇದರ ಹಿಂದಿನ ಮುಖ್ಯ ಉದ್ದೇಶ ಕುಟುಂಬದ ಆರ್ಥಿಕತೆಯ ಮೇಲೆ ಹಕ್ಕನ್ನು ಚಲಾಯಿಸುವುದು. ಮತ್ತು ಮಹಿಳೆಯನ್ನು ತನ್ನ ನಿಯಂತ್ರಣದಲ್ಲಿರಿಸಿಕೊಳ್ಳುವುದು. ಮುಖ್ಯವಾಗಿ ತಂದೆಯ ಮರಣದ ಶವಸಂಸ್ಕಾರಕ್ಕೂ ಮುಕ್ತಿಗೂ ಮತ್ತು ಆಸ್ತಿಯ ಮೇಲಿನ ಹಕ್ಕಿಗೂ ನೇರವಾದ ಸಂಬಂಧವಿರುತ್ತದೆ. ಏಕೆಂದರೆ ತಂದೆ ಅಥವಾ ತಾಯಿಯ ಮರಣದ ನಂತರ ಅವರ ಆತ್ಮಕ್ಕೆ ಶಾಂತಿ ಸಿಗಬೇಕೆಂದರೆ ಅದು ಗಂಡುಮಕ್ಕಳು ಮಾಡುವ ಸಂಸ್ಕಾರದಿಂದಲೇ. ಎಂಬಂತಹ ನಂಬಿಕೆ ರೂಢಿಯಲ್ಲಿರುವುದರಿಂದ ಮತ್ತು ಹೆಣ್ಣು ಮಕ್ಕಳು ಈ ಬಗೆಯ ಸಂಸ್ಕಾರ ವಿಧಿಗಳನ್ನು ಮಾಡಲು ಬರುವುದಿಲ್ಲ ಎಂಬಂತಹ ನಂಬಿಕೆ ಗಳಿಂದಾಗಿ ಮಹಿಳೆಯರು ಈ ಕರ್ಮದಿಂದ ದೂರವಿರುತ್ತಾರೆ. ಮುಖ್ಯವಾಗಿ ಹೆಣ್ಣುಮಕ್ಕಳು ಮದುವೆಗೆ ಮುಂಚೆ ತನ್ನ ತವರು ಮನೆಯ ಅಂದರೆ ತಂದೆಯ ಬಳಿಯಿಂದ ಗುರುತಿಸಿಕೊಂಡರೆ ಮದುವೆಯ ನಂತರ ಆಕೆ ತನ್ನ ಗಂಡನ ಮನೆಯ ಬಳಿಗೆ ಸೇರಲ್ಪಡುತ್ತಾಳೆ. ಹಾಗಾಗಿ ಮಹಿಳೆಗೆ ಸಂಸ್ಕಾರ ವಿಧಿಗಳಲ್ಲಿ ಸ್ಥಾನವಿಲ್ಲ. ಈ ಸಂಸ್ಕಾರದಿಂದಲೇ ಕುಟುಂಬದ ಮುಂದಿನ ವಾರಸುದಾರರು ಯಾರೆಂಬುದು ನಿರ್ಧಾರವಾಗುತ್ತದೆ. ಹಾಗೆಯೇ ಇಡೀ ಕುಟುಂಬದ ಆಸ್ತಿಯ ಮೇಲೆ ಯಾರು ಅಧಿಕಾರವನ್ನು ಹೊಂದಬಹುದು ಎಂಬುದೂ ಸಹ ಇಲ್ಲಿ ನಿರ್ಧಾರವಾಗುತ್ತದೆ. ಹಾಗಾಗಿಯೇ ಇಲ್ಲಿ ಸುಶೀಲಮ್ಮಳ ದೊಡ್ಡಪ್ಪ ಹೇಳುವಂತೆ ಈಕೆಗೆ ತವರು ಮನೆಯಲ್ಲಿ ಈ ಬಗೆಯ ಹಕ್ಕುಗಳನ್ನು ಕೇಳಲು ಬರುವುದಿಲ್ಲ ಎಂಬುದು. ಏಕೆಂದರೆ ಈ ಯಾವ ಕ್ರಿಯಾವಿಧಿಗಳನ್ನೂ ಸಹ ಮಹಿಳೆ ಮಾಡುವುದಿಲ್ಲವಾದ್ದರಿಂದ ಆಕೆಗೆ ತವರು ಮನೆಯ ಆಸ್ತಿಯ ಮೇಲೆ ಹಕ್ಕಿರುವುದಿಲ್ಲ ಎಂದು ಹೇಳುತ್ತಾನೆ. ಮುಖ್ಯವಾಗಿ ಈ ಬಗೆಯ ನಂಬಿಕೆಯ ಕಾರಣವಾಗಿ

ಸುಶೀಲಮ್ಮ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ನಿರಾಕರಿಸುತ್ತಾಳೆ. ಹೀಗೆ ಇರುವಂತಹ ನಂಬಿಕೆಯು ಮಹಿಳೆಯನ್ನು ಸಂಪೂರ್ಣವಾಗಿ ಆಸ್ತಿ ಹಕ್ಕಿನಿಂದ ದೂರವಿರಿಸುತ್ತದೆ. ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕ್ಷೇತ್ರ ಕಾರ್ಯ ಕೈಗೊಂಡ ಸಂದರ್ಭದಲ್ಲಿ ಒಟ್ಟು ಮುನ್ನೂರು ಜನ ವಕ್ತೃಗಳನ್ನು ಸಂದರ್ಶಿಸಲಾಗಿ ಅವರಲ್ಲಿ ೪೨ ಜನ ಮಹಿಳೆಯರು ಈ ವಿಷಯಕ್ಕೆ ಸಂಬಂಧಿಸಿದಂತೆ ಪ್ರತಿಕ್ರಿಯಿಸಿದರು. ಅಂದರೆ ಶೇ ೧೪ರಷ್ಟು ಮಹಿಳೆಯರು ಈ ಕಾರಣಗಳು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಬಹುದೊಡ್ಡ ತೊಡಕುಗಳಾಗಿವೆ ಎಂಬುದನ್ನು ತಿಳಿಸಿದ್ದಾರೆ.

**ಆ. ಮುತ್ತೈದೆತನವನ್ನು ಉಳಿಸಿಕೊಳ್ಳಲು ತವರು ಮನೆಯಿಂದ ಅರಿಶಿಣ ಕುಂಕುಮ ಪಡೆಯಬೇಕು ಎಂಬ ನಂಬಿಕೆಗಳು :** ವ್ಯವಸ್ಥೆಯಲ್ಲಿ ಇರುವಂತಹ ಎಲ್ಲಾ ಸಂಸ್ಥೆಗಳೂ ಸಹ ನಂಬಿಕೆಯ ಆಧಾರದ ಮೇಲೆಯೇ ಮುಂದುವರೆಯುತ್ತಿರುತ್ತವೆ. ಈ ಕೆಲವು ನಂಬಿಕೆಗಳು ವಾಸ್ತವಕ್ಕೆ ಹತ್ತಿರಾಗಿದ್ದರೆ, ಕೆಲವು ಅವಾಸ್ತವವಾಗಿರುತ್ತವೆ. ಮತ್ತು ಈ ನಂಬಿಕೆಳಲ್ಲಿಯೇ ಹಲವು ಬಗೆಯ ತಾರತಮ್ಯಗಳಿವೆ. ಇವುಗಳು ಮುಖ್ಯವಾಗಿ ಪುರುಷನನ್ನು ಮೇಲ್‌ಸ್ತರದಲ್ಲಿ ಮತ್ತು ಮಹಿಳೆಯರನ್ನು ಪುರುಷನ ಕೆಳಸ್ತರದಲ್ಲಿಟ್ಟು ನೋಡಲಾಗುತ್ತದೆ. ಅಂದರೆ ಹಲವು ನಂಬಿಕೆಗಳು ಪುರುಷನಿಗೆ ಪೂರಕವಾಗಿದ್ದರೆ, ಇನ್ನು ಹಲವು ನಂಬಿಕೆಗಳು ಮಹಿಳೆಯರಿಗೆ ಮಾರಕಗಳಾಗಿವೆ. ಪ್ರತಿಯೊಂದು ಧರ್ಮಗಳ್ಲಿಯೂ ತಮ್ಮದೇ ಆದಂತಹ ಧಾರ್ಮಿಕ ನಂಬಿಕೆಗಳು ಇರುತ್ತವೆ. ಹಾಗೆಯೇ ಹಿಂದೂ ಧರ್ಮದಲ್ಲಿಯೂ ಹಲವಾರು ನಿಯಮಗಳು ರೂಪಿಸಲ್ಪಟ್ಟಿವೆ.ಅವುಗಳು ಮಹಿಳೆಯರನ್ನು ಇನ್ನಿಲ್ಲದಂತೆ ಶೋಷಿಸಿರುವುದಂತೂ ಸತ್ಯ. ಹೀಗೆ ಶೋಷಣೆಗೆ ಕಾರಣವಾದ ನಂಬಿಕೆಗಳಲ್ಲಿ ಪಾತಿವ್ರತ್ಯ, ವೈಧವ್ಯ, ತಾಯ್ತನ ಮುಂತಾದವುಗಳು ಮಹಿಳೆಯರನ್ನು ಹಲವು ಸಂಕಷ್ಟಗಳಿಗೆ ಒಳಗು ಮಾಡಿವೆ. ಜೊತೆಗೆ ತಮ್ಮ ಹಕ್ಕುಗಳಿಂದ ವಂಚಿತರನ್ನಾಗಿಸಿವೆ. ಈ ಧಾರ್ಮಿಕ ನಂಬಿಕೆಗಳಿಗೂ ಮತ್ತು ಭಾವನಾತ್ಮಕತೆಗೂ ಸಂಬಂಧವಿದೆ. ನಂಬಿಕೆಗಳು ಭಾವನಾತ್ಮಕ ನೆಲೆಯಲ್ಲಿ ಗುರುತಿಸಿಕೊಂಡಾಗ ಅವುಗಳಿಂದ ಹೊರ ಬರಲು ಸಾಧ್ಯವಿಲ್ಲ. ಪಾತಿವ್ರತ್ಯದ ಹೆಸರಿನಲ್ಲಿ ಮಹಿಳೆಯರ ಲೈಂಗಿಕತೆಯ ಮೇಲೆ ನಿಯಂತ್ರಣವನ್ನು ಸಾಧಿಸಲಾಗಿದೆ. ಮುಖ್ಯವಾಗಿ ಪಾತಿವ್ರತ್ಯದ ಕಲ್ಪನೆ ನಿರಂತರವಾಗಿ ವ್ಯವಸ್ಥೆಯಲ್ಲಿ ಜಾರಿಯಲ್ಲಿಡಲು ಹಲವು ನಿಯಮಗಳನ್ನು ರೂಪಿಸಲಾಯಿತು. ಅದರ ಮುಂದುವರಿಕೆಯ ಸಂಕೇತವಾಗಿ ಮಹಿಳೆಯರಿಗೆ ಉಡಿ ತುಂಬುವುದು, ಅರಿಶಿಣ ಕುಂಕುಮ ಕೊಡುವುದು, ಹೀಗೆ ಇವುಗಳನ್ನು ಪಾಲಿಸುತ್ತಾ ಬಂದ ಮಹಿಳೆಯರು ತಮ್ಮ ಹಕ್ಕುಗಳ ಬಗೆಗಿನ ಜ್ಞಾನದಿಂದ ದೂರವೇ ಉಳಿಯುವಂತಾಯಿತು. ಇವುಗಳ ಕಾರಣವಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದಲೂ ದೂರ ಉಳಿಯುವಂತಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಹಿಳೆಯರು ಈ ಬಗೆಯ ನಿಯಮಗಳನ್ನು ಪಾಲಿಸಲು ಬದ್ಧರಾಗಿ, ತಮ್ಮ ಹಕ್ಕುಗಳನ್ನು ಕಳೆದುಕೊಂಡಿರುವ ಪ್ರಕರಣಗಳು ದೊರೆತಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಮೈಲಾಪುರ ಗ್ರಾಮದ ಜಾನಕಮ್ಮನವರು ಈ ನಂಬಿಕೆಗಳ ಕಾರಣವಾಗಿ ತಮ್ಮ ತಂದೆಯ ಆಸ್ತಿಯನ್ನು ನಿರಾಕರಿಸಿದ್ದಾರೆ. ಅವರು ಹೇಳುವಂತೆ " ನಮ್ಮ ಅಪ್ಪಗ ನಾಕು ಜನ ಮಕ್ಕಳು, ನಾನು ಎರಡನೆಯವಳು. ಮೊದಲನೆಯವನು ಅಣ್ಣ. ಇನ್ನ ಒಬ್ಬ ತಂಗಿ ಮತ್ತೆ ತಮ್ಮ ಐದಾರ. ಎಲ್ಲಾರಿಗೂ ಮದುವಿ ಆಗೇತಿ. ಅಪ್ಪನ ಆಸ್ತಿ ಅಂತ ಇರೋದು ನಾಕು ಎಕ್ರೆ ಜಮೀನು, ಮತ್ತೆ ಒಂದು ಮನಿ, ಒಂದು ಬಂಡಿ ಐತಿ. ನಮ್ ಅಪ್ಪ ಇಲ್ಲ. ನನ್ ಗಂಡನ ಮಾತನ್ನ ಕೇಳಿ, ನಮ್ ಅಪ್ಪನ ಆಸ್ತಿನಾಗ ಭಾಗ ಕೇಳಿದ್ದೆ. ಆದ್ರೆ ನಮ್ ತಮ್ಮನೋರು ಕೇಳ್ಲಿಲ್ಲ. ಅದಕ್ಕೆ ನಾನು ನಮ್ ಸಂಬಂಧಿಕರದಾಗಿನ ಹಿರೇರ್ನ ಸೇರ್ಸಿ ಪಂಚಾತಿ ಮಾಡ್ಸಿದೆ. ಆದ್ರೆ ಅಲ್ಲಿ ನನಿಗೇ ಬುದ್ಧಿವಾದ ಹೇಳಿದ್ರು. ಅಂದ್ರೆ ನಿನಿಗೆ ಮದುವಿ ಮಾಡಿ ಕೊಟ್ ಮ್ಯಾಲೆ ಮುಗೀತು. ನೀನು ಏನಿದ್ರು ಆ ಮನಿಗೆ ಸೇರ್ದೋಳು. ಹಿಂಗ ತವ್ರಮನಿಗೆ ಬಂದು ಆಸ್ತಿನಾಗ ಭಾಗ ಕೇಳೋದು ಹೆಣ್ಮಕ್ಕಳಿಗೆ ಶೋಭಿ ತರಂಗಿಲ್ಲ. ಯಾವದಾದ್ರು ಹಬ್ಬಹರಿದಿನದಾಗ ಬರ್ಬೇಕು, ಉಡಿ ತುಂಬ್ಸಿಕೆಂಡು ಹೋಗ್ತಿರಬೇಕು. ಅದನ್ನ ಬಿಟ್ಟು ಹಿಂಗ ಆಸ್ತಿನ ಭಾಗ ಮಾಡೋ ವಿಚಾರಾನ ಮಾಡ್ಬಾರ್ದು ಅಂತ ನಮ್ ಚಿಕ್ಕಪ್ಪ ಹೇಳಿದ್ರೆ, ನಮ್ ಅಮ್ಮ ಇದ್ದು, ನಿನಿಗೆ ಗಂಡನ ಮನ್ಯಾಗ ಏನ್ ಕಡಿಮಿ ಆಗೇತಿ. ಇಲ್ಲಿ ಆಸ್ತಿ ಕೇಳ್ಬಾಕತ್ತೀಯಲ್ಲ. ನಮ್ ಕಾಲ್ದಾಗ ದೊಡ್ಡೋರು ಅಂದ್ರೆನೇ ಬಾಳ ಹೆದರ್ತಿದ್ವಿ. ಇನ್ನ ತಲಿ ಎತ್ತಿ ಮಾತಾಡೋದು ಕಷ್ಟ ಇತ್ತು. ವರ್ಸದಾಗ ಎರಡು ಮೂರ್ಸಲ ಮಾತ್ರ ತವ್ರಮನಿಗೆ ಹೋಗಿ ಬರ್ತಿದ್ವಿ. ಹೋದಾಗೆಲ್ಲಾ ಒಂದು ಹೊಸ ಸೀರಿ ತಂದು ಉಡಿ ತುಂಬ್ಸಿ, ಅರಿಶಿಣ ಕುಂಕುಮ ಕೊಟ್ಟು ಕಳಿಸ್ತಿದ್ರು. ಆದ್ರೆ ನೀವು ನೋಡಿದ್ರೆ ಹಿಂಗ ಮಾಡ್ತೀರಿ. ದೊಡ್ಡೋರು ಅಂದ್ರೆ ಭಯಾನೇ ಇಲ್ಲ. ಹೆಣ್ಮಕ್ಕಳಿಗೆ ತವ್ರ ಮನೇರು ಕೊಡೋ ಅರಿಶಿಣ ಕುಂಕುಮಾನೇ ಬಾಳ ಶ್ರೇಷ್ಟ ಆಗಿರ್ತೈತಿ. ನೀನು ಈಗ ಆಸ್ತಿನ ಭಾಗ ಮಾಡಿದ್ರೆ ನಿಮ್ ಅಣ್ಣ, ತಮ್ಮ ಎಲ್ಲಿಗೆ ಹೋಗ್ಬೇಕು ಹೇಳು, ಆಸ್ತಿನೇನಾರ ಭಾಗ ಮಾಡಿದ್ರೆ ನೀನು ತವ್ರಮನಿನ ಮರಿಬೇಕಾಗ್ತೈತಿ ನೋಡು ಅಂತ ಹೇಳಿದ್ರು. ನಾನು ಸತೆ ಬಾಳ ಸಲ ತವ್ರಮನಿಗೆ ಬಂದು ಉಡಿ ತುಂಬಿಸಿಕೆಂಡು ಹೋಗೇನಿ ನಮ್ ತಮ್ಮ ಮತ್ತೆ ಅಣ್ಣ ಬಾಳ ಚೆನ್ನಾಗೇ ನೋಡಿಕೆಂಡಾರ ಅದೆಲ್ಲಾ ನೆನಪಾಗಿ ಆಸ್ತಿನಾಗ ಭಾಗ ಕೇಳೋದನ್ನೇ ಬಿಟ್ಟುಬಿಟ್ಟೆ, ಎಂದರು.

ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಜಾಲಿಬೆಂಚಿ ಗ್ರಾಮದ ನಿಂಗಮ್ಮನವರೂ ಸಹ ಈ ಕಾರಣಕ್ಕಾಗಿಯೇ ತಮ್ಮ ತಂದೆಯ ಆಸ್ತಿಯನ್ನು ನಿರಾಕರಿಸಿದ್ದಾರೆ. ಮುಖ್ಯವಾಗಿ ಇವರು ಇದೇ ಊರಿನಲ್ಲಿನ ತಮ್ಮ ಸಂಬಂಧಿಕರಲ್ಲಿಯೇ ವಿವಾಹವಾಗಿದ್ದಾರೆ. ಹಾಗಾಗಿ ತಮ್ಮ ತವರು ಮನೆಯ ಎಲ್ಲಾ ವಿಚಾರಗಳೂ ಸಹ ಅವರಿಗೆ ತಿಳಿಯುತ್ತಿದ್ದವು. ಇವರ ತಂದೆ ತಮ್ಮ ಆಸ್ತಿಯನ್ನು ಇಬ್ಬರೂ ಗಂಡು ಮಕ್ಕಳಿಗೆ ಹಂಚಲು ಸಿದ್ಧರಾಗಿರುವ ವಿಷಯ ನಿಂಗಮ್ಮನವರಿಗೆ ತಿಳಿದಿದೆ. ಹಾಗಾಗಿ ಅವರು ತನಗೂ ಆಸ್ತಿಯಲ್ಲಿ ಪಾಲು ಸಿಗಬೇಕೆಂದು ತನ್ನ ತಂದೆಯಲ್ಲಿ ಕೇಳಿದ್ದಾರೆ. ಆದರೆ ಅವರು ಕೊಡುವುದಕ್ಕೆ ನಿರಾಕರಿಸಿದ್ದಾರೆ. ಹಾಗಾಗಿ ನಿಂಗಮ್ಮನವರು ತಮ್ಮ ತಾಯಿಯ ಹತ್ತಿರ ಹೇಳಿದ್ದಾರೆ. ಆದರೆ ಇವರ ತಾಯಿ ನಿಂಗಮ್ಮನವರಿಗೆ ಬುದ್ದಿವಾದ ಹೇಳಿ ಕಳುಹಿಸಿದ್ದಾರೆ. ಅವರೇ

ಹೇಳುವಂತೆ " ಹೆಣ್ಮಕ್ಕಳು ಅಂದ್ರೆ ಈ ಕಡಿಗಿ ಹುಟ್ಟಿದ ಮನೀನ ಮತ್ತೆ ಆ ಕಡಿಗಿ ಗಂಡನ ಮನೀನ ಕಾಪಾಡಬೇಕು. ಅದನ್ನ ಬಿಟ್ಟು ಆಸ್ತಿ ಕಾಲಾಗ ಹುಟ್ಟಿದ ಮನೀನ ಹೊಡಿಯಾಕ ಹೊಂಟೀಯಲ್ಲಾ. ಇದು ನಿನಗ ಶೋಬಿ ತರಂಗಿಲ್ಲ. ಗಂಡನ ಮನಿಗೇ ಹೋದ ಹೆಣ್ಮಕ್ಕಳಿಗೆ ತವ್ರಮನೇರು ಕೊಡೋ ಅರಿಶಿಣ ಕುಂಕುಮಾನೇ ಬಾಳಾ ದೊಡ್ಡ ಆಸ್ತಿ. ಅದನ್ನ ಉಳಿಸಿಕೆಂಡು ಬೆಳಿಸಿಕೆಂಡು ಹೋಗ್ಬೇಕು. ಅದನ್ನೇ ಉಳಿಸಿಕೆಳ್ಳಿಲ್ಲ ಅಂದ್ರೆ, ತವ್ರ ಮನಿ ಸಂಬಂಧಾನೇ ಕಡ್ಕಂಡಂಗ. ಅದಕ್ಕೆ ನಾನು ಹೇಳೋದನ್ನ ಕೇಳು. ನಿಮ್ ಅಪ್ಪ ಏನ್ ಕೊಡ್ತಾರೋ ಅದನ್ನ ತಗಂಡು ನಕ್ಕಂತ ಇರೋದನ್ನ ಕಲಿ, ಅಂದ್ರು, ನಾನು ಸುಮ್ನಾದೆ. ಹಂಗಾಗಿ ನಮ್ ಅಪ್ಪ ಆಸ್ತಿನ ಎರಡು ಭಾಗ ಮಾಡಿದ್ರು, ಅದ್ರಾಗ ನನಿಗೆ ಅಂತ ಹತ್ತು ಸಾವಿರ ರೂಪಾಯಿ ಕೊಟ್ರು, ಎಂದರು.

ವಿವಾಹವಾಗಿ ಗಂಡನ ಮನೆಗೆ ಹೋದಂತಹ ಮಹಿಳೆಯರಿಗೆ ತವರು ಮನೆಯಿಂದ ದೊರೆಯುವ ಅರಿಶೀಣ ಕುಂಕುಮ, ಉಡಿ ತುಂಬುವುದು ಇವುಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದಿವೆ. ಇವುಗಳ ಕಾರಣವಾಗಿ ಮಹಿಳೆಯರು ತಮ್ಮ ಹಕ್ಕಗಳಿಂದ ವಂಚಿತರಾಗುತ್ತಿರುವುದು ಮೇಲಿನ ಪ್ರಕರಣಗಳಿಂದ ತಿಳಿದು ಬರುತ್ತದೆ. ವ್ಯವಸ್ಥೆಯಲ್ಲಿ ಸ್ತ್ರೀವಿರೋಧಿಯಾದ ನಂಬಿಕೆ, ಆಚರಣೆಗಳೇ ಅಧಿಕವಾಗಿವೆ. ಇವು ಶತಮಾನಗಳಿಂದಲೂ ಮಹಿಳೆಯರನ್ನು ಆಳುತ್ತಲೇ ಇವೆ. ಮುಖ್ಯವಾಗಿ ಈ ಎರಡೂ ಪ್ರಕರಣಗಳಲ್ಲಿ ಮಹಿಳೆಯರಿಂದಲೇ ನಂಬಿಕೆಗಳನ್ನು ಗಟ್ಟಿಗೊಳಿಸುವಂತಹ ಮತ್ತು ಅವರಿಂದಲೇ ಹಕ್ಕುಗಳನ್ನು ಪಡೆಯದಂತೆ ಮಾಡುವ ಅಂಶಗಳು ಗೋಚರಿಸುತ್ತವೆ. ಮುಖ್ಯವಾಗಿ ಇಲ್ಲಿ ಮಹಿಳೆಯೇ ಮಹಿಳೆಯರ ಹಕ್ಕುಗಳನ್ನು ಕಿತ್ತುಕೊಳ್ಳುತ್ತಿದ್ದಾರೆ ಎಂದಲ್ಲ. ಬದಲಾಗಿ ಮಹಿಳೆಯರನ್ನು ಹಾಗೆ ರೂಪಿಸಲಾಗಿರುತ್ತದೆ. ಅರಿಶಿಣ ಕುಂಕುಮ ಮುತ್ತೈದೆಯ ಸಂಕೇತವೆಂದೂ ಅದನ್ನು ತುಂಬಾ ಜತನದಿಂದ ಕಾಪಾಡಬೇಕೆಂದೂ ಅವರಲ್ಲಿ ನಂಬಿಸಲಾಗಿರುತ್ತದೆ. ಮತ್ತೆ ಅದೇ ಕಾರಣಕ್ಕೇ ತನ್ನ ಗಂಡನ ಹಿತೈಷಿಯಾಗುವ ಅಥವಾ ಗಂಡನ ಹಿತವನ್ನು ಕಾಪಾಡುವುದು ಹೆಂಡತಿಯ ಧರ್ಮ ಎನ್ನುವ ನಂಬಿಕೆಯನ್ನು ಬಿತ್ತಲಾಗಿದೆ. ಆ ಕಾರಣಕ್ಕೆ ಮಹಿಳೆಯರು ತವರು ಮನೆಯಲ್ಲಿನ ಅರಿಶಿಣ ಕುಂಕುಮವನ್ನು ತರುವುದು ಮತ್ತು ಆ ಮೂಲಕ ತನ್ನ ಮುತ್ತೈದೆತನವನ್ನು ಕಾಪಾಡಿಕೊಳ್ಳುವುದನ್ನು ನಂಬುತ್ತಿದ್ದಾರೆ. ಆದರೆ ಈ ಬಗೆಯ ನಂಬಿಕೆಗಳಿಂದ ಸಂವಿದಾನ ಬದ್ಧವಾಗಿ ಕೊಡಮಾಡಲ್ಪಟ್ಟಂತಹ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಮುಖ್ಯವಾಗಿ ಅವರ ಆರ್ಥಿಕ ಭದ್ರತೆಯನ್ನು ಸುಧಾರಿಸುವ ಸಲುವಾಗಿ ಜಾರಿಯಲ್ಲಿರುವ ಕಾನೂನಾದ ಉತ್ತರಾಧಿಕಾರ ಕಾಯಿದೆಯ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಮುತ್ತೈದೆತನದ ನಂಬಿಕೆಗಳು, ಮತ್ತು ಮಹಿಳೆಯರ ಭಾವನಾತ್ಮಕ ನೆಲಗಳಿಗೆ ನೇರವಾದ ಸಂಬಂಧವಿರುತ್ತದೆ. ಮುಖ್ಯವಾಗಿ ನಂಬಿಕೆಗಳನ್ನು ಪಾಲಿಸುವಂತಹ ಮಹಿಳೆಯರನ್ನು ದೈವತ್ವದ ನೆಲೆಯಲ್ಲಿ ವ್ಯವಸ್ಥೆ ಕಾಣುತ್ತದೆ. ಮುತ್ತೈದೆಯ ಸಂಕೇತವಾದ ಕುಂಕುಮವು ಮಹಿಳೆಗೆ ಪವಿತ್ರದ ಸ್ಥಾನದಲ್ಲಿ ನಿಲ್ಲುತ್ತದೆ. ಹಾಗಾಗಿ ಇದನ್ನು ಯಾವ ಮಹಿಳೆಯರು ರೂಢಿಸಿಕೊಂಡು ಬರುತ್ತಾರೋ ಅಂತಹವರನ್ನು ಸಮಾಜದಲ್ಲಿ

ಪೂಜ್ಯನೀಯವಾಗಿ ಕಾಣಲಾಗುತ್ತದೆ. ಆದರೆ ಈ ದೈವತ್ವದ ನೆಲೆಯೇ ಅವರನ್ನು ದಾಸಿಯರನ್ನಾಗಿಸಿದೆ. ಆದರೆ ಇದರ ಬಗೆಗಿನ ಅರಿವನ್ನು ಹೊಂದುವುದಕ್ಕೂ ಸಾಧ್ಯವಿಲ್ಲದಂತೆ ಮಹಿಳೆಯರನ್ನು ಬಂಧಿಸಲಾಗಿದೆ. ಜೊತೆಗೆ ಕುಟುಂಬ ಸದಸ್ಯರ ಸಂಬಂಧಗಳನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿಯೂ ಮಹಿಳೆಯರಿಗೇ ವಹಿಸಲಾಗಿದೆ. ಹಾಗಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸುತ್ತಿರುವುದು ಕಂಡು ಬರುತ್ತದೆ. ಈ ಬಗೆಯ ನಂಬಿಕೆಗಳು ಮಹಿಳೆಯರಿಗೆ ತಮ್ಮ ಹಕ್ಕುಗಳನ್ನು ಪಡೆಯಲು ಬಹು ದೊಡ್ಡ ತೊಡಕುಗಳಾಗಿರುವುದನ್ನು ಕಾಣಬಹುದು.

**ಇ. ಮಹಿಳೆಯರು ತವರಿನ ಆಸ್ತಿ ಪಡೆದುಕೊಂಡರೆ ಗಂಡನ ಮನೆ ಸರ್ವನಾಶವಾಗುತ್ತದೆ ಎಂಬ ನಂಬಿಕೆ :** ವ್ಯವಸ್ಥೆಯಲ್ಲಿ ಕೆಲವು ನಂಬಿಕೆಗಳಿದ್ದರೆ ಹಲವು ಮೂಢನಂಬಿಕೆಗಳು ಜಾರಿಯಲ್ಲಿವೆ. ಈ ಮೂಢನಂಬಿಕೆಗಳಿಗೆ ಬಲಿಯಾಗುವವರು ಹೆಚ್ಚಿನ ರೀತಿಯಲ್ಲಿ ಮಹಿಳೆಯರೇ ಆಗಿದ್ದಾರೆ. ಮಗು ಹುಟ್ಟಿನಿಂದ ಹಿಡಿದು ಸಾಯುವವರೆಗೆ ಈ ನಂಬಿಕೆಗಳಲ್ಲಿಯೇ ಬದುಕಬೇಕಾದ ಅನಿವಾರ್ಯತೆ ಯನ್ನು ಪಿತೃಪ್ರಧಾನ ವ್ಯವಸ್ಥೆ ರೂಪಿಸಿದೆ. ಹಾಗಾಗಿಯೇ ಕುಟುಂಬದಿಂದ ಹಿಡಿದು ಸಾಮಾಜಿಕ ಸಂಸ್ಥೆಗಳು ಎಂದು ಗುರುತಿಸಿಕೊಂಡಿರುವ ವಿವಾಹ, ಧರ್ಮ ಮುಂತಾದವುಗಳು ಈ ನಂಬಿಕೆ ಗಳಿಂದಲೇ ಮುಂದುವರೆದುಕೊಂಡು ಬಂದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಈ ನಂಬಿಕೆಗಳು ಸ್ತ್ರೀ ಪುರುಷರಿಬ್ಬರಿಗೂ ಒಂದೇ ತೆರನಾಗಿವೆಯೇ ಎಂದು ನೋಡಿದರೆ, ಇದಕ್ಕೆ ವಿರುದ್ಧವಾದ ಸಂಗತಿಗಳು ಗೋಚರಿಸುತ್ತವೆ. ಈ ನಂಬಿಕೆ ಮತ್ತು ಮೂಢನಂಬಿಕೆಗಳು ಮಹಿಳೆಯರಿಗೆ ಹೆಚ್ಚಿನ ತೊಡಕುಗಳನ್ನು ತಂದೊಡ್ಡಿದರೆ, ಪುರುಷರಿಗೆ ಅವುಗಳು ಹೆಚ್ಚಿನ ಲಾಭವನ್ನು ಒದಗಿಸಿಕೊಡುತ್ತವೆ. ಹಾಗಾಗಿಯೇ ನಂಬಿಕೆಗಳು ಮತ್ತು ಮೂಢನಂಬಿಕೆಗಳು ಅಧಿಕಾರದ ಸಂರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಮುಖ್ಯವಾಗಿ ಮಹಿಳೆಯರು ಈ ನಂಬಿಕೆಗಳ ಬಲೆಯಲ್ಲಿ ಸಿಲುಕಿ ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಆಸ್ತಿ ಹಕ್ಕಿನ ವಿಚಾರಕ್ಕೆ ಬಂದರೆ ಹಲವಾರು ಸಾಮಾಜಿಕ ನಂಬಿಕೆಗಳು ಮಹಿಳೆಯರು ಆಸ್ತಿಹಕ್ಕನ್ನು ನಿರಾಕರಿಸುವಂತೆ ಮಾಡುತ್ತಿವೆ. ಇವುಗಳಿಗೆ ಬಲಿಯಾಗುವವರು ಮಹಿಳೆಯರೇ ಹೊರತು ಪುರುಷರಲ್ಲ. ಹಾಗೆಯೇ ಇವುಗಳು ಮಹಿಳಾ ಹಕ್ಕುಗಳಿಗೆ ಬಹುದೊಡ್ಡ ತೊಡಕುಗಳಾಗಿ ಮಾರ್ಪಟ್ಟಿವೆ. ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಕೆಲವು ನಂಬಿಕೆ ಮತ್ತು ಮೂಢನಂಬಿಕೆಗಳ ಕಾರಣವಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗಿರುವುದು ಕ್ಷೇತ್ರಕಾರ್ಯದಲ್ಲಿ ಕೆಲವು ಪ್ರಕರಣಗಳಿಂದ ಕಂಡುಬಂದಿವೆ. ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಚೌಡಾಪುರ ಗ್ರಾಮದ ನಿಂಗಮ್ಮ ತನ್ನ ತಂದೆಯ ಆಸ್ತಿಯನ್ನು ಪಡೆದುಕೊಂಡಿದ್ದರೂ ಸಹ ಅವರು ಆ ಆಸ್ತಿಯನ್ನು ಅನುಭವಿಸಲಾರದಂತಹ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಇದಕ್ಕೆ ಕಾರಣ ಅವರಲ್ಲಿರುವ ಮೂಢನಂಬಿಕೆ.

ನಿಂಗಮ್ಮನವರು ಹೇಳಿದಂತೆ "ನಾನು ನಮ್ಮಪ್ಪನ ಆಸ್ತಿನಾಗ ಎರಡು ಎಕ್ರೆ ಜಮೀನು ಭಾಗ ಮಾಡಿಕೆಂಡು ತಗಂಡೀನಿ ಆದ್ರ ಈ ಹೊಲ್ದಾಗ ಯಾವ ಬೆಳೀನೂ ಬೆಳಿವಲ್ಲು. ಯಾಕಂದ್ರ ತವ್ರಮನಿ ಆಸ್ತಿನಾ ಯಾಕ ತಗಂಡಿ ಅದಕ್ಕ ನಿಮ್ ಅಣ್ಣೋರು ಏನೋ ಮಾಡ್ಸಿಟ್ಟಾರ ಹಂಗಾಗಿ ಅದು ಬೆಳಿ ಬೆಳಿಯಂಗಿಲ್ಲ ಅಂತ ನನಗ ಹೇಳಕತ್ಯಾರ ಎಂದರು. ಇರೋ ಆರು ಎಕ್ರೆನಾಗ ಮೂರು ಜನಕ್ಕ ಎಲ್ಡೆಲ್ಡು ಎಕ್ರೆ ಭೂಮಿ ಬಂತು. ಆಮ್ಯಾಲ ಮನಿ ಮಾತ್ರ ದೊಡ್ಡಣ್ಣಗ ಇರ್ಲಿ ಅಂತ ಬಿಟ್ಟು ಬಿಟ್ವಿ. ಈ ಜಮೀನು ಇರೋದು ನನ್ನ ಸಣ್ಣ ಅಣ್ಣ ಹನುಮಂತನ ಭೂಮಿ ಪಕ್ಕದಾಗ ಬಂದೇತಿ. ಆಸ್ತಿ ನನಗ ಬಂದಿದ್ಕ ಅವ್ನು  ಬಾಳ ಸಿಟ್ ಮಾಡಿಕೆಂಡಿದ್ದ. ಆದ್ರ ನಾನು ಏನೂ ಹೇಳಾಕ ಹೋಗಿರ್ಲಿಲ್ಲ. ನನ್ ಪಾಲಿಗಿ ಬಂದ ಭೂಮ್ಯಾಗ ನಾನು ಮತ್ತೆ ನನ್ ಗಂಡ ಸೇರಿ ಮೆಕ್ಕೇಜೋಳ ಹಾಕಿದ್ವಿ. ಆದ್ರ ಅದು ಸರೀಗಿ ಬೆಳಿಲಿಲ್ಲ. ಗೊಬ್ರ, ಔಷಧ ಹಾಕಿದ್ವಿ ಆದ್ರೂ ಬೆಳಿ ಬರ್ಲಿಲ್ಲ. ಹೊಲ್ದಾಗ ಒಂದಿನ ಕೆಲ್ಸ ಮಾಡಿ ಬರಬೇಕಾದ್ರ ಹಾವು ಬಂದು ನನ ಗಂಡಗ ಕಚ್ಚಿ ಬಿಡ್ತು. ಅವ್ರನ್ನ ಉಳಿಸಿಕೆಳ್ಳಾಕ ಬಾಳ ತ್ರಾಸ್ ಆತು. ಹಿಂಗ ಬಾಳ ತೊಂದ್ರಿಗಳು ಆಗಕತ್ತಿದ್ವು ಯಾಕ ಹಿಂಗಾತು ಅಂತ ಯೋಚ್ನಿ ಆಗಿತ್ತು. ನಮ್ ಮನಿ ಪಕ್ಕದೋರ್ಗಿ ಇದನ್ನ ಹೇಳಿದ್ವಿ ಅವ್ರಿದ್ದು ನೀವು ಯಾರಾದ್ರೂ ಸ್ವಾಮಿತಾಗ ಹೋಗಿ ಕೇಳಿಸಿಕೊಂಡು ಬರ್ರಿ ಅಂತ ಹೇಳಿದ್ರು. ಅವ್ರು ಹೇಳಿದಂಗ ನಾನು ಮತ್ತೆ ನನ ಗಂಡ ಇಬ್ರು ನಮ್ಗೆ ಗೊತ್ತಿರೋ ಸ್ವಾಮಿತಾಗ ಹೋಗಿ ನಮ್ ವಿಶ್ಯನೆಲ್ಲಾ ಹೇಳಿದ್ವಿ ಅವ್ರು ಅದನ್ನ ಕೇಳಿ, ಹೆಣ್ಮಕ್ಕಳು ಮದುವಿ ಮಾಡಿಕೆಂಡ್ ಮ್ಯಾಲ ತವ್ರಮನಿಂದ ಏನೂ ಬೇಡಬಾರ್ದು, ಹಬ್ಬಹರಿದಿನಗಳ್ದಾಗ ಮಾತ್ರ ಅಲ್ಲಿಗಿ ಬಂದು ಉಡಿ ತುಂಬಿಕೆಂಡು ಹೋಗ್ಬೇಕು. ಇದು ಹೆಣ್ಮಕ್ಕಳ ಲಕ್ಷಣ. ಆದ್ರ ನೀನು ಆಸ್ತಿನಾಗ ಬಾಗ ಮಾಡಿಕೆಂಡು ನಿನ್ನ ತವ್ರ ಮನೀನ ಒಡದ ಬಿಟ್ಟೇಯಿ. ಅದಕ್ಕ ಹಿಂಗೆಲ್ಲಾ ಕಾಡಾಕತ್ಯಾವ ಅಂತಂದ್ರು, ಕೊನಿಗಿ ನೀವು ನಿಮ್ಮ ಮನಿದೇವ್ರಿಗೆ ಮೂರು ವಾರ ಹೋಗಿಬರ್ರಿ ಎಲ್ಲಾ ಸರಿ ಹೊಕ್ಕಾತಿ ಅಂದ್ರು, ಅದಕ್ಕ ಸರಿ ಅಂತಂದು ಅಲ್ಲಿಂದ ಬಂದ್ವಿ, ಮೂರು ವಾರ ನಾನು ಮತ್ತ ನನ ಗಂಡ ಇಬ್ರೂ ಮನಿದೇವ್ರಿಗೆ ಹೋಗಿ ಬಂದ್ವಿ, ಆದ್ರೂನೂ ನಮ್ ಕಷ್ಟ ಬಗಿಹರಿಲಿಲ್ಲ. ಕೊನಿಗಿ ಒಂದಿನ ನಮ್ ಭೂಮ್ಯಾಗ ಒಂದು ತಾಯತ ಸಿಕ್ತು. ಅದನ್ನ ತಗಂಡು ಹೋಗಿ ಸುಟ್ಟು ಹಾಕಿದ್ವಿ, ಆಮ್ಯಾಲ ಅದು ಹೆಂಗ ಬಂತು ಅಂತ ಯೋಚ್ನಿ ಮಾಡಕ್ಹತ್ತಿದ್ವಿ, ಇದೇ ವಿಚಾರಾನ ನಮ್ ಮಾವಗ ಹೇಳಿದ್ವಿ ಅವ್ರಿದ್ದು ಈ ಕೆಲ್ಸ ನಿಮ್ ಸಣ್ಣ ಅಣ್ಣಂದೆ ಆಗಿರ್ತಾದ ಅಂದ್ರು, ನಿನಗ ಆಸ್ತಿ ಸಿಕ್ಕಿರೋದು ಅವ್ನಿಗಿ ಇಷ್ಟ ಇಲ್ಲ. ಹಂಗಾಗಿ ನಿನಗ ಬಂದ ಭೂಮ್ಯಾಗ ಏನೂ ಬೆಳಿ ಬೆಳಿಬಾರ್ದು ಅಂತ ಹಿಂಗ ಮಾಡ್ಯಾನ ಅಂತಂದ್ರು. ಅದಕ್ಕ ನನ್ ಮನ್ಸು ಒಪ್ಪಲಿಲ್ಲ. ಆದ್ರೂ ಮಾವನವ್ರಿಗಿ ಎದುರು ಮಾತಾಡ್ಲಿಲ್ಲ. ನನ್ ಭಾಗಕ್ಕ ಆಸ್ತಿ ಬಂದು ಎರಡು ವರ್ಸ ಆತು ಇಲ್ಲಿವರ್ಗೂ ಏನೂ ಬೆಳಿವಲ್ಲು. ಹಂಗಾಗಿ ನಾವು ಅಲ್ಲಿ ಬೆಳಿಯೋದೇ ಬಿಟ್ಟು ಬಿಟ್ವಿ ಆ ಭೂಮಿ ಕಾಲಾಗ ಸಾಕಾಗಿ ಹೋತು. ಕೊನಿಗಿ ಆ ಭೂಮೀನ ಬಾಳ ಕಡಿಮಿ ರೇಟಿಗಿ ನಮ್ ಸಣ್ಣ ಅಣ್ಣಗ ಕೊಟ್ ಬಿಟ್ವಿ" ಎಂದರು. ಇನ್ನೊಂದು ಪ್ರಕರಣದಲ್ಲಿ

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ತುಮರಗುದ್ದಿ ಗ್ರಾಮದ ಸಾವಿತ್ರಮ್ಮ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆದ ಕಾರಣಕ್ಕಾಗಿ ಹಲವು ಕಷ್ಟಗಳನ್ನು ಅನುಭವಿಸಿದ್ದಾರೆ. ಈ ಎಲ್ಲಾ ಕಷ್ಟಗಳಿಗೆ ಕಾರಣ ಅವರು ನಂಬಿರುವ ಮೂಢನಂಬಿಕೆಗಳು. ಈ ಮೂಢನಂಬಿಕೆಗಳ ಕಾರಣವಾಗಿ ಪಡೆದ ಆಸ್ತಿಯನ್ನು ಅನುಭವಿಸಲಾರದೇ ಹಾಗೇ ಉಳಿದುಬಿಟ್ಟಿದೆ. ಈ ವಿಷಯ ಒಬ್ಬ ಲಾಯರ್ ನನಗೆ ತಿಳಿಸಿದರು. ಹಾಗಾಗಿ ಅವರಿಂದ ಸಾವಿತ್ರಮ್ಮನವರ ವಿಳಾಸವನ್ನು ಪಡೆದು ಅವರನ್ನು ಭೇಟಿಯಾದಾಗ ಅವರು ತುಂಬಾ ವಿಷಾದದಿಂದ ತಮ್ಮ ಅನುಭವವನ್ನು ಹಂಚಿಕೊಂಡರು. "ಇದು ನನ ಗಂಡನ ಮನಿ, ನನ ತವ್ರ ಮನಿ ಬಂಡಿ. ನನಗ ಮದ್ವಿ ಆಗಿ ಸುಮಾರು ವರ್ಸ ಆತು. ನಮ್ ಅಪ್ಪ ಅಮ್ಮಗ ೫ ಜನ ಮಕ್ಳು. ಇದ್ರಾಗ ನಾನು ಒಬ್ಬೇ ಹೆಣ್ಮಗಳು. ಉಳದಂಗ ಎಲ್ಲಾರೂ ಗಂಡು ಮಕ್ಳು. ಐದು ಜನ ಮಕ್ಕಳಾಗ ನಾನು ಮೂರ್ನೇಳು. ನನಗ ತುಮರಗುದ್ದಿಯಾಗ ಇರೋ ನಮ್ ಸಂಬಂಧಿಕ್ರೀಗೇ ಕೊಟ್ಟು ಮದ್ವಿ ಮಾಡ್ಯಾರ. ನನಗಿಂತ ದೊಡ್ಡೋರು ಇಬ್ರು ಐದಾರ ಅವ್ರಗೂ ಮದುವಿ ಆಗೇತಿ. ಇನ್ನ ಇಬ್ರು ತಮ್ಮದೋರು ಇನ್ನ ಓದಕತ್ಯಾರ. ನಾನು ಹತ್ತನೇ ತರಗತಿ ಓದಿ ಬಿಟ್ಟೇನಿ. ನಮ್ ತಾತನ ಆಸ್ತಿನಾಗ ನಮ್ ಅಪ್ಪಗ ಎಂಟು ಎಕ್ರೆ ಜಮೀನು ಬಂದೇತಿ. ಅದನ್ನ ಇರೋ ಅಣ್ಣ ತಮ್ಮನೋರು ಮಾಡ್ಕೆಂಡು ಹೋಗತಿದ್ರು. ನಮ್ ತಂದಿ ತೀರಿಕೆಂಡ ಮ್ಯಾಲ ದೊಡ್ಡಣ್ಣ ನಂದೀಶಪ್ಪ ತಂದಿ ಆಸ್ತಿನಾಗ ಭಾಗ ಮಾಡೋನು ಅಂತ ಹೇಳಿದ್ನಂತೆ. ಅದನ್ನ ನನ್ನ ಸಣ್ಣ ತಮ್ಮ ನನ್ನೆದುರಿಗೆ ಹೇಳಿದ. ಅದಕ್ಕ ನಾನು ನಮ್ ಅಣ್ಣನ್ನ ಮಾತಾಡ್ಸಿದೆ. ಇನ್ನು ಓದಾಕ್ಹತ್ತಿರೋ ತಮ್ಮನೋರು ಐದಾರ. ಈಗ ಭಾಗ ಮಾಡೆಂದ್ರ ಅವ್ರೆಲ್ಲಿಗಿ ಹೋಗ್ಬೇಕು ಈಗ್ಲೇ ಭಾಗ ಮಾಡೋದು ಬ್ಯಾಡ ಅವ್ರಿಗಿ ಮದ್ವಿ ಅಂತ ಆಗ್ಲಿ ಅಂದೆ. ಅದಕ್ಕ ಅವ್ನು ಒಪ್ಪಿದ. ಇಬ್ರು ತಮ್ಮಂದ್ರಿಗಿ ಒಳ್ಳೆ ಕಡೆ ಸಂಬಂಧ ನೋಡಿ ಮದ್ವಿ ಮಾಡಿದ್ವಿ. ಅವ್ರ ಮದ್ವಿ ಆಗಿ ಆರೇಳು ತಿಂಗ್ಳಿಗೆ ಆಸ್ತಿನಾಗ ಭಾಗ ಮಾಡಾನು ಅಂತ ಕ್ಯಾತಿ ತಗದ. ಅದಕ್ಕ ಎಲ್ಲಾರೂ ಒಪ್ಪಿದ್ರು. ಆದ್ರ ಆಸ್ತಿನಾಗ ನಾವು ನಾಕೇ ಜನ ಭಾಗ ಮಾಡಿಕೆಳ್ಳಾನು ಅಂತ ಅವ್ರು ನಿರ್ಧಾರ ಮಾಡಿದ್ರಂತೆ. ಅದು ನನ ಗಂಡಗ ಗೊತ್ತಾತು. ಆಗ ನನ ಗಂಡ ಆಸ್ತಿನಾಗ ನಿನಗೂ ಪಾಲು ಬರತೈತಿ ನೀನು ಹೋಗಿ ನಿಮ್ಮ ಅಣ್ಣಂತೇಲಿ ಮತಾಡು ಅಂತ ಹೇಳಿದ. ನಾನು ಬ್ಯಾಡ ಅಂತಂದೆ. ಅದಕ್ಕ ಅವ್ರಿದ್ದು ಇಲ್ಲೇ ನಮ್ಮೂರಾಗ ಒಬ್ ಹೆಣ್ಮಗಳು ತನ್ನ ತಂದಿ ಆಸ್ತಿನಾಗ ಭಾಗ ತಗಂಡು ಬಂದಾಳ ಅದನ್ನ ನೋಡಿ ನೀನು ಕಲ್ತಕ ಅಂದ್ರು. ಆದ್ರ ನನಗ ಮನಸ್ಸಿರಲಿಲ್ಲ. ನಮ್ ತವ್ರ ಮನಿ ಆಸ್ತಿನಾಗ ಒಂದಿಚ್ಚೂ ಭಾಗ ಕೇಳ್ಬಾರದು ಅಂತ ನಿರ್ಧರಿಸಿದ್ದೆ. ಆದ್ರ ನಮ್ ಊರಾಗ ಯಾರೋ ಹೆಣ್ಮಗಳು ತನ್ನ ತಂದಿ ಆಸ್ತಿನಾಗ ಭಾಗ ಮಾಡ್ಕೆಂಡು ಬಂದಾಳಂತ ನನಗ ಆಸ್ತಿನಾಗ ಭಾಗ ತಗಂಡು ಬಾ ಅಂತ ಹೇಳಕತ್ಯಾರ. ನಾನು ನನ ಗಂಡಗ ತವ್ರಮನಿ ಆಸ್ತಿನಾಗ ಭಾಗ ತಗಂಡ್ರ ನಮಗ ಒಳ್ಳೇದಾಗಲ್ಲ ಅಂತ ನಮ್ ಅಮ್ಮ ಹೇಳ್ತಿದ್ಲು. ಅದಕ್ಕ ನಾನು ಹೋಗಿ

ಕೇಳಂಗಿಲ್ಲ ಅಂತಂದೆ. ಅದಕ್ಕ ಅವ್ರಿದ್ದು ನೀನು ಹೋಗಿ ಆಸ್ತಿನಾಗ ಭಾಗ ಕೇಳು ಇಲ್ಲಾಂದ್ರ ಮನಿಬಿಟ್ಟು ಹೋಗಿ ಅಲ್ಲೇ ನಿನ್ ತವ್ರ ಮನ್ಯಾಗ ಇರು ಅಂತಂದ. ಅದಕ್ಕಾ ಏನ್ ಮಾಡೋದು ಅಂತೇಳಿ ನನ ಗಂಡ ಹೇಳಿದಂಗ ನಾನು ಬಂಡಿಗಿ ಹೋಗಿ ನನಗೂ ತಂದಿ ಆಸ್ತಿನಾಗ ಭಾಗ ಬೇಕು ಅಂತ ಕೇಳಿದೆ. ದೊಡ್ಡಣ್ಣ ಇದ್ದು ನಿನಗ ಯಾಕ ಆಸ್ತಿ ಬೇಕು. ನೀನು ಗಂಡನ ಮನ್ಯಾಗ ಇರಾಕಿ. ಅಲ್ಲಿರೋ ಆಸ್ತಿನ ತಿಂದ್ರೆ ಸಾಕಾಗಿರ್ತದ ಅಂತದ್ರಾಗ ಇಲ್ಲಿನ ಆಸ್ತಿ ತಗಂಡು ಏನ್ ಮಾಡ್ತಿ ಅಂತ ಕೇಳಿದ. ಅಪ್ಪನ ಆಸ್ತಿ ಅಂದ್ರ ಎಲ್ಲಾ ಮಕ್ಕಳಿಗೂ ಸಮ ಸಿಗಬೇಕು. ಹಂಗಾಗಿ ನನಗೂ ಆಸ್ತಿನಾಗ ಸಮ ಪಾಲು ಸಿಗಬೇಕು ಅಂತ ಕೇಳಿದೆ. ನಿನಗ ಯಾರು ಹೇಳಿದ್ದು ಹೆಣ್ಮಕ್ಕಳಿಗೆ ಆಸ್ತಿನಾಗ ಬಾಗ ಸಿಗತೈತಿ ಅಂತ ಕೇಳಿದ. ಅದಕ್ಕ ನಮ್ ಊರಾಗ ಒಬ್ರು ತಗಂಡು ಬಂದಾರ ಅದಕ್ಕ ನಾನು ಕೇಳಾಕತ್ತೇನಿ ಅಂದೆ. ಸರಿ ಅಂತ ಸುಮ್ನಾದ. ಸ್ವಲ್ಪ ದಿನ ಹೋದ್ಮೇಲೆ ನಮ್ ದೊಡ್ಡಪ್ಪ ನಮ್ ಮನಿಗಿ ಬಂದಿದ್ದ. ಹಿಂಗ ಮಾತಾಡ್ಬೇಕಾದ್ರ ತಂದಿ ಆಸ್ತಿನಾಗ ಭಾಗ ಬೇಕಂತ ಕೇಳಿಯಂತಲ್ಲವ್ವಾ ಅಂತ ಕೇಳಿದ. ಅದಕ್ಕ ನಾನು ಹೌದು ಅಂದೆ. ಅದನ್ಯಾಕ ಕೇಳಿದಿ. ನಿನಗ ಮದುವಿ ಆಗೇತಿ, ಇಲ್ಲಿ ಇರೋ ಆಸ್ತಿನ ನೋಡಿಕೆಂಡು ಹೋದ್ರ ಸಾಕಾಗೇದ ಅಂತಾದ್ರಾಗ ನೀನು ಯಾಕ ಮತ್ತೆ ಆಸ್ತಿ ಕೇಳ್ತಿ ಅಂದ್ರು. ಅದಕ್ಕ ನಾನು ಏನೂ ಮಾತಾಡಲಿಲ್ಲ. ತವ್ರ ಮನಿ ಆಸ್ತಿನ ಭಾಗ ಮಾಡ್ಕೆಂಡು ತಗಂಡ್ರ ಕಾಡಾಟಗಳು ಜಾಸ್ತಿ ಆಕ್ಕವು. ಅದು ನಿನಗ ಒಳ್ಳೇದಲ್ಲ. ಮತ್ತೆ ಹೆಣ್ಮಕ್ಕಳು ಆಸ್ತಿನಾಗ ಭಾಗ ಕೇಳ್ಬಾರ್ದು. ಯಾಕಂದ್ರ ನಿಮ್ ಮದ್ವಿನ ಸಾಲಸೋಲ ಮಾಡಿ ಮಾಡಿರ್ತಾರ ಅದನ್ನೆಲ್ಲಾ ತೀರ್ಸಕಾ ಬಾಳ ಕಷ್ಟ ಪಟ್ಟಿರ್ತಾರ. ಇನ್ನು ತೀರ್ಸತಾನೇ ಇರ್ತಾರ. ಇಂತ ಟೈಮ್‌ದಾಗ ಆಸ್ತಿನಾಗ ಭಾಗ ಕೇಳಿದ್ರೆ ಆ ದೇವ್ರು ಸತೆ ಮೆಚ್ಚಂಗಿಲ್ಲ. ನಿಮ್ಮ ಅಣ್ಣ ತಮ್ಮನೋರು ಎಷ್ಟು ನೊಂಡ್ಕಂಡಿರಾಕಿಲ್ಲ ಹೇಳು ಎಂದರು. ನೀನು ಹಿಂಗೆ ಮಾಡಿ ಆಸ್ತಿನಾಗ ಭಾಗ ತಂಗಂಡ್ರೆ ಅವ್ರ ಉಸುರು ನಿನಗ ತಟ್ಟದ ನೊಡು ಯೋಚ್ನಿ ಮಾಡು ಅಂತ ಹೇಳಿ ಹೋದ್ರು. ಆದ್ರ ನನ ಗಂಡ ಅದನ್ನೆಲ್ಲಾ ಕೇಳಿಸಿಕಂಡು ಇವ್ರು ಹಿಂಗ ಹೇಳ್ತಾರ ನಮ್ ಹತ್ರ ದುಡ್ಡು ಇದ್ರ ಇವ್ರೇ ನಾಳಿದಿನ ಬಂದು ಮಾತಾಡ್ಸತಾರ. ನೀನು ಯಾವ ಕಾರಣಕ್ಕೂ ಆಸ್ತಿನ ಬಿಡಬಾರದು ಅಂತ ಹೇಳಿದ್ರು. ಅದಕ್ಕ ನಮ್ ಅಣ್ಣಂದ್ರಿಗಿ ಜುಲ್ಮಿ ಮಾಡಿ ನಮ್ ಅಪ್ಪನ ಆಸ್ತಿನಾಗ ಭಾಗ ತಗಂಡೆ. ಆದ್ರ ಆಸ್ತಿ ಯಾವಾಗ ನಮ್ ಕೈಗೆ ಬಂತೋ ಆವಾಗಿಂದ ನಮ್ ಮನ್ಯಾಗ ಒಂದಲ್ಲಾ ಒಂದು ಕಷ್ಟಗೋಳು ಶುರುವಾದ್ವು, ಮೊದ್ಲು ನನ್ ಮಗಳಿಗಿ ಜ್ವರ ಬಂದಂಗಾಗಿ ಅವ್ಳಿಗಿ ಆಸ್ಪತ್ರಿಯಾಗ ಅಂಡ್ಮಿಂಟ್ ಮಾಡಿದ್ವಿ, ಆಕಿಗಿ ಬಾಳ ಖರ್ಚು ಮಾಡಿದ್ವಿ, ಆಮ್ಯಾಲ ಸ್ವಲ್ಪ ದಿನಕ್ಕೇನೇ ನಮ್ ಮಾವನೋರು ತೀರ್ಕೆಂಡ್ರು, ಹಿಂಗ ಬಾಳಾ ಬಾಳ ಕಷ್ಟಗೋಳು ಬಂದ್ವು, ನಾವುನು ಎಲ್ಲಾ ದೇವ್ರಿಗೆ ಅಂತ ಓಡಾಡಿದ್ವಿ, ಆದ್ರ ನಮ್ ಕಷ್ಟಗೋಳು ಮಾತ್ರ ತೀರ್ಲಿಲ್ಲ. ಒಂದಿನ ನಮ್ ಚಿಕ್ಕಪ್ಪಗ ಈ ವಿಷ್ಯ ಗೊತ್ತಾತು. ಅವ್ರು ನಮ್ಮನ್ನ ನೋಡಾಕ ಬಂದಿದ್ರು, ಆಮ್ಯಾಲ ಅವ್ರೂ ಸತೆ ಇದನ್ನೇ ಹೇಳಿದ್ರು,

ತವ್ರಮನಿ ಆಸ್ತಿ ತಗಂಡಾಗಿಂದ ಹಿಂಗಾಗೇತಿ ಅಂತ ನಾವು ಹೇಳಿದ್ ಕೂಡ್ಲೆನೆ ಹೌದು ಮೊದ್ಲು ನೀವು ತಪ್ಪು ಮಾಡಿದ್ದು ಅಲ್ಲೆ. ಇದೆಲ್ಲಾ ನಿಮ್ ಅಣ್ಣ ತಮ್ಮನೋರ ಉಸ್ರಿನ ಕಾಟ. ಅವ್ರು ಎಷ್ಟು ಕಷ್ಟ ಅನುಭವಿಸಕತ್ತಾರ. ಅಂತದ್ರಾಗ ನೀನು ಹೋಗಿ ಆಸ್ತಿನಾಗ ಭಾಗ ಮಾಡಿಕೆಂಡು ತಗಂಡಿಯಲ್ಲಾ. ಅವ್ರು ಬಾಳ ನೊಂದ್ಕಂಡು ಕೊಟ್ಟಿರ್ತಾರ. ಅದೇ ಹಿಂಗ ನಿಮಗ ಕಾಡಕತ್ತೀತಿ.ಅಂತಂದ್ರು. ನಾನಿದ್ದು ಹಿಂಗಾದ್ರೆ ಹೆಂಗ ಚಿಕ್ಕಪ್ಪ ನನೇನು ಮಾಡ್ಲಿ ಅಂತಂದೆ. ಈಗಿರೋ ಆಸ್ತಿನ ನಿಮ್ ತವ್ರಮನಿಗೇ ಕೊಟ್ಬಿಡು ಆವಾಗ ಎಲ್ಲಾ ಸರಿ ಹೊಗ್ತದ ಅಂತ ಹೇಳಿದ್ರು. ನಾನು ಸುಮ್ನೆ ಇದ್ದೆ. ಇದನ್ನ ನನ ಗಂಡಗ ಹೇಳಿದ್ರೆ ಆತ ಒಪ್ಲಿಲ್ಲ. ಈಗಾಗ್ಲೆ ಭೂಮಿ ನಮ್ ಹೆಸ್ರಿಗಿ ಆಗಿ ಬಿಟ್ಟೇತಿ ಅದನ್ನ ಮತ್ತೆ ಅವ್ರ ಹೆಸ್ರಿಗೆ ಮಾಡೋದು ಬ್ಯಾಡ ಏನ್ ಆದ್ರೂ ಆಗ್ಲಿ ಅದನ್ನ ಮಾತ್ರ ಯಾರ್ಗೂ ಕೊಡಾದು ಬ್ಯಾಡ ಹಂಗ ಬೀಳು ಬಿದ್ದಿರ್ಲಿ. ಅಂತಂದು ಬಿಟ್ಟ. ಅದಕ್ಕ ನಾವು ಅದನ್ನ ಯಾರ್ಗೂ ಕೊಡ್ಲಾರ್ದಂಗ ಹಂಗೆ ಬೀಳು ಬಿಟ್ಟೇವಿ. ಆದ್ರ ನಮ್ ಕಷ್ಟಗೋಳು ಮಾತ್ರ ದಿನದಿನಕ್ಕ ಜಾಸ್ತಿ ಆಗಕತ್ಯಾವ ಎಂದರು.

ನಿಂಗಮ್ಮ ಮತ್ತು ಸಾವಿತ್ರಮ್ಮನವರು ತಮ್ಮ ತವರು ಮನೆಯಿಂದ ಆಸ್ತಿಯನ್ನು ಪಡೆದು ಕೊಂಡಿದ್ದರೂ ಸಹ ಆ ಆಸ್ತಿಯನ್ನು ಅನುಭವಿಸಲಾರದಂತಹ ಸ್ಥಿತಿಯನ್ನು ಎದುರಿಸಿದ್ದಾರೆ. ಇದಕ್ಕೆ ಕಾರಣ ಅವರಲ್ಲಿರುವ ಮೂಢನಂಬಿಕೆ. ಮುಖ್ಯವಾಗಿ ಮಾಟ ಮಂತ್ರ ಇವುಗಳು ಅವರನ್ನು ಮಾನಸಿಕವಾಗಿ ಕುಗ್ಗಿಸಿಬಿಟ್ಟಿರುವುದು ಕಂಡುಬರುತ್ತದೆ. ಮೂಢನಂಬಿಕೆಗಳನ್ನು ಇವು ಗಳನ್ನು ತಲೆಯಲ್ಲಿ ಹೊಕ್ಕಿಸಿಕೊಂಡರೆ ಅವು ಮನುಷ್ಯರನ್ನು ನಿಧಾನವಾಗಿ ಕೊಲ್ಲುತ್ತದೆ. ಈ ಬಗೆಯ ಹೆದರಿಕೆಗೆ ಒಳಗಾದವರು ನಿಂಗಮ್ಮ ಮತ್ತು ಸಾವಿತ್ರಮ್ಮನವರು. ನಿಂಗಮ್ಮನವರು ಆಸ್ತಿಯನ್ನು ಪಡೆದುಕೊಂಡ ನಂತರ ತನ್ನ ಭಾಗದ ಭೂಮಿಯಲ್ಲಿ ಬೆಳೆ ಸರಿಯಾಗಿ ಬೆಳೆದಿಲ್ಲ ಎಂಬ ಕಾರಣಕ್ಕೆ ಮತ್ತು ತವರು ಮನೆಯ ಆಸ್ತಿಯನ್ನು ತೆಗೆದುಕೊಂಡ ಕಾರಣಕ್ಕೆ ಹಲವು ರೀತಿಯ ತೊಂದರೆಗಳನ್ನು ಅನುಭವಿಸಬೇಕಾಯಿತು ಎಂಬ ನಂಬಿಕೆಯ ಕಾರಣವಾಗಿ ತನ್ನ ಭೂಮಿಯನ್ನು ಅಲ್ಪ ಮೊತ್ತಕ್ಕೆ ಮಾರುವಂತಾಯಿತು. ಮುಖ್ಯವಾಗಿ ಇದಕ್ಕೆ ಇನ್ನೊಂದು ಅಂಶವನ್ನು ಸೇರಿಸುವುದಾದರೆ ನಿಂಗಮ್ಮ ತಮ್ಮ ಪಕ್ಕದ ಮನೆಯವರ ಮಾತುಗಳಿಂದ ಸ್ವಾಮಿಯ ಬಳಿ ಹೋದಾಗಲೂ ಸಹ ಅವರು ಹೇಳುವ ಮಾತುಗಳು ಪಿತೃಪ್ರಧಾನ ಮೌಲ್ಯಗಳನ್ನು ಎತ್ತಿ ಹಿಡಿಯುವಂತಿವೆ. ಏಕೆಂದರೆ ಸಾಂಪ್ರದಾಯಿಕವಾಗಿ ಪುರುಷಶಾಹಿ ವ್ಯವಸ್ಥೆ ಎಂದಿಗೂ ಮಹಿಳೆಯರ ಮುಂದುವರಿಕೆಯನ್ನು ಸಹಿಸುವುದಿಲ್ಲ. ಹಾಗಾಗಿಯೇ ಸ್ವಾಮಿಗಳೂ ಸಹ ಮಹಿಳೆಯರನ್ನು ಕುಟುಂಬದ ಚೌಕಟ್ಟಿನಲ್ಲಿಯೇ ಪರಿಭಾವಿಸಿಕೊಳ್ಳುತ್ತಾರೆ. ಮತ್ತು ಪುರುಷನ ಅಧೀನ ನೆಲೆಯಲ್ಲಿಯೇ ಇರುವಂತೆ ಮೌಲ್ಯಗಳನ್ನು ರೂಪಿಸುತ್ತಿರುತ್ತಾರೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಸುಶೀಲಮ್ಮಳು ಸಹ ಮೂಢನಂಬಿಕೆಗಳಿಗೆ ಒಳಗಾಗಿ ತಮಗೆ ದೊರೆತ ಭೂಮಿಯಲ್ಲಿ ಯಾವುದೇ ಬೆಳೆಯನ್ನು ಬೆಳೆಯದೇ ಹಾಗೇ ಬೀಳು ಬಿಟ್ಟಿರುವುದು ಕಂಡು ಬರುತ್ತದೆ. ಇದು ವ್ಯವಸ್ಥೆಯು ರೂಪಿಸಿರುವ ಅತ್ಯಂತ ಮೂಢತನವೆಂದೇ ಹೇಳಬಹುದು.

ಏಕೆಂದರೆ ಇಪ್ಪತ್ತೊಂದನೇ ಶತಮಾನದಲ್ಲಿರುವ ಈ ಸಂದರ್ಭದಲ್ಲಿ ಮಾಟ–ಮಂತ್ರಗಳೂ ಇಂದಿಗೂ ಮಹಿಳೆಯರನ್ನು ಆಳುತ್ತಲೇ ಇವೆ. ನಿಂಗಮ್ಮ ಮತ್ತು ಸುಸೀಲಮ್ಮನವರು ನಂಬಿರುವುದು ಇದನ್ನೇ. ತನ್ನ ಅಣ್ಣ ಅಥವಾ ತಮ್ಮ ಇಬ್ಬರಲ್ಲಿ ಯಾರಾದರೊಬ್ಬರು ತನ್ನ ಜಮೀನಿಗೆ ಮಾಟ ಮಾಡಿಸಿದ್ದಾರೆ. ಹಾಗಾಗಿಯೇ ಈ ರೀತಿಯ ಸಮಸ್ಯೆಗಳು ತಲೆದೋರುತ್ತಿವೆ ಎಂಬುದು ನಿಂಗಮ್ಮಳ ಬಲವಾದ ನಂಬಿಕೆಯಾದರೆ, ತನ್ನ ತವರು ಮನೆಯ ಆಸ್ತಿಯನ್ನು ಪಡೆದಿರುವುದರಿಂದಲೇ ತನ್ನೆಲ್ಲಾ ಕಾಡಾಟಗಳಿಗೆ, ಸಮಸ್ಯೆಗಳಿಗೆ ಕಾರಣ ಎಂಬುದು ಸುಶೀಲಮ್ಮಳ ನಂಬಿಕೆಯಾಗಿದೆ. "ಮಾಟ–ಮಂತ್ರ ಹಾಗೂ ಮಹಿಳೆಗೆ ಅವಿನಾಭಾವ ಸಂಬಂಧವಿದೆ. ಮಾಟ–ಮಂತ್ರ ಮೊದಲಾದ ನಂಬಿಕೆಗಳು ಪ್ರಾಥಮಿಕ ಕೃಷಿ ಘಟ್ಟದಲ್ಲಿ ಹೆಚ್ಚಿನ ಮಹತ್ವ ಪಡೆದಿದ್ದನ್ನು ಅಲ್ಲಗೆಳೆಯುವಂತಿಲ್ಲ. ಇಂದು ಮಾಟ–ಮಂತ್ರಗಳು ಅಜ್ಞಾನದ ಫಲಗಳು ಎಂದು ಗುರುತಿಸ ಲಾಗುತ್ತಿದ್ದರೂ ಅಂದು, ಅವುಗಳು ಮಾನಸಿಕವಾಗಿ ಕ್ರಿಯಾತ್ಮಕವಾಗಿರಲು ಮಾರ್ಗದರ್ಶಿ ಯಾಗಿತ್ತು ಎಂಬುದನ್ನು ಮರೆಯಲಾಗುವುದಿಲ್ಲ. ಮೊದಲು ಮಂತ್ರ ಅಥವಾ ಧಾರ್ಮಿಕ ಸಂಸ್ಕಾರಗಳು ಭೂಮಿಯ ಫಲವತ್ತತೆಯನ್ನು ರಕ್ಷಿಸುವ ಉದ್ದೇಶವನ್ನು ಹೊಂದಿದ್ದವು. ಹೀಗಾಗಿ ಕೃಷಿಯ ಜನನಿಯಾದ ಸ್ತ್ರೀಯು ಸಹಜವಾಗಿ ಇವುಗಳೊಂದಿಗೆ ವಿಶೇಷ ಸಮರ್ಥತೆಯನ್ನು ಪಡೆದುಕೊಂಡಳು. ಕಾಲಕ್ರಮೇಣ ಮಾಂತ್ರಿಕ ಧಾರ್ಮಿಕ ಕಾರ್ಯಗಳು ಪಿತೃಪ್ರಧಾನ ವ್ಯವಸ್ಥೆಗೆ ಹೊಂದಿಕೊಂಡವು. ಹೀಗೆ ಪುರುಷ ಪ್ರಧಾನ ಚರಿತ್ರೆಯ ಜಾಡು ಸ್ತ್ರೀ ಪ್ರಾಧಾನ್ಯತೆಯನ್ನು ನಿಷೇಧಿಸಿ ದೃಡವಾಗಿ ಬೆಳೆದು ನಿಂತಿತು"[೧೬]. ಹೀಗೆ ಒಂದು ಸಂದರ್ಭದಲ್ಲಿ ಒಳ್ಳೆಯ ಕಾರ್ಯಗಳಿಗೆ ಬಳಕೆಯಾಗುತ್ತಿದ್ದ ಈ ಮಾಟ ಮಂತ್ರಗಳು ಇಂದು ಇವುಗಳು ಬಳಸಿಕೊಳ್ಳುವ ಮಾರ್ಗವೇ ಬೇರೆಯಾಗಿದೆ. ಅಂದರೆ ಇಂದು ಎಲ್ಲವೂ ಹಣಕ್ಕಾಗಿ ನಡೆಯುತ್ತಿವೆ. ಆದರೆ ಇದು ಮಹಿಳೆಯರನ್ನು ತುಂಬಾ ಅಧೀರರನ್ನಾಗಿ ಮಾಡಿಬಿಡುತ್ತದೆ. ನಿಂಗಮ್ಮಳಾಗಿರಬಹುದು ಅಥವಾ ಸುಶೀಲಮ್ಮಳಾಗಿರಬಹುದು ಇಬ್ಬರೂ ಇದ್ಯಾವುದನ್ನೂ ಲೆಕ್ಕಿಸದೇ ಧೈರ್ಯದಿಂದ ಅದೇ ಭೂಮಿಯಲ್ಲಿ ಕೃಷಿ ಕೈಗೊಂಡಿದ್ದರೆ ಈ ತರಹದ ಸಮಸ್ಯೆಗೆ ಪರಿಹಾರ ದೊರೆಯ ಬಹುದಿತ್ತೇನೋ. ಆದರೆ ಇದು ಹಾಗಾಗಲಿಲ್ಲ. ಅದಕ್ಕಾಗಿ ನಿಂಗಮ್ಮ ತನ್ನ ಪಾಲಿಗೆ ಬಂದ ಭೂಮಿಯನ್ನು ಅಲ್ಪ ಮೊತ್ತಕ್ಕೆ ತನ್ನ ತಮ್ಮನಿಗೇ ಮಾರಾಟ ಮಾಡಿದ್ದರೆ, ಸುಶೀಲಮ್ಮ ತನಗೆ ಲಭಿಸಿದ ಭೂಮಿಯಲ್ಲಿ ಉಳುಮೆ ಮಾಡುವುದನ್ನೇ ಬಿಟ್ಟಿದ್ದಾಳೆ. ಒಟ್ಟಾರೆಯಾಗಿ ಈ ಬಗೆಯ ನಂಬಿಕೆಗಳು ಮತ್ತು ಮೂಢನಂಬಿಕೆಗಳಿಗೆ ಒಳಗಾದಂತಹ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸುವ ಹಂತಕ್ಕೆ ತಲುಪುತ್ತಾರೆ. ಹಾಗಾಗಿ ಇವುಗಳು ಮಹಿಳೆಯರನ್ನು ದಾರಿ ತಪ್ಪಿಸುವ ಕೆಲಸ ಮಾಡುತ್ತಿವೆ. ನಂಬಿಕೆಗಳು ಮತ್ತು ಮೂಢನಂಬಿಕೆಗಳು ತಮ್ಮ ಪಿತ್ರಾರ್ಜಿತ ಆಸ್ತಿಯ ಮೇಲಿನ ಅಧಿಕಾರವನ್ನು ಹೇಗೆ ನಿರಾಕರಿಸುವಂತೆ ಮಾಡುತ್ತಿವೆ ಎಂಬುದರ ಕುರಿತಂತೆ ೨೨ ಜನ ಮಹಿಳೆಯರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಅಂದರೆ ಶೇ ೭.೩೩ರಷ್ಟು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಹೇಗೆ ತೊಡಕುಗಳಾಗಿವೆ ಎಂಬುದನ್ನು ತಿಳಿಸಿದ್ದಾರೆ. ಒಟ್ಟಾರೆಯಾಗಿ ವ್ಯವಸ್ಥೆಯಲ್ಲಿ ಪುರುಷನಿಷ್ಠ ಸಾಂಪ್ರದಾಯಿಕ

ಆಚರಣೆಗಳು ಯಾವ ಪ್ರಮಾಣದಲ್ಲಿ ಮಹಿಳೆಯರ ಮೇಲೆ ಪ್ರಭಾವ ಬೀರಿವೆ ಮತ್ತು ಈ ಆಚರಣೆಗಳು ಮಹಿಳೆಯರನ್ನು ಯಾವ ಪ್ರಮಾಣದಲ್ಲಿ ಹೊರಗಿಟ್ಟಿವೆ ಎಂಬುದನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದಾಗಿದೆ.

**ಕೋಷ್ಟಕ-೬.೨.೩**

**ಸಾಮಾಜಿಕ ಮೂಢನಂಬಿಕೆಗಳು**

| ಸಾಮಾಜಿಕ ಮೂಢ ನಂಬಿಕೆಗಳು | ಹೌದು | | ಇಲ್ಲ | | ಈ ಪ್ರಶ್ನೆಗಳಿಗೆ ಮೌನ ವಹಿಸಿದವರು | |
|---|---|---|---|---|---|---|
| ಸಾವಿನ ಆಚರಣೆಗಳು/ ತಿಥಿ ಆಚರಣೆಗಳು | ೧೯೦ | ೬೩.೩೩% | ೯೦ | ೩೦% | ೨೦ | ೬.೬೬% |
| ಮುತ್ತೈದೆತನವನ್ನು ಉಳಿಸಿಕೊಳ್ಳಲು ತವರು ಮನೆಯಿಂದ ಅರಿಶಿಣ ಕುಂಕುಮ ಪಡೆಯಬೇಕು ಎಂಬ ನಂಬಿಕೆಗಳು | ೨೩೦ | ೭೬.೬೬% | ೧೮ | ೬% | ೫೨ | ೧೭.೩೩% |
| ಮಹಿಳೆಯರು ತವರಿನ ಆಸ್ತಿ ಪಡೆದುಕೊಂಡರೆ ಗಂಡನ ಮನೆ ಸರ್ವನಾಶವಾಗುತ್ತದೆ ಎಂಬ ನಂಬಿಕೆ | ೧೨೬ | ೪೨% | ೬೦ | ೨೦% | ೧೧೪ | ೩೮% |




**ರೇಖಾ ಚಿತ್ರ ೬.೩.೩ ಸಾಮಾಜಿಕ ಮೂಢನಂಬಿಕೆಗಳು**

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಸಂಶೋಧನಾ ವ್ಯಾಪ್ತಿ ಪ್ರದೇಶವಾದಂತಹ ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು ೩೦೦ ಪ್ರಕರಣಗಳನ್ನು ಸಂದರ್ಶನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಅವುಗಳಲ್ಲಿ ಒಟ್ಟು ೧೯೦ ಜನ ಮಹಿಳೆಯರು ಅಂದರೆ ಶೇ.೬೩.೬೬ರಷ್ಟು ಮಹಿಳೆಯರು ಸಾವಿನ ಆಚರಣೆಗಳು ಅಥವಾ ತಿಥಿ ಆಚರಣೆಗಳು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ತೊಡಕುಗಳಾಗಿ ಮಾರ್ಪಟ್ಟಿವೆ ಎಂಬುದನ್ನು ತಿಳಿಸಿದ್ದಾರೆ. ಇನ್ನುಳಿದಂತೆ ಶೇಕಡಾ ೩೦ರಷ್ಟು ಮಹಿಳೆಯರು ಇದಕ್ಕೆ ವಿರುದ್ಧವಾದ ಉತ್ತರವನ್ನು ನೀಡಿದ್ದಾರೆ. ಹಾಗೆಯೇ  ಈ ಪ್ರಶ್ನೆಗೆ ಮೌನ ವಹಿಸಿದವರ ಸಂಖ್ಯೆ ಅಂದರೆ ಗೊತ್ತಿಲ್ಲ ಎಂಬ ಉತ್ತರವನ್ನು ನೀಡಿದವರ ಸಂಖ್ಯೆ ೨೦ರಷ್ಟಿದೆ. ಸಾವಿನ ಆಚರಣೆಗಳಲ್ಲಿ ಮಹಿಳೆಯರಿಗೆ ಪ್ರವೇಶವಿಲ್ಲ. ಆ ಮೂಲಕ ಮಹಿಳೆಯರನ್ನು ಕೇವಲ ಆ ಸಂದರ್ಭಕ್ಕೆ ಮಾತ್ರ ಹೊರಗಿಡದೇ ಸಂಪೂರ್ಣವಾದ ಹಕ್ಕುಗಳಿಂದಲೂ ಹೊರಗಿಡಲಾಗುತ್ತದೆ. ಏಕೆಂದರೆ ಕುಟುಂಬದ ವ್ಯಕ್ತಿ ಯಜಮಾನನೆಂದು ಪ್ರತಿಪಾದಿಸಲ್ಪಡುವ ಪುರುಷನ ಸಾವು ಆ ಪಟ್ಟವನ್ನು ಮುಂದುವರೆಸಿಕೊಂಡು ಹೋಗುವ ವ್ಯಕ್ತಿಗೆ ಹಸ್ತಾಂತರಗೊಳಿಸುವ ಪ್ರಕ್ರಿಯೆಯಾಗಿ ಸಾವಿನ ಆಚರಣೆಗಳು ನೆರವೇರುತ್ತವೆ.

ಮಹಿಳೆಗೆ ಮುತ್ತೈದೆಯ ಸಂಕೇತವೆಂದು ಭಾವಿಸುವ ಅರಿಶಿಣ ಕುಂಕುಮ ನೀಡುವುದು, ಉಡಿ ತುಂಬುವುದು ಈ ನಂಬಿಕೆಗಳು ಮಹಿಳೆಯರ ಮೇಲೆ ನಿರಂತರವಾಗಿ ಸವಾರಿ ಮಾಡುತ್ತಲೇ ಇರುತ್ತವೆ. ಹಾಗಾಗಿ ಇವುಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ ಮಹಿಳೆಯರದೇ ಆಗಿರುತ್ತದೆ. ತವರಿನಿಂದ ತರುವ ಅರಿಶಿಣ ಕುಂಕುಮ ಪುರುಷನ ಆಯಸ್ಸನ್ನು ಹೆಚ್ಚಿಸುವುದನ್ನು ಸೂಚಿಸುತ್ತದೆ. ಅಂದರೆ ಮಹಿಳೆ ಮುತ್ತೈದೆಯಾಗಿದ್ದಾಳೆ ಎಂದರೆ ಆಕೆಯ ಪತಿಯೂ ಜೀವಂತ ವಿದ್ದಾನೆ ಎಂದರ್ಥ. ಹಾಗಾಗಿ ಆಕೆಯ ಪತಿ ಜೀವಂತವಿರಬೇಕಾದರೆ ಮುತ್ತೈದೆತನವನ್ನು ಮಹಿಳೆ ಉಳಿಸಿಕೊಳ್ಳಲೇ ಬೇಕು. ಈ ನಂಬಿಕೆಯು ಮಹಿಳೆಗೆ ತಮ್ಮ ಹಕ್ಕುಗಳಿಂದ ವಂಚಿತರ ನ್ನಾಗಿಸಿದೆ. ಇದರ ಪ್ರಮಾಣವನ್ನು ನೋಡಿದಾಗ ಶೇ. ೭೬.೬೬ರಷ್ಟು ಮಹಿಳೆಯರು ಈ ಕುರಿತು ತಮ್ಮ ಹೇಳಿಕೆಗಳನ್ನು ನೀಡಿದ್ದಾರೆ. ಹಾಗೆಯೇ ಮೂಢನಂಬಿಕೆಗಳು ಸಹ ಮಹಿಳೆಯರ ಮಾನಸ್ಸಿನ ಮೇಲೆ ತುಂಬಾ ಪರಿಣಾಮವನ್ನು ಬೀರಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹೇಳಬೇಕೆಂದರೆ  ಮೂಢನಂಬಿಕೆಗಳ ಕಾರಣವಾಗಿ ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಕಳೆದು ಕೊಂಡವರು ಮತ್ತು ಪಡೆದ ಆಸ್ತಿಯ ಮೇಲೆ ಹಕ್ಕನ್ನು ಚಲಾಯಿಸಲಾರದಂತಹ ಪರಿಸ್ಥಿತಿಯನ್ನು ಎದುರಿಸಿದ ಮಹಿಳೆಯರ ಸಂಖ್ಯೆ ೧೨೬ರಷ್ಟಿದೆ. ಇನ್ನು ಈ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲ ಎಂಬ ಉತ್ತರವನ್ನು ನೀಡಿದವರ ಸಂಖ್ಯೆ ಕೇವಲ ೬೦ರಷ್ಟಿದೆ. ಅಂದರೆ ಮಹಿಳೆಯರು ಹಲವು ಮೂಢನಂಬಿಕೆಗಳಿಗೆ ಬಲಿಯಾಗಿ ಆ ಮೂಲಕ ತಮ್ಮ ಹಕ್ಕುಗಳನ್ನು ಕಳೆದುಕೊಳ್ಳುವುದನ್ನು ಸಮರ್ಥಿಸುವ ಹಾಗೆ ಈ ಅಂಕಿಸಂಖ್ಯೆಗಳು ಗೋಚರಿಸುತ್ತವೆ. ಹಾಗೆಯೇ ಪ್ರಕರಣಗಳೂ ಸಹ ಪೂರಕವಾಗಿ ನಿಲ್ಲುತ್ತವೆ. ಪ್ರತಿನಿತ್ಯ ಬದುಕಿನಲ್ಲಿ ನಡೆಯುವ ಘಟನೆಗಳಿಗೂ ಹೆಣ್ಣುಮಕ್ಕಳಿಗೂ ನೇರ ಸಂಬಂಧಗಳನ್ನು ಕಲ್ಪಿಸುವ ಮೂಲಕ ಹೆಣ್ಣು ಕೀಳರಿಮೆಯಿಂದ ಬಳಲುವಂತೆ

ಮಾಡಲಾಗುತ್ತಿದೆ. ಇದರ ಒಂದು ಭಾಗವೇ ಈ ನಂಬಿಕೆಗಳು ಮತ್ತು ಮೂಢನಂಬಿಕೆಗಳು. ಒಟ್ಟಾರೆಯಾಗಿ ಈಗಾಗಲೇ ಜಾರಿಯಲ್ಲಿರುವಂತಹ ಸಂಪ್ರದಾಯಗಳು, ಆಚರಣೆಗಳು ಹಾಗೂ ನಂಬಿಕೆ ಮೂಢನಂಬಿಕೆಗಳು ಮಹಿಳೆಯರ ಪಾಲಿಗೆ ಶಾಪವಾಗಿರುವುದನ್ನು ಕಾಣಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದರೂ ಸಹ ಅವರು ಅದನ್ನು ಅನುಭವಿಸಲಾರದಂತಹ ಸ್ಥಿತಿಯಲ್ಲಿರುತ್ತಾರೆ. ಇದಕ್ಕೆ ಕಾರಣ ಸ್ಥಳೀಯವಾಗಿ ಜಾರಿಯಲ್ಲಿರುವ ನಂಬಿಕೆಗಳ ಜೊತೆಗೆ ಮೂಢನಂಬಿಕೆಗಳೂ ಸಹ ತಳುಕು ಹಾಕಿಕೊಂಡಿರುತ್ತವೆ. ಒಟ್ಟಾರೆಯಾಗಿ ಆಸ್ತಿಯನ್ನು ನಿರಾಕರಿಸಲು ಸ್ವತಃ ಅವರೇ ಕಾರಣರಾಗಿರುವುದಿಲ್ಲ, ಬದಲಾಗಿ ಪುರುಷ ವ್ಯವಸ್ಥೆಯ ರಾಜಕಾರಣದ ಕಾರಣವಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸುವ ಮತ್ತು ಪಡೆದ ಆಸ್ತಿಯನ್ನು ಯಾವುದೇ ಕಾರಣಕ್ಕೂ ಬಳಸಿಕೊಳ್ಳದೇ ಇರುವಂತಹ ಅಂಶಗಳು ಗೋಚರಿಸುತ್ತವೆ.

**೬.೨.೪. ಆರ್ಥಿಕ ಕಾರಣಗಳು**

ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ಆಸ್ತಿಹಕ್ಕಿನಿಂದ ದೂರವಿಡಲು ಹಲವಾರು ತಂತ್ರಗಳನ್ನು ರೂಪಿಸುತ್ತಲೇ ಇರುತ್ತದೆ ಎಂಬುದನ್ನು ಮೇಲಿನ ಎಲ್ಲಾ ಅಂಶಗಳಿಂದ ತಿಳಿದು ಬರುತ್ತದೆ. ಇವುಗಳ ಜೊತೆಗೆ ಆರ್ಥಿಕ ಕಾರಣವೂ ಸಹ ಒಂದಾಗಿರುವುದು ಕಂಡುಬರುತ್ತದೆ. ಈ ಕಾರಣಗಳಲ್ಲಿ ಕಂಡುಬರುವುದು ಪ್ರಮುಖ ಅಂಶವೆಂದರೆ ಸ್ಥಿರಾಸ್ತಿಯನ್ನು ಚರಾಸ್ತಿ ಯನ್ನಾಗಿಸುವುದು. ಈ ಪ್ರಕ್ರಿಯೆ ಪುರುಷ ವ್ಯವಸ್ಥೆ ಅತ್ಯಂತ ನಾಜೂಕಾಗಿ ನಿಭಾಯಿಸುತ್ತದೆ. ಈ ಪ್ರಕ್ರಿಯೆಯ ಕಾರಣವಾಗಿ ಹಲವು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತ ರಾಗಿದ್ದಾರೆ. ಅ. ವಿವಾಹದ ಖರ್ಚನ್ನು ಮುಂದುಮಾಡುವುದು ಆ. ಸ್ಥಿರಾಸ್ತಿ ಚರಾಸ್ತಿ ಯಾಗುವುದು ಇವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

**ಅ. ವಿವಾಹದ ಖರ್ಚನ್ನು ಮುಂದುಮಾಡುವುದು** : ವ್ಯವಸ್ಥೆಯಲ್ಲಿ ವಿವಾಹ ಎಂಬುದು ಮಹಿಳೆಯರಿಗೆ ಒಂದು ವಿಧವಾದ ಸಂಕೋಲೆಯೇ ಸರಿ. ಏಕೆಂದರೆ ವಿವಾಹವು ಮಹಿಳೆಯರ ಎಲ್ಲ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವ ಕಾರ್ಯವನ್ನು ಮಾಡುತ್ತದೆ. ಮುಖ್ಯವಾಗಿ ವಿವಾಹದ ಸಂದರ್ಭದಲ್ಲಿ ವಧುವಿನ ಕಡೆಯವರು ವರನಿಗೆ ನೀಡುವಂತಹ ವರದಕ್ಷಿಣೆಯು ಹೆಣ್ಣು ಮಕ್ಕಳ ಕುಟುಂಬಕ್ಕೆ ತುಂಬಾ ಹೊರೆಯಾಗಿರುತ್ತದೆ. ಈ ವರದಕ್ಷಿಣೆಯ ಕಾರಣವಾಗಿ ಎಷ್ಟೋ ಮಹಿಳೆಯರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಮತ್ತೆ ಕೆಲವರು ಇಂದಿಗೂ ಕುಟುಂಬದಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾರೆ. ಮುಖ್ಯವಾಗಿ ಹೆಣ್ಣು ಮಗು ತಾನು ಹುಟ್ಟಿನಿಂದಲೇ ಹಲವಾರು ತಾರತಮ್ಯಗಳಿಗೆ ಒಳಗಾಗುತ್ತದೆ. ಮುಖ್ಯವಾಗಿ ಜನಪದರಲ್ಲಿನ ನಂಬಿಕೆಯಂತೆ ಹೆಣ್ಣು ಮಗು ಮನೆಯಲ್ಲಿ ಇದ್ದಷ್ಟು ದಿನ ಉಡಿಯಲ್ಲಿ ಬೆಂಕಿಯುಂಡೆಯನ್ನು ಕಟ್ಟಿಕೊಂಡಂತೆ ಎಂಬ ಮಾತು ಸಮಾಜವು ನಿರ್ಮಿಸಿರುವ ಮೌಲ್ಯಗಳು ಮಹಿಳೆಗೆ ಹೇಗೆ ಉರುಳಾಗಿ ಪರಿಣಮಿಸುತ್ತವೆ ಎಂಬುದು ತಿಳಿದುಬರುತ್ತದೆ. ಈ ಕಾರಣಕ್ಕಾಗಿಯೇ ಚಿಕ್ಕ ಮಕ್ಕಳಿಗೇ ವಿವಾಹ ಮಾಡುವಂತಹ

ಸನ್ನಿವೇಶವನ್ನು ಕಾಣಬಹುದಾಗಿದೆ. ಮುಖ್ಯವಾಗಿ ಇಲ್ಲಿ ವಿವಾಹದ ಸಂದರ್ಭದಲ್ಲಿ ಮಹಿಳೆಯರ ಪಾಲಿಗೆ ನೀಡುವಂತಹ ಒಡವೆಗಳೇ ಆಕೆಯ ಆಸ್ತಿಯಾಗಿರುತ್ತದೆ ಎಂಬುದು ಒಂದು ನಂಬಿಕೆ. ಇದನ್ನೇ ಮುಂದುಮಾಡಿಕೊಂಡು ಬಹಳಷ್ಟು ಪುರುಷರು ಮಹಿಳೆಯರಿಗೆ ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರನ್ನಾಗಿ ಮಾಡಲಾಗುತ್ತಿದೆ.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ನರಸಿಂಗಪುರ ಗ್ರಾಮದ ಲಕ್ಷ್ಮಿದೇವಿಯವರು ಈ ಬಗೆಯ ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸಿದ್ದಾರೆ. ಇವರು ಹೇಳುವಂತೆ "ನಮ್ಮ ತಂದೆಗೆ ಮೂವರು ಗಂಡು ಮಕ್ಕಳು ಮತ್ತು ನಾನೊಬ್ಬಳೇ ಹೆಣ್ಣು ಮಗಳು, ನನಗೆ ಮದುವೆ ಮಾಡಿ ಕೊಟ್ಟಾರ. ಅದ್ರಾಗ ಸೋಮಣ್ಣ ಹಿರಿಯವ್ನು, ವೀರೇಶ ನಡುವ್ಲವ್ನು, ಮಂಜುನಾಥ ಸಣ್ಣಣ್ಣ. ನಮ್ಮ ತಂದಿಗಿ ೫ ಎಕ್ರೆ ಭೂಮಿ ಮತ್ತೆ ಒಂದು ಮನಿ ಐತಿ. ನನ ಗಂಡ ದಿನಾಲೂ ಕುಡುದು ಬರೋದು ನಿಮ್ ತವ್ರ ಮನ್ಯಾಗಿಂದ ಆಸ್ತಿ ತಗಂಡು ಬಾ ಅಂತ ಹೇಳೋದು. ಅವ್ನು ಹೇಳಿದ್ನ ಕೇಳ್ಳಿಲ್ಲ ಅಂದ್ರ ಹೊಡಿಯೋದು ಮಾಡ್ತಿದ್ದ. ಹಂಗಾಗಿ ನಾನು ಆಸ್ತಿನಾಗ ಭಾಗ ಕೇಳಿದೆ. ನಾನು ಯಾವಾಗ ಆಸ್ತಿನಾಗ ಭಾಗ ಕೇಳಿದ್ನೋ ಆವಾಗಿಂದ ನಮ್ ಅಣ್ಣಂದ್ರು ನನ ಜೊತಿ ಮಾತಾಡೋದೇ ಬಿಟ್ಟು ಬಿಟ್ರು, ನಾನೇನ್ ಮಾಡೋದು, ನಾನು ಕೊನಿಗಿ ಗಂಡನ ಮನಿನೇ ಸೇರ್ಬೇಕಾದೋಳು. ಇಲ್ಲಿ ಆಸ್ತಿ ಬ್ಯಾಡ ಅಂತೇಳಿದ್ರೆ ಅಲ್ಲಿ ನನ ಗಂಡ ಸುಮ್ನೆ ಬಿಡಂಗಿಲ್ಲ. ಅದಕ್ಕಂತ ಆಸ್ತಿನಾಗ ಪಾಲು ಬೇಕಂತೇಳಿ ಪಟ್ಟು ಹಿಡಿದಿದ್ದೆ. ಒಂದಿನ ನಮ್ ಅಣ್ಣ ನನ್ ಜೊತಿ ಮಾತಾಡ್ದ ನೀನ್ ಮದ್ವ್ಯಾಗ ಬಾಳ ಖರ್ಚು ಆಗ್ಯಾದ, ಮತ್ತೆ ವರದಕ್ಷಿಣೆ ಕೊಟ್ಟೇವಿ. ಬಂಗಾರ ಹಾಕೀವಿ. ಅದೆಲ್ಲಾ ಸಾಕಾಗ್ಲಿಲ್ಲ ಅಂತೇಳಿ ನೀನು ಬಂದಾಗೆಲ್ಲಾ ಹೊಸ ಹೊಸ ಸೀರಿ ತಂದು ಉಡ್ಸಿ ಕಳ್ಸೀವಿ. ಅಂತಾದ್ರಾಗ ನೀನು ಮತ್ತೆ ಆಸ್ತಿನಾಗ ಭಾಗ ಕೇಳ್ತಿಯಲ್ಲ. ನಾವೇನು ಕಡಿಮಿ ಮಾಡೇವಿ ನಿನಗೆ. ನೀನು ಆಸ್ತಿನಾಗ ಪಾಲು ಬೇಕೆ ಬೇಕು ಅಂತ ಅನ್ನಂಗಿದ್ರೆ ಈವತ್ತೇ ಲಾಸ್ಟ್ ಈ ಮನಿ ಋಣ ಮುಗೀತು ಅಂತ ತಿಳ್ಕ. ಅಂತಂದ ನನಗೆ ಅಳುನೇ ಬಂದಿತ್ತು. ನನ್ ಮದ್ವ್ಯಾಗ ಅಣ್ಣೋರು ಬಾಳ ಖರ್ಚು ಮಾಡ್ಯಾರ. ಮತ್ತೆ ನನಗೆ ತವ್ರ ಮನಿ ಚೆನ್ನಾಗಿರ್ಬೇಕು ಅಂತ ಆಸಿ. ಯಾಕಂದ್ರ ಅಲ್ಲಿ ಅವ್ರು (ತವರು ಮನೆ) ಚೆನ್ನಾಗಿದ್ರೆ ಇಲ್ಲಿ ನಾನು ಚೆನ್ನಾಗಿರ್ತಿನಿ. ಮತ್ತೆ ಇಲ್ಲಿ ಗಂಡನ ಮನ್ಯಾಗ ನನ ಗಂಡ ಬಾಳ ಕಷ್ಟ ಕೊಡ್ತಾನ, ಆವಾಗ ನಾನು ಯಾರ ಮನಿಗಿ ಹೋಗ್ಲಿ, ಅದಕ್ಕಂತ ನಾನು ಆಸ್ತಿನಾಗ ಪಾಲು ತಗಳ್ಳಾದು ಬ್ಯಾಡ ಅಂತ ಅನ್ಕಂಡಿದ್ದೆ. ಇರೋ ಒಂದು ತವ್ರ ಮನೀನೂ ಕಳ್ಕಬೇಕಲ್ಲಪ್ಪ ಅಂತ ಅಳುನೇ ಬಂದಿತ್ತು. ಇಲ್ಲಿಗೆ ಬಂದ್ರೆ ನನ್ನ ಬರೀ ಕೈಲಿ ಯಾವತ್ತೂ ಕಳಿಸಿಲ್ಲ. ಆದ್ರ ದೇವ್ರು ದೊಡ್ಡೋನು ಅಂತದ್ದೇನು ನಡೀಲಿಲ್ಲ. ಗಂಡನ ಮನ್ಯಾಗ ಏನಾರ ಕಷ್ಟ ಆದ್ರ ನಮ್ ಅಣ್ಣಂದ್ರೆ ನೋಡಿಕೊಳ್ತೀವಿ ಅಂತ ಹೇಳಿದ್ಕ ನಾನೇ ಆಸ್ತಿನ ಬ್ಯಾಡ ಅಂತಂದೆ" ಎಂದರು.

ಲಕ್ಷ್ಮಿದೇವಿಯವರು ಒಂದು ಕಡೆ ಗಂಡನ ಮನೆಯನ್ನು ಮತ್ತು ಇನ್ನೊಂದು ಕಡೆ ತವರು ಮನೆಯನ್ನು ಉಳಿಸಿಕೊಳ್ಳುವ ಇಬ್ಬಂಧಿತನಕ್ಕೆ ಬಿದ್ದಿರುವುದು ಕಂಡುಬರುತ್ತದೆ. ಅಂದರೆ

ಲಕ್ಷ್ಮಿದೇವಿಯವರು ತಮ್ಮ ಸ್ವ ಇಚ್ಛೆಯಿಂದ ತವರು ಮನೆಯ ಆಸ್ತಿಯನ್ನು ಕೇಳಿಲ್ಲ. ಬದಲಾಗಿ ತನ್ನ ಗಂಡನ ಮನೆಯಲ್ಲಿನ ಹಿಂಸೆಯ ಕಾರಣವಾಗಿ ತವರು ಮನೆಯ ಆಸ್ತಿಯಲ್ಲಿ ಭಾಗವನ್ನು ಕೇಳಲು ಮುಂದಾಗಿದ್ದಾರೆ. ಇಲ್ಲಿ ಮುಖ್ಯವಾಗಿ ಲಕ್ಷ್ಮಿದೇವಿಯವರು ಕೌಟುಂಬಿಕ ಹಿಂಸೆಯನ್ನು ಅನುಭವಿಸಿರುವುದು ಮತ್ತು ಆ ಮೂಲಕ ತನ್ನ ಇಷ್ಟಕ್ಕೆ ವಿರುದ್ಧವಾಗಿ ತವರು ಮನೆಯ ಆಸ್ತಿಯಲ್ಲಿ ಪಾಲನ್ನು ಕೇಳಿರುವುದು ಕಂಡುಬರುತ್ತದೆ. ಹಾಗಾಗಿ ಕೌಟುಂಬಿಕ ಹಿಂಸೆ ಮತ್ತು ಆಸ್ತಿಯ ಒಡೆತನಕ್ಕೆ ನೇರವಾದಂತಹ ಸಂಬಂಧವಿರುವುದನ್ನು ಕಾಣಬಹುದಾಗಿದೆ. ಆಸ್ತಿಯ ವಿಚಾರವಾಗಿ ಗಂಡನಾದವನು ಹೆಂಡತಿಗೆ ಎಲ್ಲ ಬಗೆಯ ಹಿಂಸೆಗೆ ಒಳಪಡಿಸುವುದು ಹಲವು ಕುಟುಂಬಗಳಲ್ಲಿ ಕಾಣಬಹುದು. ವ್ಯವಸ್ಥೆಯಲ್ಲಿ ಇರುವಂತಹ ಎಲ್ಲಾ ನಿಯಮಗಳನ್ನು ರೂಪಿಸುವವನು ಪುರುಷನೇ ಆಗಿದ್ದರಿಂದಾಗಿ ಸಹಜವಾಗಿಯೇ ಕುಟುಂಬದಲ್ಲಿ ಎಲ್ಲವೂ ಅವನ ಮೂಗಿನ ನೇರಕ್ಕೆ ನಡೆಯುತ್ತವೆ. ಹಾಗಾಗಿಯೇ ಹಕ್ಕುಗಳೆಲ್ಲವೂ ಪುರುಷನದು ಮತ್ತು ಬಾಧ್ಯತೆಗಳೆಲ್ಲವೂ ಸ್ತ್ರೀಯರದು ಎಂದಾಗಿಬಿಟ್ಟಿದೆ. ಮಹಿಳೆಯರು ಹೆಚ್ಚಿನ ತಾರತಮ್ಯ ಮತ್ತು ಹಿಂಸೆಯನ್ನು ಅನುಭವಿಸುತ್ತಿರುವುದು ಕುಟುಂಬದಲ್ಲಿಯೇ. ಇದಕ್ಕೆ ಲಕ್ಷ್ಮಿದೇವಿಯವರ ಪ್ರಕರಣ ಹೊರತಾಗಿಲ್ಲ. ಹಾಗೆಯೇ ಲಕ್ಷ್ಮಿದೇವಿಯವರು ಗಂಡನ ಒತ್ತಾಯಕ್ಕಾಗಿ ತವರು ಮನೆಯ ಆಸ್ತಿಯನ್ನು ಕೇಳಿದ್ದರೂ ಸಹ ಲಕ್ಷ್ಮಿದೇವಿಯವರ ಅಣ್ಣ ಆಸ್ತಿಯನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳಲು ತಂತ್ರಗಳನ್ನು ರೂಪಿಸಿರುವುದು ಕಂಡುಬರುತ್ತದೆ. ಅಂದರೆ ವಿವಾಹದ ಸಂದರ್ಭದಲ್ಲಿ ಕೊಟ್ಟಂತಹ ವರದಕ್ಷಿಣೆ ಮತ್ತಿತರ ವಸ್ತುಗಳನ್ನು ಮಹಿಳೆಯರು ತಮಗೆ ನೀಡಿದ ಆಸ್ತಿಯೆಂದೇ ತಿಳಿದುಕೊಳ್ಳಲೇಬೇಕು ಎಂಬುದು ಅವರ ಮಾತಿನಲ್ಲಿ ಗೋಚರಿಸುತ್ತದೆ. ಮುಖ್ಯವಾಗಿ ವಿವಾಹದ ಸಂದರ್ಭವು ಮಹಿಳೆಯನ್ನು ಇನ್ನಿಲ್ಲದಂತೆ ಕಟ್ಟಿಹಾಕುತ್ತದೆ. ನಮ್ಮ ಸಂಸ್ಕೃತಿಯಲ್ಲಿ ವಿವಾಹವೇ ಹೆಣ್ಣಿನ ಅಂತಿಮ ಗುರಿ ಎಂಬ ಆದರ್ಶವನ್ನು ಹುಟ್ಟಿನಿಂದಲೇ ನಿರ್ಧರಿಸಲಾಗುತ್ತದೆ. ಹಾಗಾಗಿ ವಿವಾಹದ ಸಂದರ್ಭದಲ್ಲಿ ನೀಡುವ ವರದಕ್ಷಿಣೆಯು ತವರು ಮನೆಯ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ. ಹಾಗೂ ಅವರು ಆರ್ಥಿಕವಾಗಿ ಮುಂದುವರೆಯಲು ಬಿಡುವುದಿಲ್ಲ. ಸಮಾಜದಲ್ಲಿ ವರದಕ್ಷಿಣೆಯು ಒಂದು ಬಗೆಯ ಅಘೋಷಿತ ನಿಯಮವಾಗಿದೆ. ಇದರ ವಿರುದ್ಧ ಒಂದು ಕಾನೂನು ಇದೆಯಾದರೂ ಅದನ್ನು ಧಿಕ್ಕರಿಸಿ ವರದಕ್ಷಿಣೆಯನ್ನು ನೀಡುತ್ತಿರುವುದು ಮತ್ತು ಪಡೆಯುತ್ತಿರುವುದು ಕಂಡುಬರುತ್ತದೆ. ಆದರೆ ಇದು ಬಾಹ್ಯ ಪ್ರಪಂಚಕ್ಕೆ ಅಗೋಚರವಾಗಿರುತ್ತದೆ. ಈ ವರದಕ್ಷಿಣೆಯ ಕಾರಣವಾಗಿ ಮಹಿಳೆಯರು ತಮ್ಮ ತವರು ಮನೆಯ ಅಥವಾ ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಮದುವೆಯ ಸಂದರ್ಭದಲ್ಲಿ ಮಹಿಳೆಗೆ ನೀಡುವಂತಹ ಉಡುಗೊರೆ, ಒಡವೆಗಳು ಮತ್ತು ಮತ್ತಿತರ ವೆಚ್ಚಗಳ ಕಾರಣಗಳನ್ನು ಪುರುಷ ವ್ಯವಸ್ಥೆ ಮುಂದುಮಾಡಿ ಮಹಿಳೆಯರನ್ನು ವಂಚಿಸುತ್ತಿದೆ. ಈ ಕಾರಣಗಳನ್ನಿಟ್ಟುಕೊಂಡು ಮಹಿಳೆ ತವರು ಮನೆಯ ಆಸ್ತಿಯನ್ನು ನಿರಾಕರಿಸುವಂತೆ ಮಾಡುತ್ತದೆ. ಹಾಗೆ ಮಾಡಲು ಹಲವಾರು ತಂತ್ರಗಳನ್ನು ರೂಪಿಸುತ್ತದೆ. ಅಣ್ಣ–ತಂಗಿ ಸಂಬಂಧದ ನೆಲೆಯಲ್ಲಿ ಭಾವನಾತ್ಮಕವಾಗಿ ಮಹಿಳೆಯರನ್ನು ಸೆಳೆಯುತ್ತದೆ. ಆ ಮೂಲಕ ಮಹಿಳೆಯರಲ್ಲಿ ಒಂದು

ಭ್ರಮೆಯನ್ನು ನಿರ್ಮಿಸುತ್ತದೆ. ಹಾಗೆಯೇ ವಿವಾಹದ ನಂತರ ಮಹಿಳೆಯರಿಗೆ ಗಂಡನ ಮನೆಯೇ ಅಂತಿಮವಾಗಿಬಿಡುತ್ತದೆ. ಇದನ್ನು ಪಿತೃಪ್ರಧಾನ ವ್ಯವಸ್ಥೆ ಮಹಿಳೆಯರ ಮೇಲೆ ಹೇರಲ್ಪಟ್ಟಿರುತ್ತದೆ. ಆದರೆ ಆಸ್ತಿಯ ವಿಚಾರಕ್ಕೆ ಬಂದಾಗ ಅದೇ ಪಿತೃಪ್ರಧಾನ ವ್ಯವಸ್ಥೆ ತನ್ನ ಅನುಕೂಲಕ್ಕೆ ತಕ್ಕ ಹಾಗೆ ಮಹಿಳೆಯರನ್ನು ಬಳಸಿಕೊಳ್ಳುತ್ತದೆ. ಲಕ್ಷ್ಮಿದೇವಿಯವರು ಕೊನೆಗೆ ಆಸ್ತಿಯನ್ನು ನಿರಾಕರಿಸಿದುದರ ಹಿಂದೆ ಈ ಪಿತೃಪ್ರಧಾನ ವ್ಯವಸ್ಥೆಯ ಭಾವನಾತ್ಮಕ ನೆಲೆಯ ರಾಜಕಾರಣ ದೊಡ್ಡದಿದೆ.

“ಅನೇಕ ಹೆಂಗಸರ ಮಟ್ಟಿಗೆ ವರದಕ್ಷಿಣೆ ಎನ್ನುವುದು ತಮ್ಮ ತಂದೆಯ ಮನೆಯ ಆಸ್ತಿಯಲ್ಲಿ ತಮಗೆ ಸಿಗಬಹುದಾದ ಒಂದೇ ಒಂದು ಪಾಲು. ಹೆಂಗಸರಿಗೆ ಪಿತ್ರಾರ್ಜಿತ ಹಕ್ಕುಗಳು ಎನ್ನುವುದು ಕಾಗದದ ಮೇಲೆ ಮಾತ್ರ ಇರುವ ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವುದಾದರೂ ಸಂಪತ್ತಿನ ಮೇಲೆ ಅವರ ಹಕ್ಕು ಸ್ಥಾಪಿಸಬಹುದಾದರೆ ಅದು ವರದಕ್ಷಿಣೆ. ವರದಕ್ಷಿಣೆಯ ಮೇಲೆ ಹೆಣ್ಣಿಗಿರುವ ಹಕ್ಕನ್ನು ಸಮಾಜ ಗುರುತಿಸುತ್ತದೆಯಾದರೆ ಅವಳಿಗೆ ಪಿತ್ರಾರ್ಜಿತ ಆಸ್ತಿಯ ಮೇಲಿರುವ ಹಕ್ಕನ್ನು ಗುರುತಿಸುವುದಿಲ್ಲ. ನಿಜವಾದ ಸಮಸ್ಯೆ ಇರುವುದು ಹಣ, ಆಸ್ತಿಪಾಸ್ತಿಯಲ್ಲಲ್ಲ. ಬದಲಾಗಿ ಅವುಗಳನ್ನು ಯಾರು ನಿಯಂತ್ರಿಸುತ್ತಾರೆ ಎಂಬುದರಲ್ಲಿ. ಇವತ್ತಿನ ನಮ್ಮ ಸಮಾಜದಲ್ಲಿ ಆಸ್ತಿ ಹಣಕಾಸನ್ನು ಹೆಣ್ಣು ನಿಯಂತ್ರಸಲೆಂದು ಯಾರೂ ಬಯಸುವುದಿಲ್ಲ. ಬದಲಾಗಿ ಇದರ ನಿಯಂತ್ರಣವನ್ನು ತನ್ನ ಸಹೋದರರಿಗೋ, ಗಂಡನಿಗೋ ಒಪ್ಪಿಸಬೇಕು ಎಂಬುದನ್ನು ಎಲ್ಲರೂ ಅಪೇಕ್ಷಿಸುತ್ತಾರೆ. ಹೆಂಡತಿ ಎನ್ನಿಸಿಕೊಂಡವಳು ತನ್ನ ಬದುಕು ಮತ್ತು ಸ್ವತ್ತುಗಳನ್ನು ನಿಯಂತ್ರಸಬಲ್ಲ ವ್ಯಕ್ತಿಯಾಗಿ ಪರಿಗಣಿಸಲ್ಪಡುವುದಿಲ್ಲ. ವಾಸ್ತವದಲ್ಲಿ ಅವಳೇ ಒಂದು ಸ್ವತ್ತಾಗಿದ್ದಾಳೆ”[೧೭]. ಆದರೆ ಕಾನೂನು ಇತ್ತೀಚೆಗೆ ವರದಕ್ಷಿಣೆಯ ರೂಪದಲ್ಲಿ ಕೊಡುವ ವಸ್ತುಗಳನ್ನು ಮದುವೆಯಾದ ಮೂರು ತಿಂಗಳಲ್ಲಿ ವಧುವಿನ ಸುಪರ್ದಿಗೆ ನೀಡಬೇಕು ಎಂದು ಸುಪ್ರೀಂ ಕೋರ್ಟ್ ತೀರ್ಪು ನೀಡಿದೆ. ವರದಕ್ಷಿಣೆ ಸಾವಿನ ಪ್ರಕರಣಕ್ಕೆ ಸಂಬಂಧಿಸಿದಂತೆ ಬೆಂಗಳೂರಿನ ಎಂಜಿನಿಯರ್ ಬೊಬ್ಬಿ ರಾಮಕೃಷ್ಣ ರಾಜು ಯಾದವ್ ಅವರು ಸಲ್ಲಿಸಿದ್ದ ಮನವಿ ವಿಚಾರಣೆ ಸಂದರ್ಭದಲ್ಲಿ ನ್ಯಾಯಾಲಯ ಈ ನಿರ್ದೇಶನ ನೀಡಿದೆ.(ಪ್ರಜಾವಾಣಿ, ೨೭.೦೧.೨೦೧೬). ಹೀಗೆ ಕಾನೂನು ಮಹಿಳಾ ಪರವಾದಂತಹದ್ದಾಗಿದ್ದರೆ ವ್ಯವಸ್ಥೆಯಲ್ಲಿ ಮಹಿಳಾ ವಿರುದ್ಧವಾದ ಆಚರಣೆಗಳು ರೂಢಿಗತವಾಗಿವೆ.

**ಆ. ಸ್ಥಿರಾಸ್ತಿ ಚರಾಸ್ತಿಯಾಗುವುದು** : ಆಸ್ತಿಯನ್ನು ಮುಖ್ಯವಾಗಿ ಎರಡು ವಿಧದಲ್ಲಿ ಗುರುತಿಸಬಹುದಾಗಿದೆ. ಒಂದು ಸ್ಥಿರಾಸ್ತಿಯಾದರೆ ಮತ್ತೊಂದು ಚರಾಸ್ತಿಯಾಗಿದೆ. ಇಲ್ಲಿ ಚರಾಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದ ಮೆಟ್ಟಿಲೇರಿದಂತಹ ಉದಾಹರಣೆಗಳು ತುಂಬಾ ಕಡಿಮೆ. ಏಕೆಂದರೆ ಸ್ಥಿರವಾಗಿ ಒಂದು ಕಡೆ ಇರುವಂತಹದ್ದಲ್ಲ. ಇದನ್ನು ಸುಲಭವಾಗಿ ವರ್ಗಾಯಿಸಬಹುದಾಗಿದೆ. ಜೊತೆಗೆ ಇದೇ ವ್ಯಾಪ್ತಿಯಲ್ಲಿ ಬರುವಂತಹ ಕೆಲವು ಆಸ್ತಿಗಳಾದ ಇನ್ಸುರೆನ್ಸ್ ಪಾಲಿಸಿಗಳು, ಷೇರುಗಳು ಹಾಗೂ ಡಿಬೆಂಚರುಗಳು ಇವಗಳಿಗೆ ಈಗಾಗಲೇ

ವಾರಸುದಾರರನ್ನು ಮತ್ತು ನಾಮಿನಿಗಳನ್ನು ಸೂಚಿಸಲಾಗಿರುತ್ತದೆ. ಹಾಗಾಗಿ ಇವುಗಳಲ್ಲಿ ಪಾಲು ಕೇಳಲು ಯಾರೂ ಮುಂದೆ ಬರುವುದಿಲ್ಲ. ಈ ಕಾರಣಕ್ಕಾಗಿ, ಪುರುಷ ಪ್ರಧಾನ ವ್ಯವಸ್ಥೆ ಸ್ಥಿರಾಸ್ತಿಯನ್ನು ಚರಾಸ್ತಿಯನ್ನಾಗಿ ಪರಿವರ್ತಿಸಿ ಅದರ ಮೂಲಕ ತನ್ನ ಆಸ್ತಿಯ ಪ್ರಮಾಣವನ್ನು ಹೆಚ್ಚಿಸಿಕೊಳ್ಳುತ್ತಿದೆ. ಮುಖ್ಯವಾಗಿ ಈ ಉಪಾಯದ ಕಾರಣವಾಗಿ ಪಿತ್ರಾರ್ಜಿತವಾಗಿ ಬಂದಿರುವಂತಹ ಸ್ಥಿರಾಸ್ತಿಯನ್ನು ಚರಾಸ್ತಿಯ್ನನಾಗಿಸಿ ಕುಟುಂಬದಲ್ಲಿನ ಇತರೆ ಮಹಿಳೆಯರಿಗೆ ಅನ್ಯಾಯವನ್ನು ಮಾಡುತ್ತಿದೆ. ಅಂದರೆ ತಮ್ಮ ಒಡಹುಟ್ಟಿದವರಿಗೇ ಸೇರದಂತೆ ನೋಡಿಕೊಳ್ಳುತ್ತದೆ. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಸ್ವಾಮಿಹಳ್ಳಿ ಗ್ರಾಮದ ಈರಮ್ಮ ತನ್ನ ಅಣ್ಣನವರು ಮಾಡಿದ ಮೋಸಕ್ಕೆ ಬಲಿಯಾಗಿದ್ದಾಳೆ. ಇವರು ಮೂಲತಃ ತೋರಣಗಲ್ಲು ಗ್ರಾಮದವರು ಇವರ ತಂದೆ ಮಾಡಿದ ಆಸ್ತಿ ಸುಮಾರು ಹತ್ತು ಎಕರೆ ಜಮೀನು ಇದೆ ಹಾಗೆಯೇ ಒಂದು ಮನೆ ಕೂಡ ಇದೆ. ಇವರ ತಂದೆ ಇರುವಾಗಲೇ ಈರಮ್ಮನವರನ್ನು ಸ್ವಾಮಿಹಳ್ಳಿಯಲ್ಲಿ ತಮ್ಮ ಸಂಬಂಧಿಕರಲ್ಲಿಯೇ ವಿವಾಹವನ್ನು ಮಾಡಿ ಕೊಟ್ಟಿದ್ದಾರೆ. ತಂದೆಯ ಮರಣದ ನಂತರ ಈರಮ್ಮಳ ಅಣ್ಣ ಲಕ್ಷ್ಮಣ ಇರುವ ಆಸ್ತಿಯಲ್ಲಿ ೮ ಎಕರೆ ಜಮೀನನ್ನು ಮಾರಿಕೊಂಡು ಬಂದ ಹಣವನ್ನು ತನ್ನ ಹೆಂಡತಿಯ ಹೆಸರಲ್ಲಿ ಮತ್ತು ತನ್ನ ಹೆಸರಲ್ಲಿ ಬ್ಯಾಂಕಿನಲ್ಲಿ ಹೂಡಿಕೆ ಮಾಡಿದ್ದಾನೆ. ಹಾಗೆಯೇ ತನ್ನೆಲ್ಲಾ ಮಕ್ಕಳ ಹೆಸರಲ್ಲಿ ಪಾಲಿಸಿಗಳನ್ನು ಮಾಡಿಸಿದ್ದಾನೆ. ಹಾಗೆಯೇ ಒಂದು ಕಾರು ಮತ್ತು ಒಂದು ಬೈಕನ್ನು ಖರೀಧಿಸಿದ್ದಾನೆ. ಇರುವ ಸ್ಥಿರಾಸ್ತಿಯನ್ನು ಚರಾಸ್ತಿಯನ್ನಾಗಿ ಪರಿವರ್ತಿಸಿಕೊಂಡಿದ್ದಾನೆ. ಇವೆಲ್ಲವನ್ನೂ ಸಹ ತನ್ನ ತಂಗಿಗೆ ಗೊತ್ತಾಗದಂತೆ ಮಾಡಿಕೊಂಡಿದ್ದಾನೆ. ಈ ವಿಷಯಗಳೆಲ್ಲವನ್ನೂ ಬೇರೆಯವರ ಮೂಲಕ ತಿಳಿದುಕೊಂಡ ಈರಮ್ಮಳಿಗೆ ತುಂಬಾ ಬೇಜಾರಾಗಿ ತನ್ನ ಗಂಡನ ಹತ್ತಿರ ಹೇಳಿಕೊಂಡಿದ್ದಾಳೆ. ಈಕೆಯ ಗಂಡ ಎಂ.ಎ. ಪದವೀಧರ. ಹಾಗಾಗಿ ಆಸ್ತಿಯಲ್ಲಿ ಪಾಲು ಕೇಳಲು ಹೇಳಿದ್ದಾನೆ. ಅದರಂತೆ ಈರಮ್ಮ ತಂದೆಯ ಒಟ್ಟು ಆಸ್ತಿಯಲ್ಲಿ ಅರ್ದ ಪಾಲು ಕೊಡಲು ತನ್ನ ಅಣ್ಣನಿಗೆ ಕೇಳಿದ್ದಾಳೆ. ಆದರೆ ಅದಕ್ಕೆ ಒಪ್ಪಿಲ್ಲ. ಬದಲಾಗಿ ಇರೋದು ಎರಡು ಎಕರೆ ಮಾತ್ರ ಅದರಲ್ಲಿ ಅರ್ದಪಾಲು ಕೊಡುತ್ತೇನೆ. ಎಂದು ಹೇಳಿ ಕಳುಹಿಸಿದ್ದಾನೆ. ಇದಕ್ಕೆ ಒಪ್ಪದ ಈರಮ್ಮ ತನ್ನ ಗಂಡನ ಸಹಾಯದಿಂದ ಕೋರ್ಟಲ್ಲಿ ದಾವೆ ಹೂಡಿದ್ದಾರೆ. ಆದರೆ ನ್ಯಾಯಾಲಯ ನಂಬುವುದು ಸಾಕ್ಷಿಗಳನ್ನು. ಹಾಗಾಗಿ ಈರಮ್ಮಳ ಅಣ್ಣ ಲಕ್ಷ್ಮಣ ಎಲ್ಲಾ ದಾಖಲೆಗಳನ್ನು ಸರಿಯಾಗಿ ಹೊಂದಿಸಿಕೊಂಡಿದ್ದನಾದ್ದರಿಂದ ತೀರ್ಮಾನ ಆತನ ಪರವಾಗಿ ಹೊರ ಬೀಳುತ್ತದೆ. ಹಾಗಾಗಿ ಇರುವ ಎರಡು ಎಕರೆಯಲ್ಲಿ ಒಂದು ಎಕರೆ ಭೂಮಿಗೆ ತೃಪ್ತಿಪಟ್ಟುಕೊಳ್ಳಬೇಕಾದ ಅನಿಇವಾರ್ಯತೆಗೆ ಒಳಗಾಗಿದ್ದಾಳೆ. ಈ ಬಗೆಯಲ್ಲಿ ಅಣ್ಣ ಮೋಸ ಮಾಡಿದ ಎನ್ನುವ ಕಾರಣಕ್ಕೆ

ತವರು ಮನೆಯ ಸಂಬಂಧವನ್ನೇ ಕಡಿದುಕೊಂಡಿದ್ದಾರೆ. ಹೀಗೆ ಕುಟುಂಬದಲ್ಲಿನ ಆಸ್ತಿ ಎಲ್ಲಿ ಮಹಿಳೆಯರ ಪಾಲಾಗಿ ಬಿಡುತ್ತದೆಯೋ ಎಂಬ ಭಯದಿಂದ ಇರುವ ತಂದೆ ಒಟ್ಟು ಆಸ್ತಿಯಲ್ಲಿ ಕೆಲವು ಭಾಗವನ್ನೋ ಅಥವಾ ಎಲ್ಲಾ ಆಸ್ತಿಯನ್ನೋ ಆಸ್ತಿಯ ಬೇರೆ ರೂಪದಲ್ಲಿ ರೂಪಾಂತರಿಸುವುದನ್ನು ಕಾಣಬಹುದಾಗಿದೆ. ಅದರಲ್ಲಿಯೂ ಮುಖ್ಯವಾಗಿ ನ್ಯಾಯಾಲಯಗಳು ನೋಡುವುದು ಸಾಕ್ಷಾಧಾರಗಳನ್ನು. ಮತ್ತು ಸ್ಥಿರಾಸ್ತಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಹೋರಾಟ ಮಾಡಬಹುದು ಆದರೆ ಚರಾಸ್ತಿಯಲ್ಲಿ ಭಾಗ ಕೇಳಲು ಬರುವುದಿಲ್ಲ. ಏಕೆಂದರೆ ಚರಸ್ತಿಗಳೆಲ್ಲವುಗಳಿಗೆ ಈಗಾಗಲೇ ಅದರ ವಾರಸುದಾರರು ಯಾರೆಂಬುದನ್ನು ಗೊತ್ತುಪಡಿಸ ಲಾಗಿರುತ್ತದೆ. ಹಾಗಾಗಿಯೇ ಚರಾಸ್ತಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ದಾವೆ ಹೂಡಿರುವ ಪ್ರಕರಣಗಳು ತುಂಬಾ ವಿರಳವಾಗಿರುತ್ತವೆ. ಇಲ್ಲಿ ಈರಮ್ಮ ಮೋಸ ಹೋದದ್ದು ಈ ಕಾರಣದಿಂದಾಗಿಯೇ. ಲಕ್ಷ್ಮಣ ತಂದೆಯ ಆಸ್ತಿಯನ್ನು ಮಾರಿರುವುದು ಸತ್ಯ. ಆದರೆ ಮಾರಿದ ಹಣವನ್ನು ಈಗಾಗಲೇ ಹಂಚಿಕೆ ಮಾಡಿ ಅದರ ವಾರಸುದಾರರನ್ನೂ ಸಹ ಗೊತ್ತು ಪಡಿಸಿರುವುದು ಈರಮ್ಮಳಿಗೆ ಹಿನ್ನಡೆಯಾಗಲು ಕಾರಣವಾಯಿತು. ಹೀಗೆ ಕೊಪ್ಪಳ ಮತು ಬಳ್ಳಾರಿ ಜಿಲ್ಲೆಗಳಲ್ಲಿ ಹಲವಾರು ಪ್ರಕರಣಗಳು ಕಂಡುಬರುತ್ತವೆ. ಮುಖ್ಯವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಕಾರ್ಖಾನೆಗಳ ಸಂಖ್ಯೆ ಅಧಿಕವಾಗುತ್ತಾ ಸಾಗಿದಂತೆ, ಅವುಗಳಿಗಾಗಿ ಪಡೆದುಕೊಂಡ ಭೂಮಿಗಳನ್ನು ಪುರುಷರು ತಮ್ಮ ಕುಟುಂಬದ ಮಹಿಳೆಯರಿಗೆ ತಿಳಿಯದಂತೆ ಆ ಭೂಮಿಗಳನ್ನು ಮಾರಾಟ ಮಾಡುವಂತಹ ಸಂಗತಿಗಳು ಹೆಚ್ಚಾಗಿ ನಡೆದಿವೆ. ಹಾಗೆಯೇ ಇತ್ತೀಚೆಗೆ ಜಾರಿಯಾದ ಸ್ಮಾರ್ಟ್‌ಸಿಟಿ ಯೋಜನೆಯೂ ಸಹ ಭೂಮಿಯನ್ನು ಉಳಿಸಿಕೊಳ್ಳುವ ಪ್ರಕ್ರಿಯೆಯನ್ನು ಬದಲಾಯಿಸಿದೆ. ಅಂದರೆ ಕಾರ್ಖಾನೆಗಳ ಸ್ಥಾಪನೆಗಾಗಿಯೋ, ಮೆಡಿಕಲ್, ಇಂಜಿನಿಯರಿಂಗ್, ಐಟಿ ಉಧ್ಯಮಗಳ ಸ್ಥಾಪನೆಗಾಗಿಯೋ ಸರಕಾರಗಳು ಭೂಮಿಯನ್ನು ಖರೀಧಿಸುವ ಅಗತ್ಯತೆ ಇರುತ್ತದೆ. ಅಂತಹ ಸಂದರ್ಭದಲ್ಲಿ ಭೂಮಿಯ ದಾಖಲೆಗಳನ್ನು ಯಾರು ಒದಗಿಸಿ ಕೊಡುತ್ತಾರೋ ಅವರಿಗೆ ಹಣವನ್ನು ಸಮದಾಯ ಮಾಡುತ್ತದೆ. ಇಲ್ಲಿ ಭೂಮಿಯ ದಾಖಲೆಗಳು ಪುರುಷನ ಸುಪರ್ದಿಯಲ್ಲಿರುತ್ತವೆ. ಆದ್ದರಿಂದ ಪುರುಷರು ಮಹಿಳೆಯರಿಗೆ ತಿಳಿಯದಂತೆ ಭೂಮಿಯನ್ನು ಮಾರಾಟ ಮಾಡಿ ಅದರಿಂದ ಬಂದಂತಹ ಹಣವನ್ನು ಸ್ವಯಾರ್ಜಿತ ಹಣವೆಂಬಂತೆ ಬ್ಯಾಂಕ್‌ಗಳಲ್ಲಿ ಠೇವಣಿ ರೂಪದಲ್ಲಿಡುವುದರ ಮೂಲಕ ತಮ್ಮದಾಗಿಸಿಕೊಳ್ಳುತ್ತಾರೆ. ಹೀಗೆ ಸ್ಥಿರಾಸ್ತಿಯಾಗಿದ್ದ ಭೂಮಿಯು ಹಣದ ರೂಪವನ್ನು ಪಡೆದು ಚರಾಸ್ತಿಯಾಗುವುದರ ಮೂಲಕ ಪುರುಷನ ಸ್ವತ್ತಾಗುತ್ತದೆ. ಇದರಿಂದ ಮಹಿಳೆ ದೂರವೇ ಉಳಿಯಲ್ಪಡುತ್ತಾಳೆ. ಈ

ಬಗೆಯ ಪುರುಷ ರಾಜಕಾರಣ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ದೂರವಿರುವಂತೆ ಮಾಡುತ್ತದೆ. ಇದರ ಅಂಕಿ ಸಂಖ್ಯೆಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ಕೋಷ್ಟಕ -೬.೨.೪**

**ಅರ್ಥಿಕ ಕಾರಣಗಳು**

| ಆರ್ಥಿಕ ಕಾರಣ | ಹೌದು | | ಗೊತ್ತಿಲ್ಲ | |
|---|---|---|---|---|
| ವಿವಾಹದ ಖರ್ಚನ್ನು ಮುಂದುಮಾಡುವುದು | ೨೨೦ | ೭೩.೩೩% | ೮೦ | ೨೬.೬೬% |
| ಸ್ಥಿರಾಸ್ತಿ ಚರಾಸ್ತಿಯಾಗುವುದು | ೮೮ | ೨೯.೩೩% | ೨೧೨ | ೭೦.೬೬% |




**ರೇಖಾ ಚಿತ್ರ ೬.೨.೪ ಅರ್ಥಿಕ ಕಾರಣಗಳು**

ವಿವಾಹದ ಸಂದರ್ಭದಲ್ಲಿ ನೀಡುವಂತಹ ಒಡವೆಗಳಾಗಿರಬಹುದು, ಹಣವಾಗಿರ ಬಹುದು ಇವುಗಳೇ ಹೆಣ್ಣಿಗೆ ಆಸ್ತಿಯಾಗಿರುತ್ತವೆ. ಮುಖ್ಯವಾಗಿ ಆ ಸಂಧರ್ಭದಲ್ಲಿ ಖರ್ಚಾಗುವ ವೆಚ್ಚವನ್ನು ಹೆಣ್ಣಿನ ಮೇಲೆಯೇ ಹಾಕಲಾಗುತ್ತದೆ. ಹಾಗಾಗಿ ಈ ಅಂಶವನ್ನು ಒಪ್ಪಿಕೊಂಡ ಮಹಿಳೆಯರ ಸಂಖ್ಯೆ ೨೨೦ರಷ್ಟಿದೆ. ಅಂದರೆ ಶೇ.೭೩.೩೩ರಷ್ಟು ಮಹಿಳೆಯರು ಇದನ್ನು ತೊಡಕಾಗಿ ಭಾವಿಸಿದ್ದಾರೆ. ಮಹಿಳೆಗೆ ವಿವಾಹ ಮಾಡಿಕೊಡುವುದರ ಮೂಲಕ ಮತ್ತು ಆ ಸಂದರ್ಭದಲ್ಲಿ ಮಾಡಲ್ಪಡುವ ಎಲ್ಲಾ ಖರ್ಚುವೆಚ್ಚಗಳನ್ನು ಮಹಿಳೆಯರ ಮೇಲೆ ಹೊರಿಸುವುದರ

ಮೂಲಕ ಮಹಿಳೆಯನ್ನು ಆ ಕುಟುಂಬದಿಂದ ಸಂಪೂರ್ಣವಾಗಿ ಹೊರಗಿಡಲಾಗುತ್ತದೆ. ಆ ಮಹಿಳೆಯೇನಾದರೂ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ಬಂದರೆ ಆಗ "ನೀನ್ ಮದ್ವ್ಯಾಗ ಬಾಳ ಖರ್ಚು ಆಗ್ಯಾದ, ಮತ್ತೆ ವರದಕ್ಷಿಣೆ ಕೊಟ್ಟೇವಿ. ಬಂಗಾರ ಹಾಕೀವಿ. ಅದೆಲ್ಲಾ ಸಾಕಾಗ್ಲಿಲ್ಲ ಅಂತೇಳಿ ನೀನು ಬಂದಾಗೆಲ್ಲಾ ಹೊಸ ಹೊಸ ಸೀರಿ ತಂದು ಉಡ್ಸಿ ಕಳ್ಸೀವಿ. ಅಂತಾದ್ರಾಗ ನೀನು ಮತ್ತೆ ಆಸ್ತಿನಾಗ ಭಾಗ ಕೇಳ್ತಿಯಲ್ಲ". ಎಂಬಂತಹ ಮಾತುಗಳನ್ನು ಎದುರಿಸ ಬೇಕಾಗುತ್ತದೆ. ಹಾಗಾಗಿ ಇದನ್ನು ಎದುರಿಸಲಾಗದೇ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗುತ್ತಿದ್ದಾರೆ.

ಸ್ಥಿರಾಸ್ತಿಯನ್ನು ಚರಾಸ್ತಿಯನ್ನಾಗಿ ಮಾಡಿಕೊಳ್ಳುವುದರ ಮೂಲಕ ಪುರುಷರು ತಮ್ಮ ಪಿತ್ರಾರ್ಜಿತ ಆಸ್ತಿಯ ಬಹುಭಾಗವನ್ನು ತಮ್ಮ ಹೆಸರಲ್ಲಿ ಉಳಿಸಿಕೊಳ್ಳುವಂತಹ ಪ್ರಕ್ರಿಯೆ ನಡೆಯುತ್ತಿದೆ. ಈ ಕಾರಣಕ್ಕಾಗಿ ಪಿತ್ರಾರ್ಜಿತ ಆಸ್ತಿಯಿಂದ ವಂಚಿತರಾಗಿರುವ ಮಹಿಳೆಯರ ಸಂಖ್ಯೆ ೮೮ರಷ್ಟಿದೆ. ಅಂದರೆ ಶೇಕಡಾ ೨೯.೩೩ರಷ್ಟು ಮಹಿಳೆಯರು ಈ ಬಗೆಯ ತೊಡಕನ್ನು ಅನುಭವಿಸಿರುವುದನ್ನು ಒಪ್ಪಿಕೊಂಡಿದ್ದಾರೆ. ಶೇಕಡಾ ೭೦ರಷ್ಟು ಮಹಿಳೆಯರಿಗೆ ಈ ವಿಷಯದ ಬಗೆಗೆ ಗೊತ್ತಿಲ್ಲ ಎಂಬ ಮಾಹಿತಿಯನ್ನು ನೀಡಿದ್ದಾರೆ. ಅಂದರೆ ಈ ಪ್ರಕ್ರಿಯೆ ನಡೆಯುವುದು ಇವರಿಗೆ ತಿಳಿದೇ ಇಲ್ಲ ಎಂಬುದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಸ್ಥಿರಾಸ್ತಿಯು ಇಂದು ನಾನಾ ವಿಭಾಗಗಳಾಗಿ ತುಂಡಾಗುತ್ತಾ ಸಾಗಿ ಚರಾಸ್ತಿಯ ಸ್ವರೂಪವನ್ನು ಪಡೆದುಕೊಂಡು ಪುರುಷ ವ್ಯವಸ್ಥೆಯ ಹಿಡಿತದಲ್ಲಿರುವುದನ್ನು ಕಾಣಬಹುದು. ಹೀಗೆ ಕಾನೂನು ಅನುಷ್ಠಾನದ ಸಂದರ್ಭದಲ್ಲಿ ಮಹಿಳೆಯರು ಆಸ್ತಿಯನ್ನು ಪಡೆಯಲು ಹಲವು ಅಂಶಗಳು ತೊಡಕಾಗಿ ಮಾರ್ಪಟ್ಟಿರುವುದು ಕಂಡುಬಂದಿದೆ. ಇವೆಲ್ಲಾ ಅಂಶಗಳೂ ಸಹ ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ಹೆಚ್ಚಿಸುವ ಮತ್ತು ಸ್ಥಿರೀಕರಿಸುವಂತಹವುಗಳಾಗಿವೆ. ಆ ಕಾರಣಕ್ಕಾಗಿ ಈ ಎಲ್ಲಾ ಕಾರಣಗಳನ್ನು ಮಹಿಳೆಯರು ಧಿಟ್ಟತನದಿಂದ ಎದುರಿಸಬೇಕಾದ ಅನಿವಾರ್ಯತೆ ಇದೆ. ಹಾಗೆಯೇ ಆ ಬಗೆಯಲ್ಲಿ ಮಹಿಳೆಯರನ್ನು ಸಜ್ಜುಗೊಳಿಸಬೇಕಾದ ಸಂದರ್ಭ ಎದುರಾಗಿರುವುದನ್ನು ಕಾಣಬಹುದಾಗಿದೆ.

**೬.೨.೫. ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು**

ನ್ಯಾಯ ವ್ಯವಸ್ಥೆಯು ಕೆಲವು ಸಂದರ್ಭಗಳಲ್ಲಿ ಹಲವಾರು ತೊಡಕುಗಳನ್ನು ಎದುರಿಸುತ್ತದೆ. ಮುಖ್ಯವಾಗಿ ನ್ಯಾಯ ವ್ಯವಸ್ಥೆಯನ್ನು ಎರಡು ನೆಲೆಯಲ್ಲಿ ಗುರುತಿಸಿಕೊಳ್ಳಲಾಗಿದೆ, ಒಂದು ಕಾನೂನು ಬದ್ಧ ನ್ಯಾಯ ವ್ಯವಸ್ಥೆ, ಎರಡು ಸ್ಥಳೀಯ ನ್ಯಾಯ ವ್ಯವಸ್ಥೆ. ಈ ಎರಡು ವ್ಯವಸ್ಥೆಗಳಲ್ಲಿನ ತೊಡಕುಗಳ ಕಾರಣವಾಗಿ ಮಹಿಳೆಯರು ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿರುವುದು ಕಂಡು ಬರುತ್ತದೆ. ಅಂದರೆ ವ್ಯವಸ್ಥೆಯಲ್ಲಿ ಮಹಿಳೆಯರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪುರುಷ ವ್ಯವಸ್ಥೆ ಯಾವಾಗಲೂ ಹವಣಿಸುತ್ತಿರುತ್ತದೆ. ಇಂತಹ ಸಂದರ್ಭದಲ್ಲಿ ಮಹಿಳೆಯರು ತಮಗೆ ಸಂವಿದಾನ ಬದ್ಧವಾಗಿ ದೊರೆಯಬಹುದಾದ ತಮ್ಮ ಹಕ್ಕುಗಳನ್ನು ಕೇಳಿದರೆ ಅವರ ಪ್ರಾಣಕ್ಕೇ ಅಪಾಯವನ್ನು ತಂದುಕೊಳ್ಳುವಂತಹ ಸಂಗತಿಗಳು

ಕಂಡುಬರುತ್ತವೆ. ಕೆಲವು ಸಲ ಸಿವಿಲ್ ಕೇಸ್‌ಗಳ ಅಡಿಯಲ್ಲಿನ ವಿಷಯಗಳು, ಕ್ರಿಮಿನಲ್ ಕೇಸ್‌ಗಳ ಅಡಿಯಲ್ಲಿ ನ್ಯಾಯತೀರ್ಮಾನಗಳು ನಡೆಯುತ್ತವೆ. ಸ್ಥಳೀಯ ಪಂಚಾಯ್ತಿಗಳ ಸುಪರ್ದಿಗೆ ಬರುವ ಪ್ರಕರಣಗಳ ತೀರ್ಮಾನಗಳು ಪುರುಷ ಪರವಾಗಿಯೇ ಇತ್ಯರ್ಥವಾಗುತ್ತವೆ. ಇಂತಹ ಸಂದರ್ಭದಲ್ಲಿ ಮಹಿಳೆಯನ್ನು ವಂಚಿಸಲು ಪುರುಷ ವ್ಯವಸ್ಥೆಗೆ ಸುಲಭ ಮಾರ್ಗೋಪಾಯಗಳು ದೊರೆಯುತ್ತವೆ. ಹಾಗಾಗಿ ನ್ಯಾಯಾಂಗ ವ್ಯವಸ್ಥೆಯಲ್ಲಿನ ಕೆಲವು ತೊಡಕುಗಳು ಮಹಿಳೆಯರು ತಮ್ಮ ಹಕ್ಕುಗಳಿಂದ ವಂಚಿತರಾಗುವಂತೆ ಮಾಡುತ್ತಿವೆ. ಮುಖ್ಯವಾಗಿ ಈ ಬಗೆಯ ಹಲವು ಪ್ರಕರಣಗಳು ಕಂಡುಬರುತ್ತವೆ. ನ್ಯಾಯ ವ್ಯವಸ್ಥೆಯ ತೊಡಕುಗಳನ್ನು ಮುಖ್ಯವಾಗಿ ಮೂರು ನೆಲೆಗಳಲ್ಲಿ ಗುರುತಿಸಬಹುದು. ಅ. ನ್ಯಾಯ ಪ್ರಕ್ರಿಯೆಯಲ್ಲಿನ ತೊಡಕುಗಳು ಆ. ಅಪರಾಧ ತಡೆ ವಿಭಾಗದ ತೊಡಕುಗಳು ಇ. ಸ್ಥಳೀಯ ಪಂಚಾಯಿತಿಗಳಲ್ಲಿನ ತೊಡಕುಗಳು. ಇವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ನ್ಯಾಯ ಪ್ರಕ್ರಿಯೆಯಲ್ಲಿನ ತೊಡಕುಗಳು**

ಮಹಿಳೆಯರು ಕಾನೂನು ಬದ್ಧವಾಗಿ ಆಸ್ತಿಹಕ್ಕನ್ನು ಪಡೆಯಲು ನ್ಯಾಯಾಲಯದ ಮೆಟ್ಟಿಲೇರಿದಾಗ ಪ್ರಕರಣ ದಾಖಲಾದಂದಿನಿಂದ ನ್ಯಾಯ ತೀರ್ಮಾನವಾಗುವ ವರೆಗಿನ ಪ್ರಕ್ರಿಯೆಯು ಹಲವು ಹಂತಗಳನ್ನು ಹೊಂದಿರುವಂತದು. ಈ ಹಂತಗಳಲ್ಲಿ ಮಹಿಳೆಯರು ಕುಟುಂಬದವರಿಂದ ಮತ್ತು ವಕೀಲರುಗಳಿಂದ ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅಂದರೆ ನ್ಯಾಯಾಲಯಗಳು ಪ್ರಕರಣಗಳನ್ನು ಇತ್ಯರ್ಥ ಮಾಡಲು ನಿರೀಕ್ಷಿಸುವುದು ದಾಖಲೆಗಳನ್ನು. ಈ ದಾಖಲೆಗಳನ್ನು ಸೂಕ್ತವಾಗಿ ಸರಿಯಾದ ಸಮಯಕ್ಕೆ ಒದಗಿಸುವ ಪ್ರಕ್ರಿಯೆಯಲ್ಲಿ ಮಹಿಳೆಯರು ಹಲವು ತೊಂದರೆಗಳಿಗೆ ಒಳಗಾಗುತ್ತಿದ್ದಾರೆ. ಜೊತೆಗೆ ಮಹಿಳೆಯರು ದಾಖಲೆಗಳಿಂದ ವಂಚಿತರಾಗುವಂತೆ ಕುಟುಂಬದ ಸದಸ್ಯರು ತಂತ್ರಗಳನ್ನು ಹೂಡುತ್ತಾರೆ. ಮಹಿಳೆಯರು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದ ಮೆಟ್ಟಿಲೇರಿದ ಸಂದರ್ಭದಲ್ಲಿ ವಾದಿ ಮತ್ತು ಪ್ರತಿವಾದಿಯ ಪರ ವಕೀಲರುಗಳು ಕೇವಲ ತಮ್ಮ ಕೇಸನ್ನು ಜಯಿಸುವ ನಿಟ್ಟಿನಲ್ಲಿ ದಾಖಲೆಗಳನ್ನು ನ್ಯಾಯಾಲಯಕ್ಕೆ ಒದಗಿಸುವುದರಲ್ಲಿ ತೊಡಗುತ್ತಾರೆ. ಆದರೆ ಇಲ್ಲಿ ಅವರಿಗೆ ಯಾವುದೇ ಬಗೆಯ ಲಿಂಗ ಸೂಕ್ಷ್ಮತೆಯ ಅರಿವು ಇಲ್ಲದಿರುವುದು ಕಂಡು ಬರುತ್ತದೆ. ಹಾಗಾಗಿ ಕೇಸನ್ನ ಗೆಲ್ಲಿಸಿಕೊಡುವುದಕ್ಕಷ್ಟೇ ಮಹತ್ವವನ್ನು ಕೊಡುತ್ತಾರೆಯೇ ಹೊರತು, ಮಹಿಳಾ ಪರವಾದಂತಹ ಆಲೋಚನೆಗಳನ್ನೂ ಮಾಡುವುದರಿಂದ ದೂರ ಉಳಿದಿರುತ್ತಾರೆ. ಈ ಬಗೆಯ ಹಲವು ಪ್ರಕರಣಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದ್ದು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಅ. ದಾಖಲೆಗಳಿಲ್ಲದಂತೆ ಮಾಡುವುದು :** ಎಷ್ಟೋ ಸಂದರ್ಭಗಳಲ್ಲಿ ಮಹಿಳೆಯರು ತಂದೆಯ ಆಸ್ತಿಯಲ್ಲಿ ಪಾಲು ಕೇಳಿ ನ್ಯಾಯಾಲಯದ ಮೆಟ್ಟಿಲೇರಿದ್ದರೂ ಸರಿಯಾದ ದಾಖಲೆಗಳನ್ನು ಒದಗಿಸದೇ ನಿರಾಸೆಯನ್ನು ಅನುಭವಿಸಿರುವುದು ಕಂಡುಬರುತ್ತದೆ. ಏಕೆಂದರೆ ನ್ಯಾಯಾಲಯಗಳು ಸಾಕ್ಷಿಗಳಾಗಿ ಪರಿಗಣಿಸುವುದು ದಾಖಲೆಗಳನ್ನು ಮಾತ್ರ, ಹಾಗಾಗಿ ಈ ದಾಖಲೆಗಳನ್ನು

ನ್ಯಾಯಾಲಯಕ್ಕೆ ಒದಗಿಸದೇ ಬಹಳಷ್ಟು ಮಹಿಳೆಯರು ತಮ್ಮ ತಂದೆಯ ಅಥವಾ ಗಂಡನ ಆಸ್ತಿಯಿಂದ ವಂಚಿತರಾಗಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಮುಖ್ಯವಾಗಿ ಪುರುಷ ವ್ಯವಸ್ಥೆ ಇರುವ ನೈಜ ದಾಖಲೆಗಳನ್ನು ಇಲ್ಲದಂತೆ ಮಾಡಿ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ದೊರೆಯದಂತೆ ಮಾಡಿದೆ. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಗ್ರಾಮದ ಶಕುಂತಲಮ್ಮನವರದು. ಇವರು ತನ್ನ ಗಂಡನ ಆಸ್ತಿಯನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಇದಕ್ಕೆ ಕಾರಣ ನಿಖರವಾದ ದಾಖಲೆಗಳನ್ನು ಒದಗಿಸದೇ ಇರುವುದು. ಅಂದರೆ ಇವರ ವಿವಾಹವಾಗಿ ಎರಡು ವರ್ಷಕ್ಕೆ ಗಂಡನಾದ ಚಂದ್ರಪ್ಪ ಮರಣಿಸಿದ್ದಾನೆ. ಇವರಿಗೆ ಇಬ್ಬರು ಮಕ್ಕಳು. ಪತಿ ಮರಣಿಸಿದ ನಂತರ ಕುಟುಂಬದಲ್ಲಿ ಜೀವನ ನಡೆಸುವುದು ತುಂಬಾ ಕಷ್ಟವಾಗಿಬಿಟ್ಟಿದೆ. ಹಾಗಾಗಿ ಮಾವನ ಆಸ್ತಿಯಲ್ಲಿ ತನ್ನ ಗಂಡನಿಗೆ ಸೇರಬೇಕಾದ ಆಸ್ತಿಯ ಪಾಲನ್ನು ಕೇಳಿದ್ದಾಳೆ. ಆದರೆ ಚಂದ್ರಪ್ಪನ ಅಣ್ಣ ನಾಗರಾಜ ಇದನ್ನು ಕೊಡಲು ನಿರಾಕರಿಸಿದ್ದಾನೆ. ಮಾವನ ಆಸ್ತಿ ಇರುವುದು ಐದು ಎಕರೆ ಜಮೀನು ಮಾತ್ರ ಇದನ್ನು ಇಬ್ಬರು ಮಕ್ಕಳಿಗೆ ಹಂಚಿ, ಉಯಿಲು ಬರೆದಿಟ್ಟಿದ್ದರು. ಆದರೆ ಬರೆದಿಟ್ಟ ಉಯಿಲು ಪತ್ರ ಅಣ್ಣನಾದ ನಾಗರಾಜನಲ್ಲಿತ್ತು. ಹಾಗಾಗಿ ನಾಗರಾಜ ಶಕುಂತಲಮ್ಮಳಿಗೆ ಆಸ್ತಿಯ ಭಾಗವನ್ನು ಕೊಡುವುದಿಲ್ಲ ಎಂದು ಹೇಳಿದಾಗ. ಶಕುಂತಲಮ್ಮ ನ್ಯಾಯಾಲಯದ ಮೆಟ್ಟಿಲೇರಿದ್ದಾಳೆ. ಆದರೆ ನ್ಯಾಯಾಲಯದಲ್ಲಿ ತನ್ನ ಮಾವ ಬರೆದಿಟ್ಟ ಉಯಿಲು ಪತ್ರವನ್ನು ಸಲ್ಲಿಸಲು ಸಾಧ್ಯವಾಗದೇ ನಿರಾಸೆಯನ್ನು ಅನುಭವಿಸಿದ್ದಾಳೆ. ಪ್ರತಿಯಾಗಿ ನಾಗರಾಜ ತನ್ನ ತಂದೆ ಸಾಯುವಾಗ ತನ್ನೊಬ್ಬನಿಗೇ ಆಸ್ತಿಯನ್ನು ಪರೆದಿಟ್ಟಿದ್ದಾನೆ. ಹಾಗಾಗಿ ಆಸ್ತಿಯು ನನಗೇ ಸೇರಬೇಕು. ಇದರಲ್ಲಿ ಯಾರಿಗೂ ಪಾಲು ಸಿಗುವುದಿಲ್ಲ ಎಂದು ವಾದಿಸಿ. ತನ್ನ ತಂದೆ ಬರೆದಿಟ್ಟ ಸುಳ್ಳು ದಾಖಲೆ ಪತ್ರವನ್ನು ನ್ಯಾಯಾಲಯದಲ್ಲಿ ಹಾಜರು ಪಡಿಸಿದ್ದಾನೆ. ಇದನ್ನು ಒಪ್ಪಿದ ನ್ಯಾಯಾಲಯ ಆಸ್ತಿಯ ಮೇಲಿನ ಸಂಪೂರ್ಣ ಹಕ್ಕನ್ನು ನಾಗರಾಜನಿಗೇ ಸೇರಬೇಕು ಎಂದು ತೀರ್ಮಾನಿಸಿದೆ. ಹಾಗಾಗಿ ಶಕುಂತಲಮ್ಮ ತನ್ನ ಗಂಡನ ಆಸ್ತಿಯಿಂದ ವಂಚಿತರಾಗಿದ್ದಾರೆ. ಹೀಗೆ ಮಹಿಳೆಯರು ನ್ಯಾಯ ಕೇಳಿ ನ್ಯಾಯಾಲಯದ ಮೆಟ್ಟಿಲೇರಿದರೂ ಸಹ ಸರಿಯಾದ ದಾಖಲೆಗಳಿಲ್ಲದೇ ಆಸ್ತಿ ಪಡೆಯುವುದರಿಂದ ವಂಚಿತರಾಗಿರುವ ಹಲವು ಪ್ರಕರಣಗಳು ದೊರೆಯುತ್ತವೆ. ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆಯೂ ಇದೇ ಪರಿಸ್ಥಿತಿ ಮುಂದುವರೆಯುತ್ತದೆ. ಮುಖ್ಯವಾಗಿ ಇಲ್ಲಿ ನ್ಯಾಯಾಲಯಗಳು ನಂಬುವುದು ದಾಖಲೆಗಳನ್ನು. ಮುಖ್ಯವಾಗಿ ಇವುಗಳು ಪುರುಷನ ಅಧೀನ ದಲ್ಲಿರುತ್ತವೆ. ಹಾಗಾಗಿ ಅವರಿಂದ ದಾಖಲೆಗಳನ್ನು ಹೊರ ತರಬೇಕೆಂದರೆ ಅಅದು ಸಾಹಸವೇ ಸರಿ. ಹಾಗಾಗಿ ಪುರುಷ ವ್ಯವಸ್ಥೆ ಪರಿಸ್ಥಿತಿಯನ್ನು ತನಗೆ ಹೇಗೆ ಬೇಕೋ ಹಾಗೆ ಬದಲಾಯಿಸಿ ಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಹಾಗಾಗಿ ಸರ್ವಾಧಿಕಾರಿಯಂತೆ ವರ್ತಿಸುತ್ತಾನೆ. ಇದು ಮಹಿಳೆಯರಿಗೆ ಅಸಾಧ್ಯವಾಗುತ್ತದೆ. ಆದರೆ ಅವರಿಗೆ ವ್ಯವಸ್ಥೆಯಲ್ಲಿ ಸ್ವಾತಂತ್ರ್ಯವಿಲ್ಲ. ಹಾಗಾಗಿ ಇದು ಅವರಿಂದ ಸಾಧ್ಯವಿಲ್ಲ ಎಂಬ ಪರಿಸ್ಥಿತಿ ನಿರ್ಮಾಣವಾಗಿಬಿಟ್ಟಿದೆ. ಹಲವು

ಸಂದರ್ಭಗಳಲ್ಲಿ ತಾವು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಕೇಳುವುದು ನ್ಯಾಯೋಚಿತವಾಗಿದ್ದರೂ ಸಹ, ಪಡೆಯುವಲ್ಲಿ ವಿಫಲರಾಗುತ್ತಿದ್ದಾರೆ. ಇದೊಂದು ಬಹುದೊಡ್ಡ ತೊಡಕಾಗಿ ಪರಿಣಮಿಸಿದೆ.

**ಅಪರಾಧ ತಡೆ ವಿಭಾಗದ ತೊಡಕುಗಳು**

ವ್ಯವಸ್ಥೆಯಲ್ಲಿ ಅಪರಾಧ ಕಂಡು ಬಂದಾಗ ಅಪರಾಧ ತಡೆ ವಿಭಾಗಗಳು ಅವುಗಳನ್ನು ತಡೆಯುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಆಸ್ತಿ ಹಕ್ಕಿನ ಸಂದರ್ಭದಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಕೇಳಿದಾಗ ಅಂತಹ ಸಂದರ್ಭದಲ್ಲಿ ಅವರ ಮೇಲೆ ನಾನಾ ಬಗೆಯ ಹಲ್ಲೆಗಳು ನಡೆಯುವ ಸಾಧ್ಯತೆ ಇರುತ್ತದೆ. ಹಾಗೇಯೇ ಕೇಸ್‌ಗಳು ನ್ಯಾಯಾಲಯದ ಮೆಟ್ಟಿಲೇರಿದಾಗ ನ್ಯಾಯಾಲಯದಲ್ಲಿ ಮಹಿಳೆಯರ ಪರ ನ್ಯಾಯ ತೀರ್ಮಾನವಾದಂತಹ ಸಂದರ್ಭದಲ್ಲಿ, ಆಸ್ತಿಯ ಮೇಲಿನ ಹಕ್ಕನ್ನು ಚಲಾಯಿಸಲು ವ್ಯವಸ್ಥೆ ಬಿಡುವುದಿಲ್ಲ. ಬದಲಾಗಿ ಹಲವು ಹಿಂಸೆಗೆ ಗುರಿ ಮಾಡುತ್ತದೆ. ಇಂತಹ ಸಂದರ್ಭಗಳಲ್ಲಿ ಅಪರಾಧ ತಡೆ ವಿಭಾಗಗಳು ಹೆಚ್ಚಿನ ರೀತಿಯಲ್ಲಿ ಕಾರ್ಯ ನಿರ್ವಹಿಸಬೇಕಾದ ಅನಿವಾರ್ಯತೆ ಇದೆ. ಈ ಹಿನ್ನಲೆಯಲ್ಲಿ ಮಹಿಳೆಯರು ತಮ್ಮ ಆಸ್ತಿ ಹಕ್ಕನ್ನು ಪಡೆಯಲು ಹಲವು ತೊಡಕುಗಳನ್ನು ಎದುರಿಸುತ್ತಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ. ಅ) ಜೀವ ಬೆದರಿಕೆಯನ್ನು ಹಾಕುವುದು ಆ) ಕೊಲೆ ಮಾಡುವುದು ಇ) ದಯಾಮರಣ ಕೇಳಿದ ಪ್ರಕರಣಗಳು ಈ ಎಲ್ಲಾ ಅಂಶಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಅ) ಜೀವ ಬೆದರಿಕೆಯನ್ನು ಹಾಕುವುದು :** ಮಹಿಳೆಯರು ತಮ್ಮ ತಂದೆಯ ಆಸ್ತಿಯನ್ನು ನಿರಾಕರಿಸುವಂತೆ ಮಾಡಲು ಪಿತೃಪ್ರಧಾನ ವ್ಯವಸ್ಥೆಗೆ ಇದೂ ಕೂಡ ಒಂದು ಅಸ್ತ್ರ. ಮಹಿಳೆಯರನ್ನು ಮೊದಲು ಭಾವನಾತ್ಮಕತೆಗೆ ಒಳಪಡಿಸುವುದರ ಮೂಲಕ ಅವರನ್ನು ವಂಚಿಸುವ ಕೆಲಸಕ್ಕೆ ಮುಂದಾಗುತ್ತದೆ. ಇದಕ್ಕೆ ಮಹಿಳೆಯರು ಒಳಗಾಗದಿದ್ದಾಗ ಅವರ ಮೇಲೆ ಪ್ರಯೋಗಿಸುವ ಮತ್ತೊಂದು ಅಸ್ತ್ರವೇ ಬೆದರಿಸುವುದು. ಮುಖ್ಯವಾಗಿ ಬೆದರಿಸುವುದು ಎಂದರೇನೇ ಅದು ಮಹಿಳೆಯರಲ್ಲಿ ಇನ್ನಿಲ್ಲದ ಆತಂಕವನ್ನುಂಟುಮಾಡುತ್ತದೆ. ಅತ್ಯಾಚಾರ, ಲೈಂಗಿಕ ಕಿರುಕುಳ, ಜೀವ ಬೆದರಿಕೆ ಹೀಗೆ ಹಲವು ಮಾರ್ಗಗಳನ್ನು ಪಿತೃಪ್ರಧಾನ ವ್ಯವಸ್ಥೆ ಕಂಡುಕೊಂಡು ಮಹಿಳೆಯರ ಮೇಲೆ ಪ್ರಯೋಗಿಸುವುದರ ಮೂಲಕ ತನ್ನ ಕಾರ್ಯ ಸಾಧನೆಯನ್ನು ಮಾಡಿಕೊಳ್ಳುತ್ತದೆ. ಇದು ಆಸ್ತಿಹಕ್ಕಿನ ವಿಚಾರದಲ್ಲಿ ಹೆಚ್ಚಾಗಿ ಗೋಚರಿಸುತ್ತದೆ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಕೈಗೊಂಡಂತಹ ಸಂದರ್ಭದಲ್ಲಿ ತವರು ಮನೆಯವರ ಬೆದರಿಕೆಗೆ ಹೆದರಿಕೊಂಡು ಬಹಳಷ್ಟು ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸಿರುವಂತಹ ಪ್ರಕರಣಗಳು ಕಂಡುಬಂದವು. ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಕುಷ್ಟಗಿ ತಾಲೂಕಿನ ತಾವರಗೇರಾ ಹೋಬಳಿ ಪ್ರದೇಶದ ಜೂಲಕುಂಟಾ ಗ್ರಾಮದ ಹೊನ್ನವ್ವ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಕೇಳಲು ಹೋಗಿ ತನ್ನ ಅಣ್ಣಂದಿರಿಂದ ಜೀವ ಬೆದರಿಕೆಗೆ ಒಳಗಾಗಿ ಆಸ್ತಿಯನ್ನು ನಿರಾಕರಿಸಿದ್ದಾರೆ. ಇವರು ಹೇಳುವಂತೆ "ನಮ್ ಮನ್ಯಾಗ (ಗಂಡನ ಮನೆ) ಬಾಳ ಕಷ್ಟ ಇತ್ತು. ಅದೇ ಟೈಮ್‌ದಾಗ ನಮ್ ಅಣ್ಣೋರು ಅಪ್ಪನ ಆಸ್ತಿನ ಭಾಗ ಮಾಡಿಕೆಳ್ಳಕತ್ತಾರ ಅಂತ ಗೊತ್ತಾತು. ನಮ್ ಮಾವನವರು ಹೇಳಿದಂಗ ನನಗೂ ಆಸ್ತಿನಾಗ ಭಾಗ ಕೊಡ್ರಿ ಅಂತ ಕೇಳಿದೆ. ಆದ್ರೆ ಅವ್ರು ನನ್ನ ಹೆದರಿಸಿದ್ರು, ಬಡಿಯಾಕ ಬಂದಿದ್ರು, ಹಂಗಾಗಿ ನಾನು ಯಾವ ಆಸ್ತಿನೂ ಬ್ಯಾಡ ಅಂತೇಳಿ ಸುಮ್ಮಾನಿಗಿಬಿಟ್ಟಿದ್ದೆ. ಆದ್ರೆ ಈ ವಿಷ್ಯ ನಮ್ ತಂಗಿ ಗ್ಯಾನಮ್ಮಗ ಗೊತ್ತಾಗಿತ್ತು. ಈಕಿ ಬಾಳ ಧೈರ್ಯವಂತೆ. ಆಕಿಗಿ ಈ ವಿಚಾರಾನ ಹೇಳಿದೆ. ಆಕಿ ಇದ್ದು ಸರಿ ನಾವು ಆಸ್ತಿ ಬೇಕಂತ ಕೇಸ್ ಮಾಡಾನು ಆವಾಗ ಅವ್ನು ದಾರಿಗಿ ಬರ್‍ತಾನ ಅಂದ್ಳು. ಆಕಿ ೮ನೇ ಕ್ಲಾಸು ಓದ್ಯಾಳ. ಅದಕ್ಕ ಅವ್ಳಿಗಿ ಅಷ್ಟೋಂದು ಧೈರ್ಯ. ಗ್ಯಾನಮ್ಮ ಹೇಳಿದಂಗ ನಾವು ಇಬ್ರೂ ಸೇರಿ ತಂದಿ ಆಸ್ತಿನಾಗ ಭಾಗ ಬೇಕಂತ ಕೋರ್ಟಿಗಿ ಹೋದ್ವಿ, ಅದಕ್ಕ ದೊಡ್ಡಣ್ಣ ಗಿರಿಯಪ್ಪ ಬಾಳಾ ರೇಗಾಡಿದ. ಹೆಣ್ಮಕ್ಕಳಾಗಿ ಸುಮ್ನೆ ಬಿದ್ದಿರೋದು ಬಿಟ್ಟು ಆಸ್ತಿನಾಗ ಪಾಲುಗೀಲು ಅಂತೇಳಿ ಕೇಳ್ತೀರಲ್ಲ. ನಿಮ್ಮನ್ನ ಅಂದು ಏನೂ ಪ್ರಯೋಜ್ನ ಇಲ್ಲ. ನಿಮ್ಮನ್ನ ಹಿಂಗ ಬಿಟ್ಟಾರಲ್ಲ ನಿಮ್ ಗಂಡಂದ್ರು ಅವ್ರಿಗಿ ಮೊದ್ಲು ಹೊಡಿಬೇಕು ಅಂತೇಳಿ ಬೈದುಬಿಟ್ಟ. ಆಮ್ಯಾಲೆ ಒಂದಿನ ನಮ್ ಮನಿಗೇ ಬಂದು ನಮ್ ಮಾವ ಮತ್ತ ಗಂಡನ ಎದುರಿಗೇನೇ ನನ್ನ ಹೊಡದ್ ಬಿಟ್ಟ, ಯಾಕಂದ್ರ ಕೇಸ್ ವಾಪಾಸ್ ತಕ್ಕ ಅಂತ. ಆದ್ರ ನಾನು ಒಪ್ಪಲಿಲ್ಲ. ನನಗ ಇಬ್ರು ಹೆಣ್ಮಕ್ಕಳು ಐದಾರ. ಅವ್ರನ್ನ ಇಲ್ಲೇ ಸರಕಾರಿ ಸಾಲಿಗಿ ಹಾಕೇನಿ. ಒಬ್ರು ೪ ಮತ್ತ ಇನ್ನೊಬ್ಬಳು ೫ನೇ ಕ್ಲಾಸು ಓದಕತ್ಯಾರ. ಗಿರಿಯಪ್ಪ ನನ್ ಮಕ್ಕಳ ಮ್ಯಾಲ ಕಣ್ಣು ಹಾಕಿದ್ದ. ನೀನು ಏನಾರ ಕೇಸ್ ವಾಪಾಸ್ ತಕ್ಕಳ್ಳಿಲ್ಲ ಅಂದ್ರ ನಿಮ್ಮನ್ನ ಮತ್ತ ನಿಮ್ ಮಕ್ಕಳ್ನ ಸುಮ್ನೆ ಬಿಡಂಗಿಲ್ಲ. ಅಂತ ಹೆದರ್‍ಸಿದ. ಮಕ್ಳು ಸಾಲಿಗಿ ಹೋಗಿದ್ದಾಗ ಏನಾರಾ ಮಾಡಿಬಿಟ್ರೆ ಅಂತ ನನಗೆ ಚಿಂತಿ ಆತು. ನನಗ ಏನಾರಾ ಮಾಡ್ಲಿ ಬ್ಯಾಡ ಅನ್ನಂಗಿಲ್ಲ, ಆದ್ರ ನನ್ ಮಕ್ಳು ಏನ್ ಮಾಡ್ಯಾರ. ಅವ್ರ ಮ್ಯಾಲ ಸೇಡು ತೀರ್‍ಸಕೆಳಾಕ. ಮತ್ತೆ ದಿನಾಲೂ ಕುಡದು ನಮ್ ಮನಿತಾಗ ಬಂದು ಗಲಾಟಿ ಮಾಡ್ತಿದ್ದ. ಅದಕ್ಕ ನನ ಗಂಡ ಮತ್ತೆ ಅತ್ತಿ ಮಾವನವ್ರು ಬೇಸತ್ತು ಹೋಗಿದ್ರು. ಕೊನಿಗಿ ಒಂದಿನ ಮಾವ ನನ್ನ ಕರದು, ನೋಡವ್ವ ನಮಗ ಇರೋ ಆಸ್ತಿನಾಗ ಜೀವ್ನ ಮಾಡಬಹುದು. ಅದಕ್ಕ ನೀನು ನಿಮ್ ಅಪ್ಪನ ಮನ್ಯಾಗಿನ ಆಸ್ತಿನಾಗ ಪಾಲು ಪಡ್ಕೊಂಡು ಬಂದ್ರೆ ನಾಳಿದಿನ ನಿಮ್ ಅಣ್ಣ ಸುಮ್ನೆ ಇರ್‍ತಾನೇನು. ಮನಿಗಿ ಬಂದು ಗಲಾಟ ಮಾಡ್ತಾನ ಮತ್ತೆ ಒದಿಯಾಕ ಬರ್‍ತಾನ ಹಂಗೆ ಜಮೀನ್ನಾಗ ಕಾಲು ಸತೆ ಇಡಾಕ ಬಿಡಂಗಿಲ್ಲ. ಅದ್ಕೆ ನಿಮ್ ತವ್ರಮನಿ ಆಸ್ತಿ ಬ್ಯಾಡ್ವೇಬ್ಯಾಡ. ನೀನೇ ಕೇಸ್‌ನ ವಾಪಾಸ್ ತಕ್ಕಂಬಿಡು ಅಂದ್ರು, ಅದಕ್ಕಂತ ನಾನು ಕೇಸ್ನ ವಾಪಾಸ್ ತಕ್ಕಂಡೆ.

ಹೊನ್ನವ್ವ ತನ್ನ ತವರು ಮನೆಯಲ್ಲಿನ ಆಸ್ತಿಯನ್ನು ಕೇಳಿದ್ದಕ್ಕಾಗಿ ಸ್ವಂತ ತನ್ನ ಅಣ್ಣಂದಿರಿಂದಾನೇ ಹಿಂಸೆಗೆ ಒಳಗಾಗಿರುವುದು ಮತ್ತು ಆ ಹಿಂಸೆಯನ್ನು ತಾಳಲಾರದೇ

ಪಿತ್ರಾರ್ಜಿತ ಆಸ್ತಿಯನ್ನು ನಿರಾಕರಿಸಿರುವುದು ಕಂಡುಬರುತ್ತದೆ. ಹೊನ್ನವ್ವ ಅನಕ್ಷರಸ್ಥೆ ಆದರೂ ಗಂಡನ ಮನೆಯವರ ಒತ್ತಾಯಕ್ಕೆ ತವರು ಮನೆಯ ಆಸ್ತಿಯಲ್ಲಿ ಪಾಲನ್ನು ಕೇಳುವಂತಹ ಧೈರ್ಯವನ್ನು ಮಾಡಿದ್ದಾಳೆ. ಆದರೆ ಅಣ್ಣನ ಕಾಟ ತಾಳಲಾರದೇ ಆಸ್ತಿಯನ್ನು ನಿರಾಕರಿಸಿದ್ದಾಳೆ. ಮಹಿಳೆ ತಾನು ಹುಟ್ಟಿದ ಮನೆಯಲ್ಲಿರಬಹುದು ಅಥವಾ ಗಂಡನ ಮನೆಯಲ್ಲಿರಬಹುದು ಎರಡೂ ನೆಲೆಗಳೂ ಸ್ವಂತದ್ದಲ್ಲ. ಆದರೂ ಆ ಮನೆಗಳನ್ನು ಅಥವಾ ವಂಶಗಳನ್ನು ರಕ್ಷಿಸುವ ಕಾರ್ಯಕ್ಕೆ ಸಿದ್ಧಳಿರುತ್ತಾಳೆ. ಇದು ಹೊನ್ನವ್ವಳ ವಿಚಾರದಲ್ಲಿ ಗೋಚರಿಸುತ್ತದೆ. ಅಂದರೆ ಹೊನ್ನವ್ವ ತನ್ನ ಗಂಡನ ಮನೆಯಲ್ಲಿನ ಕಷ್ಟಗಳನ್ನು ತಾಳಲಾರದೇ ಬದುಕಿನ ಅನಿವಾರ್ಯತೆಗಾಗಿ ತನ್ನ ತಂದೆಯ ಆಸ್ತಿಯಲ್ಲಿ ಪಾಲನ್ನು ಕೇಳಿದ್ದಾಳೆ. ಆದರೆ ಹೀಗೆ ಕೇಳುವುದೇ ಮಹಾಪರಾಧ ಎನ್ನುವ ಹಾಗೆ ಹೊನ್ನವ್ವಳ ಅಣ್ಣ ಅವಳನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಹಿಂಸಿಸಿರುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಮಹಿಳೆಯರ ಮೇಲೆ ತವರು ಮನೆಯವರು ಯಾವಾಗಲಾದರೂ ತಮ್ಮ ಹಕ್ಕನ್ನು ಚಲಾಯಿಸಬಹುದು ಅದಕ್ಕೆ ಯಾವುದೇ ವಿರೋಧವನ್ನು ವ್ಯಕ್ತಪಡಿಸದೇ ಮಹಿಳೆ ಒಪ್ಪಿಕೊಳ್ಳಬೇಕು ಎಂಬುದು ಅಘೋಷಿತ ನಿಯಮವಾಗಿರುವುದನ್ನು ಕಾಣುತ್ತೇವೆ. ಇನ್ನೊಂದು ಪ್ರಮುಖ ಆತಂಕವೆಂದರೆರ ಹೊನ್ನವ್ವಳಿಗಿರುವ ಮಕ್ಕಳು. ಇವರಿಗೆ ಏನಾದರೂ ಮಾಡಿಬಿಡುತ್ತಾನೇನೋ ಎನ್ನುವ ಆತಂಕ ಹೊನ್ನವ್ವಳಿಗಿದೆ. ಇವರನ್ನು ರಕ್ಷಿಸುವ ಜವಾಬ್ದಾರಿ ಆಕೆಗಿದೆ. ಆದರೆ ಇದೇ ಅವಳಿಗೆ ಸವಾಲಿನ ಸಂಗತಿಯಾಗಿದೆ. ಅಂದರೆ ಕುಟುಂಬದಲ್ಲಿ ಮಕ್ಕಳನ್ನು ನೋಡಿಕೊಳ್ಳುವ ಮತ್ತು ಅವರನ್ನು ರಕ್ಷಿಸುವ ಜವಾಬ್ದಾರಿ ಮಹಿಳೆಯರದ್ದೇ ಆಗಿರುತ್ತದೆ. ಹಾಗಾಗಿಯೇ ಹೊನ್ನವ್ವಳಲ್ಲಿ ಮಕ್ಕಳ ಕುರಿತಾದ ಆತಂಕ ಎದುರಾಗುತ್ತದೆ. ಇದೂ ಕೂಡ ಆಕೆಯ ಹಕ್ಕನ್ನು ನಿರಾಕರಿಸುವಂತೆ ಮಾಡುವಲ್ಲಿ ಕಾರಣೀಭೂತವಾಗಿರುತ್ತದೆ. ಇನ್ನೊಂದು ಪ್ರಕರಣದಲ್ಲಿ

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ನಂದಿಬಂಡಿ ಗ್ರಾಮದ ನಾಗರತ್ನಮ್ಮನವರೂ ಸಹ ತನ್ನ ಅಣ್ಣ ಮತ್ತು ತಮ್ಮನವರು ಹಾಕಿದ ಪ್ರಾಣ ಬೆದರಿಕೆಯ ಕಾರಣವಾಗಿ ತಂದೆಯ ಆಸ್ತಿಯಿಂದ ವಂಚಿತಳಾಗಿದ್ದಾಳೆ. "ನಮ್ ಅಪ್ಪ ಅಮ್ಮಗ ಮೂರು ಜನ ಮಕ್ಕಳು. ಮಂಜುನಾಥ ಹಿರಿಯವ ನಾನು ಮಧ್ಯದೋಳು ಮತ್ತ ನಮಗಿಂತ ಚಿಕ್ಕವನು ಕರಿಬಸವ. ನಮ್ ಅಪ್ಪ ದುಡುದು ೯ ಎಕ್ರೆ ಹೊಲ ಮತ್ತೆ ಒಂದು ಮನಿ ಮಾಡ್ಯಾನ. ಆತ ನಮ್ ತಂದಿ ತೀರಿಕೆಂಡ ಆದ ಮ್ಯಾಲೆ ಆಸ್ತಿಕಾಲಾಗ ಇಬ್ರಿಗೂ ಜಗಳ ಸುರು ಆತು. ಎಷ್ಟೋ ಸಲ ಹೊಡದಾಡ್ಯಾರ. ನಾನು ಸತೆ ಆಸ್ತಿನಾಗ ಭಾಗ ಕೇಳಿದೆ. ಅದಕ್ಕ ಅವ್ರು ಕೊಡಾಕ ಒಪ್ಲಿಲ್ಲ. ಊರಾಗಿನ ಹಿರೇರ್ನ ಸೇರ್ಸಿ ಪಂಚಾತಿ ಮಾಡ್ಸಿದೆ. ಆದ್ರೆ ಹಿರೇರ ಮಾತನ್ನ ಸತೆ ಕೇಳ್ಲಿಲ್ಲ. ಅದೇ ದಿನ ರಾತ್ರಿ ಮಂಜಣ್ಣ ಕುಡದು ಬಂದು ಯಾರ್‍ಯಾರು ಪಂಚಾತಿ ಮಾಡಾಕ ಬಂದಿದ್ರೋ ಅವ್ರ ಮನಿಮುಂದೆ ಹೋಗಿ ಕೆಟ್ ಕೆಟ್ ಮಾತ್ನಿಂದ ಬೈದು ಬಂದಾನ. ಮರ್ದಿನ ಪಂಚಾತಿ ಮಾಡಾಕ ಯಾರೂ ಬರ್ಲಿಲ್ಲ. ನಮ್ ಅಮ್ಮ ಬದುಕಿರೋವಾಗ್ಲೇ ಆಸ್ತಿ ವಿಚಾರದಾಗ ಕಿತ್ತಾಡೋದಾಗಿತ್ತು. ಅಪ್ಪನ ಆಸ್ತಿನಾಗ ಅಮ್ಮಗೂ ಸತೆ

ಭಾಗ ಬರತಿತ್ತು. ಆದ್ರ ಆ ಮನ್ಯಾಗ ಇಬ್ರು ಮಕ್ಕು ಜಗಳ ಆಡೋದು ನೋಡಿ ಯಾವ ಆಸ್ತಿನೂ ಬ್ಯಾಡ ಅಂತೇಳಿ ಇಲ್ಲಿಗೆ ಬಂದಿದ್ಲು. ನಾನು ಸತೆ ಆಸ್ತಿನೆಲ್ಲಾ ನಿನ್ ಹೆಸ್ರಿಗೆ ಮಾಡ್ಸಬಿಡಾನು ಅಂತ ಹೇಳಿ ನೋಡ್ದೆ. ಆದ್ರೆ ಅಮ್ಮ ಅದಕ್ಕ ಒಪ್ಲಿಲ್ಲ. ನೀನು ಬ್ಯಾಡ ಅಂದ್ರೆ ನಾನು ಕೋರ್ಟಿಗಿ ಹೋಗ್ತೀನಿ ಅಂತಂದೆ. ಅದಕ್ಕ ಅಮ್ಮ ಏನೂ ಹೇಳ್ಲಿಲ್ಲ. ಇದೇ ವಿಚಾರಾನ ಅಣ್ಣಗ ಹೇಳಿದೆ. ಅದಕ್ಕ ನೀನು ಕೋರ್ಟಿಗಿ ಏನಾರ ಹೋದ್ರೆ ನಿನ್ನ ಇಲ್ಲನಿಸಿ ಬಿಡ್ತೀವಿ ಅಂತ ಇಬ್ರೂ ಸೇರಿ ಹೆದ್ರಿಸಿದ್ರು. ನಾನು ಕೋರ್ಟಿಗಿ ಹೋಗ್ತೀನಿ ಅಂತ ಹೇಳಿದ್ದಕ್ಕಾ ಮಂಜಣ್ಣ ಆವತ್ತಿನ ರಾತ್ರಿ ಚೆನ್ನಾಗಿ ಕುಡದು ಬಂದು ತನ್ನ ಹೆಂಡತೀನ ಮತ್ತ ಮಕ್ಕಳನ್ನ ಚೆನ್ನಾಗಿ ಹೊಡದಾನ. ಅವ್ರು ಅಳ್ಕಂಡು ನಮ್ ಮನಿಗಿ ಬಂದಿದ್ರು. ಹಿಂಗ ಮಾಡಿ ಅವ್ನು ಬಾಳ ಹೆದರಿಸ್ಯಾನ.

ಈ ಪ್ರಕರಣದಲ್ಲಿ ನಾಗರತ್ನಮ್ಮ ತನ್ನ ಅಣ್ಣ ತಮ್ಮಂದಿರಿಂದಲೇ ಹಿಂಸೆಗೆ ಒಳಗಾಗಿದ್ದಾರೆ. ಆದರೆ ಇಲ್ಲಿ ಹಿಂಸೆಯ ಸ್ವರೂಪ ಮಾತ್ರ ಭಿನ್ನವಾಗಿದೆ. ಹಿಂಸೆ ಒಂದು ಹಂತದಲ್ಲಿ ಭಾವನಾತ್ಮಕ, ಮಾನಸಿಕ ನೆಲೆಯಲ್ಲಿ ಕಂಡುಬಂದರೆ ಇನ್ನೊಂದು ಹಂತದಲ್ಲಿ ದೈಹಿಕ ಹಿಂಸೆಯ ಸ್ವರೂಪವನ್ನು ಪಡೆದುಕೊಂಡಿದೆ. ಮುಖ್ಯವಾಗಿ ಯಂಕಮ್ಮಳ ಅಣ್ಣ ಕುಡಿದು ಬಂದು ಅವಾಚ್ಯವಾಗಿ ಬೈಯುವುದೂ ಸಹ ಮಹಿಳೆಗೆ ಹಿಂಸೆಯನ್ನುಂಟುಮಾಡುತ್ತದೆ. ಹಾಗೆಯೇ ತಂಗಿಯ ಮೇಲಿನ ಸಿಟ್ಟನ್ನು ತನ್ನ ಹೆಂಡತಿ ಮಕ್ಕಳ ಮೇಲೆ ದೈಹಿಕವಾಗಿ ಹಲ್ಲೆ ಮಾಡುವುದರ ಮೂಲಕ ತೀರಿಸಿಕೊಳ್ಳುವುದೂ ಸಹ ಪುರುಷ ವ್ಯವಸ್ಥೆಯ ವಿಕೃತ ಮನಸ್ಸನ್ನು ತೋರಿಸುತ್ತದೆ. ಮುಖ್ಯವಾಗಿ ಇಲ್ಲಿ ಅಣ್ಣ ಕುಡಿದು ಬರುವುದು ಮತ್ತು ಅವಾಚ್ಯ ಶಬ್ದಗಳಿಂದ ಬೈಯುವುದು ಇದು ಒಂದು ಬಗೆಯ ಹಿಂಸೆಯಾದರೆ, ನಾಗರತ್ನಮ್ಮಳ ತಮ್ಮ ಊಟ ನೀರು ಬಿಟ್ಟು ಸಾಯುತ್ತೇನೆ ಎಂದು ಹೆದರಿಸುವುದು. ಇದೂ ಕೂಡ ಒಂದು ಬಗೆಯ ಹಿಂಸೆಯಾಗಿದೆ. ಇಲ್ಲಿ ಇಬ್ಬರೂ ಸೇರಿ ನಾಗರತ್ನಮ್ಮಳನ್ನು ಭಾವನಾತ್ಮಕವಾಗಿ ಬ್ಲಾಕ್‌ಮೇಲ್ (ಎಮೋಷನಲ್ ಬ್ಲಾಕ್‌ಮೇಲ್) ಮಾಡುವುದರ ಮೂಲಕ ಅವಳ ಮನಸ್ಸನ್ನು ಬದಲಾಯಿಸಿದ್ದಾರೆ. ಪುರುಷರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ಇದನ್ನು ಒಂದು ಪ್ರಬಲ ಅಸ್ತ್ರವನ್ನಾಗಿ ಮಾಡಿಕೊಂಡಿರುವುದು ಕಂಡು ಬರುತ್ತದೆ. ಕುಟುಂಬದಲ್ಲಿ ಪುರುಷನಿಗೆ ತಾಯಿ, ಅಕ್ಕ, ಅಂಗಿ ಎಂಬಂತಹ ಯಾವುದೇ ಭಾವನೆ ಗಳಿದ್ದರೂ ಸಹ ಅವು ಒಂದು ಹಂತದವರೆಗೆ ಮಾತ್ರ. ತನ್ನ ಇಚ್ಛೆಗೆ ವಿರುದ್ಧವಾಗಿ ನಡೆಯುವವರು ಯಾರೇ ಆಗಿರಲೀ ಅವರನ್ನು ಹಿಂಸೆಗೆ ಒಳಪಡಿಸಲು ಪುರುಷ ಪ್ರಧಾನ ವ್ಯವಸ್ಥೆ ಮುಂದಾಗುತ್ತದೆ. ಕುಟುಂಬದಲ್ಲಿ ಮಹಿಳೆಯರು ಯಾವಾಗ ಬೇಕಾದರೂ ಪುರುಷರಿಂದ ಹಿಂಸೆಗೆ ಒಳಗಾಗಬಹುದು. ಆದರೆ ಅದನ್ನು ಪ್ರತಿಭಟಿಸುವಂತಿಲ್ಲ. ಮಗುವನ್ನು ಹೆತ್ತು ಹೊತ್ತು ಸಾಕುವಂತಹ ಮಹಿಳೆಗೆ ಆ ಮಗುವಿನ ಮೇಲಿನ ಹಕ್ಕನ್ನು ಹೊಂದಲು ಬಿಡುವುದಿಲ್ಲ. ಮಗು ಹುಟ್ಟಿನಿಂದ ಅವರು ದೊಡ್ಡವರನ್ನಾಗಿ ಮಾಡುವವರೆಗೆ ಅದರ ಮೇಲೆ ತಾಯಿ ಹಕ್ಕನ್ನು ಹೊಂದಿರುತ್ತಾಳೆ. ನಂತರದ ಅವಧಿಯಲ್ಲಿ ಮಗುವೇ ತಾಯಿಯ ಮೇಲೆ ಹಕ್ಕನ್ನು

ಚಲಾಯಿಸುತ್ತಾನೆ. ಇದನ್ನು ವ್ಯವಸ್ಥೆ ಒಪ್ಪಿಕೊಳ್ಳುತ್ತದೆ. ಈ ಬಗೆಯ ಹಿಂಸೆಗಳಿಗೆ ಮಹಿಳೆಯರು ಒಳಗಾಗುತ್ತಿರುವುದು ಕಂಡುಬರುತ್ತದೆ.

ಆಸ್ತಿಗಾಗಿ ತಾಯಿಯನ್ನೇ ಗೃಹ ಬಂಧನದಲ್ಲಿಟ್ಟು ಶಿಕ್ಷೆ ಕೊಟ್ಟಿರುವ ಪ್ರಕರಣಗಳೂ ಸಹ ಕಂಡುಬಂದಿವೆ. ಕಾರಟಗಿ ಸಮೀಪದ ಯರಡೋಣ ಗ್ರಾಮದಲ್ಲಿ ತುಂಡು ಆಸ್ತಿಯ ಆಸೆಗಾಗಿ ಇಬ್ಬರು ಮಕ್ಕಳು ತಮ್ಮ ತಾಯಿಯನ್ನೇ ೪೦ ದಿನ ಗೃಹ ಬಂಧನದಲ್ಲಿಟ್ಟು ಕಿರುಕುಳವನ್ನು ನೀಡಿರುವ ಘಟನೆ ನಡೆದಿದೆ. ಮಕ್ಕಳಾದ ಯಮನೂರಪ್ಪ ಮತ್ತು ವೀರೇಶ್ ತಮ್ಮ ತಾಯಿ ಶಂಕ್ರಮ್ಮ ಕೊಂಟೋಜಿಯನ್ನು ೨೦ ದಿನ ತೋಟದ ಗುಡಿಸಲಲ್ಲಿ ಮತ್ತು ೨೦ ದಿನ ಊರಿನ ಚಿಕ್ಕ ಕೊಠಡಿಯಲ್ಲಿ ಕೂಡಿಹಾಕಿದ್ದಾರೆ. ಕೊನೆಯ ೨೦ ದಿನ ತಾಯಿಗೆ ಊಟ, ನೀರು ನೀಡದೇ ಹಿಮಸಿಸಿದ್ದಾರೆ. ಶಂಕ್ರಮ್ಮ ಕುಂಟೋಜಿಯವರ ಪತಿ ತೀರಿಕೊಂಡಿದ್ದು, ಅವರ ೧ ಎಕರೆ ೩೦ ಗುಂಟೆ ಆಸ್ತಿ ಶಂಕ್ರಮ್ಮನವರ ಹೆಸರಲ್ಲಿತ್ತು. ಆ ಆಸ್ತಿಯನ್ನು ಸೋದರ ಮಾವ ಮಲ್ಲಪ್ಪನಿಗೆ ನೀಡುತ್ತಾಳೆ ಎಂಬ ಆತಂಕದಲ್ಲಿ ಮಕ್ಕಳು ಆಕೆಯನ್ನು ಗೃಹ ಬಂಧನದಲ್ಲಿರಿಸಿರುವ ಘಟನೆ ನಡೆದಿದೆ. ಗೃಹ ಬಂಧನದಲ್ಲಿರಿಸಿದ ವಿಷಯ ತಿಳಿದ ಸ್ಥಳೀಯ ಪೊಲೀಸ್ ಠಾಣೆಯ ಸಿಬ್ಬಂಧಿ ಯವರು ಇವರನ್ನು ಬಂಧನದಿಂದ ಮುಕ್ತಿ ಕೊಡಿಸಿದ್ದಾರೆ. ಶಂಕ್ರಮ್ಮ ಹೇಳುವಂತೆ " ಆಸ್ತಿಗಾಗಿ ನನ್ನ ಮಕ್ಳು ಈ ಕೋಣ್ಯಾಗ ಅನ್ನ ನೀರಿಲ್ದಂಗ ಸಾಯಿ ಅಂತ ಕೂಡಿ ಹಾಕ್ಯಾರ. ಇವ್ರು ಸಣ್ಣ ಮಕ್ಳು ಇದ್ದಾಗಿಂದ ನಮ್ಮ ಸೋದರ ಮಾವ ಜ್ವಾಪಾನ ಮಾಡ್ಯಾನ. ಆತಗ ನಾನು ಆಸ್ತಿ ಕೊಡ್ತೀನಿ ಅಂತ ಹಿಂಗ ಮಾಡಾಕ ಹತ್ಯಾರ. ೨೦ ದಿನ ಆಗೈತಿ ಅನ್ನ, ನೀರಿಲ್ದಂಗ ಕೂಡಿ ಹಾಕ್ಯಾರ" ಎಂದು ಹೇಳಿದ್ದಾರೆ. ಹೀಗೆ ತಾಯಿಯನ್ನು ಕೂಡಿ ಹಾಕಿದ ಮಕ್ಕಳ ಮೇಲೆ ಕೇಸ್ ದಾಖಲಿಸಿ, ಇಬ್ಬರನ್ನು ಬಂಧಿಸಲಾಗಿದೆ.(ವಿಜಯ ಕರ್ನಾಟಕ, ೩೦ ಅಕ್ಟೋಬರ್ ೨೦೧೩) ಈ ಪ್ರಕರಣದಲ್ಲಿ ಶಂಕ್ರಮ್ಮನವರ ಹೆಸರಲ್ಲಿರುವ ಆಸ್ತಿಗಾಗಿ ಮಕ್ಕಳೇ ಅವರನ್ನು ಹಿಂಸೆಕೊಟ್ಟಿರುವುದು ಮತ್ತು ಆ ಮೂಲಕ ತಮ್ಮ ಕ್ರೂರ ತನವನ್ನು ಪ್ರದರ್ಶಿಸಿರುವುದು ಕಂಡುಬರುತ್ತದೆ. ಇದನ್ನು ಕ್ರಿಮಿನಲ್ ಕೇಸ್ ಎಂದು ಪರಿಗಣಿಸಿದ್ದು, ಮಕ್ಕಳ ಮೇಲೆ ಕೇಸ್ ದಾಖಲಿಸಲಾಗಿದೆ. ಮುಖ್ಯವಾಗಿ ಪುರುಷ ವ್ಯವಸ್ಥೆಯು ಮಾನವೀಯ ಮೌಲ್ಯಗಳನ್ನೆಲ್ಲಾ ಮರೆತು, ಮಹಿಳೆಯರ ಮೇಲೆ ಹಿಂಸೆಗೆ ಮುಂದಾಗುತ್ತದೆ. ಇದಕ್ಕೆ ಪ್ರಮುಖ ಕಾರಣ ಆಸ್ತಿಯೇ ಹೊರತು ಬೇರೇನಲ್ಲ. ಆಸ್ತಿಯ ವಿಷಯಕ್ಕೆ ಬಂದಾಗ ಪುರುಷರು ಯಾವುದೇ ಸಂಬಂಧಗಳಿರಲಿ ಅವುಗಳನ್ನು ಲೆಕ್ಕಿಸದೇ ಆಸ್ತಿಯನ್ನು ಪಡೆಯಲು ಮುಂದಾಗುತ್ತಾರೆ. ಇವರಿಗೆ ತಾಯಿ, ಅಕ್ಕ, ತಂಗಿ ಎಂಬ ಸಂಬಂಧಗಳನ್ನು ಉಳಿಸಿಕೊಳ್ಳುವ ಮತ್ತು ಬೆಳೆಸಿಕೊಂಡು ಹೋಗುವುದರ ಕಡೆಗೆ ಗಮನವನ್ನು ಹರಿಸುವುದಿಲ್ಲ. ವ್ಯವಸ್ಥೆಯು ರೂಪಿಸಿರುವ ನಿಯಮಗಳೂ ಸಹ ಹಾಗೆಯೇ ಇವೆ. ಕೌಟುಂಬಿಕ ಸಂಬಂಧಗಳನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿ ಮಹಿಳೆಯರಿಗೆ ಮಾತ್ರ ಎಂಬ ಅಘೋಷಿತ ನಿಯಮದ ಕಾರಣವಾಗಿ ಪುರುಷರು ಇದರಿಂದ ದೂರವೇ ಉಳಿದು ಬಿಟ್ಟಿದ್ದಾರೆ. ಆಸ್ತಿಯ ವಿಚಾರಕ್ಕೆ ಬಂದಾಗ ಪುರುಷರಿಗೆ ಈ ಯಾವ ಸಂಬಂಧಗಳೂ ಪ್ರಾಮುಖ್ಯತೆಯನ್ನು ಪಡೆಯುವುದಿಲ್ಲ.

ಹಾಗಾಗಿ ಸ್ವಂತ ತಾಯಿ ಎಂದು ಲೆಕ್ಕಿಸದೇ ಹಿಂಸಿಸುವ ಮಟ್ಟಕ್ಕೆ ಹೋಗುತ್ತಾನೆ. ಅಂದರೆ ಇಲ್ಲಿ ತಾಯಿ ಎನ್ನುವ ಸಂಬಂಧಕ್ಕಿಂತ ಅವಳೊಬ್ಬ ಮಹಿಳೆಯಾಗಿರುತ್ತಾಳೆ ಅಷ್ಟೇ.

**ಆ. ಕೊಲೆ ಮಾಡುವುದು** : ಆಸ್ತಿ ಎಂಬುದು ಮಾನವರಿಗೆ ಒಂದು ಬಗೆಯ ಆರ್ಥಿಕ ಭದ್ರತೆಯನ್ನಷ್ಟೇ ಅಲ್ಲದೇ ಗೌರವವನ್ನೂ ಸಹ ಒದಗಿಸಿಕೊಡುತ್ತದೆ. ಹಾಗಾಗಿ ಆಸ್ತಿಯ ವಿಷಯಕ್ಕೆ ಹಲವಾರು ಬೆದರಿಕೆಗಳು, ಕೊಲೆಗಳು ನಡೆದು ಹೋಗಿವೆ. ಮೊದಮೊದಲು ಈ ಬಗೆಯ ಕೊಲೆಗಳು ಕೇವಲ ಪುರುಷ ಪುರುಷರಲ್ಲಿಯೇ ನಡೆಯುತ್ತಿತ್ತು. ಆದರೆ ಕಾಲ ಬದಲಾದಂತೆಲ್ಲಾ ಮಹಿಳೆಯರಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ದೊರೆಯುವಂತಹ ಕಾಯಿದೆ ಯಾವಾಗ ಜಾರಿಗೆ ಬಂದಿತೋ ಆವಾಗಿನಿಂದ ಮಹಿಳೆಯರೂ ಸಹ ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮುಂದಾದರು. ಹೆದರಿಸುವಂತಹ ಮತ್ತು ಕೊಲೆ ಮಾಡುವಂತಹ ಪ್ರಕ್ರಿಯೆಗಳು ಮಹಿಳೆಯರ ಮೇಲೂ ನಡೆಯಲು ಆರಂಭಿಸಿದವು. ಇಂದು ಮಹಿಳೆಯರು ತಮ್ಮ ತಂದೆಯ ಅಥವಾ ಗಂಡನ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮುಂದಾದರೆ ಅವರನ್ನು ಕೊಲೆ ಮಾಡುವಂತಹ ಸ್ಥಿತಿಗೆ ಸಮಾಜ ಮುಂದುವರೆದಿದೆ. ಈ ಬಗೆಯ ಪ್ರಕರಣಗಳು ನಡೆಯುತ್ತಲೇ ಇವೆ. ಇಂತಹ ಒಂದು ಪ್ರಕರಣ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಅಲ್ಲಿಪುರ ಗ್ರಾಮದಲ್ಲಿ ನಡೆದಿರುವುದು ಕಂಡುಬರುತ್ತದೆ. "ಅಲ್ಲಿಪುರ ಗ್ರಾಮದ ಕುರಿ ಗುಂಡಪ್ಪ ಮತ್ತು ಸೋಮವ್ವ ಎಂಬ ದಂಪತಿಗಳಿಗೆ ಇಬ್ಬರು ಗಂಡು, ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಹಿರಿಯ ಮಗನೇ ಕುರಿ ಶಿವಪ್ಪ. ಈತನೇ ಆಸ್ತಿಯ ವಿಚಾರಕ್ಕೆ ಹೆತ್ತ ತಾಯಿಯನ್ನೇ ಕೊಂದಿದ್ದಾನೆ. ನಿತ್ಯವೂ ಸರಾಯಿ ಕುಡಿದು ಬಂದು ತಾಯಿ ಸೋಮವ್ವ ಬಳಿ ಜಗಳ ಮಾಡುತ್ತಿದ್ದ ಶಿವಪ್ಪನಿಗೆ, ತಾಯಿ ಮತ್ತು ಕಿರಿಯ ಮಗ ಫಕ್ಕೀರೇಶ ಇಬ್ಬರೂ ಒಪ್ಪಿ ನಾಲ್ಕು ಎಕರೆ ಜಮೀನನ್ನು ಬಿಟ್ಟು ಕೊಟ್ಟಿದ್ದಾರೆ. ಆದರೂ ನಿತ್ಯವೂ ಕುಡಿದು ಬಂದು ಜಗಳ ಮಾಡುತ್ತಿದ್ದನು. ಶಿವಪ್ಪನ ಕಾಟದಿಂದ ದೂರವಾಗಿದ್ದರೂ ಜಗಳ ಮಾತ್ರ ತಪ್ಪಿರಲಿಲ್ಲ. ಸೋಮವ್ವ ಪ್ರತಿ ದಿನದಂತೆ ಬೆಳಿಗ್ಗೆ ಅಡುಗೆ ಮಾಡಿಕೊಂಡು ತಲೆಯ ಮೇಲೆ ಬುತ್ತಿ ಹೊತ್ತು ಕೃಷಿ ಕೂಲಿಗಾಗಿ ಹೋಗುತ್ತಿದ್ದಾಗ, ಹಿಂಬದಿಯಿಂದ ಬಂದ ಶಿವಪ್ಪ ಕೊಡಲಿಯಿಂದ ಹೊಡೆದು ಕೊಲೆ ಮಾಡಿದ್ದಾನೆ". (ಕನ್ನಡಪ್ರಭ; ದಿನಾಂಕ, ೦೧.೦೮.೨೦೧೨) . ಆಸ್ತಿಯ ವಿಷಯದಲ್ಲಿ ಪುರುಷ ವ್ಯವಸ್ಥೆ ಎಂಥಹ ಕಾರ್ಯಕ್ಕೂ ಮುಂದುವರೆಯುತ್ತದೆ ಎಂಬುದಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ. ಮುಖ್ಯವಾಗಿ ಈ ತರಹದ ಕೇಸ್‌ಗಳು ಆಸ್ತಿಯ ವಿಷಯದಲ್ಲಿಯೇ ಆಗಿರುತ್ತವೆಯಾದ್ದರಿಂದ ಇವುಗಳು ಸಿವಿಲ್ ನ್ಯಾಯಾಲಯದಡಿ ಕೇಸ್‌ಗಳು ದಾಖಲಾಗಬೇಕು. ಆದರೆ ಅದು ಹಾಗೆ ಆಗುವುದಿಲ್ಲ, ಬದಲಾಗಿ ಇಂತಹವುಗಳು ಕ್ರಿಮಿನಲ್ ಕೇಸ್‌ಗಳಾಗಿ ರೂಪಾಂತರಗೊಳ್ಳುತ್ತವೆ. ಹಾಗೆಯೇ ಕ್ರಿಮಿನಲ್ ನ್ಯಾಯಾಲಯದಲ್ಲಿಯೇ ಆರೋಪಿಗೆ ಶಿಕ್ಷೆ ಆಗುತ್ತದೆ. ಹಾಗಾಗಿ ಇವುಗಳು ಆಸ್ತಿಹಕ್ಕಿನಿಂದ ಆಚೆ ನಿಲ್ಲುತ್ತವೆ. ಅಂದರೆ ಕೊಲೆ ಮಾಡಿರುವುದು ಮುನ್ನಲೆಗೆ ಬರುವುದು ಮತ್ತು ಆಸ್ತಿಯ ವಿಷಯ ಹಿನ್ನಲೆಗೆ ನಿಲ್ಲುತ್ತದೆ. ಇಂತಹ ಘಟನೆಗಳಿಂದ ಸಮಾಜದಲ್ಲಿ ಒಂದು ಬಗೆಯ ಗಂಭೀರವಾದ

ವಾತಾವರಣ ನಿರ್ಮಾಣವಾಗುತ್ತದೆ. ಹಾಗಾಗಿ ಈ ಬಗೆಯ ಘಟನೆಗಳು ಕ್ರಿಮಿನಲ್ ಕೇಸ್ ಗಳಾಗಿದ್ದರೂ ಸಹ ಮೊದಲು ಸಿವಿಲ್ ನ್ಯಾಯಾಲಯದಲ್ಲಿ ಆಸ್ತಿಯ ವಿಚಾರವನ್ನು ಇತ್ಯರ್ಥ ಮಾಡಿ ನಂತರ ಕ್ರಿಮಿನಲ್ ಕೇಸ್ ದಾಖಲಿಸಬೇಕು. ಅಂದರೆ ಈ ತರಹದ ಘಟನೆ ಸಿವಿಲ್ ಮತ್ತು ಕ್ರಿಮಿನಲ್ ಕೇಸ್‌ಗಳಡಿ ದಾಖಲಾಗಬೇಕು. ನಂತರ ಈ ಕೃತ್ಯವನ್ನೆಸಗಿದವರಿಗೆ ಶೀಘ್ರವಾಗಿ ಶಿಕ್ಷೆಯಾಗುವಂತಾಗಬೇಕು.

**ಇ. ದಯಾಮರಣ ಕೇಳಿದ ಪ್ರಕರಣಗಳು :** ವ್ಯವಸ್ಥೆಯಲ್ಲಿ ಮಹಿಳೆಯರು ತಮ್ಮ ಆಸ್ತಿಯ ಮೇಲಿನ ಹಕ್ಕನ್ನು ಪಡೆದುಕೊಂಡಿದ್ದರೂ ಸಹ ಅದರ ಮೇಲೆ ಅಧಿಕಾರವನ್ನು ಚಲಾಯಿಸಲು ಪುರುಷಶಾಹಿ ವ್ಯವಸ್ಥೆ ಬಿಡುತ್ತಿಲ್ಲ. ಮಹಿಳೆಯರನ್ನು ಹಲವು ಹಿಂಸೆಗಳಿಗೆ ಒಳಗು ಮಾಡುತ್ತದೆ. ಅಂದರೆ ತಾವು ಸಂಪಾದಿಸಿದ ಆಸ್ತಿಯ ಮೇಲೆ ಅವರು ಅಧಿಕಾರವನ್ನು ಚಲಾಯಿಸದಂತೆ ನಾನಾ ಬಗೆಯ ಕಿರುಕುಳಗಳನ್ನು ಕೊಡುತ್ತದೆ. ಈ ಕಿರುಕುಳಗಳನ್ನು ತಡೆಯಲಾಗದೇ ಮಹಿಳೆಯರು ದಯಾಮರಣದ ಮೊರೆ ಹೋಗಿರುವಂತಹ ಪ್ರಕರಣಗಳು ಕಂಡುಬಂದಿವೆ. ಕೊಪ್ಪಳ ತಾಲೂಕಿನ ಕ್ಯಾಸಲಾಪುರ ಗ್ರಾಮದ ಬಸಮ್ಮ ಸವಣೂರು ಇವರು ರಾಜ್ಯಪಾಲರಿಗೆ ಒಂದು ಪತ್ರವನ್ನು ಬರೆದಿದ್ದಾರೆ. ಈ ಪತ್ರದಲ್ಲಿ ತಮ್ಮ ಕುಟುಂಬಕ್ಕೆ ರಕ್ಷಣೆ ನೀಡಬೇಕು ಅಥವಾ ದಯಾಮರಣಕ್ಕೆ ಅವಕಾಶ ಕೊಡುವಂತೆ ಕೋರಿದ್ದಾರೆ. ಇದಕ್ಕೆ ಕಾರಣ ಕುಟುಂಬದ ಆರು ಸದಸ್ಯರ ಪಾಲಿಗೆ ಎರಡು ಎಕರೆ ಜಮೀನಿದ್ದು ಬೇರೆಡೆ ಕೂಲಿ ಮಾಡಿ ಜೀವನಸಾಗಿಸುತ್ತಿದ್ದರು. ಬಸಮ್ಮನವರ ತಂದೆ ಮೃತಪಟ್ಟಿದ್ದಾರೆ. ತಾಯಿ ಹಾಗೂ ತಮ್ಮ ಸುರೇಶ ಮಾನಸಿಕ ಅಸ್ವಸ್ಥರಿದ್ದಾರೆ. ಉಳಿದಂತೆ ಬಸಮ್ಮನವರನ್ನೂ ಸೇರಿ ಮೂರು ಜನ ಹೆಣ್ಣು ಮಕ್ಕಳಿದ್ದಾರೆ. ಇವರನ್ನು ಗ್ರಾಮ ಬಿಟ್ಟು ಓಡಿಸಿದರೆ ಆಸ್ತಿಯೆಲ್ಲಾ ತಮ್ಮದಾಗುತ್ತದೆ ಎಂಬ ಆಲೋಚನೆ ಇವರ ಚಿಕ್ಕಪ್ಪ ಚಂದಪ್ಪನವರು. ಹಾಗಾಗಿ ಪ್ರತಿನಿತ್ಯ ಇವರಿಗೆ ಕಿರುಕುಳ ನೀಡಿದ್ದಾರೆ. ಇವರ ಕಾಟವನ್ನು ತಡೆಯಲಾರದೇ ಈಗಾಗಲೇ ಅಕ್ಕ ಗೌರಮ್ಮ ಮನೆಬಿಟ್ಟು ಹೋಗಿದ್ದಾರೆ. ಊರಿನ ಹಿರಿಯರೆಲ್ಲರೂ ಚಂದಪ್ಪನಿಗೆ ಬುದ್ದಿವಾದ ಹೇಳಿದರೂ ಸಹ ಕೇಳಲು ತಯಾರಿಲ್ಲ. ಹಾಗಾಗಿ ಇವರ ಕಿರುಕುಳವನ್ನು ತಾಳಲಾರದೇ ಬಸಮ್ಮ ರಾಜ್ಯಪಾಲರಿಗೆ ಪತ್ರವನ್ನು ಬರೆದಿದ್ದಾರೆ ( ವಿಜಯ ಕರ್ನಾಟಕ, ೨೫.೦೩.೨೦೧೩) . ಇದೇ ರೀತಿ ಇನ್ನೊಂದು ಪ್ರಕರಣ ಮೈಸೂರು ಭಾಗದಲ್ಲಿ ನಡೆದಿದೆ. ಮೈಸೂರು ಜಿಲ್ಲೆಯ ಹುಣಸೂರು ತಾಲೂಕಿನ ಬಿಳಿಕೆರೆ ಹೋಬಳಿ ದೇವರಹಳ್ಳಿ ನಿವಾಸಿ ಮಾಯಮ್ಮ ಮತ್ತು ಇವರ ಪುತ್ರಿಯರಾದ ಸಾವಿತ್ರಿ, ಜಯಮ್ಮ ಮತ್ತು ಕುಟುಂಬದವರು ದಯಾಮರಣಕ್ಕಾಗಿ ಅರ್ಜಿ ಸಲ್ಲಿಸಿದ್ದಾರೆ. ಮಾಯಮ್ಮ ಅವರಿಗೆ ಪಿತ್ರಾರ್ಜಿತವಾಗಿ ಮನುಗನಹಳ್ಳಿಯಲ್ಲಿ ಸ್ವಲ್ಪ ಜಮೀನು ಬಂದಿದೆ. ಆದರೆ ರಾಜುಗೌಡ ಎಂಬುವವರು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ, ತಮ್ಮ ಹೆಸರಿಗೆ ಅಕ್ರಮವಾಗಿ ಖಾತೆ ಮಾಡಿಸಿಕೊಂಡಿದ್ದಾರೆ. ಈ ಸಂಬಂಧ ಹುಣಸೂರು ಉಪ ವಿಭಾಗಾಧಿಕಾರಿ ನ್ಯಾಯಾಲಯದಲ್ಲಿ ಮಾಯಮ್ಮ ದೂರು ದಾಖಲಿಸಿ, ಈ ಪ್ರಕರಣ ವಿಚಾರಣೆ ನಡೆದು ಮಾಯಮ್ಮ ಪರವಾಗಿ ತೀರ್ಪು ಬಂದಿತ್ತು. ಆದರೆ

ರಾಜುಗೌಡ ಮಾತ್ರ ಮಾಯಮ್ಮನವರ ಆಸ್ತಿಯನ್ನು ಇನ್ನೂ ಬಿಟ್ಟುಕೊಟ್ಟಿಲ್ಲ. ಜಮೀನಿಗೆ ಹೋದ ಮಾಯಮ್ಮ ಮತ್ತು ಕುಟುಂಬದವರ ಮೇಲೆ ರಾಜುಗೌಡ ಮತ್ತು ಅವರ ಕಡೆಯವರು ಹಲ್ಲೆ ನಡೆಸಿದ್ದು, ಈ ಸಂಬಂಧ ಬಿಳಿಕೆರೆ ಠಾಣೆಯಲ್ಲಿ ದೂರು ದಾಖಲಾಗಿದೆ. ಇಷ್ಟೆಲ್ಲಾ ಆದರೂ ತಮಗೆ ತಮ್ಮ ಜಮೀನು ಬಿಟ್ಟು ಕೊಟ್ಟಿಲ್ಲ. ಇದಕ್ಕೆ ನೊಂದ ಮಾಯಮ್ಮನವರು ಜಮೀನನ್ನು ಕೊಡಿಸಿ ಅಥವಾ ದಯಾಮರಣಕ್ಕೆ ಅವಕಾಶ ಕಲ್ಪಿಸಿಕೊಡುವಂತೆ ಜಿಲ್ಲಾಧಿಕಾರಿ ಕಛೇರಿಗೆ ಅರ್ಜಿ ಸಲ್ಲಿಸಿದ್ದಾರೆ. (ಕನ್ನಡ ಪ್ರಭ, ದಿನಾಂಕ ೦೫.೦೬.೨೦೧೩).

ನ್ಯಾಯಬದ್ಧವಾಗಿ ಹಕ್ಕು ದೊರೆತಾಗಲೂ ಸಹ ಅದನ್ನು ಅನುಭವಿಸುವಲ್ಲಿ ಪುನಃ ಹಲವು ತೊಂದರೆಗಳನ್ನು ಎದುರಿಸಬೇಕಾದ ಶೋಚನೀಯ ಸ್ಥಿತಿ ಮಹಿಳೆಯರ ಆಸ್ತಿ ಹಕ್ಕಿನ ಸಂದರ್ಭದಲ್ಲಿ ಕಂಡುಬರುತ್ತದೆ. ಕಾನೂನು ತೀರ್ಮಾನಿಸಿದ ನ್ಯಾಯವನ್ನು ಯಾವುದೇ ಅಳುಕಿಲ್ಲದೆ ಧಿಕ್ಕರಿಸುವ ಧಾರ್ಷ್ಟ್ಯವನ್ನು ಪುರುಷ ಪ್ರಧಾನ ವ್ಯವಸ್ಥೆ ದಕ್ಕಿಸಿಕೊಂಡಿದೆ ಎಂಬುದಕ್ಕೆ ಮೇಲಿನ ಪ್ರಕರಣಗಳೇ ಸಾಕ್ಷಿಯಾಗುತ್ತವೆ. ತಮ್ಮ ಹಕ್ಕನ್ನು ಪಡೆಯಲು, ಅನುಭವಿಸಲು, ಉಳಿಸಿಕೊಳ್ಳಲು ನ್ಯಾಯಾಲಯದ ಮೊರೆಹೋಗಿ ಪಡೆದ ನಂತರವೂ ಅವುಗಳ ಮೇಲೆ ಅಧಿಕಾರವನ್ನು ಚಲಾಯಿಸುವಲ್ಲಿ ವಿಫಲವಾಗಬೇಕಾದ ಸಂದರ್ಭಗಳು ಎದುರಾಗುತ್ತವೆ. ಒಂದು ಕಡೆ ಹಕ್ಕುಗಳನ್ನು ಕಿತ್ತುಕೊಳ್ಳುವ ಮತ್ತೊಂದು ಕಡೆ ನ್ಯಾಯಬದ್ಧವಾಗಿ ಹಕ್ಕುಗಳನ್ನು ಕೊಡಮಾಡುವ ಎರಡು ವ್ಯವಸ್ಥೆಗಳ ನಡುವೆ ಸಿಲುಕಿದ ಮಹಿಳಾ ಸಮುದಾಯ ಬದುಕನ್ನು ಕೊನೆಗಾಣಿಸಿಕೊಳ್ಳುವುದೇ ಲೇಸು ಎಂಬ ತೀರ್ಮಾನಕ್ಕೆ ಬರಬೇಕಾದ ಅನಿವಾರ್ಯತೆಗೆ ಒಳಗಾಗುತ್ತದೆ. ಅಂದರೆ ಪುರುಷ ವ್ಯವಸ್ಥೆ ನೀಡುವ ಹಿಂಸೆಗಳನ್ನು ಸಹಿಸಲಾರದೆ ಹೇಡಿಗಳಂತೆ ಆತ್ಮಹತ್ಯೆ ಮಾಡಿಕೊಳ್ಳುವ ಬದಲು ಗೌರವಯುತ ಸಾವನ್ನು ಹೊಂದಲು ದಯಾಮರಣಕ್ಕೆ ಅವಕಾಶ ಕೊಡಿ ಎಂಬ ಅಸಹಾಯಕ ಸ್ಥಿತಿಗೆ ತಲುಪಿರುವುದು ಮೇಲಿನ ಪ್ರಕರಣಗಳಿಂದ ಕಂಡುಬರುತ್ತದೆ. ಕಾನೂನು ಹಾಗು ವ್ಯವಸ್ಥೆಯ ನಡುವಿನ ಅಂತರ ಹಾಗೂ ವೈರುಧ್ಯಗಳಿಗೆ ಬಲಿಯಾಗುವುದು ಮಹಿಳಾ ಸಮುದಾಯ ಎಂಬುದು ವಿಷಾಧನೀಯ.

**ಸ್ಥಳೀಯ ನ್ಯಾಯ ಪಂಚಾಯತಿಗಳಲ್ಲಿನ ತೊಡಕುಗಳು**

ಗ್ರಾಮೀಣ ಪ್ರದೇಶಗಳಲ್ಲಿ ಆಸ್ತಿಹಕ್ಕಿನ ವಿಷಯಕ್ಕೆ ಸಂಬಂಧಿಸಿದಂತೆ ಬಹಳಷ್ಟು ಪ್ರಕರಣಗಳು ಸ್ಥಳೀಯ ಮಟ್ಟದಲ್ಲಿಯೇ ನಿರ್ಧರಿತವಾಗುತ್ತಿರುತ್ತವೆ. ಆದರೆ ಇಲ್ಲಿ ನೀಡುವಂತಹ ತೀರ್ಮಾನ ಸಮಾನ ಹಕ್ಕುಗಳನ್ನು ಒದಗಿಸಿಕೊಡುತ್ತದೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ನ್ಯಾಯ ನೀಡುವವರೆಲ್ಲರೂ ಪುರುಷರೇ ಆಗಿರುತ್ತಾರಾದ್ದರಿಂದ ಅವರ ಆಲೋಚನಾ ವಿಧಾನದಲ್ಲಿಯೇ ನ್ಯಾಯ ತೀರ್ಮಾನಗಳು ನಡೆಯುತ್ತವೆ. ಹಾಗಾಗಿ ಇಲ್ಲಿ ಮಹಿಳೆಯರು ಹಲವು ಬಗೆಯ ತೊಡಕುಗಳನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಇಲ್ಲಿ ಸಂವಿಧಾನದ ಸಮಾನ ಆಶಯಗಳು ಮುನ್ನಲೆಗೆ ಬರದೇ ಸಾಮಾಜಿಕ ಮೌಲ್ಯಗಳಿಗೆ ಹೆಚ್ಚಿನ ಆದ್ಯತೆ ದೊರೆಯುತ್ತದೆ. ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ನಡೆಯುವ ನ್ಯಾಯ ತೀರ್ಮಾನಗಳಲ್ಲಿ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ

ಸಮಪಾಲು ದೊರೆಯುವ ಅಂಶಗಳು ತುಂಬಾನೆ ಕಡಿಮೆಯಾಗಿರುತ್ತವೆ. ಈ ರೀತಿಯಲ್ಲಿನ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಅವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ತಂಬ್ರಳ್ಳಿ ಗ್ರಾಮದಲ್ಲಿ ರಂಗಮ್ಮನವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲು ಕೇಳಿದ್ದಕ್ಕೆ ಇವರಿಗೆ ಸಮಪಾಲು ದೊರೆಯದೇ ನಿರಾಸೆಯನ್ನು ಅನುಭವಿಸಿದ್ದಾರೆ. ಇದಕ್ಕೆ ಕಾರಣ ಅವರ ಕುಟುಂಬದ ಸದಸ್ಯರು ಮಾಡಿದಂತಹ ರಾಜಿ ಪಂಚಾಯತಿಯಿಂದ. ಮುಖ್ಯವಾಗಿ ತಂದೆಯ ಆಸ್ತಿಯನ್ನು ಅಣ್ಣಂದಿರು ಭಾಗ ಮಾಡಿಕೊಳ್ಳುತ್ತಿದ್ದಾರೆ ಎಂದು ತಿಳಿದು, ಗಂಡನ ಒತ್ತಾಯಕ್ಕೆ ಆಸ್ತಿಯಲ್ಲಿ ಭಾಗ ಕೇಳಲು ಮುಂದಾಗಿದ್ದಾರೆ. ಆದರೆ ಇವರ ದೊಡ್ಡಣ್ಣ ರಾಮಪ್ಪ ಕೊಡಲು ನಿರಾಕರಿಸಿದ್ದಾನೆ. ಹಾಗಾಗಿ ರಂಗಮ್ಮನವರು ಕೋರ್ಟಿಗೆ ಹೋಗ್ತೀನಿ ಎಂದು ಹೇಳಿದ್ದಾರೆ. ಅದಕ್ಕೆ ರಾಮಪ್ಪ ಬ್ಯಾಡ ಇಲ್ಲೆ ನಮ್ ಊರಾಗಿನ ದೊಡ್ಡೋರನ್ನ ಕರ್ಸಿ ಮಾತಾಡಾನು ಅಂತ ಹೇಳಿದ್ದಾರೆ. ಹಾಗಾಗಿ ಒಂದು ದಿನ ಪಂಚಾಯತಿ ಸೇರಿದ್ದಾರೆ. ಇಲ್ಲಿ ಊರಿನ ಹಿರಿಯರು ಮತ್ತು ರಂಗಮ್ಮನವರ ದೊಡ್ಡಪ್ಪ ಎಲ್ಲರೂ ಸೇರಿ ಇವರಿಗೇ ಬುದ್ಧಿವಾದ ಹೇಳಿದ್ದಾರೆ. ರಂಗಮ್ಮ ಹೇಳುವಂತೆ "ನೀನು ಗಂಡನ ಮನ್ಯಾಗ ಇರೋಳು. ಇಲ್ಲಿ ನಿಮ್ಮ ಅಣ್ಣಂದ್ರಿಗೆ ಬಾಳ ಕಷ್ಟ ಐತಿ, ಅಂತಾದ್ರಾಗ ನಿಮ್ ಅಪ್ಪನ ಆಸ್ತಿನಾಗ ಭಾಗ ಕೊಡು ಅಂತ ಬಂದೀಯಲ್ಲ. ಹೆಣ್ಮಕ್ಕಳು ಮನ್ಯಾಗ ಅಣಿಗಿ ಮಣಿಗಿ ಇರ್ಬೇಕು. ಅದನ್ನ ಬಿಟ್ಟು ಹಿಂಗೆಲ್ಲಾ ಮನ್ಯಾಗಿನ ವಿಷ್ಯಾನ ಪಂಚಾತಿಗೆ ಎಳಿಯೋದು ಸರಿ ಕಾಣಂಗಿಲ್ಲ ಅಂತ ದೊಡ್ಡಪ್ಪ ಬೈದ್ರು. ಹಂಗೆ ಊರಿನ ಹಿರೇರು ನಿನಿಗೆ ಆಸ್ತಿನಾಗ ಭಾಗ ಕೊಡಾಕ ನಿಮ್ ಅಣ್ಣಂದ್ರು ಒಪ್ಪಂಗಿಲ್ಲ. ಅದನ್ನ ನಾವು ಸತೆ ಒಪ್ಪಂಗಿಲ್ಲ. ಯಾಕಂದ್ರ ನಿಮಿಗೆ ಮದುವಿ ಮಾಡ್ಯಾರ, ವರದಕ್ಷಿಣೆ ಅಂತ ಕೊಟ್ಟಾರ. ಎಷ್ಟೆಲ್ಲಾ ಖರ್ಚು ಮಾಡ್ಯಾರ. ಇದನ್ನೆಲ್ಲಾ ಲೆಕ್ಕ ಹಾಕಿದ್ರ ನೀನು ಆಸ್ತಿ ಕೇಳದಕ್ಕಿಂತ ಜಾಸ್ತಿ ಆಗತೈತಿ. ಹಂಗಾಗಿ ಆಸ್ತಿನಾಗ ಭಾಗ ಕೇಳೋದೇ ಮೊದಲ್ನೇ ತಪ್ಪು. ಅಂತಾದ್ರಾಗ ನೀನು ಹಿಂಗ ಕೇಳ್ತೀಯಲ್ಲಾ ಅಂತ ಹೇಳಿ ನಿಮ್ ಅಣ್ಣಂದ್ರ ನಿನಿಗೆ ಸ್ವಲ್ಪ ದುಡ್ಡು ಕೊಡ್ತಾರ ಅದನ್ನ ತಗಂಡು ಆರಾಮಾಗಿ ಇದ್ದು ಬಿಡು. ಮತ್ತೆ ತವ್ರಮನಿಗಿ ಸತೆ ಬಂದು ಹೋಗ್ತಿರು ಅಂತ ಹೇಳಿ, ಒಂದು ಪತ್ರಕ್ಕ ಸಹಿ ಮಾಡಿಸಿಕೊಂಡು ಇಪ್ಪತ್ತು ಸಾವಿರ ರೂಪಾಯಿ ಕೊಟ್ರು". ಎಂದರು.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ತೋರಣಗಲ್ಲು ಗ್ರಾಮದಲ್ಲಿನ ಚಂದ್ರಮ್ಮ ಹೇಳುವಂತೆ "ನಾನು ನಮ್ಮ ತಾಯಿಗೆ ಒಬ್ಬೇ ಮಗಳು, ನನಿಗೆ ಅಣ್ಣ, ತಮ್ಮ ಯಾರೂ ಇಲ್ಲ. ನಮ್ ಅಪ್ಪನ ಹೆಸ್ರು ಮೂಕಜ್ಜ, ಅಮ್ಮನ ಹೆಸ್ರು ತಾಯಮ್ಮ. ನಮ್ಮ ಅಪ್ಪ ಅಮ್ಮಗ ನೋಡಿಕೆಳ್ಳಾಕ ಗಂಡು ಮಕ್ಕಿಲ್ಲ ಅನ್ನೋ ಕಾರಣಕ್ಕ ನನ್ನ ದೇವ್ರಿಗೆ ಬಿಟ್ಟಾರ. ನಮ್ಮ ಅಪ್ಪಗ ನಾಕು ಎಕ್ರೆ ಜಮೀನು ಮತ್ತೆ ಒಂದು ಮನಿ ಐತಿ. ನಾನು ಕೂಲಿ ಕೆಲ್ಸ ಮಾಡಿ ನಮ್ಮ ಅಪ್ಪ ಅಮ್ಮಗ ಸಾಕ್ತಿದ್ದೆ. ಹಿಂಗ ಇದ್ದಾಗ ನಮ್ ಅಪ್ಪ ತೀರಿಕೆಂಡ. ಹಂಗಾಗಿ ಹೊಲ್ದಾಗ ಕೆಲ್ಸ ಮಾಡೋದು ಬಾಳ ಕಷ್ಟ ಆಗತಿತ್ತು.

ನಮ್ ದೊಡ್ಡಪ್ಪನ ಮಗ ವಾರಿಗೇಲಿ ಅಣ್ಣ ಆಗ್ತಾನ. ಇವ್ನು ಯಾರ್‍ದೂ ಗೊತ್ತಾಗ್ಲಾರ್‍ದಂಗ ನಮ್ ಜಮೀನನ್ನ ಕಿತ್ಕಳ್ಯಾಕ ನೋಡ್ದ. ನಾನು ಕೇಳ್ಲಿಲ್ಲ. ಆದ್ರೂ ಅವ್ನು ಸುಮ್ನೆ ಬಿಡ್ಲಿಲ್ಲ. ಈ ಮನಿ ಮತ್ತೆ ಭೂಮಿ ಮ್ಯಾಲೆ ನಿಮಗೆ ಹಕ್ಕಿಲ್ಲ. ನಮ್ ಚಿಕ್ಕಪ್ಪ ಸಾಯೋವರ್‍ಗೂ ನೋಡಿಕೊಂಡೋನು ನಾನೇ. ಹಂಗಾಗಿ ಆಸ್ತಿಯೆಲ್ಲಾ ನನ್ದು. ನಿನಿಗೆ ಏನೂ ಬರಂಗಿಲ್ಲ. ಲೆಕ್ಕಕ್ಕ ನೋಡಿದ್ರೆ ತಂದಿ ಆಸ್ತಿ ಗಂಡು ಮಕ್ಕಳಿಗೇ ಹೋಗ್ಬೇಕು. ಆದ್ರೆ ನಮ್ ಚಿಕ್ಕಪ್ಪಗ ಗಂಡು ಮಕ್ಕಿಲ್ಲ. ಹಂಗಾಗಿ ನಾನೇ ಚಿಕ್ಕಪ್ಪಗ ಗಂಡು ಮಗ ಇದ್ದಂಗ. ನೀವು ಇದಕ್ಕ ಸಂಬಂಧಿಲ್ಲ ಅಂತ ಹೇಳಿಬಿಟ್ಟ. ನನಗ ಬಾಳ ಸಿಟ್ಟು ಬಂದಿತ್ತು. ಆದ್ರೆ ಏನೂ ಮಾತಾಡಂಗಿಲ್ಲ. ನನಿಗೆ ಮದುವಿನಾದ್ರೂ ಆಗಿದ್ರೆ ನನ ಗಂಡ ಮಾತಾಡ್ತಿದ್ದ. ಇಷ್ಟು ಅನ್ಯಾಯ ಆಗಾಕ ಬಿಡ್ತಿರಲಿಲ್ಲ. ಹೆಣ್ಣೆಂಗ್ಸು ಏನ್ ಮಾಡೋದು. ಆದ್ರೆ ಇವ್ನಿಗೆ ಸರೀಗಿ ಬುದ್ದಿ ಕಲ್ಸಬೇಕು ಅಂತೇಳಿ. ನಾನು ಅವ್ರ ಮನಿಗೆ ಹೋಗಿ ನಮ್ ಅಪ್ಪಗ ಸೇರಿದ ಆಸ್ತಿನ ನಮ್ಗೆ ಬಿಟ್ಟು ಕೊಡು ಇಲ್ಲಾಂದ್ರೆ ನಾನು ಪಂಚಾತಿ ಸೇರಿಸ್ತೀನಿ ಅಂತ ಹೇಳಿಬಂದೆ. ಆದ್ರೆ ಅವ್ರು ಕೇಳ್ಲಿಲ್ಲ. ಹಂಗಾಗಿ ಊರಾಗಿನ ದೊಡ್ಡ ಮನುಷ್ಯರನ್ನ ಕರ್‍ದು ಊರಾಗ ಪಂಚಾತಿ ಸೇರ್‍ಸಿದೆ. ಪಂಚಾತಿಯಾಗ ಹಿರೇರು ' ಮೂಕಜ್ಜಂದು ಇರೋದು ನಾಕು ಎಕ್ರೆ ಜಮೀನು. ಅದಕ್ಕ ನೀವಿಬ್ರು ಯಾಕ ಜಗಳಾ ಆಡಕತ್ತೀರಿ. ನಿನಿಗೆ ಬ್ಯಾರೆ ಮಕ್ಕಳಿಲ್ಲ. ಹಂಗೆ ನೀನೊಬ್ಬಳೇ ನಾಕು ಎಕ್ರೆನಾಗ ಕೆಲ್ಸ ಹೆಂಗ ಮಾಡ್ತೀ. ಅದಕ್ಕ ಎರಡು ಎರಡು ಎಕ್ರೆ ಸಮನಾಗಿ ಹಂಚಿಕೆಂಡು ಬಿಡ್ರಿ ಅಂತ ತೀರ್ಮಾನ ಕೊಟ್ರು. ನಾನೇನ್ ಮಾಡ್ಲಿ. ನಂನ್ದು ಅಂತ ಇರೋ ಜಮೀನ್ದಾಗ ಎರಡು ಎಕ್ರೆ ಕಸ್ಕಂಡು ತಿಂದ್ರು. ಏನ್ ಮಾಡೋದು ಅಂತೇಳಿ ದೊಡ್ಡೋರ ಮಾತಿಗಿ ಬೆಲಿ ಕೊಟ್ಟು ಸುಮ್ನಾದೆ ಎಂದರು.

ಈ ಎರಡು ಪ್ರಕರಣಗಳನ್ನು ಗಮನಿಸಿದಾಗ ಸ್ಥಳೀಯ ಪಂಚಾಯತಿಗಳು ಎಷ್ಟೊಂದು ಬಲಿಷ್ಟವಾಗಿರುತ್ತವೆ ಮತ್ತು ಮಹಿಳೆಯರ ಹಕ್ಕುಗಳನ್ನು ಹೇಗೆ ಕಸಿದುಕೊಳ್ಳುತ್ತವೆ ಎಂಬುದು ತಿಳಿದು ಬರುತ್ತದೆ. ಮುಖ್ಯವಾಗಿ ರಂಗಮ್ಮನವರು ತಮ್ಮ ತಂದೆಯ ಆಸ್ತಿಯಲ್ಲಿ ಪಾಲನ್ನು ಕೇಳಿದ್ದಕ್ಕೆ ಪಂಚಾಯತಿ ಮುಖಂಡರಿಂದ ತೆಗಳಿಕೆಗೆ ಒಳಪಡುತ್ತಾಳೆ. ಮತ್ತು ಮಹಿಳೆ ಯಾವಾಗಲೂ ಕುಟುಂಬದ ಒಳಗಡೆಯೇ ಇರಬೇಕು ಮತ್ತು ನಯ ನಾಜೂಕಿನಿಂದ ಜೀವನವನ್ನು ನಡೆಸಬೇಕು ಎಂಬ ಮಾತುಗಳು ಊರಿನ ಮುಖಂಡರಿಂದ ಕೇಳಿಬರುತ್ತವೆ. ಅಂದರೆ ರಂಗಮ್ಮನವರ ದೊಡ್ಡಪ್ಪ ಹೇಳುವ 'ಹೆಣ್ಮಕ್ಕಳು ಮನ್ಯಾಗ ಅಣಿಗಿ ಮಣಿಗಿ ಇರ್‍ಬೇಕು. ಅದನ್ನ ಬಿಟ್ಟು ಹಿಂಗೆಲ್ಲಾ ಮನ್ಯಾಗಿನ ವಿಷ್ಯಾನ ಪಂಚಾತಿಗೆ ಎಳಿಯೋದು ಸರಿ ಕಾಣಂಗಿಲ್ಲ' ಎನ್ನುವ ಮಾತುಗಳು ಮಹಿಳೆಯರನ್ನು ಪುರುಷ ವ್ಯವಸ್ಥೆ ನೋಡುವ ಕ್ರಮವನ್ನು ಅನಾವರಣ ಮಾಡುತ್ತದೆ. ಇನ್ನೊಂದು ಪ್ರಕರಣದಲ್ಲಿ ಚಂದ್ರಮ್ಮನವರು ಹೆಣ್ಣು ಎಂಬ ಕಾರಣಕ್ಕಾಗಿ ಅವಳಿಗೆ ಆಸ್ತಿಯ ಹಕ್ಕನ್ನು ನಿರಾಕರಿಸುವುದಲ್ಲದೆ ದೇವದಾಸಿ ಎಂಬ ಮತ್ತೊಂದು ಕಾರಣಕ್ಕೆ ಅವಳಿಗೆ ಸಿಗಬೇಕಾದ ಆಸ್ತಿಯನ್ನು ದೌರ್ಜನ್ಯದ ಮೂಲಕ ಕಿತ್ತುಕೊಂಡಿರುವುದು ಕಂಡುಬರುತ್ತದೆ. ಕುಟುಂಬದ ಚೌಕಟ್ಟಿನೊಳಗೆ ವಾರಸುದಾರಿಕೆ, ಉತ್ತಾಧಿಕಾರಗಳು ಕೇವಲ ಪುರುಷನಿಗೆ ಮಾತ್ರ

ಅನ್ವಯಿಸುವಂತೆ ಕೆಲವು ನಿಯಮಗಳು ರೂಪಿಸಲ್ಪಟ್ಟಿವೆ. ಮತ್ತು ಅವುಗಳು ಜಾರಿಗೊಳಿಸಿಕೊಂಡು ಸಹ ಬಂದಿದೆ. ಆದರೆ ಕಾನೂನು ಈ ನಿಯಮಗಳನ್ನು ಮಾನ್ಯ ಮಾಡುವುದಿಲ್ಲ. ಕಾನೂನಿನ ದೃಷ್ಟಿಯಲ್ಲಿ ಮಹಿಳೆಯು ಪುರುಷನಷ್ಟೇ ಹಕ್ಕುದಾರಳು ಎಂದು ಹೇಳುತ್ತದೆ. ಆದರೂ ಸಹ ಕಾನೂನಿನ ನಿಯಮಗಳನ್ನು ಯಾವುದೇ ಅಳುಕಿಲ್ಲದೇ ವ್ಯವಸ್ಥೆ ಉಲ್ಲಂಘಿಸುತ್ತಲೇ ಬರುತ್ತಿದೆ. ಈ ರೀತಿಯ ಕಾನೂನು ಉಲ್ಲಂಘನೆಗೆ ಶಿಕ್ಷೆ ವಿಧಿಸಲಾಗುತ್ತದೆ ಎಂಬ ನಿಯಮಗಳಿದ್ದರೂ ಇವು ಯಾವುದರ ಪರಿವೇ ಇಲ್ಲದಂತೆ ಪುರುಷ ವ್ಯವಸ್ಥೆ ಮುಂದುವರೆದಿದೆ. ಅದೇ ಈ ಪ್ರಕರಣದಲ್ಲಿ ಕಾಣಸಿಗುವ ಪ್ರಮುಖ ಅಂಶವಾಗಿದೆ. ಹೆಣ್ಣು ಮಕ್ಕಳು ಆಸ್ತಿಯನ್ನು ನಿಭಾಯಿಸಲಾರರು ಎಂಬ ಮನೋಧೋರಣೆ ಪುರುಷ ಪ್ರಧಾನ ವ್ಯವಸ್ಥೆಯದು. ಈ ಕಾರಣಕ್ಕಾಗಿ ಮಹಿಳೆಯರು ಕೇವಲ ಕೊಟ್ಟಿದ್ದನ್ನು ಮಾತ್ರ ತೆಗೆದುಕೊಂಡು ಇರಬೇಕೇ ವಿನಃ ಯಾವುದೇ ಹಕ್ಕಿನ ಕುರಿತು ಮಾತನಾಡಬಾರದು. ಅದು ಅವರ ಹಕ್ಕಲ್ಲ ಎಂಬಂತೆ ವ್ಯವಸ್ಥೆ ನಡೆಸಿಕೊಳ್ಳುತ್ತದೆ. ಈ ಪ್ರಕರಣದಲ್ಲಿ ಚಂದ್ರಮ್ಮನವರ ತಂದೆಗೆ ಗಂಡು ಮಕ್ಕಳಿಲ್ಲ. ಹಾಗಾಗಿ ತಾನೇ ವಾರಸುದಾರನೆಂದು ಆಕೆಯ ದೊಡ್ಡಪ್ಪನ ಮಗ ಸ್ವಯಂ ಘೋಷಿಸಿಕೊಳ್ಳುತ್ತಾನೆ. ವ್ಯವಸ್ಥೆಯಲ್ಲಿನ ಸಾಮಾಜೀಕರಣದ ಪ್ರಕ್ರಿಯೆಯು ಪುರುಷನು ತನ್ನದಲ್ಲದ್ದನ್ನು ಅತಿಕ್ರಮವಾಗಿ ಆಕ್ರಮಿಸುವ ಮನೋಧೋರಣೆಯನ್ನು ಬೆಳೆಸಿ ದೌರ್ಜನ್ಯವೆಸಗಲು ಪ್ರೇರಣೆಯಾದರೆ, ಮಹಿಳೆಯರು ಸ್ವತಃ ತಮ್ಮದ್ದನ್ನು ಉಳಿಸಿಕೊಳ್ಳಲಾಗದ ಅಸಹಾಯಕ ಪರಿಸ್ಥಿತಿಗೆ ತಲುಪುವಂತಹ ಸಾಮಾಜೀಕರಣವನ್ನು ನೀಡಲಾಗುತ್ತದೆ. ಒಂದೇ ವ್ಯವಸ್ಥೆಯೊಳಗಿನ ಭಿನ್ನ ಸಾಮಾಜಿಕ, ಕೌಟುಂಬಿಕ ಪರಿಸರಗಳು ಈ ರೀತಿಯ ವೈರುಧ್ಯಗಳಿಗೆ ಕಾರಣಗಳಾಗುತ್ತವೆ. ಹಾಗಾಗಿಯೇ ಕುಟುಂಬದಲ್ಲಿ ಮಹಿಳೆಯರು ಹಕ್ಕು ಇಲ್ಲದವರಾಗಿರುತ್ತಾರೆ. ತಮ್ಮ ಹಕ್ಕುಗಳನ್ನು ಕೇಳಿದರೆ ಪಾಪಿಗಳಾಗುತ್ತಾರೆ, ಅಪರಾಧಿಗಳಾಗುತ್ತಾರೆ, ಬಹಿಷ್ಕೃತರಾಗುತ್ತಾರೆ. ಹೀಗೆ ತಮ್ಮದನ್ನು ಕೇಳುವ ಅಧಿಕಾರವನ್ನು ಕೊಡುವಲ್ಲಿಯೂ ಸಹ ವ್ಯವಸ್ಥೆ ತರತಮ ಧೋರಣೆಯನ್ನು ತೋರುತ್ತದೆ. ಆ ಕಾರಣಕ್ಕಾಗಿ ಚಂದ್ರಮ್ಮ ತನಗೆ ಸೇರಬೇಕಾದ ನಾಲ್ಕು ಎಕರೆ ಜಮೀನಿನಲ್ಲಿ ಎರಡು ಎಕರೆಯನ್ನು ಪಡೆದುಕೊಳ್ಳುತ್ತಾಳೆ.

ಸ್ಥಳೀಯ ನ್ಯಾಯ ಪಂಚಾಯತಿಗಳು ಸಂವಿಧಾನ ಬದ್ಧವಾಗಿ ಎಲ್ಲರಿಗೂ ಕೊಡಮಾಡಲ್ಪಟ್ಟ ಹಕ್ಕುಗಳನ್ನು ಕಿತ್ತುಕೊಳ್ಳುತ್ತಿರುವ ಘಟನೆಗಳು ಇಂದಿಗೂ ನಡೆಯುತ್ತಿವೆ. ಗ್ರಾಮೀಣ ಭಾಗಗಳಲ್ಲಿ ಈ ಪಂಚಾಯತಿಗಳಿಗೆ ಇನ್ನಿಲ್ಲದ ಮಾನ್ಯತೆ ಇರುತ್ತದೆ. ಇನ್ನೊಂದು ಮುಖ್ಯವಾದ ವಿಷಯವೆಂದರೆ ಇಲ್ಲಿ ನ್ಯಾಯ ಸ್ಥಾನದಲ್ಲಿ ನ್ಯಾಯ ನೀಡುವವರು ಪುರುಷರೇ ಆಗಿರುತ್ತಾರೆ. ಹಾಗಾಗಿ ಅವರು ಮಹಿಳೆಯರನ್ನು ನೋಡುವ ಕ್ರಮದಲ್ಲೇನೂ ಬದಲಾವಣೆಗಳು ಕಂಡುಬರುವುದಿಲ್ಲ. ಆ ಕಾರಣಕ್ಕಾಗಿ ನ್ಯಾಯ ತೀರ್ಮಾನಗಳೂ ಸಹ ಪುರುಷ ಪರವಾಗಿರುತ್ತವೆ. ಹೀಗೆ ಇವುಗಳೂ ಸಹ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷರಷ್ಟೇ ಸಮಪಾಲನ್ನು ಪಡೆಯಲು ಬಹು ದೊಡ್ಡ ತೊಡಕುಗಳಾಗಿವೆ. ಈ ಕುರಿತಂತೆ ಕ್ಷೇತ್ರಕಾರ್ಯದಲ್ಲಿ

ಕೇಳಲಾದ ಪ್ರಶ್ನೆಗೆ ಹಲವು ಮಹಿಳೆಯರು ಉತ್ತರಿಸಿದ್ದು ಅವುಗಳ ಅಂಕಿಸಂಖ್ಯೆಗಳು ಈ ಕೆಳಗಿನಂತಿವೆ.

**ಕೋಷ್ಟಕ ೬.೨.೫**

**ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು**

| **ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು** | **ಹೌದು** | | **ಗೊತ್ತಿಲ್ಲ** | |
|---|---|---|---|---|
| ದಾಖಲೆಗಳಿಲ್ಲದಂತೆ ಮಾಡುವುದು | ೧೧೦ | ೩೬.೬೬ | ೧೯೦ | ೬೩.೩೩ |
| ಜೀವ ಬೆದರಿಕೆಯನ್ನು ಹಾಕುವುದು | ೧೯೭ | ೬೫.೬೬ | ೧೦೩ | ೩೪.೩೩ |
| ಕೊಲೆ ಮಾಡುವುದು | ೨೩೦ | ೭೬.೬೬ | ೭೦ | ೨೩.೩೩ |
| ಸ್ಥಳೀಯ ಪಂಚಾಯತಿಗಳಲ್ಲಿನ ತೊಡಕುಗಳು | ೧೪೦ | ೪೬.೬೬ | ೧೬೦ | ೫೩.೩೩ |

*ನ್ಯಾಯ ಪ್ರಕ್ರಿಯೆಯಲ್ಲಿನ ತೊಡಕುಗಳಲ್ಲಿ ದಾಖಲೆಗಳಿಲ್ಲದಂತೆ ಮಾಡುವುದು ಸೂಚಕ

* ಅಪರಾಧ ತಡೆ ವಿಭಾಗದ ತೊಡಕುಗಳಲ್ಲಿ ಇತರ ಸೂಚಕಗಳು ಬರುತ್ತವೆ.




**ರೇಖಾ ಚಿತ್ರ ೬.೨.೫ ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು**

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಆಸ್ತಿಗಾಗಿ ಮಹಿಳೆಯರು ನ್ಯಾಯಾಲಯದ ಮೆಟ್ಟಿಲೇರಿದ ಸಂದರ್ಭದಲ್ಲಿ ದಾಖಲೆಗಳು ಇಲ್ಲದಂತೆ ಮಾಡುವುದು ಬಹುದೊಡ್ಡ ತೊಡಕಾಗಿ ಪರಿಣಮಿಸಿದೆ ಎನ್ನುವವರ ಸಂಖ್ಯೆ ೧೧೦ರಷ್ಟಿದೆ. ಹಾಗೆಯೇ ಜೀವ ಬೆದರಿಕೆಗೆ ಸಂಬಂಧಿಸಿದಂತೆ ೧೯೭ ಜನರು ಹೌದು ಎಂಬ ಉತ್ತರವನ್ನು ನೀಡಿದ್ದಾರೆ. ಮುಖ್ಯವಾಗಿ

ಆಸ್ತಿಯನ್ನು ಕೇಳಿದರೆ ಕೊಲೆ ಮಾಡುವುದಕ್ಕೂ ಹೇಸುವುದಿಲ್ಲ ಎಂದು ಹೇಳಿದವರ ಪ್ರಮಾಣ ಶೇ.೭೬.೬೬ ರಷ್ಟಿದೆ. ಮತ್ತು ಗ್ರಾಮೀಣ ಭಾಗಗಳಲ್ಲಿ ನಡೆಯುವ ರಾಜಿ ಪಂಚಾಯತಿಗಳು ತುಂಬಾ ತಾರತಮ್ಯದಿಂದ ಕೂಡಿರುತ್ತವೆ. ಹಾಗಾಗಿ ಆಸ್ತಿಯಲ್ಲಿ ಸರಿಯಾದ ಪ್ರಮಾಣದಲ್ಲಿ ಪಾಲು ದೊರೆಯುವುದಿಲ್ಲ ಎಂಬುದನ್ನು ಹೇಳುವವರ ಪ್ರಮಾಣ ಶೇ.೪೬.೬೬ರಷ್ಟಿದೆ. ಒಟ್ಟಾರೆಯಾಗಿ ಆಸ್ತಿಯನ್ನು ಪಡೆಯಲು ನ್ಯಾಯವನ್ನು ಒದಗಿಸಿಕೊಡುವಂತಹ ನ್ಯಾಯ ಪಂಚಾಯತಿಗಳಲ್ಲಿಯೇ ಮಹಿಳೆಯರು ಬಹಳಷ್ಟು ತೊಡಕುಗಳನ್ನು ಎದುರಿಸುತ್ತಿರುವುದು ಕಂಡುಬರುತ್ತದೆ.

ನ್ಯಾಯ ವ್ಯವಸ್ಥೆಯಲ್ಲಿನ ತೊಡಕುಗಳು ಮಹಿಳೆಯರ ಆಸ್ತಿ ಹಕ್ಕಿನ ಸದುಪಯೋಗಕ್ಕಿರುವ ಪ್ರಮುಖ ಅಡ್ಡಿಗಳಾಗಿವೆ. ಕಾನೂನಿನ ತೀರ್ಮಾನವೇ ಅಂತಿಮ ಎನ್ನುವ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಕಾನೂನಿನ ತೀರ್ಮಾನಗಳು ನಿರ್ಲಕ್ಷಕ್ಕೆ ಒಳಪಡುವಂತಹ ಸ್ಥಿತಿ ಜಾರಿಯಲ್ಲಿದೆ. ಮಹಿಳೆಯರನ್ನು ಆಸ್ತಿಹಕ್ಕಿನಿಂದ ಹೊರಗಿಡಲು ಪುರುಷ ವ್ಯವಸ್ಥೆಯು ಮೇಲಿನ ಮಾರ್ಗಗಳನ್ನು ಕಂಡುಕೊಳ್ಳುವುದು ಮತ್ತು ಆ ಮೂಲಕ ತನ್ನ ಕಾರ್ಯ ಸಾಧನೆಯನ್ನು ಸಾಧಿಸುವುದು ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ಅಪರಾಧ ತಡೆ ವಿಭಾಗಗಳು ಮತ್ತು ಸ್ಥಳೀಯ ನ್ಯಾಯಪಂಚಾಯತಿಗಳು ಲಿಂಗ ಸೂಕ್ಷ್ಮತೆಯನ್ನು ಹೊಂದಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಮಹಿಳೆಯರು ಆಸ್ತಿಯನ್ನು ಪಡೆದುಕೊಂಡ ನಂತರದಲ್ಲಿಯೂ ಸಹ ಅವರ ಮೇಲೆ ನಡೆಯುವ ಹಲ್ಲೆಗಳನ್ನು ನಿಯಂತ್ರಸಲು ಮತ್ತು ಮಹಿಳೆಯರಿಗೆ ಭದ್ರತೆಯನ್ನು ಒದಗಿಸುವ ನಿಟ್ಟಿನಲ್ಲಿ ಈ ಅಪರಾಧ ತಡೆ ವಿಭಾಗಗಳು ಕಾರ್ಯ ಪ್ರವೃತ್ತರಾಗಬೇಕಾಗಿದೆ.

ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಮೌಲ್ಯಗಳು ಎಷ್ಟೊಂದು ಬಲಿಷ್ಠವಾಗಿರುತ್ತವೆ ಎಂದರೆ ಆ ಮೌಲ್ಯಗಳಿಗೆ ಒಂದು ಬಾರಿ ಒಳಗಾದರೆ ಸಾಕು ಅವುಗಳಿಂದ ಹೊರಬರಲಾಗುವುದಿಲ್ಲ. ಆ ಮೌಲ್ಯಗಳಡಿಯಲ್ಲಿಯೇ ಬದುಕಬೇಕಾದ ಮತ್ತು ಸಾಯಬೇಕಾದ ಅನಿವಾರ್ಯತೆ ಎದುರಾಗುತ್ತದೆ. ಇದಕ್ಕೆ ಸ್ತ್ರೀ–ಪುರುಷರೆಲ್ಲರೂ ಒಳಗಾಗಿದ್ದಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಿರುವುದು ಏನೆಂದರೆ ಮೌಲ್ಯಗಳು ತುಂಬಾ ಬಿಗಿಯಾಗಿರುವುದು ಮಹಿಳೆಯರ ವಿಷಯದಲ್ಲಿಯೇ ಹೊರತು ಪುರುಷರ ವಿಷಯದಲ್ಲಲ್ಲ. ಹಾಗಾಗಿ ಮಹಿಳೆಯರು ಕುಟುಂಬದ ಆಚೆಗಿನ ಬದುಕನ್ನು ಕಲ್ಪಿಸಿಕೊಳ್ಳುವುದೂ ಸಹ ತುಂಬಾ ಕಷ್ಟದ ವಿಚಾರವಾಗಿ ಮಾರ್ಪಟ್ಟಿದೆ. ನಗರ ಪ್ರದೇಶದ ಶಿಕ್ಷಿತ ಮಹಿಳೆಯರಲ್ಲಿ ಇದಕ್ಕೆ ಹೊರತಾದ ಪರಿಸ್ಥಿತಿಯನ್ನು ಕಾಣಬಹುದಾದರೂ, ಅದು ಬೆರಳೆಣಿಕೆಯಷ್ಟು ಮಾತ್ರ. ಆದರೆ ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರ ಸ್ಥಿತಿ ತುಂಬಾ ಶೋಚನೀಯವಾಗಿದೆ. ಇಂದಿಗೂ ಸಹ ಮಹಿಳೆಯರು ತಮ್ಮ ಇಡೀ ಜೀವನವನ್ನೇ ಪುರುಷರಿಗೆ ಮುಡುಪಾಗಿಟ್ಟಿರುತ್ತಾರೆ. ಪುರುಷನೇ ಅವಳ ರಕ್ಷಕನಾಗಿರುತ್ತಾನೆ. ಅವನ ಅಡಿಯಲ್ಲಿಯೇ ಅವಳು ಜೀವಿಸಬೇಕು. ಅವನು ಇಲ್ಲದಿದ್ದರೆ ಅವಳಿಗೆ ಭದ್ರತೆಯೇ ಇಲ್ಲ ಎಂಬಂತಹ ಭ್ರಮೆಯನ್ನು ಸೃಷ್ಟಿಸಲಾಗಿದೆ. ಹಾಗಾಗಿ ಮಹಿಳೆಯರು ಪುರುಷನ ದಾಸ್ಯದಲ್ಲಿಯೇ ಜೀವಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ. ಇದನ್ನು ವಿರೋಧಿಸಿದರೆ ಅವಳಿಗೆ ಅನೇಕ ಬಗೆಯಲ್ಲಿ

ತೊಂದರೆಗಳು ಉಂಟಾಗುತ್ತವೆ. ಮುಖ್ಯವಾಗಿ ಮಹಿಳೆಯರ ಈ ಅಧೀನ ನೆಲೆಗೆ ಕಾರಣ ಅವರ ಆರ್ಥಿಕ ಅಧೀನತೆ. ಇದು ಪರಾವಲಂಬಿತನವನ್ನು ಉಂಟುಮಾಡುತ್ತದೆ. ಆದರೆ ಈ ಪರಾ ವಲಂಬಿತನದಿಂದ ಆಚೆ ಬರಲು ವ್ಯವಸ್ಥೆಯಲ್ಲಿ ಹಲವಾರು ಕಾನೂನಾತ್ಮಕ ಬದಲಾವಣೆಗಳು ನಡೆದಿವೆ. ಅವುಗಳಲ್ಲಿ ಹಿಂದೂ ವಾರಸಾ ಅಧಿನಿಯಮವೂ ಕೂಡ ಒಂದು. ಆದರೆ ಇದನ್ನು ಬಳಸಿಕೊಳ್ಳುವಲ್ಲಿ ಮಹಿಳೆಯರು ಅನೇಕ ಕಟ್ಟಳೆಗಳಿಗೆ ಒಳಗಾಗಿ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಲು ನಿರಾಕರಿಸುತ್ತಿದ್ದಾರೆ. ಕೆಲವು ಮಹಿಳೆಯರು ಕಾನೂನಿನ ಮೊರೆಹೋಗಿ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದಿದ್ದಾರೆ. ಆದರೆ ಹೀಗೆ ಪಡೆದವರೆಲ್ಲಾ ತುಂಬಾ ಸುಲಭವಾಗಿ ಪಡೆದಿಲ್ಲ. ಬದಲಾಗಿ ಪುರುಷಶಾಹಿ ವ್ಯವಸ್ಥೆಯು ನೀಡಿದ ಹಲವು ಸಮಸ್ಯೆಗಳನ್ನು ಎದುರಿಸಿ ತಮ್ಮ ಪಾಲಿನ ಆಸ್ತಿಯನ್ನು ಪಡೆದಿರುವುದು ಕಂಡುಬರುತ್ತದೆ.

ಪಿತೃಪ್ರಧಾನ ವ್ಯವಸ್ಥೆಯು ತನ್ನದೇ ಆದಂತಹ ನಿಯಮಗಳನ್ನು ವ್ಯವಸ್ಥೆಯಲ್ಲಿ ರೂಢಿಯಲ್ಲಿರಿಸಿದೆ. ಮುಖ್ಯವಾಗಿ ಮಹಿಳೆಗೆ ಕೆಲವು ಸ್ಥಿರಮಾದರಿ ಪಾತ್ರಗಳನ್ನು ಸೃಷ್ಟಿಸುವುದರ ಮೂಲಕ ಅವಳನ್ನು ಕುಟುಂಬದ ಚೌಕಟ್ಟಿಗೆ ಸೀಮಿತಳನ್ನಾಗಿ ಮಾಡಲಾಗಿದೆ. ಹಾಗಾಗಿ ಮಹಿಳೆ ಇಂದು ಪುರುಷನ ನಿರಂತರ ಹಿಂಸೆಗೆ ಒಳಗಾಗುತ್ತಲೇ ಇದ್ದಾಳೆ. ಮುಖ್ಯವಾಗಿ ಆರ್ಥಿಕತೆಯ ವಿಚಾರಕ್ಕೆ ಬಂದಾಗ ಮಹಿಳೆಯರು ಪುರುಷರ ಅಧೀನದಲ್ಲಿಯೇ ಇರಬೇಕು ಎಂಬ ಮನೋಭಾವ ಇದೆ. ಹಾಗಾಗಿ ಗಂಡು ಮಗುವನ್ನು ಪಡೆಯುವ ಅಭಿಲಾಷೆ ಹೆಚ್ಚುತ್ತಾ ಸಾಗುತ್ತಿದೆ. ವಂಶವನ್ನು ಬೆಳಗಿಸುವ, ಆಸ್ತಿಯ ಉತ್ತರಾಧಿಕಾರಿಯಾಗಿ ಗುರುತಿಸಲ್ಪಡುವ ಪುರುಷ, ಮಹಿಳೆಯನ್ನು ತಿರಸ್ಕರಿಸುತ್ತಲೇ ಬರುತ್ತಿದ್ದಾನೆ.

ಮಹಿಳೆಯರ ವಿರುದ್ಧ ನಡೆಸುವ ಕ್ರೌರ್ಯ ಪುರುಷ ಪ್ರಧಾನ ಸಮಾಜದ ಅಭಿವ್ಯಕ್ತಿಯ ಒಂದು ರೂಪ ಎಂದೇ ಹೇಳಬಹುದು. ಇದಕ್ಕೆ ಮುಖ್ಯ ಕಾರಣ ಮಹಿಳೆಯರ ಆರ್ಥಿಕ ಅವಲಂಬನೆ. ಇದೇ ಅವರನ್ನು ಅಧೀನರನ್ನಾಗಿಸುತ್ತದೆ. ಇದರಿಂದ ಹಲವಾರು ಸಮಸ್ಯೆಗಳಿಗೆ ಒಳಗಾಗಬೇಕಾಗುತ್ತದೆ. ಈ ಆರ್ಥಿಕ ಸಾಮರ್ಥ್ಯವನ್ನು ಹೊಂದಲು ಆಸ್ತಿ ಹಕ್ಕಿನ ಕಾನೂನು ಜಾರಿಯಲ್ಲಿದೆಯಾದರೂ ಅದರ ಲಾಭವನ್ನು ಪಡೆಯುವಲ್ಲಿ ಮಹಿಳೆಯರು ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಕುಟುಂಬದ ಒಳಗಿನ ಸಂಬಂಧಗಳಿಂದಲೇ ಈ ಸಮಸ್ಯೆಗಳು ಕಂಡುಬರುತ್ತಿವೆ. ಇದು ಎಷ್ಟರ ಮಟ್ಟಿಗೆ ಇದೆಯೆಂದರೆ ಮಹಿಳೆಯರನ್ನು ಬಲಿ ತೆಗೆದುಕೊಳ್ಳುವವರೆಗೆ ಮುಂದುವರೆದಿದೆ. ಇವರಿಗೆ ರಕ್ಷಣೆಯನ್ನು ನೀಡಬೇಕಾದ ಕುಟುಂಬದ ಸದಸ್ಯರೇ ಆಸ್ತಿಯ ವಿಚಾರಕ್ಕೆ ಬಂದಾಗ ಹಿಂಸೆಗೆ ತೊಡಗುತ್ತಾರೆ. ಇದು ಅತ್ಯಂತ ಹೀನವಾದುದು. ಮಹಿಳೆಯನ್ನು ಎಲ್ಲ ಬಗೆಯಲ್ಲಿ ನಿಯಂತ್ರಣದಲ್ಲಿಟ್ಟುಕೊಳ್ಳುವ ಪುರುಷಾಧಿಕಾರದ ಸಮಾಜವು ಅವಳನ್ನು ಕುರಿತಂತೆ ಹಳವಾರು ಬಗೆಯ ನಿರೀಕ್ಷೆಗಳನ್ನು ಹೊಂದಿದೆ. ಕೆಲವು ನಿರೀಕ್ಷೆಗಳು ನಿರ್ಬಂಧಗಳಾಗಿರುತ್ತವೆ. ಮುಖ್ಯವಾಗಿ ಪುರುಷನ ವಿರುದ್ಧವಾಗಿ ಮಹಿಳೆಯರು ಧ್ವನಿ ಎತ್ತುವಂತಿಲ್ಲ. ಒಂದುವೇಳೆ ಪುರುಷನಿಗೆ ವಿರುದ್ಧವಾಗಿ ಮಾತನಾಡಿದರೆ

ಅವರನ್ನು ಸಮಾಜ ನೋಡುವ ದೃಷ್ಟಿಕೋನವೇ ಬದಲಾಗಿಬಿಡುತ್ತದೆ. ಮತ್ತು ಅಂತಹ ಮಹಿಳೆಯರನ್ನು ಮತ್ತೆ ತಮ್ಮ ಅಧೀನಕ್ಕೆ ತಂದುಕೊಳ್ಳಲು ಹಲವಾರು ತಂತ್ರಗಳನ್ನು ಹೂಡಲಾಗುತ್ತದೆ. ಪಿತ್ರಾರ್ಜಿತ ಆಸ್ತಿಯಲ್ಲಿ ಸ್ತ್ರೀಪುರುಷರಿಬ್ಬರಿಗೂ ಸಮ ಪಾಲು ಬರಬೇಕು ಎಂಬ ಕಾನೂನು ಇದೆಯಾದರೂ, ಅದು ಜಾರಿಗೊಳ್ಳುವ ಸಂದರ್ಭದಲ್ಲಿ ಹಲವಾರು ತೊಡಕುಗಳನ್ನು ಎದುರಿಸುತ್ತಿದೆ. ಒಟ್ಟಾರೆಯಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮುಂದಾದರೂ ಸಹ ವ್ಯವಸ್ಥೆ ಅದನ್ನು ಪಡೆಯದಂತೆ ತಡೆಯುತ್ತದೆ. ಮತ್ತು ಅಂತಹ ಮಹಿಳೆಯರನ್ನು ನಾನಾ ವಿಧದಲ್ಲಿ ಹಿಂಸಿಸುತ್ತದೆ. ಅವರು ಈ ಬಗೆಯ ಹಿಂಸೆಗಳನ್ನು ತಾಳಲಾರದೇ ತಮ್ಮಷ್ಟಕ್ಕೆ ತಾವೇ ಆಸ್ತಿಯನ್ನು ನಿರಾಕರಿಸುವಂತೆ ಮಾಡುತ್ತದೆ. ಒಟ್ಟಾರೆಯಾಗಿ ಈ ಮೆಳಿನ ಎಲ್ಲ ಬಗೆಯ ಅಂಶಗಳು ವ್ಯವಸ್ಥೇಯಲ್ಲಿ ಮಹಿಳೆಯರು ಆರ್ಥಿಕವಾಗಿ ಸಬಲರಾಗದಂತೆ ನೋಡಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇವುಗಳೆಲ್ಲವನ್ನೂ ಮೀರುವ ಪ್ರಕ್ರಿಯೆ ನಡೆಯಬೇಕಾದರೆ ಪುರುಷ ವ್ಯವಸ್ಥೆಯ ಆಲೋಚನಾ ಕ್ರಮದಲ್ಲಿ ಬದಲಾವಣೆಗಳು ಆಗಬೇಕು ಮತ್ತು ಕಾನೂನುಗಳ ಅರಿವು ಮೂಡುವಂತಾಗಬೇಕು.

**ಉಲ್ಲೇಖಗಳು**


೧. ರಾಗೌ (ಸಂ), ೨೦೦೮, ಮಹಿಳಾ ಅಧ್ಯಯನದ ಆಯಾಮಗಳು; ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು, ಪು–೬.

೨. ಕೆ.ಎಸ್.ಗೀತಾ, ೨೦೦೮, ಮಹಿಳೆ ಕಾನೂನು ಮತ್ತು ನ್ಯಾಯ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು–೧೪೦.

೩. ರಾಜಶೇಖರಯ್ಯ ಎ.ಎಂ.(ಸಂ), ೨೦೦೧, ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಬಾಷಣಗಳು, ಸಂಪುಟ–೧೪, ಭಾಗ–೧(ಅ); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು–೩

೪. ರಾಜಶೇಖರಯ್ಯ ಎ.ಎಂ.(ಸಂ), ೨೦೦೧, ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಬಾಷಣಗಳು, ಸಂಪುಟ – ೧೪, ಭಾಗ–೧(ಅ); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು–೫,೬,೭

೫. ಅದೇ ಪು–೧೨

೬. ಅದೇ ಪು–೩೨

೭. ಅದೇ ಪು–೩೨

೮. ಅದೇ ಪು–೩೬

೯. ಇಂದಿರಾ ಕೃಷ್ಣಪ್ಪ, ೨೦೦೬, ವಿಮೋಚನೆಯ ಹಾದಿಯಲ್ಲಿ, ಪ್ರೊ. ಬಿ.ಕೃಷ್ಣಪ್ಪ ಟ್ರಸ್ಟ್, ಬೆಂಗಳೂರು, ಪು–೯

೧೦. ರಾಜಶೇಖರಯ್ಯ ಎ.ಎಂ.(ಸಂ), ೨೦೦೧, ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಬಾಷಣಗಳು, ಸಂಪುಟ–೧೪,ಭಾಗ–೧(ಅ); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು–೩೩

೧೧. ಅದೇ ಪು–೪೨೧.

೧೨. ಭಾ.ಸಾ.ಅಂ.ಬ.ಭಾ., ೧೯೯೪, ಪು–೬೨೨.

೧೩. ಅಂಬೇಡ್ಕರ್ ಉದ್ಧೃತ; ಅಹಲಾರಂಗ್ಲೇಕರ್, ೧೯೯೧, ಸಂ.ಮಾ.ಭರಣಿ, ೧೯೯೧, ಶತಮಾನದ ಅಂಬೇಡ್ಕರ್, ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆ, ತುಮಕೂರು, ಪು.೨೪೧

೧೪. ಡಾ.ಶೈಲಜಾ ಹಿರೇಮಠ; ಮೇ ೨೦೧೬; ಕುಟುಂಬ, ಮಹಿಳೆ, ದೌರ್ಜನ್ಯ ಮತ್ತು ಕಾನೂನು ಪರ್ಯಾಯ ಸಾಧ್ಯತೆಗಳಿಗಿರುವ ತೊಡಕುಗಳು; ಸಂವಾದ ಪತ್ರಿಕೆ; ಸ್ಫೂರ್ತಿಧಾಮ, ಅಂಜನಾನಗರ, ಬೆಂಗಳೂರು.

೧೫. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕ.ವಿ.ವಿ ಹಂಪಿ, ಪು–೧೬೦.

೧೬. ಶೈಲಜ ಹಿರೇಮಠ, ೨೦೦೩, ಸ್ತ್ರೀಕಥನ, ಭುವನ ಪ್ರಕಾಶನ, ಹೊಸಪೇಟೆ, ಪು–೩೬.

೧೭. ಮಧುಕೀಶ್ವರ, ಮಾನುಷಿಯ ಮಾತು, ಪು–೭೩.

# ಅಧ್ಯಾಯ ಏಳು

# ಆಸ್ತಿಹಕ್ಕು : ಮಹಿಳಾ ಸಬಲೀಕರಣ

ಸಬಲೀಕರಣ ಎಂಬುದು ಅಭಿವೃದ್ಧಿಯ ಒಂದು ಭಾಗ. ಪುರುಷರಿಗೆ ಸಮನಾದ ನೆಲೆಯಲ್ಲಿ ಸ್ತ್ರೀಯರಿಗೆ ಸಮಾನ ಹಕ್ಕು, ಅವಕಾಶ, ಹೊಣೆಗಾರಿಕೆ ಹಾಗೂ ಅಧಿಕಾರವನ್ನು ನೀಡುವಂತಹ ಪ್ರಕ್ರಿಯೆಗೆ ಮಹಿಳಾ ಸಶಕ್ತೀಕರಣ ಎನ್ನಬಹುದು. ಆ ಮೂಲಕ ಮಹಿಳೆಯರ ಜೀವನದ ಪ್ರತೀ ಹಂತವನ್ನು ನಿಯಂತ್ರಿಸುತ್ತಾ ಬಂದಿರುವ ವ್ಯವಸ್ಥೆಯ ಸಂಕೋಲೆಗಳಿಂದ ಮುಕ್ತಿ ಪಡೆದುಕೊಳ್ಳಲು ಮತ್ತು ತಮ್ಮ ಬದುಕಿಗೆ ಸಂಬಂಧಿಸಿದ ಪರಿಸ್ಥಿತಿಗಳನ್ನು ತಾವೇ ನಿಭಾಯಿಸಿಕೊಳ್ಳುವ, ನಿಯಂತ್ರಿಸಿಕೊಳ್ಳುವ ಶಕ್ತಿಯನ್ನು ಕೊಡಮಾಡುವುದು ಎಂದರೆ ಅತ್ಯಂತ ಅರ್ಥಪೂರ್ಣ. ಮಹಿಳೆಯರು ಪುರುಷನಿಷ್ಠ ಸಮಾಜ ವ್ಯವಸ್ಥೆಯಲ್ಲಿ ಅಬಲೆಯರು, ದುರ್ಬಲರು, ಪರಾವಲಂಬಿಗಳು ಎಂಬ ಗುಣಾತ್ಮಕ ನೆಲೆಯಲ್ಲಿ ಪ್ರತಿಪಾದಿತವಾಗಿರುವುದು ಕಂಡು ಬರುತ್ತದೆ. ಹೀಗೆ ಹೆಣ್ಣನ್ನು ಗುರುತಿಸುವ ಮೂಲಕ ಅವಳ ಶಕ್ತಿ ಸಾಮರ್ಥ್ಯಗಳನ್ನು ತನ್ನ ಅಧೀನಗೊಳಿಸಿಕೊಳ್ಳುವ ಹುನ್ನಾರ ಪಿತೃಪ್ರಧಾನ ವ್ಯವಸ್ಥೆಯದು. ಹೀಗೆ ಮಹಿಳೆಯರು ಶಕ್ತರಾಗ ದಂತೆ ತಡೆಯುವ ಹಲವು ಅಡ್ಡಿಗಳನ್ನು ಪಿತೃಪ್ರಧಾನ ವ್ಯವಸ್ಥೆ ರೂಪಿಸುತ್ತಲೇ ಇರುವುದು ಇಂದಿಗೂ ಪ್ರಸ್ತುತ. ಒಪ್ಪಿತ ರೂಢಿಗತ ನಂಬಿಕೆ ಮೌಲ್ಯಾಚರಣೆಗಳನ್ನು ಅನುಸರಿಸುತ್ತಿರುವ ವ್ಯವಸ್ಥೆಯಲ್ಲಿ ಪುರುಷಪರವಾದ ಅನುಕೂಲ ಸ್ಥಿತಿ ಏರ್ಪಟ್ಟಿದೆ. ಆದರೆ ಮಹಿಳೆಯರ ಶಕ್ತಿ ಸಂವರ್ಧನೆಯಿಂದ ವ್ಯವಸ್ಥೆಯಲ್ಲಾಗುವ ಬದಲಾವಣೆಗಳನ್ನು ಒಪ್ಪಿಕೊಳ್ಳುವುದು ಸುಲಭದ ಮಾತಲ್ಲ. ಸಾವಿರಾರು ವರ್ಷಗಳಿಂದ ಅಧಿಕಾರ, ಸೇವೆ, ಸಂಪನ್ಮೂಲದ ಮೇಲಿನ ಹಿಡಿತ, ನಿರ್ಧಾರ ತೆಗೆದುಕೊಳ್ಳುವ ಹಕ್ಕು ಈ ಎಲ್ಲದರಲ್ಲೂ ಪಾಲು ಹಂಚಿಕೊಳ್ಳುವುದಕ್ಕೆ ಪುರುಷ ವ್ಯವಸ್ಥೆ ಸಿದ್ಧರಿಲ್ಲ. ಹಾಗಾಗಿ ಮಹಿಳೆಯರು ಸಬಲರಾಗಲು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಲೇ ಇದ್ದಾರೆ. ಹೀಗಾಗಿ ಮಹಿಳೆಯರು ತಮ್ಮ ತನವನ್ನು ತಾವು ಗುರುತಿಸಿಕೊಂಡು ಅಸ್ಮಿತೆಯ

ಹುಡುಕಾಟವನ್ನು ಆರಂಭಿಸುವ ಮೂಲಕ ಸಶಕ್ತರಾಗುವಂತೆ ಮಾಡಬೇಕಾದ ಅಗತ್ಯತೆ ಇದೆ. ಹೀಗಾಗಬೇಕಾದರೆ ಮಹಿಳೆಯರು ಸಂಪನ್ಮೂಲ ಮತ್ತು ತಮ್ಮ ಬೌದ್ಧಿಕತೆಯ ಮೇಲೆ ನಿಯಂತ್ರಣ ಹೊಂದುವಂತಾಗಬೇಕು. ಆಗ ಮಹಿಳಾ ಸಬಲೀಕರಣಕ್ಕೆ ಒಂದು ಅರ್ಥ ದೊರೆಯ ಬಹುದೇನೋ. "ಮಹಿಳಾ ಸಬಲೀಕರಣ ಎಂಬುದು ಬಹುಮುಖಿ ಪರಿಕಲ್ಪನೆ. ಮಹಿಳೆಯರು ಮಾನಸಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಸಾಂಸ್ಥಿಕ ವಲಯಗಳಿಗೆ ವಿಸ್ತರಿಸುವ ಪರಿಕಲ್ಪನೆ"[7] ಹೀಗೆ ಮಹಿಳಾ ಸಬಲೀಕರಣದ ಕುರಿತಂತೆ ವಿವರಿಸಬಹುದಾಗಿದೆ.

ಮಹಿಳೆಯರ ಅಭಿವೃದ್ಧಿಗಾಗಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಅನೇಕ ಪ್ರಕ್ರಿಯೆಗಳು ಆರಂಭಗೊಂಡು ನಂತರದಲ್ಲಿ ಅವುಗಳು ರಾಜ್ಯ ಮಟ್ಟದಲ್ಲಿ ವಿಸ್ತರಿಸಿಕೊಂಡವು. ಅಂದರೆ ಭಾರತದಲ್ಲಿ ಮಹಿಳಾ ಅಭಿವೃದ್ಧಿಗೆಂದು ಹಲವಾರು ಕಾರ್ಯ ಯೋಜನೆಗಳನ್ನು ಹಾಕಿಕೊಳ್ಳಲಾಯಿತು. ಅವುಗಳಲ್ಲಿ ಮುಖ್ಯವಾಗಿ ಸಾಂವಿಧಾನಾತ್ಮಕ ಹಕ್ಕುಗಳು, ಶಾಸನಾತ್ಮಕ ಸವಲತ್ತುಗಳು, ಮಹಿಳಾಪರ ಕಾಳಜಿಯನ್ನು ಪ್ರತಿಪಾದಿಸುವ ಕಾರ್ಯನೀತಿಗಳು, ಪಂಚವಾರ್ಷಿಕ ಯೋಜನೆಗಳಡಿಯಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು ಹೀಗೆ ಹಲವಾರು ಕಾರ್ಯಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ಶಾಸನಾತ್ಮಕ ಸವಲತ್ತುಗಳಲ್ಲಿ ಮಹಿಳಾ ಪರವಾದಂತಹ ಕಾನೂನುಗಳೂ ಒಂದು. ಈ ಮಹಿಳಾ ಪರ ಕಾನೂನುಗಳಲ್ಲಿ ಹಿಂದೂ ಉತ್ತರಾಧಿಕಾರ ಕಾಯಿದೆ ೧೯೫೬ ಇದು ಅತ್ಯಂತ ಪ್ರಮುಖವಾದುದಾಗಿದೆ. ಈ ಕಾಯಿದೆಯು ಮಹಿಳೆಯರು ಆರ್ಥಿಕವಾಗಿ ಸಬಲರಾಗಲು ಸಹಕಾರಿಯಾಗಿದೆ. ಆ ಮೂಲಕ ಮಹಿಳೆಯರು ಪುರುಷರಂತೆ ಸಮಾನತೆಯ, ಸ್ವಾಭಿಮಾನದ ಬದುಕನ್ನು ಸಾಗಿಸುವ ನಿಟ್ಟಿನಲ್ಲಿ ಸಹಕಾರಿಯಾಗಿದೆ. ಪ್ರಸ್ತುತ ಹಲವಾರು ಮಹಿಳೆಯರು ಈ ಕಾಯಿದೆಯ ಲಾಭವನ್ನು ಪಡೆದುಕೊಂಡಿದ್ದಾರೆ. ಹಾಗೆಯೇ ತಮ್ಮ ಸ್ಥಾನಮಾನಗಳಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ಕಂಡು ಕೊಂಡಿದ್ದಾರೆ. ಹೀಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷನಂತೆಯೇ ಸಮಾನವಾದ ಪಾಲನ್ನು ಪಡೆದು ಯಾರ ಹಂಗಿಲ್ಲದೇಯೇ ಜೀವನ ಸಾಗಿಸುತ್ತಿರುವಂತಹ ಮಹಿಳೆಯರು ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಕಂಡುಬಂದಿದ್ದಾರೆ. ಮುಖ್ಯವಾಗಿ ಇವರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಪಡೆದು ಕೊಂಡಿದುದರ ಕುರಿತು ಮತ್ತು ಅದರ ಮೇಲಿನ ನಿಯಂತ್ರಣದ ಕುರಿತು ಅವರ ಮಾತಿನಲ್ಲಿಯೇ ಈ ಕೆಳಗಿನಂತೆ ವಿವರಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ತಾವರಗೇರ ಗ್ರಾಮದ ಲಕ್ಷ್ಮವ್ವ ತನ್ನ ತಂದೆಯ ಆಸ್ತಿಗಾಗಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಆಸ್ತಿಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾಳೆ. ಆದರೆ ಇವರು ತಮ್ಮ ತಂಗಿಯ ವಿರುದ್ಧ ಕೇಸ್ ದಾಖಲಿಸಿದ್ದರು. ಕೊನೆಯಲ್ಲಿ ಒಪ್ಪಂದಕ್ಕೆ ಬಂದು, ಇರುವ ಆಸ್ತಿಯನ್ನೆಲ್ಲಾ ತನ್ನ ಹೆಸರಿಗೆ ಮಾಡಿಕೊಂಡಿಕೊಂಡಿದ್ದಾರೆ. ಮುಖ್ಯವಾಗಿ ಇವರು ಹೇಳುವಂತೆ "ನಮ್ಮ ಅಪ್ಪ ಅಮ್ಮಗ ಆರು ಜನ ಹೆಣ್ಮಕ್ಕಳು. ಅದ್ರಾಗ ನಾನೇ ದೊಡ್ಡೋಳು. ಇನ್ನ ಐದು ಜನಕ್ಕ ಮದ್ವಿ ಆಗಿ ಅವ್ರವ್ರ ಗಂಡನ ಮನ್ಯಾಗ ಐದಾರ. ನನಗ ಇದೇ

ಊರಾಗ ಮದ್ವಿ ಮಾಡಿಕೊಟ್ಟಾರ. ಹಂಗಾಗಿ ನಮ್ಮ ಅಪ್ಪ ಅಮ್ಮನ್ನ ನಾನೇ ನೋಡಿಕೆಂತಿದ್ದೆ. ಅವ್ರು ಸಾಯೋವರ್ಗೂ ನಾನೇ ಸಾಕೇನಿ. ನಮ್ ಅಪ್ಪನ ಹೆಸ್ರಿಗೆ ೨ ಎಕ್ರೆ ಜಮೀನು ಐತಿ. ಅದನ್ನ ನಾನು ನನ ಗಂಡ ಇಬ್ರೂ ಸೇರಿ ನೋಡ್ಕೆಂತಿದ್ವಿ, ಅಪ್ಪ ಅಮ್ಮ ಬದುಕಿರೋವರ್ಗೂ ಯಾವ ತಂಗೀನೂ ಬಂದು ನೋಡ್ಲಿಲ್ಲ. ಯಾವಾಗ ನಮ್ ಅಪ್ಪ ಅಮ್ಮ ತೀರಿಕೆಂಡ್ರೋ, ಆವಾಗಿಂದ ನನ್ನ ಸಣ್ಣ ತಂಗಿ ತನ್ನ ಗಂಡನ ಮಾತನ್ನ ಕೇಳಿ ಆಸ್ತಿನಾಗ ಪಾಲು ಕೇಳಾಕ ಬಂದಿದ್ಲು. ಆದ್ರ ಇರೋ ಎರಡೆಕ್ರೆನ ನಮ್ ಅಪ್ಪ, ನನ್ ಹೆಸ್ರಿನ ಮ್ಯಾಲ ಮಾಡ್ಸಿಟ್ಟಿದ್ದ. ಅದರ ಕಾಗದ ಪತ್ರನೆಲ್ಲಾ ನನ್ನತ್ರ ಐದಾವ. ಹಂಗಾಗಿ ಈ ವಿಚಾರಾನ ನನ್ ತಂಗಿಗೆ ಹೇಳಿದೆ, ಆದ್ರೆ ಅವ್ರು ಕೇಳ್ಲಿಲ್ಲ. ಹಂಗಾಗಿ ಕೋರ್ಟಿನಾಗ ಕೇಸ್ ಮಾಡಬೇಕಾತು. ಕೋರ್ಟಿನಾಗ ಬಾಳ ದಿನ ಕೇಸ್ ನಡೀತು. ಮತ್ತೆ ಇನ್ನುಳಿದ ತಂಗೇರು ಸೇರಿ ಗಂಗಮ್ಮಗ ಬೈದಾರ. ಬುದ್ದಿಮಾತು ಹೇಳಿದ್ ಮ್ಯಾಲ. ಕೋರ್ಟಿನಾಗ ಒಪ್ಪಂದ ಮಾಡಿಕೆಳ್ಳಾಕ ಒಪ್ಪಿದ್ಲು. ಆದ್ರೆ ಆಸ್ತಿನಾಗ ಮಾತ್ರ ಭಾಗ ಕೇಳ್ಲಿಲ್ಲ. ಹಂಗಾಗಿ ಇರೋ ಎರಡೆಕ್ರೆನೂ ನನ್ ಹೆಸ್ರಿಗೇ ಬಂತು. ಈಗ ಈ ಜಮೀನನ್ನ ನಾನೇ ನೋಡಿಕೆಳ್ಳಾಕತ್ತೇನಿ. ಮತ್ತೆ ನನ್ ಮಕ್ಕಳ್ನ ಓದ್ಸೋ ಜವಾಬ್ದಾರಿನೂ ಸತೆ ನಾನೇ ವಹಿಸಿಕೆಂಡೇನಿ ಎಂದರು. ಹಾಗೆಯೇ ಜಮೀನು ನನ್ನ ಹೆಸ್ರಿಗೇ ಐತಿ, ಮತ್ತೆ ನನ ಗಂಡ ಸತೆ ಯಾವುದೇ ಕಿರಿ ಕಿರಿ ಮಾಡಿಲ್ಲ. ಮತ್ತೆ ನಮ್ ತಂಗೇರು ಸತೆ ಇಲ್ಲಿಗೆ ಬಂದು ಹೋಗ್ತಿರ್ತಾರ. ಈಗ ಮನಿ ಜವಾಬ್ದಾರಿನೆಲ್ಲಾ ನಾನೇ ನಿಭಾಯಿಸಕತ್ತೇನಿ ಎಂದರು.

ಲಕ್ಷ್ಮವ್ವ ತನ್ನ ತಂದೆಯ ಆಸ್ತಿಯ ಸಂಪೂರ್ಣ ಭಾಗನ್ನು ಪಡೆಯಲು ಮುಖ್ಯ ಕಾರಣ ಅವರ ತಂದೆಗೆ ಗಂಡು ಮಕ್ಕಳಿರದೇ ಇರುವುದು. ಹಾಗಾಗಿ ಇವರು ತಮ್ಮ ಪಿತ್ರಾರ್ಜಿತ ಆಸ್ತಿಯ ಮೇಲಿನ ಹಕ್ಕನ್ನು ಸುಲಭವಾಗಿ ಪಡೆದುಕೊಂಡರು. ಕೆಲವು ಅಡ್ಡಿ ಆತಂಕಗಳು ಎದುರಾದರೂ ಸಹ ಅವುಗಳಾವುವೂ ಕಷ್ಟವೆನಿಸಲಿಲ್ಲ. ಮುಖ್ಯವಾಗಿ ಕುಟುಂಬದಲ್ಲಿ ಕೇವಲ ಮಹಿಳೆಯರೇ ಮಕ್ಕಳಾಗಿದ್ದರೆ, ಅಲ್ಲಿ ಆಸ್ತಿಯ ವಿಚಾರವಾಗಿ ಗೊಂದಲಗಳು ಸಂಭವಿಸುವುದು ಕಡಿಮೆ. ಈ ನೆಲೆಯಲ್ಲಿ ಲಕ್ಷ್ಮವ್ವಳ ವಿಷಯದಲ್ಲಿ ಇದು ನಿಜವಾಗಿದೆ. ಇವರು ಆಸ್ತಿಯ ಮೇಲಿನ ಒಡೆತನವನ್ನು ಪಡೆದುಕೊಂಡು ಸುಖವಾದ ಜೀವನವನ್ನು ಸಾಗಿಸುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯ ಬೆಣೆಕಲ್ ಗ್ರಾಮದಲ್ಲಿ ಚಂದ್ರಮ್ಮ ಮತ್ತು ಶಕುಂತಲ ತಮ್ಮ ತಂದೆಯ ಭಾಗದ ಆಸ್ತಿಯನ್ನು ಪಡೆದುಕೊಂಡಿದ್ದಾರೆ. ಚಂದ್ರಮ್ಮ ೧೨ನೇ ತರಗತಿ ಮತ್ತು ಶಕುಂತಲ ೧೦ನೇ ತರಗತಿ ಓದಿದ್ದಾರೆ. ಬೆಣೆಕಲ್ ಗ್ರಾಮದ ವನ್ನಪ್ಪ ಮತ್ತು ಅಂಬಮ್ಮ ದಂಪತಿಗಳಿಗೆ ಗೋವಿಂದ ಮತ್ತು ತಿರುಕಪ್ಪ ಎಂಬ ಇಬ್ಬರು ಗಂಡು ಮಕ್ಕಳು. ಇವರಲ್ಲಿ ಗೋವಿಂದ ಹಿರಿಯವನು. ವನ್ನಪ್ಪ ತನ್ನ ಶ್ರಮದಿಂದ ನಾಲ್ಕು ಎಕರೆ ಜಮೀನನ್ನು ಸಂಪಾದಿಸಿದ್ದು ತನ್ನ ಇಬ್ಬರೂ ಮಕ್ಕಳಿಗೆ ಮದುವೆಯನ್ನೂ ಮಾಡಿದ್ದರು. ಗೋವಿಂದಪ್ಪ ಮತ್ತು ನಿಂಗಮ್ಮ ಈ ದಂಪತಿಗಳಿಗೆ ಚಂದ್ರಮ್ಮ ಮತ್ತು ಶಕುಂತಲ ಎಂಬ ಇಬ್ಬರು ಹೆಣ್ಣು ಮಕ್ಕಳು. ತಿರುಕಪ್ಪ ಮತ್ತು ಶಾರದಮ್ಮ ಈ ದಂಪತಿಗಳಿಗೆ ರಾಜೇಶ ಎಂಬ ಒಂದು ಗಂಡು ಮಗು. ವನ್ನಪ್ಪ ಮತ್ತು

ಅಂಬಮ್ಮ ತಮ್ಮ ಕೊನೆಯ ಗಳಿಗೆಯಲ್ಲಿ ಹಿರಿಯ ಮಗನಾದ ಗೋವಿಂದಪ್ಪನ ಹತ್ತಿರವೇ ಇದ್ದರು. ಇವರ ಮರಣದ ನಂತರ ಗೋವಿಂದ ಮತ್ತು ತಿರುಕಪ್ಪ ಇಬ್ಬರೂ ತಂದೆಯ ಜಮೀನಿನಲ್ಲಿ ಹೊಂದಾಣಿಕೆ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದರು. ಅದರಲ್ಲಿಯೇ ಗೋವಿಂದಪ್ಪ ತನಗೆ ಬಂದ ಆದಾಯದಿಂದ ಎರಡು ಎಕರೆ ಜಮೀನನ್ನು ತೆಗೆದುಕೊಂಡಿದ್ದ. ಅದು ತನ್ನ ಹೆಸರಿಗೇ ಮಾಡಿಸಿಕೊಂಡಿದ್ದ. ಹೀಗೆ ಸ್ವಲ್ಪ ದಿನಗಳ ನಂತರ ಗೋವಿಂದಪ್ಪ ಒಂದು ಅಪಘಾತದಲ್ಲಿ ಮರಣಹೊಂದಿದ. ಆಗ ಹೆಂಡತಿ ನಿಂಗಮ್ಮ ಮತ್ತು ಇಬ್ಬರು ಮಕ್ಕಳಿಗೆ ಜೀವನ ನಡೆಸುವುದೇ ಕಷ್ಟ ಆಗಿ ಬಿಟ್ಟಿತು. ಇದೇ ಸಂದರ್ಭದಲ್ಲಿ ಇರುವ ಎಲ್ಲಾ ಆಸ್ತಿಯನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳಬೇಕು ಎಂದು ತಿರುಕಪ್ಪ, ನಿಂಗಮ್ಮ ಮತ್ತು ಮಕ್ಕಳನ್ನು ಮನೆಯಿಂದ ಹೊರಹಾಕಿದ್ದಾನೆ. ಆದರೆ ಇವರು ಅದನ್ನು ಲೆಕ್ಕಿಸದೆ, ನಿಂಗಮ್ಮನವರು ತನ್ನ ಇಬ್ಬರು ಮಕ್ಕಳ ಕಡೆಯಿಂದ ಆಸ್ತಿಗಾಗಿ ಕೋರ್ಟಿನಲ್ಲಿ ದಾವೆ ಹೂಡಿದ್ದಾರೆ. ಹಾಗಾಗಿ ಇವರಿಗೆ ಕೋರ್ಟಿನಲ್ಲಿ ಇವರ ಪರವಾಗಿ ನ್ಯಾಯ ತೀರ್ಮಾನವಾಗಿದೆ. ಶಕುಂತಲ ಹೇಳುವಂತೆ "ನಮ್ ಚಿಕ್ಕಪ್ಪ ಆಸ್ತಿನೆಲ್ಲಾ ತನ್ನ ಹೆಸ್ರಿಗೆ ಮಾಡ್ಸಿಕೆಂಡು ನಮಿಗೆ ಮೋಸ ಮಾಡಾಕ ನೋಡ್ದ, ಆದ್ರೆ ನಾವು ಯಾಕ ಸುಮ್ನೆ ಬಿಡಬೇಕು, ಅದು ನಮ್ ಅಪ್ಪ ಮಾಡಿದ ಆಸ್ತಿ. ಅದನ್ನ ಸತೆ ಕಿತ್ತಿಕೊಳ್ಳಾಕ ನೋಡಿದ್ರು, ಹಂಗಾಗಿ ನಾವು ಕೋರ್ಟಿನ್ಯಾಗ ಕೇಸ್ ಮಾಡಿದ್ವಿ, ಈಗ ಕೇಸ್ ನಮ್ ಕಡಿಗೇ ಆಗೇತಿ. ಹಂಗಾಗಿ ನಮ್ ಮಾಡಿದ ಆಸ್ತಿಯನ್ನೆಲ್ಲಾ ನಾನು ಮತ್ತೆ ನಮ್ ತಂಗಿ ಇಬ್ರು ಹೆಸ್ರಿಗೆ ಮಾಡ್ಸಿಕೊಂಡೇವಿ. ಈಗ ಅದರಾಗೇ ಬೇಸಾಯ ಮಾಡಕ್ಹತ್ತೇವಿ. ನಾವು ನಮ್ ಕಾಲ ಮ್ಯಾಲ ನಿಂದ್ರಂಗಾತು. ಈಗ ನಮ್ ಹತ್ರ ದುಡ್ಡು ಐತಿ. ಹಂಗಾಗಿ ಎಲ್ಲಾ ಸಂಬಂದಿಕ್ರು ಬಂದು ಮಾತಾಡ್ಸಿಕೊಂಡು ಹೋಗ್ತಾರ" ಎಂದರು. ಹಾಗೆಯೇ ನಿಂಗಮ್ಮ ಮಾತನಾಡುತ್ತಾ ಚಂದ್ರಮ್ಮನ ಮದುವಿ ಗೊತ್ತಾಗೇತಿ. ಆಕಿ ಮದುವಿ ಮಾಡಾಕ ಜಮೀನಿನಿಂದಲೇ ಬರೋ ಆದಾಯಾನೇ ಸಹಾಯಕ್ಕ ಬಂದೈತಿ. ಜಮೀನು ಕಳ್ಕಂಡಿದ್ರ ನಮ್ಮ ಜೀವ್ನ ನಡಿಸೋದೇ ಬಾಳ ಕಷ್ಟ ಆಗ್ತಿತ್ತು. ಆದ್ರೆ ಈಗ ಇಬ್ರು ಮಕ್ಳ ಮದುವಿ ಮಾಡೋ ಜವಾಬ್ದಾರೀನ ನಿರಾಯಾಸವಾಗಿ ಮಾಡಬಹುದು ಅನ್ನೋ ವಿಶ್ವಾಸ ಬಂದೈತಿ. ಮದುವಿಗಿಂತ ಮೊದ್ಲು ಅವ್ರು ಎಷ್ಟು ಓದತಾರೋ ಓದ್ಲಿ. ಆಮ್ಯಾಲ ಮದುವಿ ಮಾಡ್ಬೇಕು ಅಂತ ಅನ್ಕಂಡೀನಿ. ಅದಕ್ಕ ಎಷ್ಟೇ ಖರ್ಚಾದ್ರೂ ಪರವಾಗಿಲ್ಲ. ನಾನೇ ನಿಭಾಯಿಸ್ತೀನಿ ಎಂದರು.

ಇಲ್ಲಿ ಚಂದ್ರಮ್ಮ ಮತ್ತು ಶಕುಂತಲಾ ಇಬ್ಬರೂ ವಿದ್ಯಾವಂತರು. ಹಾಗಾಗಿ ತಮ್ಮ ತಂದೆಯ ಆಸ್ತಿಯನ್ನು ಪಡೆಯಲು ಧೈರ್ಯದಿಂದ ಕಾನೂನು ಮೆಟ್ಟಿಲೇರಿ ಅದರಲ್ಲಿ ಯಶಸ್ವಿಯಾಗಿದ್ದಾರೆ. ತಮ್ಮ ಹತ್ತಿರ ಆಸ್ತಿಯಿದ್ದರೆ ಎಲ್ಲಾ ಸಂಬಂಧಗಳೂ ಸರಿಯಾಗಿಯೇ ಉಳಿಯುತ್ತವೆ ಎಂಬುದು ಅವರ ಮಾತಿನಲ್ಲಿಯೇ ತಿಳಿದುಬಂದಿದೆ. ಅಂದರೆ ಸಂಬಂಧಗಳನ್ನು ಉಳಿಸಿಕೊಳ್ಳುವುದಕ್ಕೆ ಇದೊಂದು ಉದಾಹರಣೆಯಾಗಿದೆ. ಇವರ ತಾಯಿ ನಿಂಗಮ್ಮಳು ಸಹ ನಿರಾಳರಾಗಿರುವುದು

ಅವರ ಮಾತಿನಿಂದ ತಿಳಿದುಬರುತ್ತದೆ. ಅಂದರೆ ಆಸ್ತಿ ಮಹಿಳೆಯರ ಹೆಸರಲ್ಲಿ ಇರುವವರೆಗೆ ಸಮಾಜದಲ್ಲಿನ ಯಾವ ಶಕ್ತಿಗಳೂ ಸಹ ಅವರನ್ನು ಏನೂ ಮಾಡಲಾಗುವುದಿಲ್ಲ.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ತೋರಣಗಲ್ಲು ಗ್ರಾಮದಲ್ಲಿನ ನಿಂಗಮ್ಮ ತನ್ನ ಗಂಡನ ಪಾಲಿಗೆ ಬರಬೇಕಾದ ಆಸ್ತಿಯನ್ನು ಪಡೆದುಕೊಂಡು ಈಗ ನೆಮ್ಮದಿಯ ಬದುಕನ್ನು ಸಾಗಿಸುತ್ತಿದ್ದಾರೆ. ಆದರೆ ಇವರಿಗೆ ಆಸ್ತಿ ಏನೂ ಸುಮ್ಮನೇ ದೊರೆತಿಲ್ಲ. ಅದಕ್ಕಾಗಿ ಹಲವಾರು ಸಮಸ್ಯೆಗಳನ್ನು ಎದುರಿಸಿದ್ದಾರೆ. ಈ ಎಲ್ಲಾ ಸಮಸ್ಯೆಗಳ ಆಚೆಗೂ ಆಸ್ತಿಯನ್ನು ಪಡೆದ ಕಾರಣಕ್ಕಾಗಿ ಸುಖ ಜೀವನವನ್ನು ಸಾಗಿಸುತ್ತಿದ್ದಾರೆ. ಇವರು ಹೇಳುವಂತೆ "ಆಸ್ತಿಯೇನೂ ನನಿಗೆ ಸುಮ್ನೆ ಸಿಕ್ಕಿಲ್ಲ. ನಮ್ ಮೈದುನೋರು ಬಾಳ ಕಾಟ ಕೊಟ್ರು, ಆದ್ರೆ ನಾನು ನಮ್ ಊರಾಗಿನ ಹಿರೇರ್ನೆಲ್ಲಾ ಸೇರ್ಸಿ ಪಂಚಾತಿ ಮಾಡ್ಸಿದೆ. ಅಲ್ಲಿ ಊರಾಗಿನ ಹಿರೇರು ನಮ್ಮ ಮಾವಗ ಮತ್ತ ಮೈದುನೋರಿಗೆ ತಿಳ್ಸಿ ಹೇಳಿ ಆಸ್ತಿ ಎಲ್ಲರಿಗೂ ಸಮ ಪಾಲು ಆಗ್ಬೇಕು, ಇಲ್ಲಾಂದ್ರ ಕೋರ್ಟ್‌ಗೆ ಹೋಗಿ ಆಸ್ತಿ ತಗೋತಾಳ, ಈಗೆಲ್ಲಾ ಮೋಸಾ ಮಾಡಾಕಾಗಲ್ಲ ಅಂತ ತಿಳಿಸಿ ಹೇಳಿದ್ರು, ಆಮ್ಯಾಲೆ ಹಿರೇರು ಹೇಳಿದಂಗ ಆಸ್ತಿ ಸಮಭಾಗ ಆತು. ನನ್ ಪಾಲಿಗೆ ಬರಬೇಕಾದ ಜಮೀನು ಸಿಕ್ತು. ಈಗ ನಾನು ನನ್ ಜಮೀನನ್ನ ಬ್ಯಾರೇರಿಗೆ ಗುತ್ತಿಗೆ ಕೊಟ್ಟೀನಿ. ಅದರಿಂದ ಬರೋ ರೊಕ್ಕದಿಂದ ಜೀವ್ನ ನಡ್ಸಕತ್ತೇನಿ. ಹಂಗೆ ನಮ್ ಅಪ್ಪ ಅಮ್ಮನ್ನ ನಾನೇ ನೋಡಿಕೆಳ್ಳಾಕತ್ತೇನಿ. ಈಗ ನಾನು ಯಾರ ಹಂಗಿನ್ಯಾಗೂ ಇಲ್ದಂಗ ನನ್ನ ದುಡಿಮ್ಯಾಗ ಬದುಕಾಕತ್ತೇನಿ ಎಂದರು.

ನಿಂಗಮ್ಮನವರು ತನ್ನ ಗಂಡನ ಪಾಲಿನ ಆಸ್ತಿಗಾಗಿ ಗಂಡನ ಮನೆಯ ಇತರೆ ಸದಸ್ಯರು ನೀಡಿದ ಹಿಂಸೆಗಳನ್ನೆಲ್ಲಾ ಸಹಿಸಿಕೊಂಡು, ಕೊನೆಯಲ್ಲಿ ಆಸ್ತಿಯನ್ನು ಪಡೆಯುವಲ್ಲಿ ಸಫಲ ರಾಗಿದ್ದಾರೆ. ಈ ಮೇಲಿನ ಪ್ರಕರಣಗಳಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡಿರುವ ಮಹಿಳೆಯರು ಮಧ್ಯಮ ವರ್ಗದ ಕುಟುಂಬದ ಮಹಿಳೆಯರಾಗಿದ್ದಾರೆ. ಮತ್ತು ಬದುಕಿನ ಅನಿವಾರ್ಯತೆ ಅವರು ತಮ್ಮ ತಂದೆಯ ಅಥವಾ ಗಂಡನ ಆಸ್ತಿಯಲ್ಲಿ ಪಾಲನ್ನು ಪಡೆಯುವಂತೆ ಮಾಡಿದ್ದು, ಅದರಲ್ಲಿ ಅವರು ಸಫಲರಾಗಿದ್ದಾರೆ. ಹೀಗೆ ಪಡೆದ ಆಸ್ತಿ ಸ್ವಾವಲಂಬಿ ಬದುಕಿಗೆ ಸಹಾಯಕವಾಗಿದೆ.

ಹಿರೇಸಿಂದೋಗಿ ಗ್ರಾಮದ ನಿವಾಸಿಯಾದ ದಿ.ರಾಮರೆಡ್ಡೆಪ್ಪ ಮತ್ತು ಶ್ರೀಮತಿ ಸಿದ್ದಲಿಂಗವ್ವ ದಂಪತಿಗಳಿಗೆ ಗವಿಯಪ್ಪ, ಚನ್ನಪ್ಪ, ಪಾರ್ವತವ್ವ ಮತ್ತು ಲಕ್ಷ್ಮವ್ವ ಎಂಬ ನಾಲ್ಕು ಜನ ಮಕ್ಕಳಿದ್ದಾರೆ. ಎಲ್ಲಾರಿಗೂ ಮದುವೆಯಾಗಿದೆ. ಇವರೆಲ್ಲರೂ ಒಂದೇ ಕುಟುಂಬದವರು ಅಂದರೆ ಕೂಡು ಕುಟುಂಬದವರಾಗಿದ್ದಾರೆ. ಪಾರ್ವತವ್ವ ತನ್ನ ಮಗಳಾದ ವನಜಾಕ್ಷಿಯನ್ನು ತನ್ನ ತಮ್ಮನಾದ ಚೆನ್ನಪ್ಪನಿಗೇ ಕೊಟ್ಟು ಮದುವೆ ಮಾಡಿದ್ದಾಳೆ. ಗವಿಯಪ್ಪ, ಚೆನ್ನಪ್ಪ ಮತ್ತು ಪಾರ್ವತವ್ವ ತೀರಿಕೊಂಡಿದ್ದಾರೆ. ಗವಿಯಪ್ಪನಿಗೆ ರಾಮಾಂಜಿನಿ ಮತ್ತು ಗಾದಿಲಿಂಗ ಎಂಬ ಇಬ್ಬರು ಮಕ್ಕಳು. ಈ ಇಬ್ಬರೇ ಕುಟುಂಬದ ಎಲ್ಲಾ ಆಸ್ತಿಯನ್ನು ನೋಡಿಕೊಂಡು ಹೋಗುತ್ತಿದ್ದಾರೆ. ಚೆನ್ನಪ್ಪ ಮತ್ತು ವನಜಾಕ್ಷಮ್ಮ ಇವರಿಗೆ ಮೂರು ಜನ ಮಕ್ಕಳು. ಆದರೆ ಇವರೆಲ್ಲರೂ ತೀರಿಕೊಂಡಿದ್ದಾರೆ.

ಹಾಗಾಗಿ ವನಜಾಕ್ಷಮ್ಮ ಒಂಟಿ ಜೀವನವನ್ನು ನಡೆಸುತ್ತಿದ್ದಾಳೆ. ವನಜಾಕ್ಷಮ್ಮನ ಗಂಡ ಚೆನ್ನಪ್ಪ ಮರಣ ಹೊಂದಿದ ನಂತರ ಕುಟುಂಬದ ಆಸ್ತಿಯನ್ನೆಲ್ಲಾ ಗವಿಯಪ್ಪನ ಮಕ್ಕಳಾದ ರಾಮಾಂಜಿನಿ ಮತ್ತು ಗಾದಿಲಿಂಗಪ್ಪ ತಮ್ಮ ಹೆಸರಿನಲ್ಲಿ ರಿಜಿಸ್ಟಾರ್ ಮಾಡಿಸಿಕೊಳ್ಳಲು ನಿರ್ಧರಿಸಿದ್ದಾರೆ. ವನಜಾಕ್ಷಮ್ಮ ಇವರ ವಿರುದ್ಧ ಹೋರಾಡಿ ತನ್ನ ಗಂಡನ ಆಸ್ತಿಯನ್ನು ಪಡೆದುಕೊಂಡಿದ್ದಾರೆ. ಇವರು ಹೇಳುವಂತೆ "ನಮ್ ಮಾವನೋರ ಆಸ್ತಿ ಇರೋದು ಬರೇ ೧೨ ಎಕ್ರೆ ಭೂಮಿ. ಅದನ್ನ ನನ ಗಂಡನ ಅಣ್ಣನ ಮಕ್ಳು ತಮ್ಮ ಹೆಸ್ರಿಗೆ ಮಾಡಿಸಿಕೆಳ್ಳಾಕ ಹೊಂಟಿದ್ರು ಆದ್ರ ನಾನು ಅದನ್ನ ತಡ್ದೆ. ಯಾಕಂದ್ರ ನನ್ ಜೀವ್ನಕ್ಕ ಯಾವ ಆಧಾರಾನೂ ಇರ್ಲಿಲ್ಲ. ಅದಕ್ಕ ನಾನು ನನ ಗಂಡನ ಪಾಲಿಗಿ ಬರಬೇಕಾದ ಆಸ್ತಿನ ಕೇಳಿದೆ.ಅವ್ರು ಕೊಡೋದಕ್ಕ ಒಪ್ಪಲಿಲ್ಲ. ಹಂಗಾಗಿ ನಾನು ನನ್ ತವ್ರಮನಿ ಕಡೇಕ್ಲಿಂದ ಕೋರ್ಟಿಗಿ ಕೇಸ್ ಮಾಡಿದೆ. ಹಾಗಾಗಿ ಕೋರ್ಟಲ್ಲಿ ಈ ಕೇಸ್ ಬಾಳ ದಿನ ನಡೀತು. ಮತ್ತೆ ನಾನು ಚೆನ್ನಪ್ಪನ ಹೆಂಡ್ತಿ ಅಂತ ಸಾಬೀತು ಮಾಡಿ, ಕೇಸನ್ನ ಗೆದ್ದಿದ್ದೀನಿ. ಈಗ ಎಲ್ಲಾರೂ ನನ್ ಹತ್ರಾನೇ ಬರ್ತಾರ. ಮತ್ತೆ ನಾನು ಕೇಸ್ ಗೆದ್ದಿದ್ಕ ಊರಾಗಿನ ಹೆಣ್ಮಕ್ಕಳು ನನ್ ಹತ್ರ ಬಂದು ಆಸ್ತಿ ಯಂಗ ಪಡ್ಕೊಂಡಿಯಾ ಅಂತ ವಿಚಾರ್ಸಕೊಂಡು ಹೋಗ್ತಾರ. ಈಗ ಇಲ್ಲಿ ನಾನೊಬ್ಬಳೇ ಇರೋದು ಏನು ಅಂತೇಳಿ ತವ್ರಮನ್ಯಾಗೇ ಐದೀನಿ. ಮತ್ತೆ ನನಿಗೆ ಬಂದಿರೋ ಭೂಮೀನ ಬ್ಯಾರೇರಿಗೆ ಕೋರಿಗಿ ಕೊಟ್ಟೇನಿ. ವರ್ಸಕ್ಕ ಇಷ್ಟು ಅಂತೇಳಿ ಕಾಳು ಕಡಿ ಬರ್ತಾವ. ಮತ್ತೆ ರೊಕ್ಕಕ್ಕ ಯಾರ್ಗೂ ಕೈ ಚಾಚ್ದಂಗ ಜೀವ್ನ ನಡದೈತಿ. ನಾನು ಈಗ ಬಾಳ ಆರಾಮಾಗಿ ಐದೀನಿ ಎಂದರು.

ವನಜಾಕ್ಷಮ್ಮಳೂ ಸಹ ನಿಂಗಮ್ಮಳು ಎದುರಿಸಿದಂತಹ ಕಷ್ಟಗಳನ್ನೇ ಅನುಭವಿಸಿದ್ದಾರೆ. ಅಂದರೆ ಇಲ್ಲಿ ವನಜಾಕ್ಷಮ್ಮಳೂ ಸಹ ತಾನು ಚೆನ್ನಪ್ಪನ ಹೆಂಡತಿ ಎಂದು ಸಾಬೀತು ಮಾಡಬೇಕಾದ ಅನಿವಾರ್ಯತೆಯನ್ನು ಎದುರಿಸಿದ್ದಾರೆ, ಹಾಗೆಯೇ ರಾಮಾಂಜಿನಿ ಮತ್ತು ಗಾದಿಲಿಂಗಪ್ಪ ಇವರ ಮೇಲೆ ಕೇಸ್ ದಾಖಲಿಸಿ ಎಲ್ಲಾ ಬಗೆಯ ಕಷ್ಟಗಳನ್ನು ಅನುಭವಿಸಿ ತನ್ನ ಗಂಡನಿಗೆ ಸೇರಬೇಕಾದ ಆಸ್ತಿಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಈ ಎರಡೂ ಪ್ರಕರಣ ಗಳಲ್ಲಿಯೂ ಮಹಿಳೆಯರು ಪುರುಷರಿಂದ ಹಿಂಸೆಯನ್ನು ಅನುಭವಿಸಿದ್ದರೂ ಸಹ ಕೇಸ್ ಮಾತ್ರ ಇವರ ಕಡೆಗೇ ಆಗಿರುವುದು ಮತ್ತು ಈ ಬಗೆಯ ಹೋರಾಟದ ಯಶಸ್ವಿಗೆ ಇವರ ಕುಟುಂಬದ ಸದಸ್ಯರೇ ಕಾರಣರಾಗಿರುವುದು ಕಂಡುಬರುತ್ತದೆ. ಹೀಗೆ ಆಸ್ತಿಹಕ್ಕನ್ನು ಪಡೆದುಕೊಂಡಂತಹ ಮಾದರಿ ಪ್ರಕರಣವೆಂದರೆ ಮೇರಿರಾಯ್ ಅವರ ಪ್ರಕರಣ. ಇದು ಎಲ್ಲಾ ಸಮುದಾಯದ ಮಹಿಳೆಯರಿಗೂ ಮಾದರಿಯಾಗಿ ನಿಲ್ಲುತ್ತದೆ. ಆದರೆ ಇಲ್ಲಿ ಆಸ್ತಿ ಪಡೆಯುವ ಸ್ವರೂಪದಲ್ಲಿ ತುಂಬಾ ವ್ಯತ್ಯಾಸಗಳಿರುವುದು ಕಂಡುಬರುತ್ತವೆ.

ಕ್ರೈಸ್ತ ಮಹಿಳೆಯರ ಆಸ್ತಿ ಹಕ್ಕು ಕುರಿತಂತೆ ಮೇರಿ ರಾಯ್ ಕೇಸ್ ಎಂದೇ ಹೆಸರಾದ ಪ್ರಕರಣದಲ್ಲಿ ಹೊರ ಬಂದ ತೀರ್ಪು ತಂದೆಯ ಆಸ್ತಿಯಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಸಮಾನ ಆಸ್ತಿ ಹಕ್ಕು ನೀಡುವ ೧೯೨೧ ರ ಭಾರತೀಯ ಉತ್ತರಾಧಿಕಾರ ಕಾಯ್ದೆ ವ್ಯಾಪ್ತಿಗೆ ಕ್ರೈಸ್ತ

ಮಹಿಳೆಯರು ಒಳಪಡುವಂತೆ ಮಾಡಿತು. ಆ ಮೂಲಕ ಕ್ರೈಸ್ತ ಹೆಣ್ಣುಮಕ್ಕಳ ಸ್ಥಾನಮಾನವನ್ನೆ ಬದಲಾಯಿಸಿತು. ಹೀಗೆ ಮೇರಿ ರಾಯ್ ಅವರ ಪ್ರಕರಣ ಮಾದರಿ ಪ್ರಕರಣವಾಗಿ ಪರಿಗಣಿಸಲ್ಪಡುತ್ತದೆ. ಮಹಿಳೆಯರು ಸಬಲರಾಗಿದ್ದಾಗ ಮಾತ್ರ ಹೋರಾಟದ ಮೂಲಕ ತಮ್ಮ ಹಕ್ಕನ್ನು ಪಡೆಯುವಲ್ಲಿ ಸಫಲರಾಗುತ್ತಾರೆಂಬುದಕ್ಕೆ ಈ ಪ್ರಕರಣವನ್ನು ಮಾದರಿಯಾಗಿ ನೋಡಬಹುದಾಗಿದೆ. ಮೇರಿರಾಯ್ ಅವರ ತಂದೆ ೧೯೬೦ರಲ್ಲಿ ವಿಲ್ ಮಾಡದೇ ತಿರಿಕೊಂಡಿದ್ದರು. ತಿರುವಾಂಕೂರು ಸಿರಿಯನ್ ಕ್ರಿಶ್ಚಿಯನ್ ಉತ್ತರಾಧಿಕಾರ ಕಾಯಿದೆ ೧೯೧೬ ಹಾಗೂ ಕೊಚ್ಚಿ ಉತ್ತರಾಧಿಕಾರ ಕಾಯಿದೆ ೧೯೨೧ರ ಪ್ರಕಾರ ಕೇವಲ ೫೦೦೦ ರೂ. ಅಥವಾ ಸಹೋದರನ ಪಾಲಿನ ನಾಲ್ಕನೇ ಒಂದರಷ್ಟು ಯಾವುದು ಕಡಿಮೆಯೋ ಅಷ್ಟು ಆಸ್ತಿಗೆ ಮೇರಿರಾಯ್ ಅರ್ಹರಾಗಿದ್ದರು. ಒಂದುವೇಳೆ ಹೆಣ್ಣುಮಕ್ಕಳಿಗೆ ಸ್ತ್ರೀಧನ, ವಧುದಕ್ಷಿಣೆ ನೀಡಿದ್ದರೆ, ಅಥವಾ ನೀಡುವ ವಚನ ನೀಡಿದ್ದರೆ ಈ ಮೊತ್ತವೂ ಸಿಗುತ್ತಿರಲಿಲ್ಲ. ಆದರೆ ರಾಷ್ಟ್ರದ ಬೇರೆ ಭಾಗಗಳಲ್ಲಿರುವ ಕ್ರೈಸ್ತ ಸಮುದಾಯದವರಿಗೆ ೧೯೨೫ರ ಭಾರತೀಯ ಉತ್ತರಾಧಿಕಾರ ಕಾಯಿದೆ ಅನ್ವಯವಾಗುತ್ತಿತ್ತು. ಹೀಗಾಗಿ ಮೇರಿರಾಯ್ ಅವರು ಸಿರಿಯನ್, ಕ್ರಿಶ್ಚಿಯನ್ ವೈಯಕ್ತಿಕ ಕಾನೂನನ್ನು ಪ್ರಶ್ನಿಸಿದರು. ೧೮೨೫ ಭಾರತೀಯ ಉತ್ತರಾಧಿಕಾರ ಕಾಯಿದೆಗೆ ಇದು ತದ್ವಿರುದ್ಧವಾಗಿದ್ದರಿಂದ ಈ ಕಾನೂನು ಸರಿಯಿಲ್ಲವೆಂದು ಸುಪ್ರೀಂಕೋರ್ಟ್ ಘೋಷಿಸಿ ೧೯೨೫ ಭಾರತೀಯ ಉತ್ತರಾಧಿಕಾರ ಕಾಯಿದೆಯ ಪರಮಾಧಿಕಾರವನ್ನು ಎತ್ತಿ ಹಿಡಿಯಿತು. ಇದು ನ್ಯಾಯಕ್ಕಾಗಿ ಭಾರತೀಯ ಮಹಿಳೆಯರ ಹೋರಾಟಕ್ಕೆ ಹೊಸದೊಂದು ಛಾಪು ಮೂಡಿಸಿತು. ೧೯೮೬ರಲ್ಲಿ ಮೇರಿರಾಯ್ ಪರವಾದ ತೀರ್ಪು ಹೊರ ಬಂದಿತು. ಕೇಸ್ ಗೆದ್ದಾದ ಮೇಲೂ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯಲು ಮತ್ತು ತನ್ನದಾಗಿಸಿಕೊಳ್ಳಲು ೨೪ ವರ್ಷಗಳು ಕಾಯಬೇಕಾಯಿತು. ಕಾರಣ ೧೯೨೫ ಭಾರತೀಯ ಉತ್ತರಾಧಿಕಾರ ಕಾಯಿದೆಯ ಪ್ರಕಾರ ಆಸ್ತಿಯನ್ನು ವಿಭಜಿಸದೇ ಆಸ್ತಿಯ ಮೂರನೇ ಒಂದು ಭಾಗವನ್ನು ಅನುಭವಿಸಬಹುದಾದ ತಾಯಿ ಹಕ್ಕು ಈ ಕಾಯಿದೆಯಲ್ಲಿ ಜಾರಿಯಲ್ಲಿರುವುದು ಮೇರಿ ರಾಯ್ ಅವರ ತಾಯಿಯಿಂದ ಎದುರಾದಂತಹ ತಡೆ. ಕಾರಣ ಮಗ ತಮ್ಮ ರಕ್ಷಕನೆಂಬ ಪಿತೃಪ್ರಧಾನ ಸಮಾಜ ವ್ಯವಸ್ಥೆಯ ಭಾಗವಾಗಿದ್ದ ತಾಯಿಯ ನಂಬಿಕೆ ಜೊತೆಗೆ ಸಹೋದರರ ತಡೆಗಳಿಂದಾಗಿ ಧೀರ್ಘಕಾಲದ ನಂತರ ಅಂದರೆ ೨೦೦೦ರಲ್ಲಿ ತಾಯಿಯ ನಿಧನದ ನಂತರ ತೀರ್ಪಿಗಾಗಿ ಮೇರಿರಾಯ್ ಪುನಃ ನ್ಯಾಯಾಲಯದ ಮೆಟ್ಟಿಲೇರಿದರು. ೨೦೦೮ ಡಿಸೆಂಬರ್ ನಲ್ಲಿ ಅಂತಿಮ ತೀರ್ಪು ಹೊರಬಂದು, ೨೦೦೯ ಜನೇವರಿಯಲ್ಲಿ ಅದರ ಅನುಷ್ಠಾನ ಕೋರಿ ಅರ್ಜಿ ಸಲ್ಲಿಸಿ ನಂತರ ಆಸ್ತಿಯನ್ನು ಪಡೆದುಕೊಂಡರು.

ವೃತ್ತಿಯಲ್ಲಿ ಅಧ್ಯಾಪಕಿಯಾಗಿದ್ದ ಮೇರಿರಾಯ್ ಅವರು ಸಧೀರ್ಘ ೨೪ ವರ್ಷಗಳ ಕಾನೂನು ಹೋರಾಟದಲ್ಲಿ ಸಫಲತೆಯನ್ನು ಸಾಧಿಸಿದ್ದು ಅವರ ಶೈಕ್ಷಣಿಕ ಸಬಲೀಕರಣದಿಂದ. ಶೈಕ್ಷಣಿಕವಾಗಿ ಸಬಲರಾದ ಮಹಿಳೆಯರು ಸಹಜವಾಗಿ ತಮ್ಮದೇ ಆದ ಆರ್ಥಿಕ

ಸ್ವಾವಲಂಬನೆಯ ದಾರಿಯನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿರುತ್ತಾರೆ. ಹೀಗಿದ್ದಾಗ ಧೀರ್ಘಕಾಲದ ಕಾನೂನು ಪ್ರಕ್ರಿಯೆಗಳನ್ನು ಎದುರಿಸುವ ಆತ್ಮಸ್ಥೈರ್ಯ ಅವರಲ್ಲಿ ಕಂಡುಬರುತ್ತದೆ. ಸಾಮಾನ್ಯ ಮಹಿಳೆಯರು ಅವಲಂಬಿತವಾಗಿ ಬದುಕು ನಡೆಸುವಂತಹ ಸಂದರ್ಭಗಳಲ್ಲಿ ಕಾನೂನು ಪ್ರಕ್ರಿಯೆಗಳಲ್ಲಾಗುವ ವಿಳಂಬದಿಂದಲೇ ಕೇಸಿನಿಂದ ವಿಮುಖ ರಾಗುವಂತೆ ಮಾಡುತ್ತದೆ. ಆದರೆ ವಿದ್ಯಾವಂತ ಮಹಿಳೆಯರಲ್ಲಿ ಈ ಬಗೆಯ ವಿಮುಖತೆ ಉಂಟಾಗುವುದಿಲ್ಲ. ಬದಲಿಗೆ ಅವರಲ್ಲಿ ಹಕ್ಕಿನ ಜಾಗೃತಿ ಅಸ್ತಿತ್ವದ ಪ್ರಶ್ನೆಯನ್ನು ಹುಟ್ಟು ಹಾಕುತ್ತದೆ. ಹೀಗೆ ತಮ್ಮ ಹಕ್ಕನ್ನು ಪಡೆಯುವ ಪ್ರಕ್ರಿಯೆಯಲ್ಲಿ ಎದುರಾಗುವ ಎಂಥಹದ್ದೇ ಅಡ್ಡಿಯನ್ನಾದರೂ ಎದುರಿಸುವ ಮತ್ತು ವ್ಯವಸ್ಥೆಯ ಕುತಂತ್ರಗಳಿಗೆ ಬಲಿಯಾಗದೇ ಜಾಗರೂಕರರಾಗಿರುವ ಜಾಣತನವನ್ನು ತೋರುವ ಸಾಮರ್ಥ್ಯ ಶಿಕ್ಷಣದಿಂದ ದೊರೆಯುತ್ತದೆ. ನಂತರ ಪಡೆದಂತಹ ತಮ್ಮ ಹಕ್ಕಿನ ಪಾಲನ್ನು ವಿನಿಯೋಗಿಸಿಕೊಳ್ಳುವ ಅಧಿಕಾರವನ್ನೂ ಸಹ ಸ್ವತಃ ತಾವೇ ಚಲಾಯಿಸುವುದು ಸಾಧ್ಯವಾಗುತ್ತದೆ. ೨೪ ವರ್ಷಗಳ ಹೋರಾಟದಿಂದ ಪಡೆದ ತಂದೆಯ ಆಸ್ತಿಯನ್ನು ಮೇರಿರಾಯ್ ಅವರು ದಾನ ನೀಡುವುದಾಗಿ ಹೇಳಿದ್ದಾರೆ. ಹೀಗೆ ತಮ್ಮ ಹೋರಾಟದಲ್ಲಿ ಸಫಲರಾಗುವುದಕ್ಕೆ ಹಲವು ಸಂಘಟನೆಗಳ ಬೆಂಬಲವೂ ಸಹ ಅವರಿಗೆ ದೊರೆತಿದೆ. ಮಹಿಳೆಯರು ಕೌಟುಂಬಿಕ ಚೌಕಟ್ಟಿಗೆ ಸೀಮಿತವಾಗದೇ ಮುಖ್ಯವಾಹಿಸಿಯೊಂದಿಗೆ ಸಂಪರ್ಕದಲ್ಲಿದ್ದಾಗ ದೊರೆಯುವ ಸಂಪರ್ಕಗಳು ಹೋರಾಟಗಳಿಗೆ ಬೆಂಬಲವಾಗುತ್ತವೆ. ಕುಟುಂಬ ಮತ್ತು ವಿವಾಹದ ಚೌಕಟ್ಟಿನೊಳಗೆ ಸೀಮಿತಗೊಂಡಿರುವ ಸಾಮಾನ್ಯ ಮಹಿಳೆಯರಿಗೆ ಈ ರೀತಿಯ ಬೆಂಬಲ ದೊರೆಯುವುದು ಅಸಾಧ್ಯವಾದುದು. ಸ್ವತಃ ಮಹಿಳೆಯರೇ ತಮ್ಮ ಹಕ್ಕುಗಳ ಕುರಿತು ಜಾಗೃತರಾಗಬೇಕು ಹಾಗಾಗಬೇಕಾದರೆ ಅಗತ್ಯವಾಗಿ ಶಿಕ್ಷಣಕ್ಕೆ ತಮ್ಮನ್ನು ತಾವು ತೆರೆದುಕೊಳ್ಳಬೇಕಾಗುತ್ತದೆ. ಮುಖ್ಯವಾಹಿಸಿಯಲ್ಲಿರುವ ಮಹಿಳೆಯರ ಸ್ಥಾನಮಾನಗಳಿಗೂ ಅದರಿಂದ ದೂರವಿರುವ ಮಹಿಳೆಯರ ಸ್ಥಾನಮಾನಗಳಿಗೂ ವ್ಯತ್ಯಾಸಗಳಿವೆ. ಸ್ವತಃ ಮೇರಿರಾಯ್ ಅವರೇ ತಮ್ಮ ಹೋರಾಟದ ಕುರಿತು. ಈ ರೀತಿಯಾಗಿ ಹೇಳಿದ್ದಾರೆ. "ನ್ಯಾಯಕ್ಕಾಗಿ ನನ್ನ ಧೀರ್ಘ ಹೋರಾಟ ಫಲ ನೀಡಿದೆ ಎಂಬ ಬಗ್ಗೆ ನನಗೆ ನಿರಾಳತೆ ಇದೆ. ನನ್ನ ಈ ಹೋರಾಟ ಒಂದು ತುಂಡು ಆಸ್ತಿಗಾಗಿ ಮಾತ್ರವಲ್ಲ. ಆದರೆ ಈ ರಾಷ್ಟ್ರದ ಮಹಿಳೆಯರು ಸಂವಿಧಾನದತ್ತ ಹಕ್ಕುಗಳನ್ನು ಅನುಭವಿಸಬೇಕೆಂಬ ಆಶಯ ಇಲ್ಲಿ ಮುಖ್ಯವಾದುದು" (ಕ್ರೈಸ್ತ ಮಹಿಳೆಯರ ಆಸ್ತಿಹಕ್ಕಿಗೆ ಕಾನೂನು ಹೋರಾಟ, ಸಿ.ಜಿ.ಮಂಜುಳ, ೨೦೧೫,ಅಂತರ್ಜಾಲ) ಹೀಗೆ ಮಹಿಳೆ ಯರೆಲ್ಲರೂ ತಮ್ಮ ಹೋರಾಟದ ಫಲವಾಗಿ ಅಂತಿಮವಾಗಿ ಪಡೆಯುವ ನಿರಾಳತೆಯೇ ಸಬಲೀಕರಣ ಎನ್ನಬಹುದು. ಬದಲಿಗೆ ಉಂಟಾಗುವ ಸಂಘರ್ಷಗಳು ಸಂಬಂಧಗಳಲ್ಲಿನ ಬಿರುಕುಗಳು, ಮಾನಸಿಕ, ದೈಹಿಕ ಸಂಕಟಗಳ ಪ್ರತಿಫಲವಾಗಿ ದೊರೆಯುವುದು ನಿರಾಳತೆಯಲ್ಲ. ಬದಲಿಗೆ ಮಹಿಳೆಯರಿಗೆ ಒಂದನ್ನು ಬಿಟ್ಟು ಇನ್ನೊಂದು ಆಯ್ಕೆ ಮಾಡಿಕೊಳ್ಳಬೇಕಾದ ಅನಿವಾರ್ಯತೆ (ಆಸ್ತಿ/ಸಂಬಂಧ). ಈ ಅನಿವಾರ್ಯತೆಯನ್ನು ಸಬಲೀಕರಣವೆನ್ನಲಾಗುವುದಿಲ್ಲ. ಇಂತಹ ಸ್ಥಿತಿಯಲ್ಲಿಂದು ಅನೇಕ ಮಹಿಳೆಯರಿದ್ದಾರೆ. ಆದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ

ಜಾರಿಯಲ್ಲಿರುವ ಕರ್ನಾಟಕದ ಪ್ರದೇಶಗಳಲ್ಲಿ ವಿಶೇಷವಾಗಿ ದಕ್ಷಿಣಕನ್ನಡದ ಕುಟುಂಬಗಳಲ್ಲಿ ಆಸ್ತಿಗಾಗಿ ಹೊಡೆದಾಡುವಂತಹ ಸ್ಥಿತಿ ಎದುರಾಗುವುದಿಲ್ಲ. ಮುಖ್ಯವಾಗಿ ಅಲ್ಲಿನ ಪುರುಷರು ಶಿಕ್ಷಣದ ಕಾರಣಕ್ಕಾಗಿಯೋ ಅಥವಾ ಉದ್ಯೋಗದ ಕಾರಣಕ್ಕಾಗಿಯೋ ಬೇರೊಂದು ಊರಿಗೆ ವಲಸೆ ಹೋಗಿ ಅಲ್ಲಿಯೇ ನೆಲೆನಿಲ್ಲುವಂತಹದ್ದನ್ನು ಕಾಣಬಹುದು. ಅಂತಹ ಸಂದರ್ಭದಲ್ಲಿ ತಮ್ಮ ಊರಲ್ಲಿರುವ ಆಸ್ತಿಯನ್ನು ತಮ್ಮ ಸಹೋದರಿಯರ ಹೆಸರಿನಲ್ಲಿಯೇ ಬಿಟ್ಟು ಹೋಗುತ್ತಾರೆ. ಮುಖ್ಯವಾಗಿ ಅಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿರುವ ಕಾರಣಕ್ಕೆ ಹೀಗೆ ನಡೆಯುತ್ತದೆ. ಜೊತೆಗೆ ಅಲ್ಲಿನ ಮಹಿಳೆಯರಿಗೆ ಸಂಬಂಧ ಮತ್ತು ಆಸ್ತಿಗಳ ನಡುವೆ ಆಯ್ಕೆಯ ಸಂದರ್ಭಗಳು ಎದುರಾಗುವುದು ಕಡಿಮೆ. ಜೊತೆಗೆ ಅಲ್ಲಿ ಅಳಿಯಕಟ್ಟು ಪರಂಪರೆ ಇರುವುದರಿಂದ ವಿವಾಹದ ನಂತರ ಪುರುಷ ವಧುವಿನ ಮನೆಗೇ ಬಂದು ನೆಲೆಸುತ್ತಾನೆ. ಅಲ್ಲಿ ಆಸ್ತಿಯ ಮೇಲಿನ ಎಲ್ಲಾ ಅಧಿಕಾರಗಳು ಮಹಿಳೆಯರದ್ದೇ ಆಗಿರುತ್ತದೆ. ಹಾಗಾಗಿ ಆಸ್ತಿ ಹಂಚಿಕೆಯ ವಿಷಯದಲ್ಲಿ ಯಾವ ತೊಂದರೆಗಳೂ ಸಂಭವಿಸುವುದಿಲ್ಲ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಪ್ರಕರಣಗಳಲ್ಲಿನ ಮಹಿಳೆಯರು ಆಸ್ತಿಹಕ್ಕನ್ನು ಕೇಳಲು ನ್ಯಾಯಾಲಯದ ಮೆಟ್ಟಿಲೇರಿರುವ ಜಾತಿವಾರು ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದಾಗಿದೆ. ಮುಖ್ಯವಾಗಿ ೩೦೦ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು ಅವುಗಳ ಅಂಕಿ ಸಂಖ್ಯೆಗಳು ಈ ಕೆಳಗಿನಂತಿವೆ.

**ಕೋಷ್ಟಕ ೭.೧**

**ಮಹಿಳೆಯರು ಆಸ್ತಿ ಹಕ್ಕನ್ನು ಕೇಳಲು ನ್ಯಾಯಾಲಯಕ್ಕೆ ದಾವೆ – ಯಶಸ್ಸು**

| ಜಾತಿಗಳು | ಆಸ್ತಿಗಾಗಿ ನ್ಯಾಯಾಲಯದ ಮೆಟ್ಟಿಲೇರಿದರವ ಸಂಖ್ಯೆ | ಆಸ್ತಿ ಪಡೆದ ಮಹಿಳೆಯರ ಸಂಖ್ಯೆ |
|---|---|---|
| ಪರಿಶಿಷ್ಟ ಜಾತಿ | ೫೫ | ೪೨ |
| ಪರಿಶಿಷ್ಟ ಪಂಗಡ | ೬೨ | ೫೬ |
| ಹಿಂದುಳಿದ ವರ್ಗ | ೯೮ | ೭೨ |
| ಸಾಮಾನ್ಯ | ೮೫ | ೬೦ |




**ರೇಖಾ ಚಿತ್ರ ೭.೧ ಮಹಿಳೆಯರು ಆಸ್ತಿ ಹಕ್ಕನ್ನು ಕೇಳಲು ನ್ಯಾಯಾಲಯಕ್ಕೆ ದಾವೆ – ಯಶಸ್ಸು**

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಹಿಂದುಳಿದ ವರ್ಗದವರಲ್ಲಿ ಆಸ್ತಿ ಹಕ್ಕನ್ನು ಕೇಳಿದವರ ಪ್ರಮಾಣ ಅಧಿಕವಾಗಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಸಾಮಾನ್ಯ ವರ್ಗದವರದ್ದಾಗಿದೆ. ಈ ಹಿನ್ನಲೆಯಲ್ಲಿ ಸಂಶೋಧನೆಯ ವ್ಯಾಪ್ತಿ ಪ್ರದೇಶಗಳಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಗಾಗಿ ನ್ಯಾಯಾಲಯದ ಮೆಟ್ಟಿಲೇರಿರುವ ಜಾತಿವಾರು ಪ್ರಮಾಣ ದೊರೆಯುತ್ತದೆ. ಹಾಗೆಯೇ ಪ್ರತಿಯೊಂದು ಜಾತಿಗಳಲ್ಲಿ ಆಸ್ತಿಹಕ್ಕನ್ನು ಪಡೆದ ಮಹಿಳೆಯರ ಸಂಖ್ಯೆಯನ್ನು ಗಮನಿಸಿದಾಗ ಒಟ್ಟು ಮುನ್ನೂರು ಪ್ರಕರಣಗಳಲ್ಲಿ ೨೩೦ ಜನ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡವರಾಗಿದ್ದಾರೆ. ಇನ್ನುಳಿದಂತೆ ೭೦ ಜನ ಮಹಿಳೆಯರು ನ್ಯಾಯಾಲಯದ ಮೆಟ್ಟಿಲೇರಿದ್ದರೂ ಸಹ ನ್ಯಾಯಾಲಯದಲ್ಲಿ ಸರಿಯಾದ ದಾಖಲೆಗಳನ್ನು ಒದಗಿಸುವುದರಲ್ಲಿ ವಿಫಲರಾದ ಕಾರಣ ಆಸ್ತಿಯಿಂದ ದೂರ ಉಳಿದಿರುವುದು ಕಂಡುಬರುತ್ತದೆ.

ಮಹಿಳೆಯರ ಆಸ್ತಿಹಕ್ಕಿಗೆ ಸಂಬಂಧಿಸಿದಂತೆ ದೊರೆತ ಪ್ರಕರಣಗಳಲ್ಲಿ ಕಂಡುಬರುವಂತಹ ಪ್ರಮುಖ ಅಂಶವೆಂದರೆ ಆಸ್ತಿ ಹಕ್ಕು ಕೇಳಿದ ಕೂಡಲೇ ಮಹಿಳೆಯರ ತವರಿನ ಸಂಬಂಧಗಳಲ್ಲಿ ಬಿರುಕುಂಟಾಗುತ್ತದೆ. ಆಸ್ತಿಯಲ್ಲಿ ಪಾಲು ಕೇಳುವ ಹಿಂದಿನ ದಿನದವರೆಗೂ ಸಹೋದರರಲ್ಲಿದ್ದಂತಹ ಭಾವನಾತ್ಮಕ ಸಂಬಂಧಗಳ ಅನನ್ಯತೆಯು ಹಕ್ಕನ್ನು ಕೇಳಿದ ಕೂಡಲೇ ವೈಶಮ್ಯಕ್ಕೆ ತಿರುಗುತ್ತದೆ. ಸಂಬಂಧಗಳು ಮೌಲ್ಯಗಳ ಮರು ವಿಮರ್ಶೆಗೆ ಒಳಪಡುತ್ತವೆ. ಆ ಮೂಲಕ ಮಹಿಳೆಯರು ಹಕ್ಕನ್ನು ಕೇಳುವುದು ಅಪರಾಧವೆಂಬಂತೆ ಬಿಂಬಿತವಾಗುತ್ತದೆ. ಇದಕ್ಕಿರುವ ಕಾರಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬರುವುದೇನೆಂದರೆ ಆಸ್ತಿ ಹಕ್ಕಿನ ಕೇಸುಗಳು ಏಕ ರೂಪದಲ್ಲಿಲ್ಲದಿರುವುದು. ಅಂದರೆ ವರ್ಗಾದಾರಿತವಾಗಿ ಈ ಪ್ರಕರಣಗಳ

ಸ್ವರೂಪ ಮತ್ತು ಕಾನೂನಿನ ಅನ್ವಯದ ಸ್ವರೂಪ ಭಿನ್ನವಾಗಿರುವುದು ಕಂಡುಬರುತ್ತದೆ. ಮೇಲ್ವರ್ಗದ ಕುಟುಂಬಗಳಲ್ಲಿ ಆಸ್ತಿಯಲ್ಲಿ ಪಾಲು ಕೇಳಿದಾಕ್ಷಣ ಸಂಘರ್ಷಗಳೇರ್ಪಡುವುದು ವಿರಳ ಮತ್ತು ಪ್ರಕರಣಗಳು ನ್ಯಾಯಾಲಯದ ಮೆಟ್ಟಿಲೇರುವುದು ಕಡಿಮೆ ಪ್ರಮಾಣದಲ್ಲಿ ಎಂದು ಹೇಳಬಹುದು. ಮೇಲ್ವರ್ಗದ ಮಹಿಳೆಯರು ಆಸ್ತಿಯಲ್ಲಿ ಪಾಲು ಕೇಳಿದ ಕೂಡಲೇ ಅವರಿಗೆ ಸಮಪಾಲು ಅಥವಾ ಪರ್ಯಾಯವಾದ ಆಸ್ತಿ ದೊರಕುತ್ತದೆ. ಹಾಗೂ ಮಹಿಳೆಯರನ್ನು ಆಸ್ತಿಯಿಂದ ವಂಚಿತರನ್ನಾಗಿಸಬೇಕೆಂಬ ಅನಿವಾರ್ಯ ಸಂದರ್ಭಗಳು ಮೇಲ್ವರ್ಗದಲ್ಲಿ ಕಂಡುಬರುವುದೂ ಸಹ ವಿರಳ. ಮೇಲ್ವರ್ಗದ ಕುಟುಂಬಗಳು ಆರ್ಥಿಕವಾಗಿ ಭದ್ರವಾಗಿರುವುದು ಈ ರೀತಿಯಾಗಿರುವುದಕ್ಕೆ ಪ್ರಮುಖ ಕಾರಣ. ಆದರೆ ಮಧ್ಯಮ ಮತ್ತು ಕೆಳ ವರ್ಗದ ಕುಟುಂಬಗಳಲ್ಲಿ ಬದುಕು ಸಾಗಿಸುವುದಕ್ಕೆ ಅಗತ್ಯವಾದಂತಹ ಆಸ್ತಿಯ ಪ್ರಮಾಣ ಅತ್ಯಲ್ಪವಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಮಹಿಳೆಯರು ಆಸ್ತಿಯಲ್ಲಿ ಪಾಲು ಕೇಳುವುದು ಅಸಹನೆಯ ಅಂಶವಾಗಿರುತ್ತದೆ ಹಾಗೂ ಮೇಲ್ವರ್ಗದ ಶೈಕ್ಷಣಿಕ, ರಾಜಕೀಯ ಮತ್ತು ಆರ್ಥಿಕ ಮಟ್ಟಗಳು ಅವರಲ್ಲಿ ಮೂಡಿಸುವ ಅರಿವು ಅವರಿಗೆ ಮಹಿಳೆಯರು ಆಸ್ತಿಯನ್ನು ಕೇಳುವುದು ಅಸಹಜವೆನಿಸುವುದಿಲ್ಲ. ಬದಲಿಗೆ ಸೌಹಾರ್ದಯುತವಾದ ಹಂಚಿಕೆಯನ್ನು ಅಲ್ಲಿ ಕಾಣಬಹುದು. ಆದರೆ ಮಧ್ಯಮ ಮತ್ತು ಕೆಳ ವರ್ಗದವರಿಗೆ ತಮಗಿರುವ ಆರ್ಥಿಕ ಸಂಪನ್ಮೂಲದ ಪ್ರಮಾಣ ಅತ್ಯಲ್ಪವಾಗಿರುತ್ತದೆ. ಆದರೂ ಆಸ್ತಿಯ ವಿಚಾರಕ್ಕೆ ಬಂದಾಗ ಮಹಿಳೆಯರು ತಮ್ಮ ಹಕ್ಕುಗಳನ್ನು ಚಲಾಯಿಸಲೇ ಬೇಕಾಗುತ್ತದೆ. ಹೀಗೆ ಮಧ್ಯಮ ಮತ್ತು ಕೆಳ ಮಧ್ಯಮ ವರ್ಗದ ಕುಟುಂಬಗಳಲ್ಲಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡು ಸಮಾಜದಲ್ಲಿ ಉತ್ತಮವಾದ ಜೀವನವನ್ನು ಸಾಧಿಸುತ್ತಿರುವುದನ್ನು ಮೇಲಿನ ಪ್ರಕರಣಗಳಿಂದ ತಿಳಿದುಬರುತ್ತದೆ. ಅಂದರೆ ಉನ್ನತವಾದ ಕೌಟುಂಬಿಕ ಸ್ಥಾನಮಾನಗಳು ದೊರೆಯುತ್ತವೆ. ಹೀಗೆ ದೊರೆತ ಸ್ಥಾನಮಾನಗಳಿಂದ ಅವಳಿಗೆ ನೆಮ್ಮದಿ ದೊರೆಯುತ್ತದೆ. ಜೊತೆಗೆ ಭದ್ರತೆಯನ್ನು ತಂದುಕೊಡುತ್ತದೆ. ಮಹಿಳೆಯರಿಗೆ ಆರ್ಥಿಕ ಭದ್ರತೆ ದೊರೆತಷ್ಟು ಕುಟುಂಬದಲ್ಲಿನ ಮತ್ತು ಸಮಾಜದಲ್ಲಿನ ಹಿಂಸೆಯಿಂದ ಹೊರ ಬರುತ್ತಾರೆ. ಆಸ್ತಿಯನ್ನು ಕೇಳುವುದು ಎಂದರೆ ಕುಟುಂಬವನ್ನು ಒಡೆಯುವುದು ಎಂದರ್ಥವಲ್ಲ. ಬದಲಾಗಿ ಕುಟುಂಬದಲ್ಲಿ ನೆಮ್ಮದಿಯನ್ನು ಕಟ್ಟಿಕೊಡುವುದಾಗಿದೆ. ಅಂದರೆ ಕುಟುಂಬದಲ್ಲಿರುವ ಅಸಮಾಧಾನಗಳ ಕಾರಣದಿಂದ ಕುಟುಂಬದಲ್ಲಿ ಒಂದಾಗಿ ಬಾಳುವುದಕ್ಕಿಂತ ಮಹಿಳೆಯರಿಗೆ ಆಸ್ತಿಯನ್ನು ಕೊಡುವುದರ ಮೂಲಕ ನೆಮ್ಮದಿಯ ಕೌಟುಂಬಿಕ ರಚನೆಯನ್ನು ಹೊಂದುವುದು ಉತ್ತಮವಾಗಿರುತ್ತದೆ. ಎಷ್ಟು ಸಂಖ್ಯೆಯ ಮಹಿಳೆಯರು ಆಸ್ತಿಹಕ್ಕನ್ನು ಪಡೆದುಕೊಳ್ಳುತ್ತಾರೋ ಅಷ್ಟು ಸಂಖ್ಯೆಯಲ್ಲಿ ಅವರ ಕೌಟುಂಬಿಕ ಸ್ಥಾನಮಾನಗಳು ಬದಲಾಗುತ್ತವೆ ಎಂದು ಹೇಳಬಹುದು. ಜೊತೆಗೆ ಮಹಿಳೆಯರು ನಾಗರೀಕರಾಗಿ, ಸಾಮಾಜಿಕ ಸದಸ್ಯರಾಗಿ ಅವರು ಪರಿಗಣಿಸಲ್ಪಡುತ್ತಾರೆ. ಈ ಬದಲಾವಣೆ ಕುಟುಂಬದ ಬೆಳವಣಿಗೆಯಾಗಿರುತ್ತದೆ, ಸಮಾಜದ ಬೆಳವಣಿಗೆಯಾಗಿರುತ್ತದೆ ಹಾಗೆಯೇ ಆರ್ಥಿಕ ಬೆಳವಣಿಗೆಯಾಗಿರುತ್ತದೆ.

ಆರ್ಥಿಕ ಅಭಿವೃದ್ಧಿ ಎಂಬುದು ಕೇವಲ ಪುರುಷರನ್ನಷ್ಟೇ ಅವಲಂಬಿಸಿರುವುದಿಲ್ಲ. ಬದಲಾಗಿ ಮಹಿಳೆಯರೂ ಅದರಲ್ಲಿ ಒಳಗೊಳ್ಳುತ್ತಾರೆ. "ಯಾವುದೇ ಪಕ್ಷದ ಸರಕಾರವಾಗಿರಬಹುದು ಅದು ಸಂವಿಧಾನಬದ್ಧವಾದಂತ ಯೋಜನೆಗಳನ್ನು ರೂಪಿಸಿಕೊಳ್ಳುತ್ತಿರುತ್ತದೆ. ಇಂತಹ ಬಹುತೇಕ ಯೋಜನೆಗಳು ಸಾಮಾಜಿಕ ಅಭಿವೃದ್ಧಿಯನ್ನು ಸಾಧಿಸುವ ಉದ್ದೇಶವನ್ನು ಹೊಂದಿರುತ್ತದೆ. ಸಾಮಾಜಿಕ ಅಭಿವೃದ್ಧಿಯು ಸಾಧ್ಯವಾಗುವುದು ಲಿಂಗ ಶ್ರೇಣೀಕರಣಗಳನ್ನು ಹಾಗೂ ಜಾತಿ ಶ್ರೇಣೀಕರಣಗಳನ್ನು ಮೀರುವುದರಿಂದ, ಜಾತಿ ಹಾಗೂ ಲಿಂಗವನ್ನು ಅನುಸರಿಸಿ ಇರುವ ಶ್ರೇಣೀಕರಣಗಳ ಸನಾತನ ಬಿಗಿ ಕಟ್ಟನ್ನು ಸಡಿಲಗೊಳಿಸುವುದಕ್ಕಾಗಿ ಹಾಗೂ ಸಂಪೂರ್ಣವಾಗಿ ಅವುಗಳ ಅಸ್ತಿತ್ವವಿಲ್ಲದಂತೆ ಮಾಡುವುದಕ್ಕಾಗಿ ಸರಕಾರವು ಹಿಂದುಳಿಸಲ್ಪಟ್ಟ ವರ್ಗಗಳಾಗಿಯೇ ಅದರಲ್ಲೂ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಅಭ್ಯುದಯಕ್ಕೆ ಸಂಬಂಧಿಸಿದಂತೆ ಕೆಲವು ಯೋಜನೆಗಳನ್ನು ರೂಪಿಸಿದೆ. ಹೀಗೆ ರೂಪಿಸಿಕೊಂಡ ಯೋಜನೆಗಳು ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸೌಲಭ್ಯಗಳನ್ನು ಒದಗಿಸಿಕೊಡುವ ಉದ್ದೇಶಗಳನ್ನು ಒಳಗೊಂಡಿವೆ. ಯಾವಾಗ ಈ ಬಗೆಯ ಸೌಲಭ್ಯಗಳು ಸಮಾಜದಲ್ಲಿ ಲಿಂಗ ಸಂಬಂಧಿತ ಗ್ರಹಿಕೆಗಳನ್ನು ಹಾಗೂ ಜಾತಿ ಸಂಬಂಧಿತ ಗ್ರಹಿಕೆಗಳನ್ನು ಪಲ್ಲಟಗೊಳಿಸುತ್ತವೆಯೋ, ಆಗ ಸಾಮಾಜಿಕ ಸಂಚಲನೆ ಮೂಡುತ್ತದೆ".[5] ಈ ಮೇಲಿನ ಅಂಶವು ಆಸ್ತಿಹಕ್ಕಿನ ವಿಚಾರಕ್ಕೂ ಅನ್ವಯವಾಗುತ್ತದೆ. ಅಂದರೆ ಆಸ್ತಿಹಕ್ಕನ್ನು ಮಹಿಳೆಯರು ಪಡೆಯುವುದರಿಂದ ಸಮಾಜದಲ್ಲಿರುವ ಸ್ಥಾಪಿತ ಗ್ರಹಿಕೆಗಳನ್ನು ಒಡೆಯುವ ಕಾರ್ಯ ಮಾಡಿದಂತಾಗುತ್ತದೆ. ಇದಕ್ಕೆ ಮೇಲಿನ ಪ್ರಕರಣಗಳೇ ಸಾಕ್ಷಿಗಳಾಗಿ ನಿಲ್ಲುತ್ತವೆ. ಇದರಿಂದ ಮಹಿಳೆ ಕುಟುಂಬದಲ್ಲಿ ನೆಮ್ಮದಿಯ ಜೀವನಕ್ಕೆ ಒಳಗಾಗುತ್ತಾಳೆ. "ಆರ್ಥಿಕ ವಿಷಯಕ್ಕೆ ಸಂಬಂಧಿಸಿದಂತೆ ಮಹಿಳೆಯರ ಸಹಭಾಗಿತ್ವವು ಕಂಡಿರುವ ಬದಲಾವಣೆಯ ಮತ್ತೊಂದು ಕ್ಷೇತ್ರವೆಂದರೆ ಭೂಮಾಲೀಕತ್ವಕ್ಕೆ ಸೇರಿದ ಆರ್ಥಿಕ ಚಟುವಟಿಕೆಗಳಾಗಿವೆ. ಇಲ್ಲೂ ಸಹ ಮಹಿಳೆಯರಿಗೆ ಒದಗಿಬರುವ ಅವಕಾಶಗಳು ಆರ್ಥಿಕತೆಯ ಕಾರ್ಯಚಟುವಟಿಕೆಗಳ ಮೇಲೆ ಮತ್ತು ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರಬಲ್ಲವು. 'ತನ್ನದೇ ಸ್ವಂತ ಭೂಮಿ'ಯು ಮಹಿಳೆಯರ ಆರಂಭಶೀಲತೆ ಹಾಗೂ ಸಹಭಾಗಿತ್ವಗಳ ಮೇಲೆ ತೀವ್ರ ಪ್ರಭಾವ ಬೀರುತ್ತದೆ. ಪುರುಷರು ಮತ್ತು ಮಹಿಳೆಯರ ಆರ್ಥಿಕ ಹಾಗೂ ಸಾಮಾಜಿಕ ಅಧಿಕಾರಗಳ ನಡುವಿನ ಸಮತೋಲನದ ಮೇಲೆ ಮಹತ್ವವಾದ ಪರಿಣಾಮ ಬೀರುತ್ತದೆ. (ಮಹಿಳೆಯರ ಭೂಮಾಲೀಕತ್ವ ಹಕ್ಕನ್ನು ಕುರಿತಂತೆ ಬಿನಾ ಅಗರವಾಲ ರಚಿಸಿರುವ ಗ್ರಂಥದ ಶೀರ್ಷಿಕೆ 'ತನ್ನದೇ ಸ್ವಂತ ಭೂಮಿ') ಜಗತ್ತಿನ ಅನೇಕ ದೇಶಗಳಲ್ಲಿ ಇಂದು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಸಶಕ್ತೀಕರಣ ಎಂಬುದು ಒಂದು ಭಾವಗರ್ಭಿತ ಸಂಗತಿಯಾಗಿದೆ. ಇದಕ್ಕೆ ಸಂಬಂಧಿಸಿದ ಸಂಗತಿಗಳೆಂದರೆ ಮಹಿಳೆಯರ ಶಿಕ್ಷಣ, ಅವರ ಆಸ್ತಿಯ ಹಕ್ಕು, ಅವರ ಉದ್ಯೋಗದ ಅವಕಾಶಗಳು ಮತ್ತು ಕಾರ್ಮಿಕ ಮಾರುಕಟ್ಟೆಯ ಕಾರ್ಯ ವಿಧಾನ. ಈ ಅಭಿಜಾತ ವಲಯ ಸಂಗತಿಗಳ ಆಚೆ ನೋಡುವುದಾದರೆ ಕಂಡುಬರುವ ಸಂಗತಿಗಳೆಂದರೆ ಮಹಿಳೆಯರಿಗೆ ದೊರೆಯುವ ಉದ್ಯೋಗದ ಸ್ವರೂಪ ಮಹಿಳೆಯರ ಆರ್ಥಿಕ ಚಟುವಟಿಕೆಗಳ ಬಗ್ಗೆ ಕುಟುಂಬ

ತಳೆಯುವ ಧೋರಣೆ ಮತ್ತು ಸಮಾಜವೊಂದು ತಳೆಯುವ ಮನೋಭಾವ ಇಂತಹ ಬೆಳವಣಿಗೆಗೆ ಪೂರಕವಾದ ಅಥವಾ ಮಾರಕವಾದ ಸನ್ನಿವೇಶ".[೩] ಭೂಮಿಯ ಮೇಲಿನ ಮಹಿಳೆಯರ ಒಡೆತನ ತನ್ನ ಕುಟುಂಬದಲ್ಲಿಯಷ್ಟೇ ಅಲ್ಲದೆ ಸಮಾಜದಲ್ಲಿಯೂ ಬದಲಾವಣೆಯನ್ನು ತರುವಂತಹ ಪ್ರಕ್ರಿಯೆಗೆ ಪೂರಕವಾಗಿದೆ. ಹಾಗೆಯೇ ಅಮರ್ತ್ಯಸೇನ್ ಅವರು ತಮ್ಮ "ಪರಿವರ್ತನಾವಾದಿ ದೃಷ್ಟಿಕೋನವನ್ನು ಪ್ರತಿಪಾದಿಸುತ್ತಾ ಮಹಿಳೆಯರನ್ನು ಬದಲಾವಣೆಯ ಹರಿಕಾರರೆಂದು ಪರಿಗಣಿಸುತ್ತಾನೆ. ಅವರು ಅಭಿವೃದ್ಧಿಯ ಫಲಾನುಭವಿಗಳೂ ಹೌದು, ಅವರು ಅಭಿವೃದ್ಧಿಯ ವಸ್ತುವೂ ಹೌದು ಮತ್ತು ಅವರು ಅಭಿವೃದ್ಧಿಯ ಕರ್ತೃಗಳೂ ಹೌದು"[೪] ಎಂದು ಹೇಳುತ್ತಾರೆ. ಹೀಗೆ ಮಹಿಳೆಯರು ಅಭಿವೃದ್ಧಿಯ ಭಾಗವಾಗಬೇಕಾದರೆ ಅವರು ಆರ್ಥಿಕವಾಗಿ ಸಶಕ್ತರಾಗಬೇಕು. ಆ ಮೂಲಕ ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗಿಗಳಾಗಬೇಕು. ಮಹಿಳೆಯರು ತಮ್ಮ ಹಕ್ಕುಗಳನ್ನು ಪಡೆಯಲು ಕಾನೂನಿನ ಮೊರೆ ಹೋದರೆ ಅದು ಪುರುಷ ಪ್ರಧಾನ ವ್ಯವಸ್ಥೆಯನ್ನು ವಿರೋಧಿಸಿದಂತೆ ಅಲ್ಲ. ಬದಲಾಗಿ ಅವರು ಸಶಕ್ತರಾಗಲು ಅದೊಂದು ದಾರಿಯಾಗಿದೆ. ಮುಖ್ಯವಾಗಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಹೇಳುವುದಾದರೆ ಆಸ್ತಿಯನ್ನು ಪಡೆದುಕೊಂಡ ಮಹಿಳೆಯರ‍್ಯಾರೂ ಕೂಡ ಕಾನೂನಿನ ಬಗೆಗೆ ತಪ್ಪಾಗಿ ಮಾತನಾಡಿಲ್ಲ. ಮತ್ತು ಆಸ್ತಿಯನ್ನು ಪಡೆದುಕೊಳ್ಳುವುದು ಕುಟುಂಬದಲ್ಲಿ ನೆಮ್ಮದಿಯ ಜೀವನವನ್ನು ಸಾಧಿಸುವುದಕ್ಕಷ್ಟೇ ಎಂದು ಹೇಳಿರುವುದು ಕಂಡು ಬರುತ್ತದೆ. ಸಂವಿದಾನದಲ್ಲಿ ಸಮಾನತೆಯ ಆಶಯವಿದೆ. ಆದರೆ ಸಮಾಜದಲ್ಲಿ ಲಿಂಗ ತಾರತಮ್ಯವಿದೆ. ಅಭಿವೃದ್ಧಿಯನ್ನು ಎಲ್ಲಿಯವರೆಗೆ ಲಿಂಗ ಸ್ಪಂದಿಯನ್ನಾಗಿ ಮಾಡುವುದಿಲ್ಲವೋ ಅಲ್ಲಿಯವರೆಗೆ ಅಭಿವೃದ್ಧಿಯು ಎಷ್ಟೇ ಉನ್ನತ ಮಟ್ಟದ್ದಾದರೂ ಅದು ಉಪಯುಕ್ತವಾಗುವುದಿಲ್ಲ. ಮಹಿಳೆಯರಿಗೆ ಒಳ್ಳೆಯದನ್ನು ಮಾಡಬೇಕೆಂಬ ಸದುದ್ದೇಶ ಬೇರೆ, ಅವಳನ್ನು ಒಬ್ಬ ನಾಗರೀಕಳನ್ನಾಗಿ, ಒಬ್ಬ ವ್ಯಕ್ತಿಯಾಗಿ ಒಪ್ಪಿಕೊಳ್ಳುವುದು ಬೇರೆ. ಹಾಗಾಗಿ ಮಹಿಳೆಯರು ಪುರುಷರಷ್ಟೇ ಸಮಾನರು ಎಂಬ ಮನೋಭಾವ ಎಲ್ಲರಲ್ಲಿಯೂ ಒಡಮೂಡಬೇಕು ಅಂದಾಗ ಮಾತ್ರ ಮಹಿಳೆಯರು ಎಲ್ಲಾ ಕ್ಷೇತ್ರಗಳಲ್ಲೂ ಸಾಧನೆಗೈದು ಸ್ವಾವಲಂಬಿಗಳಾಗುತ್ತಾರೆ.

**ಉಲ್ಲೇಖಗಳು**


೧. ಶಿವಾನಂದ ಎಸ್. ವಿರಕ್ತಮಠ; ೨೦೦೯, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ,ಹಂಪಿ, ಪು-೧೮೪

೨. ಪ್ರಶಾಂತ ಎಚ್.ಡಿ. ಮತ್ತು ವೀರಭದ್ರನಾಯ್ಕ ಪಿ; ೨೦೧೫, ಸಾಮಾಜಿಕ ತಲ್ಲಣಗಳು ಕಾಳಜಿಗಳು-ಕನಸುಗಳು, ರೂಪಾ ಪ್ರಕಾಶನ ಮೈಸೂರು, ಪು-೩೭೯.

೩. ಚಂದ್ರಶೇಖರ ಟಿ.ಆರ್, ೨೦೧೦, ಲಿಂಗ ಸಂಬಂಧಗಳು ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು- ೧೨೧.

೪. ಅದೇ, ಪು-೨೨.

## ಅಧ್ಯಾಯ ಎಂಟು

# ಸಾಂಪ್ರದಾಯಿಕ ಸಮಾಜದ ಇಕ್ಕಟ್ಟುಗಳಲ್ಲಿ ಮಹಿಳಾ ಸಬಲೀಕರಣದ ಕನಸುಗಳು, ನನಸುಗಳು, ಆಶಯಗಳು ಹಾಗೂ ಸಾಧ್ಯತೆಯ ಸವಾಲುಗಳು

# ಅಧ್ಯಾಯ ಎಂಟು

# ಸಾಂಪ್ರದಾಯಿಕ ಸಮಾಜದ ಇಕ್ಕಟ್ಟುಗಳಲ್ಲಿ ಮಹಿಳಾ ಸಬಲೀಕರಣದ ಕನಸುಗಳು, ನನಸುಗಳು, ಆಶಯಗಳು ಹಾಗೂ ಸಾಧ್ಯತೆಯ ಸವಾಲುಗಳು

ಮಹಿಳೆಯರು ಎದುರಿಸುತ್ತಿರುವ ಅಧೀನ ನೆಲೆಯ ಸಮಸ್ಯೆಗೆ ಪ್ರಮುಖವಾಗಿ ಸಾಂಪ್ರದಾಯಿಕ ಸಮಾಜವು ಹೆಣ್ಣನ್ನು ಗ್ರಹಿಸಿರುವ ಮತ್ತು ನಡೆಸಿಕೊಳ್ಳುವ ವಿಧಾನದಲ್ಲಿರುವ ತರತಮ ಭಾವವೇ ಕಾರಣವಾಗಿದೆ. ಕುಟುಂಬವು ಮಹಿಳೆಯರನ್ನು ಸಂಪನ್ಮೂಲಗಳಿಂದ ದೂರವಿರಿಸುವ ಮೂಲಕ ಜೀವನ ಪರ್ಯಂತ ಕರುಣೆಯ ಪರಿಧಿಯೊಳಗೆ ಬದುಕಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಮಹಿಳೆಯರ ಶ್ರಮ, ದುಡಿಮೆಗಳು ಅವಳ ಸೇವೆ ಕರ್ತವ್ಯಗಳೆಂದು ಪ್ರತಿಪಾದಿಸಲ್ಪಟ್ಟು, ಬೆಲೆಯಿಲ್ಲದ ಅಂದರೆ ಆರ್ಥಿಕ ಮೌಲ್ಯವಿಲ್ಲದ ದುಡಿಮೆ ಯಾಗಿರುತ್ತದೆ. ಮಹಿಳೆಯೇ ವ್ಯವಹಾರದ ಸರಕಾಗಿದ್ದಾಳೆ. ಗುಲಾಮಗಿರಿಯ ಪ್ರತಿಫಲವಾಗಿ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾಳೆ. ಹೀಗೆ ಹೆಣ್ಣಿನ ಅಧೀನತೆಗೆ ಪಿತೃಪ್ರಧಾನ ಮೌಲ್ಯಗಳ ಸ್ಥಾಪಿತ ಗ್ರಹಿಕೆಗಳು ಕಾರಣವಾಗುತ್ತವೆ. ಉತ್ತರ ಕರ್ನಾಟಕ ಪ್ರದೇಶವು ಅಭಿವೃದ್ಧಿಯಿಂದ ಹಿಂದುಳಿದ ಪ್ರದೇಶವಾಗಿದ್ದು ಇಲ್ಲಿನ ಜನರ ಜೀವನ ಮಟ್ಟ ತುಂಬಾ ಚಿಂತಾಜನಕವಾಗಿದೆ ಎಂದು ಹೇಳಬಹುದು. ಇನ್ನು ಮಹಿಳೆಯರ ಸ್ಥಿತಿಗತಿಗಳೂ ಸಹ ಅದೇ ರೀತಿಯಲ್ಲಿರುವುದನ್ನು ಕಾಣಬಹುದಾಗಿದೆ. ಮಹಿಳೆಯರು ಪ್ರತೀ ಹಂತದಲ್ಲಿಯೂ ಪುರುಷರಿಂದ ಒಂದಲ್ಲಾ ಒಂದು ರೀತಿಯಲ್ಲಿ ಹಿಂಸೆಗೆ ಒಳಗಾಗುತ್ತಿದ್ದಾರೆ. ಅಂದರೆ ಇಲ್ಲಿ ಸ್ಥಳೀಯ ಪಿತೃಪ್ರಧಾನ ಮೌಲ್ಯಗಳು ಮಹಿಳೆಯರನ್ನು ಹಿಂಸಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಹಾಗಾಗಿ ಮಹಿಳೆಯರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸಿಲ್ಲ ಎಂದೇ ಹೇಳಬಹುದು. ಹೀಗೆ ಮಹಿಳೆಯ ಅಧೀನ ನೆಲೆಗೆ ಅವಳ ಆರ್ಥಿಕ ಅಭದ್ರತೆಯೇ ಪ್ರಮುಖ ಕಾರಣ. ಈ ರೀತಿಯ ಅಭದ್ರತೆಯು ಸೃಷ್ಟಿಗೊಳ್ಳುವುದು ಕುಟುಂಬ ಮೂಲದಿಂದಲೇ ಎಂಬುದು ಗಮನಾರ್ಹ ಸಂಗತಿ. ಹೆಣ್ಣು ಮಕ್ಕಳಿಗೆ ಹುಟ್ಟಿದ

ಮನೆಯಲ್ಲಿ ಮತ್ತು ವಿವಾಹದ ನಂತರ ಗಂಡನ ಮನೆಯಲ್ಲಿ ಪುರುಷರಷ್ಟೇ ಸಮಾನ ಹಕ್ಕುಳ್ಳವರು ಎಂಬ ಮನೋಭಾವ ಇನ್ನು ಒಡಮೂಡಿಲ್ಲ. ಹಾಗಾಗಿ ಲಿಂಗ ಸಮಾನತೆಯನ್ನು ಸಾಧಿಸುವುದು ಸಾಧ್ಯವಾಗಿಲ್ಲ. ಲಿಂಗ ಸಮಾನತೆಯನ್ನು ಸಾಧಿಸುವ ಆಶಯದೊಂದಿಗೆ ಹಿಂದೂ ವಾರಸಾ ಅಧಿನಿಯಮವು ಜಾರಿಯಾಗಿದೆ. ಆದರೂ ಮಹಿಳೆಯರು ಸಮಾನ ಆಸ್ತಿಯ ಹಕ್ಕನ್ನು ಪಡೆದುಕೊಳ್ಳುವ ಪ್ರಯತ್ನಗಳಲ್ಲಿ ಸವಾಲುಗಳನ್ನೆದಿರಿಸುವುದು ತಪ್ಪಿಲ್ಲ. ಹಕ್ಕನ್ನು ಕೇಳಿದ ಕಾರಣಕ್ಕಾಗಿ, ದೈಹಿಕ, ಮಾನಸಿಕ ಹಿಂಸೆಗೆ ಒಳಗಾಗುವುದೂ ಮಹಿಳೆಯರಿಗೆ ತಪ್ಪಿಲ್ಲ. ಈ ನಿಟ್ಟಿನಲ್ಲಿ ಉತ್ತರ ಕರ್ನಾಟಕದ ಎರಡು ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಹಲವು ಬಗೆಯ ಪ್ರಕರಣಗಳು ದೊರೆತವು. ಅವುಗಳನ್ನು ಲಿಂಗಸಮಾನತೆಯ ಆಶಯದಿಂದ ವಿಶ್ಲೇಷಿಸಲಾಗಿದೆ. ಆಗ ಕಂಡುಬಂದಂತಹ ಅಂಶವೇನೆಂದರೆ ಆಸ್ತಿಹಕ್ಕಿನ ಕಾನೂನನ್ನು ಬಳಕೆಮಾಡಿಕೊಳ್ಳುವಲ್ಲಿ ಮಹಿಳೆಯರಿಗೆ ಎದುರಾಗುವ ತೊಡಕು ಗಳೇನು, ಸವಾಲುಗಳೇನು? ಮತ್ತು ಕಾಯಿದೆಯು ಲಿಂಗ ಅಸಮಾನತೆಯ ಅಂಶಗಳನ್ನು ಒಳಗೊಂಡಿದ್ದರೆ ಅದರ ಪರಿಣಾಮವಾಗಿ ಮಹಿಳೆಯರು ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುವ ಮೂಲಕ ಮಹಿಳಾ ಸಬಲೀಕರಣದ ಕನಸುಗಳನ್ನು ನನಸು ಮಾಡುವಲ್ಲಿ ಯಾವ ರೀತಿಯ ಅಡ್ಡಿಗಳನ್ನು ಎದುರಿಸುತ್ತಿದ್ದಾರೆ ಎಂಬ ಅಂಶಗಳನ್ನು ಪ್ರಬಂಧದಲ್ಲಿ ವಿವರಿಸಲಾಗಿದೆ.

ಪ್ರಸ್ತುತ ಕಾಯಿದೆಯು ಮಹಿಳೆಯರ ಆಶಯದ ಕನಸನ್ನು ನನಸಾಗಿಸುವಲ್ಲಿ ಪರಿಪೂರ್ಣತೆಯನ್ನು ಸಾಧಿಸಲಾಗಿಲ್ಲ. ಕೇವಲ ಆಸ್ತಿಯನ್ನು ಪಡೆಯುವಲ್ಲಿಗೆ ಮಾತ್ರ ಯಶಸ್ಸು ಸೀಮಿತಗೊಂಡಿದ್ದು, ಪಡೆದುಕೊಂಡಂತಹ ಆಸ್ತಿಯನ್ನು ಮಹಿಳೆಯರು ತಮಗಿಷ್ಟ ಬಂದಂತೆ ಬಳಸಿಕೊಳ್ಳುವ ಮಟ್ಟಿಗೆ ಯಶಸ್ಸನ್ನು ಕಂಡಿರುವುದು ಬೆರಳೆಣಿಕೆಯಷ್ಟು ಮಾತ್ರ. ಮಹಿಳೆಯರು ಆಸ್ತಿಯನ್ನು ಕೇಳುವ ಸಂದರ್ಭಗಳನ್ನು ಸಹ ಅವರ ಸ್ವ ಇಚ್ಛೆಯವುಗಳು ಎನ್ನುವುದು ಬಾಗಶಃ ಸತ್ಯ. ಬದಲಿಗೆ ಗಂಡನ ಮನೆಯವರಿಂದ ಬರುವ ಒತ್ತಡಗಳು, ಅನಿರೀಕ್ಷಿತವಾಗಿ ಬಂದೊದಗುವ ಆರ್ಥಿಕ ಬಿಕ್ಕಟ್ಟುಗಳು, ಮಕ್ಕಳ ಭವಿಷ್ಯದ ಭದ್ರತೆಯ ಅನಿವಾರ್ಯತೆಗಳು, ತವರು ಮನೆಯ ಸಂಬಂಧಗಳಲ್ಲಾಗುವ ಏರುಪೇರುಗಳು, ಸಹೋದರರ ನಡುವಿನ ಕಲಹಗಳು, ಹೀಗೆ ಈ ರೀತಿಯ ಸಂದರ್ಭಗಳು ಅವರನ್ನು ಆಸ್ತಿಹಕ್ಕನ್ನು ಕೇಳುವಂತೆ ಒತ್ತಡಗಳನ್ನುಂಟುಮಾಡುತ್ತವೆ. ಈ ಎಲ್ಲಾ ಅಂಶಗಳ ಹಿನ್ನಲೆಯಿಂದಲಾದರೂ ಮಹಿಳೆಯರು ಆಸ್ತಿಯ ಹಕ್ಕನ್ನು ಪ್ರಸ್ತಾಪಿಸಿದರೆ, ಆಕೆಯ ಹಕ್ಕನ್ನು ನಿರಾಕರಿಸಲು ಕಾಯಿದೆಯನ್ನು ದುರುಪಯೋಗಪಡಿಸಿಕೊಂಡು ಮಹಿಳೆಯ ಹಕ್ಕನ್ನು ಅಪಹರಿಸಲು ಸಹಾಯಕವಾಗುವಂತೆ ವ್ಯವಸ್ಥೆಯು ಪುರುಷರಿಗೆ ನೀಡಿರುವ ಅಘೋಷಿತ ಅಧಿಕಾರಗಳು ಅನೇಕ ಬಿಕ್ಕಟ್ಟುಗಳನ್ನು ತಂದೊಡ್ಡುತ್ತವೆ.

ಆಸ್ತಿಹಕ್ಕಿನ ಕಾಯಿದೆಯನ್ನು ರೂಪಿಸುವ ಹಂತದಿಂದ ಹಿಡಿದು ಜಾರಿಗೊಂಡಿರುವ, ಬದಲಾವಣೆಗೆ ಒಳಪಟ್ಟಿರುವ ಪ್ರಸ್ತುತ ಸಂದರ್ಭದ ವರೆಗೂ ಸಹ ಲಿಂಗ ಅಸಮಾನತೆಯ ಅಂಶಗಳು ಕಾಣಸಿಗುತ್ತವೆ. ಕಾಯಿದೆಯನ್ನು ಜನಸಾಮಾನ್ಯರವರೆಗೆ ತಲುಪಿಸುವ ಸಂಸ್ಥೆಗಳಾದ

ನ್ಯಾಯಾಲಯಗಳು ತಮ್ಮ ನ್ಯಾಯ ನಿರ್ಣಯಗಳಲ್ಲಿ ಪ್ರಮುಖವಾಗಿ ಪರಿಗಣಿಸುವುದು ದಾಖಲೆ ಪತ್ರಗಳನ್ನು. ಹೀಗಾಗಿ ದಾಖಲೆಗಳನ್ನು ಸೃಷ್ಟಿಸುವ ಮತ್ತು ಧಕ್ಕಿಸಿಕೊಳ್ಳುವ ಪಿತೃಪ್ರಧಾನ ಮೌಲ್ಯಗಳು ಪ್ರಭಲವಾಗಿರುವ ಸಂದರ್ಭಗಳಲ್ಲಿ ಮಹಿಳೆಯರು ಅನಾಯಾಸವಾಗಿ ಅನ್ಯಾಯ ಕ್ಕೊಳಗಾಗುತ್ತಾರೆ. ಆಸ್ತಿ ಪುರುಷರಿಗೆ ಬದುಕು ನಡೆಸುವ ಅತ್ಯಗತ್ಯ ಸಂಪನ್ಮೂಲವೋ ಹಾಗೆ ಮಹಿಳೆಯರಿಗೂ ಅದು ಅಗತ್ಯವಾದುದು ಎಂದು ಪರಿಗಣಿಸಲಾಗುವುದಿಲ್ಲ. ಬದಲಿಗೆ ಕಾನೂನಿನ ಮೂಲಕ ಅವಳು ಇಷ್ಟಪಟ್ಟರೆ ಮಾತ್ರ ಸಮಾನ ಹಕ್ಕನ್ನು ಪಡೆಯಬಹುದು ಎಂಬ ಅವಕಾಶವನ್ನು ಕಲ್ಪಿಸುವ ಮೂಲಕ ಅನೇಕ ಮಹಿಳೆಯರು ಸಂಧಾನದ ನೆಪದಲ್ಲಿ ಹಕ್ಕನ್ನು ಕಳೆದುಕೊಳ್ಳುವ ಹಾಗೆಯೇ ಪುರುಷರು ಇನ್ನಷ್ಟು ಮಹಿಳೆಯರನ್ನು ವಂಚಿಸುವ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ. ಹೀಗೆ ಪಿತೃಪ್ರಧಾನ ಮೌಲ್ಯಗಳು ಮಹಿಳೆಯರನ್ನು ತುಳಿಯುವಲ್ಲಿ ಯಶಸ್ವಿಯಾಗಲು ಪೂರಕವಾಗಿವೆ. ಆಸ್ತಿಹಕ್ಕಿನ ಕಾಯಿದೆಯು ಅದರ ಆಶಯದಂತೆ ಜಾರಿಯಾದರೆ ಮಹಿಳೆಯರು ತಮ್ಮ ಅಸ್ತಿತ್ವವನ್ನು ಸಾಧಿಸುವಲ್ಲಿ ಯಾವ ಅಡ್ಡಿ ಆತಂಕವೂ ಇಲ್ಲ. ಆದರೆ ಅದು ಸಾಧ್ಯವಾಗುತ್ತಿಲ್ಲ. ಮಹಿಳಾ ಸಬಲೀಕರಣದ ಕನಸನ್ನು ಸಾಕಾರಗೊಳಿಸುವ ಆಶಯ ದೊಂದಿಗೆ ಜಾರಿಗೊಂಡಂತಹ ಆಸ್ತಿಹಕ್ಕು ಕಾನೂನು ವ್ಯವಸ್ಥೆಯು ತಂದೊಡ್ಡುವ ಹಲವು ಬಿಕ್ಕಟ್ಟುಗಳಲ್ಲಿ ಸಿಲುಕಿಹಾಕಿಕೊಂಡಿದೆ. ಹಾಗಾಗಿ ಮಹಿಳೆಯರು ಸಬಲರಾಗುವ ಕನಸು ನನಸಾಗಲು ಮಹಿಳಾ ಸಮುದಾಯವು ಹಲವು ಬಗೆಯ ಹೋರಾಟಗಳನ್ನು, ಸಂಘರ್ಷಗಳನ್ನು ಎದುರಿಸದ ಹೊರತು ಅವರು ಸಮಾನತೆಯತ್ತ ಸಾಗುವುದು ಸುಲಭದ ಮಾತಲ್ಲ. ಹಾಗಾಗಿ ಮಹಿಳಾ ಪರವಾದ ಕಾನೂನುಗಳು ಹೊಂದಿರುವ ಕನಸುಗಳು ನನಸಾಗುವಲ್ಲಿ ವಿಳಂಬ ವಾಗುತ್ತಿರುವುದು ವಿಷಾಧನೀಯ. ಆದರೂ ಹಲವು ಪ್ರಯತ್ನಗಳ ನಂತರ ಮಹಿಳೆಯರು ಸಮಾನತೆಯನ್ನು ಸಾಧಿಸುವ ಹಲವು ಸಾಧ್ಯತೆಗಳ ಭರವಸೆಯನ್ನು ಮೂಡಿಸುವಲ್ಲಿ ಮಹಿಳೆಯರ ಆಸ್ತಿಹಕ್ಕು ಪೂರಕವಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನದಿಂದ ಹಲವು ಅಂಶಗಳು ಬೆಳಕಿಗೆ ಬಂದಿವೆ. ಅವುಗಳೇ ಅಧ್ಯಯನದ ಫಲಿತಗಳಾಗಿದ್ದು ಈ ಕೆಳಗಿನಂತಿವೆ.

**ಅಧ್ಯಯನದ ಫಲಿತಗಳು**

ಅಧ್ಯಯನದ ಫಲಿತಗಳನ್ನು ಎರಡು ನೆಲೆಯಲ್ಲಿ ಗುರುತಿಸಲಾಗಿದೆ. ಮೊದಲನೆಯದಾಗಿ ಸ್ಥಳೀಯ ಪಿತೃಪ್ರಧಾನ ಮೌಲ್ಯಗಳು ಕಾಯಿದೆಯ ಬಳಕೆಯ ಸಂದರ್ಭದಲ್ಲಿ ಲಿಂಗ ಅಸಮಾನ ಅಂಶಗಳನ್ನು ಸ್ಥಿರೀಕರಿಸಲು ಯಾವ ರೀತಿಯ ಮೌಲ್ಯಗಳನ್ನು ಹುಟ್ಟುಹಾಕಿ ಆ ಮೂಲಕ ಮಹಿಳೆಯರ ಹಕ್ಕುಗಳನ್ನು ಹರಣ ಮಾಡುವಲ್ಲಿ ಯಶಸ್ವಿಯಾಗಿದೆ ಎಂದು ತಿಳಿಯ ಪಡಿಸಬಹುದಾದ ಸಂಗತಿಗಳು ಮತ್ತು ಎರಡನೆಯದಾಗಿ ಆಸ್ತಿಹಕ್ಕು ಲಿಂಗ ಸಮಾನತೆಯನ್ನು ಸಾಧಿಸುವಲ್ಲಿ ಸಹಾಯಕವಾಗುವ ನೆಲೆಯಲ್ಲಿ ರೂಪುಗೊಂಡಿರುವ ಬಗೆ ಮತ್ತು ಆ ಮೂಲಕ ಮಹಿಳೆಯರ ಆರ್ಥಿಕ ಭದ್ರತೆಗೆ ಹೇಗೆ ಸಹಕಾರಿಯಾಗಿದೆ ಎಂಬುದನ್ನು ಕ್ಷೇತ್ರಕಾರ್ಯದ ಮಾಹಿತಿಯನ್ನಾಧರಿಸಿ ಫಲಿತಗಳನ್ನು ಗುರುತಿಸಲಾಗಿದೆ.

ವಸಾಹತು ಕಾಲಘಟ್ಟದಿಂದ ಹಿಡಿದು ವಸಾಹತು ನಂತರದ ಸಂದರ್ಭದವರೆಗೂ ಹಿಂದೂ ಉತ್ತರಾಧಿಕಾರ ಕಾಯಿದೆಯಲ್ಲಿ ಬದಲಾವಣೆಗಳಾಗುತ್ತಲೇ ಬಂದಿದ್ದು, ೧೯೫೬ರ ನಂತರ ಗಣನೀಯವಾದ ಬದಲಾವಣೆಗೆ ಒಳಗಾಗಿದೆ. ಹೀಗೆ ಬದಲಾದ ಸಂದರ್ಭಗಳಲ್ಲಿ ಇಂದು ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷನಷ್ಟೇ ಸಮಪಾಲು ದೊರೆಯುವಂತಾಗಿದೆ.

೧೯೫೬ರ ಹಿಂದೂ ವಾರಸಾ ಅಧಿನಿಯಮವು ಹಲವು ಲಿಂಗ ಸಮಾನತೆಯ ಅಂಶಗಳನ್ನು ಹೊಂದಿರುವುದು ಮಹಿಳೆಯರ ಸ್ಥಾನದಲ್ಲಿ ಬದಲಾವಣೆಯನ್ನುಂಟುಮಾಡುವ ಅವಕಾಶವನ್ನು ಒದಗಿಸಿಕೊಟ್ಟಿದೆ. ಮುಖ್ಯವಾಗಿ ಪುರುಷ ವಾರಸುದಾರರೊಂದಿಗೆ ಮಹಿಳೆ ಯರನ್ನು ಸಹ ಹುಟ್ಟಿನಿಂದಲೇ ವಾರಸುದಾರರು ಎಂದು ಪರಿಗಣಿಸಿದೆ. ಮಹಿಳೆಯರಿಗೆ ಈ ಕಾಯಿದೆ ಹಕ್ಕಿನ ಪರಿಭಾಷೆಯನ್ನು ಪರಿಚಯಿಸಿದೆ. ಅಂದರೆ ಅನಕ್ಷರಸ್ಥ ಮಹಿಳೆಯರೂ ಸಹ ಇಂದು ತಮಗೆ ಆಸ್ತಿಯಲ್ಲಿ ಪಾಲು ದೊರೆಯುವ ಕಾನೂನು ಇದೆ ಎಂದು ನ್ಯಾಯಾಲಯದ ಮೊರೆ ಹೋಗಿ ತಮ್ಮ ಪಾಲಿನ ಹಕ್ಕನ್ನು ಕೇಳುವಲ್ಲಿ ಮತ್ತು ಪಡೆಯುವಲ್ಲಿ ಸಹಕಾರಿಯಾಗಿದೆ.

ಮಹಿಳಾ ಸಂಘಗಳು, ಸಂಘಟಿತ ಮಹಿಳೆಯರ ಗುಂಪುಗಳು ಹಕ್ಕಿನ ನೆಲೆಯಲ್ಲಿ ಪ್ರಶ್ನಿಸುವ ಮತ್ತು ಹಕ್ಕನ್ನು ಪಡೆದುಕೊಳ್ಳುವ ಪ್ರಯತ್ನಗಳಿಗೆ ಪ್ರೇರಣೆಯಾಗುವಷ್ಟರ ಮಟ್ಟಿಗೆ ಅರಿವನ್ನು ಮೂಡಿಸಿದೆ. ಒಂದು ಊರಿನಲ್ಲಿ ಒಬ್ಬ ಮಹಿಳೆ ತನ್ನ ತಂದೆಯ ಆಸ್ತಿಯಲ್ಲಿ ಪಾಲು ಕೇಳಿದರೆ ಮತ್ತು ಪಡೆದುಕೊಂಡರೆ, ಆ ಊರಿನ ಇತರೆ ಮಹಿಳೆಯರು ಇದರಿಂದ ಪ್ರೇರಣೆಹೊಂದಿ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದಾರೆ.

ನ್ಯಾಯಾಲಯಗಳ ಆವರಣದಲ್ಲಿ ಮಹಿಳೆಯರಿಗೆಂದೇ ಉಚಿತ ಕಾನೂನು ಸಲಹಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಕೇಳಿ ಕೋರ್ಟಿನ ಮೆಟ್ಟಿಲೇರಿದ್ದರೆ ಅಂಥವರಿಗೆ ಸರಕಾರದ ಕಡೆಯಿಂದ ವಕೀಲರನ್ನು ನ್ಯಾಯಾಲಯವೇ ಒದಗಿಸಿಕೊಡುತ್ತದೆ. ಜೊತೆಗೆ ನ್ಯಾಯಾಲಯಗಳ ಆವರಣಗಳಲ್ಲಿ ಮಧ್ಯಸ್ಥಿಕೆ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಮಹಿಳೆಯರು ಆಸ್ತಿಯಲ್ಲಿ ಪಾಲು ಕೇಳಿ ಬಂದಾಗ ಕುಟುಂಬ ದವರಲ್ಲಿ ಉಂಟಾಗುವ ವೈಮನಸ್ಸುಗಳನ್ನು ಕಡಿಮೆ ಮಾಡುವಲ್ಲಿ ಮತ್ತು ಹೆಣ್ಣು ಮತ್ತು ಗಂಡಿನ ನಡುವೆ ಇರುವಂತಹ ತಾರತಮ್ಯವನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಹಾಗೆಯೇ ಸಮಾನವಾಗಿ ಆಸ್ತಿಯ ಹಕ್ಕನ್ನು ಒದಗಿಸಿಕೊಡುವಲ್ಲಿ ಕಾರ್ಯಪ್ರವೃತ್ತವಾಗಿವೆ. ಅಧ್ಯಯನ ಕ್ಷೇತ್ರದಲ್ಲಿನ ಮಹಿಳೆಯರಿಗೆ ಆಸ್ತಿಹಕ್ಕಿನ ಕುರಿತಂತೆ ಹೆಚ್ಚಿನ ಅರಿವು ಮೂಡಿಸು ವುದಕ್ಕಾಗಿ ಮತ್ತು ಇವರನ್ನು ಜಾಗೃತಗೊಳಿಸಲು ನ್ಯಾಯಾಲಯಗಳ ಪ್ರಾಧೀಕಾರಗಳು ಹಲವು ಜಾಗೃತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಕಂಡುಬಂದಿದೆ.

ಹೆಣ್ಣನ್ನು ಎಲ್ಲಾ ಆರ್ಥಿಕ ಚಟುವಟಿಕೆಗಳಿಂದ ದೂರವಿರಿಸಲಾಗುತ್ತದೆ. ಇದಕ್ಕೆ ಕಾರಣ ಹೆಣ್ಣು ಮಕ್ಕಳು ತವರಿನ ಮತ್ತು ಗಂಡನ ಮನೆ ಎರಡರಲ್ಲೂ ಅನ್ಯವೆಂದೇ ಪರಿಗಣಿಸಲ್ಪಡುತ್ತಾರೆ. ಈ

ಅನ್ಯ ಮನಸ್ಥಿತಿ ಕಾರಣವಾಗಿ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಿಂದ ವಂಚಿಸಲ್ಪಡುತ್ತಿದ್ದಾರೆ.

ಪುರುಷಪ್ರಧಾನ ವ್ಯವಸ್ಥೆಯು ತನ್ನ ವಂಶೋದ್ಧಾರವೆಂಬ ಚಿಂತನೆಗೆ ಹೆಣ್ಣಿನ ದೇಹವನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳುವ ಮೂಲಕ ಅವಳಿಗೆ ಕೆಲವು ಅವಕಾಶಗಳನ್ನು ಒದಗಿಸುತ್ತದೆ. ಆದರೆ ಯಾವುದೇ ರೀತಿಯ ಹಕ್ಕುಗಳನ್ನು ಮಹಿಳೆಗೆ ನೀಡಲು ಸಿದ್ಧವಿರುವುದಿಲ್ಲ. ವಿವಾಹದ ನಂತರ ಹೆಣ್ಣಿಗೆ ಗಂಡನ ಮನೆಯಲ್ಲಿ ಅವಳ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕಾದರೆ, ಆಕೆ ಗಂಡು ಮಗುವನ್ನು ಹೆರಲೇಬೇಕು. ಇಲ್ಲದಿದ್ದರೆ ಕುಟುಂಬದಲ್ಲಿ ಆಕೆಯ ಸ್ಥಿತಿ ಚಿಂತಾಜನಕ ವಾಗಿರುತ್ತದೆ. ಆ ಕಾರಣಕ್ಕಾಗಿ ಕುಟುಂಬದಲ್ಲಿನ ಆಸ್ತಿಯಿಂದಲೂ ವಂಚಿತಳಾಗುತ್ತಾಳೆ. ಹಾಗೆಯೇ ವಿವಾಹವಾದ ಮಹಿಳೆಗೆ ಗಂಡು ಮಕ್ಕಳಾಗದೇ ಕೇವಲ ಹೆಣ್ಣು ಮಕ್ಕಳು ಜನಿಸಿದರೂ ಆ ಕುಟುಂಬದಲ್ಲಿ ಆಕೆಗೆ ವಾಸಿಸುವ ಅವಕಾಶಗಳು ಕೇವಲ ದಾಕ್ಷಿಣ್ಯಕ್ಕೆ ಹೊರತು ಹಕ್ಕಾಗಿಯಲ್ಲ ಈ ಕಾರಣಗಳಿಗಾಗಿಯೂ ಆಸ್ತಿಹಕ್ಕಿನಿಂದ ವಂಚಿಸಲ್ಪಡುತ್ತಿದ್ದಾರೆ.

ಮಹಿಳೆಯರು ಮತ್ತು ಭಾವನಾತ್ಮಕತೆಗೆ ಸಂಬಂಧವನ್ನು ಏರ್ಪಡಿಸಿ ಆ ಮೂಲಕ ಮಹಿಳೆಯರ ಹಕ್ಕುಗಳನ್ನು ನಿಷ್ಕ್ರಿಯೆಗೊಳಿಸುತ್ತಿದೆ. ಮುಖ್ಯವಾಗಿ ಆಸ್ತಿಹಕ್ಕಿನ ವಿಷಯದಲ್ಲಿ ಪುರುಷ ವ್ಯವಸ್ಥೆ ಮಹಿಳೆಯರು ಪ್ರಾಯೋಗಿಕವಾಗಿ ಚಿಂತಿಸದಂತೆ ಮತ್ತು ತಮ್ಮ ಬದುಕನ್ನು ತಾವೇ ರೂಪಿಸಿಕೊಳ್ಳದಂತೆ ಅವರನ್ನು ಸೂಕ್ಷ್ಮಗೊಳಿಸಿದೆ. ಭಾವನಾತ್ಮಕ ಬೆದರಿಕೆಗಳ ಮೂಲಕ ಕುಟುಂಬದ ಎಲ್ಲಾ ಆಗುಹೋಗುಗಳಿಗೆ ಹೆಣ್ಣು ಮಕ್ಕಳನ್ನೇ ಹೊಣೆಗಾರರನ್ನಾಗಿಸಿದೆ. ಎರಡೂ ಕುಟುಂಬಗಳ (ತವರು ಮನೆ/ ಗಂಡನ ಮನೆ) ಗೌರವವನ್ನು ಕಾಪಾಡಬೇಕೆಂಬ ಅಲಿಖಿತ ಸಾಮಾಜಿಕ ಹೇರಿಕೆ ಮತ್ತು ತವರಿನವರು ಒಡ್ಡುವ 'ಆತ್ಮಹತ್ಯೆ ಮಾಡಿಕೊಳ್ಳುತ್ತೇವೆ' ಎನ್ನುವ ಬೆದರಿಕೆಗಳು ಮಹಿಳೆಯರು ಆಸ್ತಿಹಕ್ಕಿನಿಂದ ಹೊರಗುಳಿಯುವಂತೆ ಮಾಡಿದೆ. ಹಾಗೆಯೇ ಮಹಿಳೆಯರು ಹೆಚ್ಚಾಗಿ ತಮ್ಮ ತವರು ಮನೆಯ ಸಂಬಂಧವನ್ನು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಅದರಲ್ಲೂ ಮುಖ್ಯವಾಗಿ ಆಸ್ತಿಯ ಕಾರಣಕ್ಕಾಗಿ. ಈ ಕಾರಣದಿಂದ ಬಹಳಷ್ಟು ಮಹಿಳೆಯರು ತಮ್ಮ ತವರಿನ ಆಸ್ತಿಯಿಂದ ದೂರವಿರುವುದು ಕಂಡುಬರುತ್ತದೆ.

ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಪಾಲು ದೊರೆತಿದ್ದರೂ ಸಹ ಅದು ಅವರ ಬದುಕಿನ ಮಟ್ಟದಲ್ಲಿ ಅನುಭವಕ್ಕೆ ಬಂದಿಲ್ಲ. ಹೆಣ್ಣನ್ನು ಭಾವನಾತ್ಮಕವಾಗಿ ಬೆಳೆಸುವುದರಿಂದ ಆಕೆಗೆ ತನ್ನ ಸಮಾನತೆಯ ಅಸ್ಮಿತೆಗಿಂತ ಸಂಬಂಧದ ನೆಲೆಗಳೇ ಮುಖ್ಯವೆನಿಸುತ್ತವೆ. ಹಾಗಾಗಿ ಎಷ್ಟು ಮಹಿಳೆಯರಿಗೆ ಆಸ್ತಿಯ ಪಾಲು ಪಡೆಯುವ ಅನಿವಾರ್ಯತೆ ಇದ್ದರೂ ಹಾಗೆ ಕೇಳುವುದು ಅವಳಿಗೆ ಅಸಾಧ್ಯವಾಗಿದೆ. ಹೀಗಾಗಿ ಹೆಣ್ಣುಮಕ್ಕಳು ಆಸ್ತಿಯನ್ನು ಕೇಳುವುದು ಎಂದರೆ ತವರನ್ನು ಕಳೆದುಕೊಂಡಂತೆ ಎಂಬ ಸಂದರ್ಭಗಳೇ ಹೆಚ್ಚಾಗಿವೆ. ತಂದೆಯ ಆಸ್ತಿಗಾಗಿ ಹೊಡೆದಾಡುವ, ಕೊಲೆ ಮಾಡುವ, ಕೋರ್ಟು ಕಛೇರಿಯೆಂದು ಅಲೆದಾಡುವ ಗಂಡು ಮಕ್ಕಳನ್ನು ಸಹಜವಾಗಿ

ಸ್ವೀಕರಿಸುವ ಸಮಾಜ ಅದೇ ತಂದೆಯ ಹೆಣ್ಣು ಮಕ್ಕಳು ಪಾಲು ಕೇಳುವುದು ಅಪರಾಧ ಎಂದೇ ಪರಿಗಣಿಸುತ್ತದೆ.

ನಂಬಿಕೆಗಳು ಮತ್ತು ಮೂಢನಂಬಿಕೆಗಳು ಮಹಿಳೆಯರ ಬದುಕನ್ನು ಅಭದ್ರಗೊಳಿಸಿವೆ. ಪ್ರತಿನಿತ್ಯ ಬದುಕಿನಲ್ಲಿ ನಡೆಯುವ ಘಟನೆಗಳಿಗೂ ಹೆಣ್ಣುಮಕ್ಕಳಿಗೂ ನೇರ ಸಂಬಂಧಗಳನ್ನು ಕಲ್ಪಿಸುವ ಮೂಲಕ ಹೆಣ್ಣು ಕೀಳರಿಮೆಯಿಂದ ಬಳಲುವಂತೆ ಮಾಡಲಾಗುತ್ತಿದೆ. ಮಹಿಳೆಯರಿಗೆ ನೀಡುವ ಅರಿಶಿಣ ಕುಂಕುಮವನ್ನು ಮುತ್ತೈದೆಯ ಸಂಕೇತವೆಂದು ನಂಬಿಸುವುದು ಮತ್ತು ಸಾವಿನ ನಂತರದ ಆಚರಣೆಗಳೂ ಸಹ ಮಹಿಳೆಯರನ್ನು ಆಸ್ತಿಹಕ್ಕಿನಿಂದ ದೂರವಿಡುವುದಕ್ಕೆ ಬಲವಾದ ಕಾರಣಗಳಾಗಿವೆ. ಹಾಗೇಯೇ ಮಹಿಳೆಯರು ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದುಕೊಂಡಿದ್ದರೂ ಸಹ ಅವರು ಅದನ್ನು ಅನುಭವಿಸಲಾರದಂತಹ ಸ್ಥಿತಿಯಲ್ಲಿರುತ್ತಾರೆ. ಇದಕ್ಕೆ ಸ್ಥಳೀಯವಾಗಿ ಜಾರಿಯಲ್ಲಿರುವ ಮೂಢನಂಬಿಕೆಗಳು ಕಾರಣವಾಗಿರುವುದು ಕಂಡುಬರುತ್ತದೆ.

ವರದಕ್ಷಿಣೆಯ ಮೇಲೆ ಹೆಣ್ಣಿಗಿರುವ ಹಕ್ಕನ್ನು ಸಮಾಜ ಗುರುತಿಸುತ್ತದೆಯಾದರೆ ಅವಳಿಗೆ ಪಿತ್ರಾರ್ಜಿತ ಆಸ್ತಿಯ ಮೇಲಿರುವ ಹಕ್ಕನ್ನು ಗುರುತಿಸುವುದಿಲ್ಲ. ಹೆಂಡತಿ ಎನ್ನಿಸಿಕೊಂಡವಳು ತನ್ನ ಬದುಕು ಮತ್ತು ಸ್ವತ್ತುಗಳನ್ನು ನಿಯಂತ್ರಿಸಬಲ್ಲ ವ್ಯಕ್ತಿಯಾಗಿ ಪರಿಗಣಿಸಲ್ಪಡುವುದಿಲ್ಲ. ವಾಸ್ತವದಲ್ಲಿ ಅವಳೇ ಒಂದು ಸ್ವತ್ತಾಗಿದ್ದಾಳೆ. ಹಾಗಾಗಿ ವಿವಾಹದ ಸಂದರ್ಭದಲ್ಲಿ ಮಾಡುವಂತಹ ಖರ್ಚುಗಳು ಮಹಿಳೆಯರ ಆಸ್ತಿಗೆ ಸಮಾನವಾಗಿದೆ ಎಂಬ ಕಾರಣವನ್ನು ಪುರುಷ ವ್ಯವಸ್ಥೆ ಮಾಡುವುದರ ಮೂಲಕ. ಆಸ್ತಿಗೆ ಕೊಡಲು ನಿರಾಕರಿಸುವುದಕ್ಕೆ ಈ ಕಾರಣವನ್ನು ಸಮರ್ಥನೆಯನ್ನಾಗಿ ಬಳಸಿಕೊಳ್ಳುತ್ತದೆ. ಸ್ಥಿರಾಸ್ತಿಯು ಇಂದು ನಾನಾ ವಿಭಾಗಗಳಾಗಿ ತುಂಡಾಗುತ್ತಾ ಸಾಗಿ ಚರಾಸ್ತಿಯ ಸ್ವರೂಪವನ್ನು ಪಡೆದುಕೊಂಡು ಪುರುಷ ವ್ಯವಸ್ಥೆಯ ಹಿಡಿತದಲ್ಲಿದೆ. ಹಾಗಾಗಿ ಸ್ಥಿರಾಸ್ತಿಯು ಚರಾಸ್ತಿಯಾಗಿ ಮಾರ್ಪಾಡಾಗಿರುವುದು ಕೂಡ ಮಹಿಳೆಯರು ಆಸ್ತಿಯಿಂದ ವಂಚಿತರಾಗಲು ಪುರುಷ ಪ್ರಧಾನ ವ್ಯವಸ್ಥೆಯು ರೂಪಿಸಿರುವ ಸಂಚು.

ಮದುವೆ ಎಂಬುದು ಗಂಡಿಗೆ ಆದಾಯದ ಮೂಲವಾದರೆ ಹೆಣ್ಣಿಗೆ ಅದು ಆಸ್ತಿ ನಿರಾಕರಣೆಯ ಅಂಶವಾಗಿರುತ್ತದೆ. ಇದನ್ನು ವಿಸ್ತರಿಸಿ ಹೇಳುವುದಾದರೆ ಮದುವೆಯ ಸಂದರ್ಭದಲ್ಲಿ ಗಂಡು ಮಗನ ವಿವಾಹದ ಸಂದರ್ಭದಲ್ಲಿ ಆತನಿಗೆ ವಧುವಿನ ಮನೆಯವರಿಂದ ದೊರೆಯುವ ಉಡುಗೊರೆಗಳಾಗಿರಬಹುದು ಅಥವಾ ವರದಕ್ಷಿಣೆಯಾಗಿರಬಹುದು ಅವುಗಳು ಆತನಿಗೆ ಆಸ್ತಿಯ ರೂಪದಲ್ಲಿ ಸೇರಲ್ಪಡುತ್ತವೆ. ಗಂಡು ಮಗುವಿನ ಮದುವೆಯನ್ನು ಅದ್ಧೂರಿ ಯಾಗಿ ಮಾಡಲಾಗುತ್ತದೆ. ಆ ಸಂದರ್ಭದಲ್ಲಿ ಎಷ್ಟು ಖರ್ಚಾಗುತ್ತದೆ ಎಂಬುದರ ಲೆಕ್ಕವೇ ಇರುವುದಿಲ್ಲ. ಅದೇ ಮಹಿಳೆಯ ವಿಚಾರಕ್ಕೆ ಬಂದರೆ ಮದುವೆಯನ್ನು ಅತ್ಯಂತ ಸರಳವಾಗಿ ನಡೆಸಿದ್ದರೂ ಸಹ ಅಲ್ಲಿ ಮಾಡಿದ ವೆಚ್ಚ ಪರಿಗಣನೆಗೆ ಬರುತ್ತದೆ. ಹಾಗೆಯೇ ಗಂಡು ಮಗನಿಗೆ

ಆಸ್ತಿಯಲ್ಲಿ ಪಾಲೂ ಸಹ ದೊರೆಯುತ್ತದೆ. ಆದರೆ ಮಹಿಳೆಯರ ವಿಷಯದಲ್ಲಿ ಆಸ್ತಿಯು ನಿರಾಕರಿಸಲ್ಪಡುತ್ತದೆ.

ಮಹಿಳೆಯರನ್ನು ಆಸ್ತಿಹಕ್ಕಿನಿಂದ ಹೊರಗಿಡಲು ಪುರುಷ ವ್ಯವಸ್ಥೆಯು ಮಹಿಳೆಯರನ್ನು ಬೆದರಿಸುವ, ಕೊಲೆ ಮಾಡುವ ಮತ್ತು ದಾಖಲೆಗಳನ್ನು ಇಲ್ಲದಂತೆ ಮಾಡುವ ಪ್ರಕ್ರಿಯೆಗೆ ಮುಂದಾಗುತ್ತಿದೆ. ಮತ್ತು ಮಹಿಳೆಯರು ಆಸ್ತಿಯನ್ನು ಪಡೆದುಕೊಂಡ ನಂತರದಲ್ಲಿಯೂ ಅವರ ಮೇಲೆ ನಡೆಯುವ ಹಲ್ಲೆಗಳನ್ನು ನಿಯಂತ್ರಿಸಲು ಮತ್ತು ಮಹಿಳೆಯರಿಗೆ ಭದ್ರತೆಯನ್ನು ಒದಗಿಸುವ ನಿಟ್ಟಿನಲ್ಲಿ ಈ ಅಪರಾಧ ತಡೆ ವಿಭಾಗಗಳು ಕಾರ್ಯ ಪ್ರವೃತ್ತವಾಗಬೇಕಾಗಿದೆ.

ವ್ಯವಸ್ಥೆಯಲ್ಲಿ ಪುರುಷ ಪ್ರಧಾನ ಮೌಲ್ಯಗಳು ಮಹಿಳೆಯರ ಆಸ್ತಿಯನ್ನು ಕಿತ್ತುಕೊಳ್ಳಲು ಎಲ್ಲಾ ರೀತಿಯಿಂದಲೂ ಪ್ರಯತ್ನಿಸುತ್ತಿರುವ ಸಂದರ್ಭದಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು ಪಡೆದು ಕೊಂಡ ಮಹಿಳೆಯರು ಕಂಡುಬರುತ್ತಾರೆ. ಇವರು ಕೇವಲ ಆಸ್ತಿಯನ್ನು ಪಡೆದು ಕೊಂಡಿರದೇ ಅದರ ಮೇಲಿನ ಹಕ್ಕನ್ನು ಹೊಂದಿ ಸಬಲತೆಯೆಡೆಗೆ ಚಲಿಸುತ್ತಿದ್ದಾರೆ.

ಆಸ್ತಿಯನ್ನು ಪಡೆದುಕೊಂಡ ಮಹಿಳೆಯರಿಗೆ ಭದ್ರತೆಯನ್ನು ಒದಗಿಸುವ ವ್ಯವಸ್ಥೆಯ ಅಗತ್ಯತೆ ಇದೆ. ಅಂದರೆ ಮಹಿಳೆಯರು ಆಸ್ತಿಯನ್ನು ಪಡೆಯಲು ನ್ಯಾಯಾಲಯದಲ್ಲಿ ಕೇಸ್ ದಾಖಲಿಸುವ ಪೂರ್ವದಲ್ಲಿ ಮತ್ತು ದಾಖಲಿಸಿದ ನಂತರ ಹಲವು ಸಮಸ್ಯೆಗಳಿಗೆ ಗುರಿಯಾಗು ತ್ತಿದ್ದಾರೆ. ಅವರಿಗೆ ಈ ಸಂದರ್ಭದಲ್ಲಿ ಸುರಕ್ಷತೆಯನ್ನು ನೀಡುವ ಕಾನೂನು ಕೇಂದ್ರಗಳ ಅಗತ್ಯತೆ ಇದೆ. ನ್ಯಾಯಾಲಯದಲ್ಲಿ ಮಧ್ಯಸ್ಥಿಕೆ ಕೇಂದ್ರಗಳು ಮತ್ತು ಕಾನೂನು ಸಲಹಾ ಕೇಂದ್ರಗಳು ಇವೆ. ಆದರೆ ಇವುಗಳು ನ್ಯಾಯಲಯದಲ್ಲಿ ನ್ಯಾಯ ಕೊಡಿಸುವ ನಿಟ್ಟಿನಲ್ಲಿ ಸಹಾಕಾರಿಯಾಗಿ ಕಾರ್ಯ ನಿರ್ವಹಿಸುತ್ತಿವೆ. ಆದರೆ ಮಹಿಳೆಯರ ಭದ್ರತೆಯ ಅಗತ್ಯತೆ ನ್ಯಾಯ ತೀರ್ಮಾನದ ನಂತರ ಕಂಡುಬರುತ್ತದೆ. ಹೀಗೆ ಮಹಿಳೆಯರಿಗೆ ಭದ್ರತೆಯನ್ನು ನೀಡುವಂತಹ ಮತ್ತು ಬೆಂಬಲವನ್ನು ನೀಡುವಂತಹ ಕೇಂದ್ರಗಳ ಅಗತ್ಯತೆ ಇದೆ.

ನ್ಯಾಯಾಲಯಗಳಲ್ಲಿ ವಾದ ಮಂಡಿಸುವ ವಕೀಲರುಗಳಿಗೆ ಲಿಂಗ ಸಮಾನತೆಯ ಅಂಶದ ಕೊರತೆ ಇದೆ. ಅವರೂ ಸಹ ಸಾಂಪ್ರದಾಯಿಕ ನೆಲೆಯಲ್ಲಿಯೇ ಯೋಚಿಸುತ್ತಿರುವುದು ಕಂಡು ಬಂದಿದೆ. ಅವರಿಗೆ ಲಿಂಗ ಸೂಕ್ಷ್ಮತೆಯ ತರಬೇತಿಯ ಅವಶ್ಯಕತೆ ಇದೆ.

ಮಹಿಳಾ ಸಬಲೀಕರಣದ ಕನಸುಗಳು, ನನಸುಗಳು, ಆಶಯಗಳು ಹಾಗೂ ಸಾಧ್ಯತೆಯ ಸವಾಲುಗಳನ್ನು ಗುರುತಿಸುವುದಾದರೆ ದೇಶದಲ್ಲಿಯಾಗಲೀ ಅಥವಾ ರಾಜ್ಯದಲ್ಲಿಯೇ ಆಗಲೀ ಸರ್ಕಾರಗಳ ಪಾತ್ರ ದೊಡ್ಡದಾಗಿರುತ್ತದೆ. ಮುಖ್ಯವಾಗಿ ಮಹಿಳಾ ಪರವಾದಂತಹ ಕಾನೂನನ್ನು ರೂಪಿಸುವ ಹಂತದಲ್ಲಾಗಲೀ ಅಥವಾ ತಿದ್ದುಪಡಿಯನ್ನು ಮಾಡುವ ಹಂತದಲ್ಲಾಗಲೀ ಹಾಗೆಯೇ ಅವುಗಳನ್ನು ಕಾರ್ಯಾನುಷ್ಠಾನಕ್ಕೆ ತರುವ ಸಂದರ್ಭದಲ್ಲಾಗಲೀ ಸರ್ಕಾರಗಳು ಲಿಂಗಾಧಾರಿತ ನ್ಯಾಯ ದೃಷ್ಟಿಕೋನಕ್ಕೆ ಬದ್ಧರಾಗಿರಬೇಕಾಗುತ್ತದೆ.

ಮಹಿಳಾ ಪರವಾದಂತಹ ವಿಷಯಗಳಿಗೆ ಹೋರಾಡುವಂತಹ ಸಂಘಟನೆಗಳು ಮತ್ತು ಮಹಿಳಾ ಸಂಘಟನೆಗಳು ತುಂಬಾ ಬಲಿಷ್ಠಗೊಳ್ಳಬೇಕಾಗಿದೆ. ಅಂದರೆ ಸರ್ಕಾರಗಳು ತೆಗೆದು ಕೊಳ್ಳುವ ನಿರ್ಣಯಗಳ ಬಗೆಗಾಗಲೀ ಅಥವಾ ಕಾನೂನುಗಳನ್ನು ರೂಪಿಸುವ ಹಂತದಲ್ಲಾಗಲೀ ಸ್ತ್ರೀ ವಿರೋಧಿ ಅಥವಾ ಲಿಂಗ ಅಸಮಾನತೆಯ ಅಂಶಗಳೇನಾದರೂ ಕಂಡುಬಂದರೆ ಅವುಗಳನ್ನು ಗುರುತಿಸುವ ಮತ್ತು ಸರಿಪಡಿಸಬೇಕಾದ ಕಾರ್ಯವನ್ನು ಮಾಡಬೇಕಾಗಿದೆ. ಜೊತೆಗೆ ಜನರಲ್ಲಿ ಜಾಗೃತಿಯನ್ನು ನೀಡಬೇಕಾಗಿದೆ. ನ್ಯಾಯಾಂಗ ವ್ಯವಸ್ಥೆಯಲ್ಲಿ ಮತ್ತು ಕಾನೂನಾತ್ಮಕ ಚಟುವಟಿಕೆಗಳ ನಿರ್ಣಯಾತ್ಮಕ ಹಂತಗಳಲ್ಲಿ ಇರುವವರೆಲ್ಲರೂ ಪುರುಷರೇ ಆಗಿದ್ದಾರೆ. ಇವರು ರೂಢಿಗತವಾಗಿ ಬಂದಂತಹ ಸಾಂಪ್ರದಾಯಿಕ ಆಲೋಚನೆಗಳನ್ನೇ ಹೊಂದಿರುತ್ತಾರೆ. ಇವರು ಲಿಂಗಾಧಾರಿತ ನ್ಯಾಯದ ಕಡೆಗೆ ಮುಖ ಮಾಡುವಂತೆ ಮಾಡಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಮಹಿಳೆಯರನ್ನು ಒಬ್ಬ ವ್ಯಕಿಯನ್ನಾಗಿ ನೋಡುವಂತಹ ಆಲೋಚನೆಗಳನ್ನು ಬಿತ್ತಬೇಕಾದ ಅನಿವಾರ್ಯತೆ ಇದೆ.

ಪತಿಯ ಮರಣದ ನಂತರ ಹೆಂಡತಿಗೆ ಆತನ ಆಸ್ತಿಯ ಹಕ್ಕು ಪ್ರಾಪ್ತವಾಗುವುದರ ಬದಲು ಜೀವಿತ ಕಾಲದಲ್ಲೇ ಸಮಾನ ಹಕ್ಕು ದೊರೆಯಬೇಕಾದ ಅಗತ್ಯವಿದೆ. ಈಗಾಗಬೇಕಾದರೆ ವಿವಾಹ ನೋಂದಣಿ ಕಡ್ಡಾಯವಾಗಬೇಕು. ವಿವಾಹ ನೋಂದಣಿಯಾದ ಕೂಡಲೇ ಹೆಂಡತಿಗೆ ಗಂಡನ ಸಮಸ್ತ ಆಸ್ತಿಯಲ್ಲಿ ಸಮಪಾಲು ದೊರೆಯುವಂತೆ ಕಾನೂನು ಜಾರಿಯಾಗಬೇಕು. ವಿವಾಹ ನೋಂದಣಿ ಮೂಲಕ ಅಧಿಕೃತ ಪಾಲುದಾರಿಕೆಯನ್ನು ಸಮನಾಗಿ ನೀಡಿದರೆ ಜೀವನಾಂಶ ಕೋರುವ ಸಂದರ್ಭಗಳು ಎದುರಾದಾಗ ಜೀವನಾಂಶಕ್ಕೆ ಬದಲಾಗಿ ಸಮಪಾಲು ದೊರೆತರೆ ಮಹಿಳೆಯರು ಸ್ವಾವಲಂಬಿಯಾಗಿ ಬದುಕಲು ಸಾಧ್ಯವಾಗುತ್ತದೆ.

ಸ್ತ್ರೀಯರಲ್ಲಿ ಆತ್ಮ ವಿಶ್ವಾಸ, ಆತ್ಮ ಗೌರವ ಮತ್ತು ಸ್ವಾಭಿಮಾನಗಳು ಹೆಚ್ಚಾಗಬೇಕಾಗಿದೆ. ಮುಖ್ಯವಾಗಿ ಕಾನೂನು ಸೌಲಭ್ಯಗಳನ್ನು ತಮ್ಮ ಹಕ್ಕಿನ ರೂಪದಲ್ಲಿ ಪಡೆಯುವಂತಹ ರೀತಿಯಲ್ಲಿ ಅವರ ಚಿಂತನೆಗಳಲ್ಲಿ ಬದಲಾವಣೆಯನ್ನು ತರಬೇಕಾದ ಅನಿವಾರ್ಯತೆ ಇದೆ. ಹಾಗೆ ಹಕ್ಕಿನ ರೂಪದಲ್ಲಿ ಆಸ್ತಿಯನ್ನು ಪಡೆಯುವ ಮಹಿಳೆಯರನ್ನು ಸಂರಕ್ಷಿಸಲು ಅಂದರೆ ಒಂದು ಹಂತದವರೆಗೆ ಅವರಿಗೆ ರಕ್ಷಣೆಯನ್ನು ನೀಡಲು ರಕ್ಷಣಾ ಕೇಂದ್ರಗಳ ಅಗತ್ಯತೆ ಇದೆ. ಅವರು ತಮಗೆ ದೊರೆತ ಆಸ್ತಿಯ ಫಲಾನುಭವಿಗಳಾಗಲು ಏನೇನು ಅಗತ್ಯ ಸೌಲಭ್ಯಗಳಿವೆಯೋ ಅಂತಹ ವುಗಳನ್ನು ಒದಗಿಸಬೇಕಾದ ಜವಾಬ್ದಾರಿಯನ್ನು ಸರ್ಕಾರಗಳು ವಹಿಸಿಕೊಳ್ಳಬೇಕಾಗಿದೆ. ಮುಖ್ಯವಾಗಿ ಮಹಿಳೆಯರು ಭಾವನಾತ್ಮಕ ಜಗತ್ತಿನಿಂದ ಹೊರಬರಬೇಕಾಗಿದೆ. ಅಂದರೆ ಮಹಿಳೆ ಯೊಬ್ಬಳು ಕುಟುಂಬದ ಬಗೆಗೆ ಹೊಂದಿರುವ ಭಾವನಾತ್ಮಕತೆ, ಅವಲಂಬಿತ ಸ್ಥಿತಿ ಮತ್ತು ಸಾಮಾಜಿಕ ಒತ್ತಡಗಳು ಪುರುಷನ ಕ್ರೌರ್ಯವನ್ನು ಹೆಚ್ಚಿಸುವಷ್ಟೇ ಸುಲಭವಾಗಿ ಅವುಗಳನ್ನು ಮುಚ್ಚಿಹಾಕುತ್ತವೆ. ಈ ಭಾವನಾತ್ಮಕತೆ ಮಹಿಳೆಯರು ತಮ್ಮ ಹಕ್ಕಿನ ರೂಪದಲ್ಲಿ ಪಡೆಯ ಬಹುದಾದ ಎಲ್ಲ ಸೌಲಭ್ಯಗಳಿಂದ ವಂಚಿತರನ್ನಾಗಿಸುತ್ತದೆ. ಆ ಕಾರಣಕ್ಕಾಗಿ ಮಹಿಳೆಯರು

ಭಾವನಾತ್ಮಕತೆ ಎಂಬ ಭ್ರಮಾ ಲೋಕದಿಂದ ಹೊರಬರಬೇಕಾದ ಅನಿವಾರ್ಯತೆ ಇದೆ. ಹಾಗಾಗಿ ಅವರಿಗೆ ಕುಟುಂಬದಲ್ಲಿನ ಲಿಂಗ ರಾಜಕಾರಣಗಳ ಕುರಿತಂತೆ ಅರಿವು ಮೂಡಿಸುವ ಅಗತ್ಯತೆ ಇದೆ. ಒಟ್ಟಾರೆಯಾಗಿ ಸಂವಿದಾನವು ಮಹಿಳೆಯರಿಗೆ ಕೊಡಮಾಡಲ್ಪಟ್ಟಿರುವ ಸೌಲಭ್ಯಗಳನ್ನು ಮಹಿಳೆಯರು ಯಾವುದೇ ಸಾಮಾಜಿಕ, ಭಾವನಾತ್ಮಕ ಒತ್ತಡಗಳಿಗೆ ಒಳಗಾಗದೇ ಹಕ್ಕಿನ ರೂಪದಲ್ಲಿ ಪಡೆಯುವಂತಾಗಬೇಕು. ಅಂದಾಗ ಮಾತ್ರ ಮಹಿಳೆಯರು ಆರ್ಥಿಕವಾಗಿ ಸಬಲರಾಗುತ್ತಾರೆ.

## ಅನುಬಂಧ – ೧

## ನ್ಯಾಯಾಲಯದಲ್ಲಿ ದಾಖಲಾದ ಪ್ರಕರಣ ಸಂಬಂಧಿ ವಕ್ತೃಗಳ ವಿವರ

| ಕ್ರಸಂ | ಹೆಸರು | ವಯಸ್ಸು | ಶಿಕ್ಷಣ | ಜಾತಿ | ಊರು | ಕೇ. ಸಂಖ್ಯೆ |
|---|---|---|---|---|---|---|
| ೦೧ | ಅಕ್ಷತಾ | ೧೧ | ೫ನೇ | ನಾಯಕ | ಸೋಮಲಾಪುರ | ೭೬/೧೪ |
| ೦೨ | ಸುಮಂಗಲಾದೇವಿ | ೪೫ | ಇಲ್ಲ | ಕುರುಬರು | ಗಂಗಾವತಿ | ೧೭೩/೧೧ |
| ೦೨ | ಪದ್ದಮ್ಮ | ೪೮ | ಇಲ್ಲ | ತಳವಾರ | ಹುಲಿಕಿಹಾಳ್ | ೩೪/೦೭ |
| ೦೩. | ಮಲ್ಲಮ್ಮ | ೩೬ | ೮ನೇ | ನಾಯಕ | ಸಿಂಗಾಪುರ | ೪೩/೦೭ |
| ೦೪ | ಶಂಕ್ರಮ್ಮ | ೪೦ | ೬ನೇ | ಬೋವಿ | ಗಂಗಾವತಿ | ೧೦೦/೦೭ |
| ೦೫ | ನಾರಾಯಣಮ್ಮ | ೩೯ | ೧೦ನೇ | ಲಿಂಗಾಯತ | ಗಂಗಾವತಿ | ೧೩೮/೦೭ |
| ೦೬ | ಕೊಂಡಮ್ಮ | ೩೭ | ಇಲ್ಲ | ತಳವಾರ | ಗಂಗಾವತಿ | ೧೭೬/೦೭ |
| ೦೭ | ರೂಪ | ೨೯ | ೧೨ನೇ | ಲಿಂಗಾಯತ | ಗಂಗಾವತಿ | ೨/೦೮ |
| ೦೮. | ಗಂಗಮ್ಮ | ೩೨ | ಇಲ್ಲ | ಬಡಿಗೇರ | ಗಂಗಾವತಿ | ೧೦/೦೮ |
| ೦೯. | ಗಂಗಮ್ಮ | ೪೨ | ೮ನೇ | ಕುಂಬಾರ | ಗಂಗಾವತಿ | ೩೮/೦೯ |
| ೧೦. | ಸ್ವರ್ಣಲತ' | ೩೨ | ೧೦ನೇ | ನಾಯಕ | ಆನೆಗುಂದಿ | ೧೧೮/೦೯ |
| ೧೧. | ದುರುಗಮ್ಮ | ೩೫ | ೬ನೇ | ನಾಯಕ | ಕನಕಗಿರಿ | ೧೧೩/೦೯ |
| ೧೨. | ಗೋವಿಂದಮ್ಮ | ೩೦ | ಇಲ್ಲ | ವಡ್ಡರು | ಗಂಗಾವತಿ | ೫೭/೦೯ |
| ೧೩. | ಹುಲಿಗೆಮ್ಮ | ೨೯ | ೧೦ನೇ | ಮಡಿವಾಳ | ವಿರುಪಾಪುರ | ೧೨೫/೧೪ |
| ೧೪. | ಹುಲಿಗೆಮ್ಮ | ೪೨ | ೬ನೇ | ಗಾಣಿಗರು | ಮುಷ್ಟೂರು | ೧೪೩/೧೪ |
| ೧೫. | ಸಿದ್ದಮ್ಮ | ೩೦ | ೪ನೇ | ಭೋವಿ | ಮೈಲಾಪುರ | ೧೧೨/೧೪ |
| ೧೬. | ಜ್ಯೋತಿ | ೪೫ | ೧೨ನೇ | ಲಿಂಗಾಯತ | ಇಸ್ಲಂಪುರ | ೧೫/೧೪ |
| ೧೭. | ಕಟ್ಟ ಮಂಗಮ್ಮ | ೩೫ | ೬ನೇ | ಬಾರಿಕೇರ | ರಾಮದುರ್ಗ | ೭೫/೧೪ |
| ೧೯. | ಭೂಮಿಕಾ | ೨೨ | ಇಲ್ಲ | ಕುರುಬರು | ಲಕ್ಷ್ಮಿಕ್ಯಾಂಪ್ | ೬೩/೧೪ |
| ೨೦. | ಸಿದ್ದಮ್ಮ | ೫೫ | ಇಲ್ಲ | ಬಣಜಿಗರು | ಅಣುವಾಳ | ೫೯/೧೪ |

| | | | | | | |
|---|---|---|---|---|---|---|
| ೨೧. | ವೀರಮ್ಮ | ೩೫ | ಇಲ್ಲ | ಬಾರಕೇರ | ಕರ್ಮುಡಿ | ೧೩/೦೯ |
| ೨೨. | ಪ್ರೇಮವ್ವ | ೩೮ | ೧೦ನೇ | ಕುರುಬರು | ಕುಣಿಕೇರಿ | ೨೮/೦೯ |
| ೨೩. | ಹುಲಿಗೆವ್ವ | ೪೦ | ೮ನೇ | ಲಿಂಗಾಯತ | ಹಿರೇಸೂಳಿಕೆರೆ | ೧೦೦/೦೯ |
| ೨೪. | ಗಂಗವ್ವ | ೬೫ | ಇಲ್ಲ | ಬ್ಯಾಗೇರ | ಗಿಣಿಗೇರ | ೧೩೪/೦೯ |
| ೨೫. | ಶೀಲಾ | ೨೪ | ೧೨ನೇ | ನಾಯಕ | ಕೊಪ್ಪಳ | ೨೬೩/೧೧ |
| ೨೬. | ಬಸವರಾಜೇಶ್ವರಿ | ೪೨ | ೧೦ನೇ | ಲಿಂಗಾಯತ | ಕವಲೂರು | ೨೪೮/೧೨ |
| ೨೭. | ಲಕ್ಷ್ಮಿ | ೩೮ | ೮ನೇ | ಉಪ್ಪಾರ | ಡಣಾಪುರ | ೪/೦೫ |
| ೨೮. | ಬಸಮ್ಮ | ೪೨ | ೧೦ನೇ | ನಾಯಕ | ಬೂದುಗುಂಪಾ | ೧೦೫/೦೪ |
| ೨೯. | ಲಲಿತಾಬಾಯಿ | ೩೩ | ೧೨ನೇ | ಮರಾಠ | ಕೊಪ್ಪಳ | ೯೯/೦೫ |
| ೩೦. | ಸರಸ್ವತಿ | ೨೫ | ೧೨ನೇ | ಭೋವಿ | ಗುಡದೂರು | ೧೯೩/೧೨ |
| ೩೧. | ಯಲ್ಲಮ್ಮ | ೩೨ | ಇಲ್ಲ | ನಾಯಕ | ಗುಗ್ಗರಹಟ್ಟಿ | ೮೩೨/೧೧ |
| ೩೨. | ಮಾರೆಮ್ಮ | ೪೦ | ಇಲ್ಲ | ಕುರುಬರು | ಎಮ್ಮಿಗನೂರು | ೮೪೦/೧೧ |
| ೩೩. | ಲಲಿತಾಬಾಯಿ | ೪೩ | ಇಲ್ಲ | ಲಂಬಾಣಿ | ಬಳ್ಳಾರಿ | ೪೨೮/೦೯ |
| ೩೪. | ನಾಗರತ್ನಮ್ಮ | ೩೯ | ಇಲ್ಲ | ನಾಯಕ | ಸಿ.ಬಿ.ಬಳ್ಳಾರಿ | ೮೩೩/೧೧ |
| ೩೫. | ಸುಭದ್ರಮ್ಮ | ೫೦ | ಇಲ್ಲ | ಲಿಂಗಾಯತ | ಚಾಗನೂರು | ೮೬೨/೧೧ |
| ೩೬. | ನಾಗಮ್ಮ | ೪೦ | ೬ನೇ | ಗೊಲ್ಲರು | ಚಾಗನೂರು | ೮೬೬/೧೧ |
| ೩೭. | ಅಂಜಿನಮ್ಮ | ೪೯ | ಇಲ್ಲ | ನಾಯಕ | ಬಳ್ಳಾರಿ | ೮೯೪/೧೧ |
| ೩೮. | ಸುಶೀಲಮ್ಮ | ೫೦ | ಇಲ್ಲ | ಕುರುಬರು | ಅಲ್ಲೀಪುರ | ೯೦೮/೧೧ |
| ೩೯. | ಸುಲೋಚನಾ | ೩೨ | ಇಲ್ಲ | ನಾಯಕ | ಚಾಗನೂರು | ೪೨/೧೨ |
| ೪೦. | ದಾನಮ್ಮ | ೩೬ | ೫ನೇ | ಛಲವಾದಿ | ಚಾಗನೂರು | ೮೪/೧೨ |
| ೪೧. | ಅನೂಪ | ೨೨ | ೧೨ನೇ | ಕಬ್ಬೇರು | ಕುರುಗೋಡು | ೭೩೧/೧೧ |
| ೪೨. | ಗೌರಮ್ಮ | ೩೮ | ಇಲ್ಲ | ಕೊರಚ | ಬಳ್ಳಾರಿ | ೦೯/೧೦ |
| ೪೩. | ಲಕ್ಷ್ಮಿ | ೨೭ | ೧೨ನೇ | ನಾಯಕ | ಮಿಂಚೇರಿ | ೪೭೭/೧೧ |
| ೪೪. | ರಾಜಮಣಿ | ೩೫ | ೧೦ನೇ | ನಾಯಕ | ಗುಂತಕಲ್ಲು | ೬/೧೨ |
| ೪೫. | ರಮಾದೇವಿ | ೩೨ | ೮ನೇ | ಭೋವಿ | ಯಾಳ್ಪಿ | ೫೪೪/೧೧ |

| | | | | | | |
|---|---|---|---|---|---|---|
| ೪೬. | ಶಂಕ್ರಮ್ಮ | ೪೧ | ಇಲ್ಲ | ಕುರುಬ | ಕುಂಟನಾಳ | ೫೪೪/೧೧ |
| ೪೭. | ಭಾಗ್ಯಮ್ಮ | ೩೦ | ಇಲ್ಲ | ನಾಯಕ | ಜಾಲಿಬೆಂಚಿ | ೫೭೦/೧೧ |
| ೪೮. | ಲಕ್ಷ್ಮಿ | ೨೮ | ೧೦ನೇ | ಕಬ್ಬೇರ | ರಾಂಪುರ | ೬೧೬/೧೧ |
| ೪೯. | ಬಸಮ್ಮ | ೪೨ | ಇಲ್ಲ | ಲಿಂಗಾಯತ | ಕುರುಗೋಡು | ೬೩೪/೧೧ |
| ೫೦. | ರತ್ನಮ್ಮ | ೪೦ | ಇಲ್ಲ | ನೇಕಾರ | ವದ್ದಟ್ಟಿ | ೪೨೯/೦೮. |

* ಈ ಮೇಲಿನ ವಕ್ಶ್ಯಗಳ ವಿವರದಲ್ಲಿ ನೀಡಿರುವ ಹೆಸರನ್ನು ವಕ್ತ್ಯಗಳ ಅಪೇಕ್ಷೆಯಂತೆ ಬದಲಾಯಿಸಿ ನೀಡಲಾಗಿದೆ.

## ನ್ಯಾಯಾಲಯದಲ್ಲಿ ದಾಖಲಾಗದ ಪ್ರಕರಣ ಸಂಬಂಧಿ ವಕ್ತ್ಯಗಳ ವಿವರ

| ಕ್ರಸಂ | ಹೆಸರು | ವಯಸ್ಸು | ಶಿಕ್ಷಣ | ಜಾತಿ | ಊರು |
|---|---|---|---|---|---|
| ೦೧ | ಅನ್ನಪೂರ್ಣಮ್ಮ | ೪೨ | ೬ನೇ | ಬೋವಿ | ಡಾಣಾಪುರ |
| ೦೨ | ತಿಮ್ಮಮ್ಮ | ೫೦ | -- | ನಾಯಕ | ಬಾಣಸಂದ್ರ |
| ೦೩ | ರಾಮಕ್ಕ | ೪೦ | ೨ನೇ | ತಳವಾರ | ಜುಲಕುಂಟ |
| ೦೪ | ಹೊನ್ನವ್ವ | ೬೦ | -- | ಕುರುಬ | ಜುಲಕುಂಟ |
| ೦೫ | ಗ್ಯಾನಮ್ಮ | ೩೯ | ೪ನೇ | ಮಡಿವಾಳ | ಹಂಚಿನಾಳ |
| ೦೬ | ಪಕ್ಕಿರಮ್ಮ | ೪೫ | ೩ನೇ | ನಾಯಕ | ಮನ್ನೇರಾಳ |
| ೦೭ | ಹನುಮವ್ವ | ೪೩ | --- | ಲಿಂಗಾಯತ | ಕಬ್ಬರಗಿ |
| ೦೮ | ಮಾಸವ್ವ | ೩೨ | ೧೦ನೇ | ಕುರುಬರು | ತರಿಕಟ್ಟೆ |
| ೦೯ | ಬಸಮ್ಮ | ೩೮ | ೫ನೇ | ಭೋವಿ | ಮುಜವರಕ್ಯಾಂಪ್ |
| ೧೦ | ಶಾಂತಮ್ಮ | ೫೨ | --- | ಗಾಣಿಗರು | ಬಿಜಕಲ್ |
| ೧೧ | ಹುಲಿಗೆಮ್ಮ | ೬೦ | -- | ಕುರುಬರು | ಗಂಗಾವತಿ |
| ೧೨. | ಗುಂಡವ್ವ | ೫೧ | ೬ನೇ | ಬಾರಿಕೇರ | ಗಂಗಾವತಿ |
| ೧೩. | ಗೌರಮ್ಮ | ೨೮ | ಪಿ.ಯು.ಸಿ | ನಾಯಕ | ತುಮರಿಕೊಪ್ಪ |
| ೧೪ | ಅಂಬಮ್ಮ | ೪೫ | ೧೦ನೇ | ಲಿಂಗಾಯತ | ಗೆಜ್ಜಲಗಟ್ಟ |
| ೧೫. | ರೇಣುಕಮ್ಮ | ೫೨ | ೪ನೇ | ನಾಯಕ | ಡಣಾಪುರ |
| ೧೬ | ಪದ್ಮಾವತಿ | ೫೦ | --- | ಆದಿಕರ್ನಾಟಕ | ಬಿಜಕಲ್ |

| | | | | | |
|---|---|---|---|---|---|
| ೧೭. | ರಂಗಮ್ಮ | ೪೫ | --- | ನಾಯಕ | ಯಲಬುರ್ತಿ |
| ೧೮. | ದೇವಮ್ಮ | ೫೫ | --- | ಚೆನ್ನದಾಸ | ಹೆಬ್ಬಾಳ |
| ೨೦. | ಲಕ್ಷ್ಮವ್ವ | ೪೦ | --- | ಕುರುಬರು | ಕ್ಯಾದಿಗುಪ್ಪ |
| ೨೧. | ಪದ್ದಮ್ಮ | ೪೫ | --- | ಛಲವಾದಿ | ಹುಲ್ಕಿಹಾಳ |
| ೨೨. | ಮಲ್ಲಮ್ಮ | ೩೮ | ೬ನೇ | ಕಬ್ಬೇರ | ಶಾಕಾಪುರ |
| ೨೩. | ಬಾಲವ್ವ | ೫೫ | --- | ಬೋವಿ | ಮನ್ನೇರಾಳ |
| ೨೪. | ಚಂದವ್ವ | ೩೬ | ೩ನೇ | ನಾಯಕ | ಕಬ್ಬರಗಿ |
| ೨೫. | ಪದ್ಮಾವತಿ | ೪೮ | ೧೦ನೇ | ನಾಯಕ | ಕೊಪ್ಪಳ |
| ೨೬. | ವಿಶಾಲಾಕ್ಷಿ | ೩೯ | ೭ನೇ | ನಾಯಕ | ಕೊಪ್ಪಳ |
| ೨೭. | ಸರಸ್ವತಿ | ೪೦ | ೭ನೇ | ಮಡಿವಾಳ | ಬಳ್ಳಾರಿ |
| ೨೮. | ಲಲಿತ | ೩೮ | ೧೦ನೇ | ಬೋವಿ | ಬಳ್ಳಾರಿ |
| ೨೯. | ನಾಗರತ್ನಮ್ಮ | ೫೫ | --- | ಲಿಂಗಾಯತ | ಬಳ್ಳಾರಿ |
| ೩೦. | ಸುಶೀಲ | ೪೨ | --- | ನಾಯಕ | ಕಪ್ಪಗಲ್ |
| ೩೧. | ಲಕ್ಷ್ಮಿದೇವಿ | ೫೫ | ೬ನೇ | ಲಿಂಗಾಯತ | ಎಮ್ಮಿಗನೂರು |
| ೩೨. | ಬಸಮ್ಮ | ೩೯ | --- | ನಾಯಕ | ಚಾಗನೂರು |
| ೩೩. | ಶಕುಂತಲ | ೪೦ | --- | ನಾಯಕ | ಸಂಗನಕಲ್ಲು |
| ೩೪. | ಮಾರೆಮ್ಮ | ೪೭ | --- | ಬೋವಿ | ತೋರಣಗಲ್ಲು |
| ೩೫. | ತಾಯಮ್ಮ | ೫೦ | --- | ನೇಕಾರ | ಸಿರಿವಾರ |
| ೩೬. | ನಾಗಮ್ಮ | ೪೮ | --- | ನಾಯಕ | ಮೋಕಾ |
| ೩೭. | ಲಲಿತಾಭಾಯಿ | ೫೦ | --- | ಲಂಬಾಣಿ | ಸಂಡೂರು |
| ೩೮. | ಈರಮ್ಮ | ೪೫ | ೪ನೇ | ವಡ್ಡರು | ಸಂಡೂರು |
| ೩೯. | ಶಾರದಾ | ೪೦ | ೭ನೇ | ಕುಂಬಾರ | ಸುಶೀಲನಗರ |
| ೪೦. | ಯಲ್ಲಮ್ಮ | ೫೦ | --- | ಕುರುಬ | ವೆಂಕಟಾಪುರ |
| ೪೧. | ಅನುಷಾ | ೩೯ | --- | ಕುರುಬ | ಹನುಮನಹಳ್ಳಿ |
| ೪೨. | ಹಂಪಮ್ಮ | ೪೨ | ೫ನೇ | ನಾಯಕ | ಗಾಳೆಮ್ಮನಗುಡಿ |

| | | | | | |
|---|---|---|---|---|---|
| ೪೩. | ಗಂಗಮ್ಮ | ೪೦ | ೫ನೇ | ಕುರುಬ | ಹನುಮನಹಳ್ಳಿ |
| ೪೪. | ಪ್ರಭಾವತಿ | ೪೫ | ೧೦ನೇ | ನಾಯಕ | ಗಾಳೆಮ್ಮನಗುಡಿ |
| ೪೫. | ರಾಜೇಶ್ವರಿ | ೩೯ | ೭ನೇ | ಲಿಂಗಾಯತ | ಡಣಾಪುರ |
| ೪೬. | ಇಂದಿರಮ್ಮ | ೪೨ | --- | ಆದಿಕರ್ನಾಟಕ | ಗಾಳೆಮ್ಮನಗುಡಿ |
| ೪೭. | ತಿಪ್ಪಮ್ಮ | ೪೦ | ೭ನೇ | ನಾಯಕ | ವ್ಯಾಸನಕೆರೆ |
| ೪೮. | ಅಂಬಮ್ಮ | ೩೮ | ೬ನೇ | ನಾಯಕ | ವ್ಯಾಸನಕೆರೆ |
| ೪೯. | ಚಂದ್ರಮ್ಮ | ೪೮ | --- | ಛಲವಾದಿ | ಡಣಾಪುರ |
| ೫೦. | ನಾಗರತ್ನ | ೩೯ | --- | ಬೋವಿ | ಚೌಡಾಪುರ |

# ಅನುಬಂಧ – ೨

## ಪರಾಮರ್ಶನ ಗ್ರಂಥಗಳು


೧. ಅಂದನೂರು ಶೋಭ ಮತ್ತು ಶ್ರೀಲಕ್ಷ್ಮಿ ಬಿ.ಬಿ (ಸಂ), ಮಹಿಳೆಯರ ಮುನ್ನಡೆ, ೧೯೮೮, ಮಾನಿನಿ ಪ್ರಕಾಶನ, ಬೆಂಗಳೂರು.

೨. ಅನ್ನಪೂರ್ಣೇಶ್ವರಿ ಎನ್, ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ, ೨೦೦೨, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

೩. ಆಶೀಶ್‌ನಂದಿ(ಅನು), ಸುಬ್ಬಣ್ಣ ಕೆ.ವಿ, ಆಶೀಶ್ ನಂದಿ ವಿಚಾರಧಾರೆಗಳು, ೧೯೯೫, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

೪. ಇಂದಿರಾ ಆರ್, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.

೫. ಉಷಾ ಎಂ, ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು, ೨೦೦೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಉಷಾ ಎಂ, ಮಹಿಳೆ ಮತ್ತು ಜಾತಿ, ೨೦೦೫., ಪ್ರಸಾರಾಂಗ ಕನ್ನಡ ವಿಶ್ವಿದ್ಯಾಲಯ, ಹಂಪಿ.

೭. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೨೦೦೩, ಮಾನವ ಅಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

೮. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮಹಿಳಾ ಹಕ್ಕುಗಳು, ೨೦೦೬, ಹೆಗ್ಗಡೆ ಪ್ರಕಾಶನ, ಮಂಡ್ಯ.

೯. ಓಂಕಾರ ವಿ.ಆರ್, ಭಾರತೀಯ ಉತ್ತರಾಧಿಕಾರ ಅಧಿನಿಯಮ, ೨೦೦೭, ಆಕಳವಾಡಿ ಬುಕ್ ಡಪೋ, ಧಾರವಾಡ.

೧೦. ಕಲವೀರ ಮನ್ವಾಚಾರ್, ಮಾತೃ ದೇವತಾ ಆರಾಧನೆ : ಉಗಮ ಮತ್ತು ವಿಕಾಸ, ೨೦೦೪, ಪಿಎಚ್.ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಗಾಯತ್ರಿ ಎನ್, ಬಿಡುಗಡೆಯ ಹಾದಿಯಲ್ಲಿ, ೧೯೯೬, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೧೨. ಗಾಯತ್ರಿ ಎನ್, ಮಹಿಳಾ ಚಳುವಳಿಯ ಮಜಲುಗಳು, ೧೯೯೮, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೧೩. ಗಾಯತ್ರಿ ಎನ್, ಸಂಚಲ, ೨೦೧೦, ಮಾ–ಲೆ ಪ್ರಕಾಶನ, ಬೆಂಗಳೂರು.

೧೪. ಗೀತಾ ಕೆ.ಎಸ್, ಮಹಿಳೆ, ಕಾನೂನು ಮತ್ತು ನ್ಯಾಯ, ೨೦೦೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೫. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕುಗಳು: ಮಾನವ ಹಕ್ಕುಗಳ ನೆಲೆಯಲ್ಲಿ, ೨೦೦೯, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೬. ಗೀತಾ ಕೃಷ್ಣಮೂರ್ತಿ, ಮಹಿಳೆ ಸಮಾಜ ಮತ್ತು ಕಾನೂನು, ೨೦೦೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೭. ಗೀತಾ ಕೃಷ್ಣಮೂರ್ತಿ, ಮಹಿಳೆ ಕಾನೂನು ಮತ್ತು ರಾಜಕಾರಣ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಗೌಡ ವಿ.ಹೆಚ್, ಮಹಿಳೆ ಮತ್ತು ಕಾನೂನು, ೨೦೦೪, ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು.

೧೯. ಚಂದ್ರಶೇಖರ್ ಟಿ.ಆರ್, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಚಂದ್ರಶೇಖರ್ ಟಿ.ಆರ್, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ೨೦೦೩, ಸಿವಿಜಿ ಪಬ್ಲಿಕೇಷನ್ಸ್ ಬೆಂಗಳೂರು.

೨೧. ಚಂದ್ರಶೇಖರ ಟಿ.ಆರ್, ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಚಂದ್ರಶೇಖರ ಟಿ.ಆರ್, ಕರ್ನಾಟಕದ ಜನಗಣತಿ ೨೦೧೧, ೨೦೧೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.

೨೩. ಚೆನ್ನಮಲ್ಲಪ್ಪ ಹಲಸಂಗಿ ಮತ್ತು ಗೆಳೆಯರು, ಗರತಿಯ ಹಾಡು, ೨೦೧೦, ಸಮಾಜ ಪುಸ್ತಕಾಲಯ, ಧಾರವಾಡ

೨೪. ಛಾಯಾಧಾತರ್, ಸರಸ್ವತೀ ರಿಸಬೂಡ (ಅನು), ಸ್ತ್ರೀ–ಪುರುಷ, ೧೯೯೭, ಇಳಾ ಪ್ರಕಾಶನ, ಬೆಂಗಳೂರು.

೨೫. ಜವರಯ್ಯ ಮ.ನ, ಜಾತಿ ಸತಿ ಮತ್ತು ಮಹಿಳೆ, ೨೦೦೦, ಸಿದ್ದಾರ್ಥ ಗ್ರಂಥಮಾಲೆ, ಮೈಸೂರು.

೨೬. ಜ್ಯೋತ್ಸ್ನಾ ಕಾಮತ್, ಮಹಿಳೆ : ಒಂದು ಅಧ್ಯಯನ, ೧೯೯೯, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು.

೨೭. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಕುಮಾರಪ್ಪ ಜಿ (ಅನು), ಮಾತೆಯರು ಮಾನ್ಯರಾಗಿದ್ದಾಗ, ೧೯೯೭, ನವಕರ್ನಾಟಕ ಪ್ರಕಾಶನ ಬೆಂಗಳೂರು.

೨೮. ನಡಗೇರಿ ಎಸ್.ಆರ್, ಕಾನೂನು ಮತ್ತು ಮಹಿಳೆ, ೨೦೦೫, ಶ್ರೀ ರಾಜಗುರು ಪ್ರಕಾಶನ, ಬಿಜಾಪುರ.

೨೯. ನಾಯಕ ಹಾ.ಮಾ.(ಪ್ರಸಂ.), ಕನ್ನಡ ವಿಶ್ವಕೋಶ, ಸಂಪುಟ-೨, ೧೯೭೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೦. ನಂಜಮ್ಮಣ್ಣಿ ಎಂ, ಸಾಮಾಜಿಕ ಮಾನವಶಾಸ್ತ್ರ, ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೧. ನಂಜುಂಡಪ್ಪ ಡಿ.ಎಂ.ಮತ್ತು ಇತರರು; ಪ್ರಾದೇಶಿಕ ಅಸಮಾನತೆ ನಿವಾರಣೆಯ ಉನ್ನತಾಧಿಕಾರ ಸಮಿತಿ,೨೦೦೨.

೩೨. ನಾಗಾರ್ಜುನ ಹಾ.ಮ(ಸಂ), ಸ್ತ್ರೀವಾದಿ ಚಿಂತನೆಗಳು,೨೦೧೦, ದೇಸಿ ಪುಸ್ತಕ, ಬೆಂಗಳೂರು.

೩೩. ನಿರೂಪಮಾ, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ೧೯೯೬, ಆರತಿ ಪಬ್ಲಿಕೇಷನ್ಸ್, ಬೆಂಗಳೂರು.

೩೪. ನೀಲಾ ಕೆ, ಬದುಕು ಬಂದೀಖಾನೆ, ಜನವಾದಿ ಮಹಿಳಾ ವೇದಿಕೆ, ಗುಲ್ಬರ್ಗಾ, ೨೦೦೨.

೩೫. ನೇಮಿಚಂದ್ರ (ಸಂ), ಮಹಿಳಾ ಲೋಕ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫.

೩೬. ನೇಮಿಚಂದ್ರ, ಮಹಿಳಾ ಅಧ್ಯಯನ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೧.

೩೭. ನಂಜಮ್ಮಣ್ಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ೨೦೦೩, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು,

೩೮. ಪದ್ಮಾವತಮ್ಮ ಕೆ; ಮಹಿಳೆ ಮತ್ತು ಆಸ್ತಿ ಹಕ್ಕು; ೨೦೦೨; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು;

೩೯. ಪ್ರಭಾಮಣಿ, ಮಹಿಳೆ ಮತ್ತು ಧರ್ಮ, ೨೦೦೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೦. ಪ್ರಭು ಕೆ.ಎಚ್, ಮಹಿಳೆಯರ ಮತ್ತು ಮಕ್ಕಳ ಕಾನೂನು, ಕಾನೂನು ಪ್ರಕಾಶನ, ಹುಬ್ಬಳ್ಳಿ, ೨೦೦೨.

೪೧. ಪ್ರವೀಣ್ ಫರ್ನಾಂಡೀಸ್, ೨೧ನೇ ಶತಮಾನದಲ್ಲಿ ಮಹಿಳೆ ಸಮಾನತೆ ಅಭಿವೃದ್ಧಿ, ೨೦೦೨, ಶಾಂತಿ ಐಬಿಎಚ್ ಪ್ರಕಾಶನ, ಬೆಂಗಳೂರು.

೪೨. ಪ್ರಶಾಂತ್ ಎಚ್.ಡಿ ಮತ್ತು ವೀರಭದ್ರನಾಯ್ಕ ಪಿ, ಸಾಮಾಜಿಕ ತಲ್ಲಣಗಳು ಕಾಳಜಿಗಳು-ಕನಸುಗಳು (ಪ್ರೊ ಆರ್ ಇಂದಿರಾ ವಿಚಾರ ಸ್ಪಂದನ ಸಂಪುಟ), ೨೦೧೫, ರೂಪ ಪ್ರಕಾಶನ, ಮೈಸೂರು.

೪೩. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,ಹಂಪಿ.

೪೪. ಫ್ರೆಡರಿಕ್ ಎಂಗೆಲ್ಸ್, (ಅನು), ಗೋಪಾಲಕೃಷ್ಣರಾವ್ ಕೆ.ಎಲ್, ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ೧೯೮೦, ಪ್ರಗತಿ ಪ್ರಕಾಶನ, ಮಾಸ್ಕೋ.

೪೫. ಮಧುಕೀಶ್ವರ್ (ಅನು), ಮೀರಾ ಎಲ್.ಜಿ, ಮಾನುಷಿಯ ಮಾತು, ಅಕ್ಷರ ಪ್ರಕಾಶನ ಹೆಗ್ಗೋಡು,ಸಾಗರ. ೧೯೭೭.

೪೬. ಮಮತ ಜಿ. ಸಾಗರ್, ಮಹಿಳಾ ವಿಷಯ ( ಮಹಿಳೆ ಭಾಷೆ–ಸಾಹಿತ್ಯ–ಸಂಸ್ಕೃತಿ ಕುರಿತ ಬಿಡಿ ಬರಹಗಳು), ೨೦೦೭, ಇಳಾ ಪ್ರಕಾಶನ,ಬೆಂಗಳೂರು.

೪೭. ಮಂಗಳಾ ಚಿ.ನ; ಎಚ್ಚೆತ್ತ ಹಾದಿಯಲ್ಲಿ ಮಹಿಳೆ; ಪ್ರಸಾರಾಂಗ, ಬೆ.ವಿ.ಬೆಂಗಳೂರು; ೧೯೯೦

೪೮. ಮಂಗಳಾ ಪ್ರಿಯದರ್ಶಿನಿ ಡಿ, ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ೨೦೦೭, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಮುಳಗುಂದ ಚ.ವಿ. ಮತ್ತು ನಾಗೇಶ ಹೆಚ್.ವಿ (ಸಂ), ಆಧುನಿಕ ಮಹಿಳೆ ಮತ್ತು ಸಮಾಜ,೧೯೮೯, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ.

೫೦. ಮೂರ್ತೀಶ್ವರಯ್ಯ ಬೇ.ಕಾ ; ಮಹಿಳೆ ಸಮಾಜ ಮತ್ತು ಕಾನೂನು; ಸ್ವಪ್ನ ಬುಕ್ ಹೌಸ್, ಬೆಂಗಳೂರು; ೨೦೦೮.

೫೧. ಮೈತ್ರೇಯಿ ಮುಖ್ಯೋಪಾಧ್ಯಾಯ, ವೈದೇಹಿ (ಅನು), ಬೆಳ್ಳಿಯ ಸಂಕೋಲೆಗಳು, ೧೯೮೫, ಅಕ್ಷರ ಪ್ರಕಾಶನ, ಸಾಗರ.

೫೨. ರವೀಂದ್ರನಾಥ ಕೆ. (ಸಂ); ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ. ೨೦೦೫

೫೩. ರಾಗೌ (ಸಂ); ಮಹಿಳಾ ಅಧ್ಯಯನದ ಆಯಾಮಗಳು; ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು; ೨೦೦೮;

೫೪. ರಾಜಶೇಖರಯ್ಯ ಎ.ಎಂ.(ಸಂ), ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ–೧೪, ಭಾಗ–೧(ಅ)ವಿಬಾಗ ೧–೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.೨೦೦೧.

೫೫. ರಾಜಾರಾಮ್ ಹೆಗಡೆ (ಸಂ), ಭಾರತೀಯ ಇತಿಹಾಸ ಸಮಾಜ ಮತ್ತು ಸಂಸ್ಕೃತಿ,ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,೨೦೦೪.

೫೬. ರಾಮಕೃಷ್ಣ ಜಿ, ಫ್ರೆಡರಿಕ್ ಎಂಗೆಲ್ಸ್, ೨೦೦೩, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೭. ವರದಾ ಶ್ರೀನಿವಾಸ, ಮಹಿಳೆಯ ಸ್ಥಿತಿ-ಗತಿ ಅಂದು-ಇಂದು, ೧೯೯೯, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
೫೮. ವಂದನಾಶಿವ(ಅನು), ಮಾಧವ ಐತಾಳ್, ಭತ್ತದ ಚಿಲುಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.
೫೯. ವಿಜಯಾದಬ್ಬೆ, ನಾರಿ:ದಾರಿ ದಿಗಂತ, ೧೯೯೭, ರಚನಾ ಪ್ರಕಾಶನ, ಮೈಸೂರು.
೬೦. ವಿಜಯಶ್ರೀ ಸಬರದ (ಸಂ), ಮಹಿಳೆ ಶೋಷಣೆ ಸವಾಲುಗಳು, ೨೦೦೫, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.
೬೧. ವೆಂಕಟರಾಮಪ್ಪ ಕೆ.ಎನ್, ಸ್ತ್ರೀ ಮತ್ತು ಸಮಾಜ, ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ,
೬೨. ವೆಂಕೋಬರಾವ್ ಡಿ, ನ್ಯಾಯಕ್ಕಾಗಿ ಮಹಿಳೆಯರ ಹೋರಾಟ, ದಿವ್ಯಚಂದ್ರ ಪ್ರಕಾಶನ, ಬೆಂಗಳೂರು, ೨೦೦೦.
೬೩. ಶರ್ಮಾ ಕೆ.ಎಸ್, ಸಮಾಜವಾದಿ ಮಹಿಳೆ, ೧೯೭೮, ಪುರೋಗಾಮಿ ಸಾಹಿತ್ಯ ಪ್ರಕಾಶನ, ಧಾರವಾಡ.
೬೪. ಶಂಕರರಾವ್ ಚ.ನ, ಬಾರತೀಯ ಸಮಾಜ, ೨೦೦೦, ಜೈಬಾರತ ಪ್ರಕಾಶನ, ಮಂಗಳೂರು.
೬೫. ಶಂಕರ ಖಂಡೇರಿ ಉತ್ತರಾಧಿಕಾರ ಅಧಿನಿಯಮ, ೨೦೦೧, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು.
೬೬. ಶಂಕರನಾರಾಯಣರಾವ್ ಎನ್.ಪಿ, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ೧೯೯೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.
೬೭. ಶಿವನಗೌಡ ಜಿ.ದೊಡ್ಡಮನಿ; ಹಿಂದೂ ಉತ್ತರಾಧಿಕಾರ ಅಧಿನಿಯಮ-೧೯೫೬;೨೦೧೧, ಬಾಲಾಜಿ ಬುಕ್ ಕಂಪನಿ, ಬೆಂಗಳೂರು.
೬೮. ಶ್ರೀನಿವಾಸ ಸಿರನೂರ್‌ಕರ್; ವಿಜ್ಞಾನೇಶ್ವರ ಮಿತಾಕ್ಷರ; ಪ್ರಸಾರಾಂಗ ಗುಲ್ಬರ್ಗಾ ವಿಶ್ವಿದ್ಯಾಲಯ,ಗುಲ್ಬರ್ಗಾ, ೨೦೦೫;
೬೯. ಶ್ರೀಮತಿ ಎಚ್.ಎಸ್, ಹೆಣ್ಣು ಹೆಂಗಸು, ಬ್ಯಾಲದಕೆರೆ ಪ್ರಕಾಶನ, ಮಂಡ್ಯ, ೨೦೦೪.
೭೦. ಶ್ರೀಮತಿ ಎಚ್.ಎಸ್, ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಸ್ವವಿದ್ಯಾಲಯ ಹಂಪಿ, ೨೦೦೨.
೭೧. ಶ್ರೀಮತಿ ಎಚ್.ಎಸ್, ಚಹರೆ, ಇಳಾ ಪ್ರಕಾಶನ, ಬೆಂಗಳೂರು, ೧೯೯೯.
೭೨. ಶ್ರೀಮತಿ ಎಚ್.ಎಸ್, ಸಿಮೋನ್ ದ ಬೋವಾ (ಅನು) ದ ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲಿ, ಬೆಂಗಳೂರು, ೨೦೦೭.

೭೩. ಶ್ರೀಮತಿ ಎಚ್.ಎಸ್(ಸಂ), ಮಹಿಳಾ ಅಧ್ಯಯನ(ಸಂ-೪,ಸಂ-೧), ಪ್ರಸಾರಾಂಗ, ಕನ್ನಡ ವಿಶ್ವಿದ್ಯಾಲಯ, ಹಂಪಿ.

೭೪. ಶೇಷ ನವರತ್ನ (ಅನು), ಮನುಸ್ಮೃತಿ, ೨೦೦೯, ಸಮಾಜ ಪುಸ್ತಕಾಲಯ, ಧಾರವಾಡ.

೭೫. ಶೇಷಾದ್ರಿ ಬಿ, ಚಂದ್ರಶೇಖರ್ ಟಿ.ಆರ್ (ಸಂ); ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ ; ಪ್ರಸಾರಾಂಗ ಕ.ವಿ.ವಿ. ಹಂಪಿ; ೧೯೯೮;

೭೬. ಶೇಷಾದ್ರಿ ಕೆ.ಎನ್, ಸಂವಿದಾನ-ಕಾನೂನು ಮತ್ತು ಮಹಿಳೆ, ೧೯೮೫, ಜಾಗೃತ ಭಾರತ ಧಾರವಾಡ.

೭೭. ಶೈಲಜಾ ಹಿರೇಮಠ, ಮಾತೃಪ್ರಧಾನ ಪರಿಕಲ್ಪನೆ,೨೦೦೪, ಪ್ರಸಾರಾಂಗ ಕನ್ನಡ.ವಿ.ವಿ. ಹಂಪಿ.

೭೮. ಶೈಲಜಾ ಹಿರೇಮಠ, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ, ೨೦೦೩.

೭೯. ಶೈಲಜಾ ಹಿರೇಮಠ (ಸಂ), ಮಹಿಳಾ ಅಧ್ಯಯನ (ಸಂ-೮,ಸಂ-೧), ೨೦೦೬,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೦. ಶೈಲಜಾ ಹಿರೇಮಠ (ಸಂ), ಮಹಿಳಾ ಅಧ್ಯಯನ (ಸಂ-೧೨,ಸಂ-೧), ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೧. ಶೈಲಜಾ ಹಿರೇಮಠ (ಸಂ), ಮಹಿಳಾ ಅಧ್ಯಯನ (ಸಂ-೧೨,ಸಂ-೨), ೨೦೧೦, ಪ್ರಸಾರಾಂಗ, ಕನ್ನೆ ವಿಶ್ವವಿದ್ಯಾಲಯ, ಹಂಪಿ.

೮೨. ಸಮತಾ ಬಿ ದೇಶಮಾನೆ, ಸಮಾಜಶಾಸ್ತ್ರ ಮತ್ತು ಮಹಿಳೆ, ೨೦೦೩, ಚೇತನ ಬುಕ್ ಹೌಸ್, ಮೈಸೂರು.

೮೩. ಸರಸ್ವತಿ ದು (ಸಂ), ನೀರದಾರಿ(ದಲಿತ ಮಹಿಳಾ ಪ್ರಜ್ಞೆ- ವಿಭಿನ್ನ ನೆಲೆಗಳಿಂದ),೨೦೧೪, ಕವಿ ಪ್ರಕಾಶನ, ಉತ್ತರ ಕನ್ನಡ.

೮೪. ಸುನಂದಮ್ಮ ಆರ್,ಮಹಿಳಾ ಸಂಸ್ಕೃತಿ, ೨೦೦೫, ಸಮತಾ ಅಧ್ಯಯನ ಕೇಂದ್ರ ಮೈಸೂರು.

೮೫. ಸುಮಿತ್ರಾಭಾಯಿ ಬಿ.ಎನ್, ಮತ್ತು ಗಾಯತ್ರಿ ಎನ್, ಸ್ತ್ರೀವಾದಿ ಪ್ರವೇಶಿಕೆ, ೧೯೯೫, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೮೬. ಹಾಲತಿ ಸೋಮಶೇಖರ್, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ೨೦೦೭, ವಿಸ್ಮಯ ಪ್ರಕಾಶನ, ಮೈಸೂರು.

೮೭. ಹಾಲತಿ ಸೋಮಶೇಖರ್, ಮಹಿಳೆ ಒಂದು ಚಿಂತನೆ, ೨೦೧೨, ವಿಸ್ಮಯ ಪ್ರಕಾಶನ, ಮೈಸೂರು.

೮೮. ಹಿರೇಮಠ ಎಸ್.ಸಿ, ಭಾರತೀಯ ಉತ್ತರಾಧಿಕಾರ ಅಧಿನಿಯಮ-೧೯೨೫, ೨೦೦೨, ವಿದ್ಯಾನಿಧಿ ಪ್ರಕಾಶನ, ಗದಗ.

೮೯. ಹೇಮಾ ಪಟ್ಟಣಶೆಟ್ಟಿ, ಮರ್ಯಾದೆಯ ಮುಸುಕಿನಲ್ಲಿ, ಅನನ್ಯ ಪ್ರಕಾಶನ, ಧಾರವಾಡ, ೧೯೯೨.

೯೦. ಹೇಮಲತಾ ಹೆಚ್.ಎಮ್, ಮಹಿಳಾ ಅಧ್ಯಯನ–೧, ೨೦೦೪, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೯೧. ಹೇಮಲತಾ ಮಹಿಷಿ; ಮಹಿಳೆ ಮತ್ತು ಆಸ್ತಿಹಕ್ಕು; ಶ್ರೀಮತಿ ಯಶೋದಾ ರಾಗೌ ಟ್ರಸ್ಟ್,ಮೈಸೂರು; ೧೯೯೯

೯೨. ಹೇಮಲತಾ ಮಹಿಷಿ, ಇಪ್ಪತ್ತೊಂದನೆಯ ಶತಮಾನದ ಮಹಿಳೆ, ೧೯೯೯, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯೩. ಹೇಮಲತಾ ಮಹಿಷಿ, ಮಾನವ ಹಕ್ಕುಗಳು–ಸಂಯುಕ್ತ ರಾಷ್ಟ್ರಗಳ ಒಪ್ಪಂದಗಳು, ೧೯೯೫, ಭಾರತೀಯ ವಿದ್ಯಾ ಭವನ, ಬೆಂಗಳೂರು.

೯೪. ಹೊಯ್ಸಳಶರ್ಮ ಕೆ, ನ್ಯಾಯಶಾಸ್ತ್ರ ದರ್ಪಣ, ೧೯೮೬, ಶಾನವಾಣಿ ಪ್ರಕಾಶನ, ಬೆಂಗಳೂರು.

## ದಿನ ಪತ್ರಿಕೆಗಳು ಮತ್ತು ನಿಯತಕಾಲಿಕೆಗಳು

೯೫. ಅಂಜಲಿ ರಾಮಣ್ಣ, ಭಾರತೀಯ ಶಾಸನಗಳಲ್ಲಿ ಸ್ತ್ರೀಯರಿಗೆ ಆಸ್ತಿಹಕ್ಕು, ವಿಜಯ ಕರ್ನಾಟಕ ( ಮಹಿಳಾ ವಿಜಯ), ೨೧.೧೧.೨೦೦೬, ಬೆಂಗಳೂರು.

೯೬. ಮಂಜುಳಾ ಸಿ.ಜಿ, ಸಮಾನತೆಯ ಸಬಲೀಕರಣದತ್ತ ಹೊಸ ಹೆಜ್ಜೆ ಮಹಿಳೆಗೆ ಆಸ್ತಿ ಹಕ್ಕು, ಸುಧಾ, ೨೨.೦೯.೨೦೦೫, ಬೆಂಗಳೂರು.

೯೭. ಪ್ರಜಾವಾಣಿ

೯೮. ವಿಜಯವಾಣಿ

೯೯. ಅಚಲ

